ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

# ಶ್ರೀ
# ಪದ್ಮಮಹಾಪುರಾಣ

...ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳ...

## ಉತ್ತರಖಂಡ—ಐದನೆಯ ಭಾಗ

(೧೮೯—೨೧೮ ಅಧ್ಯಾಯಗಳು)

ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸು)



ಮೈಸೂರು :

ಶ್ರೀ ಹನುಮಾನ್ ಪ್ರೆಸ್

೧೯೪೬

|| ಶ್ರೀಃ ||

–X–

# ಮುನ್ನುಡಿ



ಪದ್ಮಮಹಾಪುರಾಣದ ಉತ್ತರಖಂಡವನ್ನು ಓದುಗರ ಅನುಕೂಲಕ್ಕೋಸ್ಕರ ಕೆಲಕೆಲವು ವಿಷಯಗಳಾದರೂ ಒಂದೇ ಎಡೆಯಲ್ಲಿ ಸಿಕ್ಕಲೆಂಬ ಅಭಿಪ್ರಾಯದಿಂದ ಆಯಾ ವಿಷಯಗಳಿಗನುಸಾರವಾಗಿ ಭಾಗಗಳನ್ನಾಗಿ ವಿಂಗಡಿಸಲಾಗುತ್ತಿರುವುದು ಸರಿಯಷ್ಟೆ. ಅದನ್ನನುಸರಿಸಿ ಭಾಗವತದ ಮಹಿಮೆ, ಕಾಳಿಂದಿಯ ಮಹಿಮೆ ಇವುಗಳು ಒಂದೆಡೆ ಸಿಕ್ಕುವಂತೆ ಈ ಪುಸ್ತಕವನ್ನು ಐದನೆಯ ಭಾಗವಾಗಿ ವಿಂಗಡಿಸಿ ಪ್ರಕಟಿಸಲಾಗಿದೆ.

ಇದರಲ್ಲಿ ಮೊದಲಿನ ಆರು ಅಧ್ಯಾಯಗಳಲ್ಲಿ ಭಾಗವತದ ಮಹಿಮೆಯೂ, ಮಿಕ್ಕ ಇಪ್ಪತ್ತನಾಲ್ಕು ಅಧ್ಯಾಯಗಳಲ್ಲಿ ಕಾಳಿಂದೀ ಮಹಿಮೆಯೂ ವಿಸ್ತಾರವಾಗಿ ವರ್ಣಿತವಾಗಿದೆ.

ಮೊದಲನೆಯದಾದ ಭಾಗವತ ಮಹಿಮೆಯಲ್ಲಿ ಭಕ್ತಿ, ಜ್ಞಾನ, ವೈರಾಗ್ಯ ಇವುಗಳ ವಿಷಯವನ್ನು ವಿಶದಪಡಿಸಿದೆ. ಈ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಸ್ತ್ರೀ ಪುರುಷ ವ್ಯಕ್ತಿಗಳಂತೆ ನಿರೂಪಿಸಿ, ಭಕ್ತಿಯು ತಾಯಿಯೆಂದೂ, ಜ್ಞಾನ, ವೈರಾಗ್ಯಗಳು ಆಕೆಯ ಪುತ್ರರೆಂದೂ ಹೇಳುತ್ತಾ, ಅವರು ನಾರದನಿಗೆ ಸಿಕ್ಕಿದರೆಂದೂ, ಅವರ ವಿಷಯಗಳನ್ನು ತಿಳಿದ ನಾರದನು ಅವರಿಗೆ ಉಪಕಾರವಲ್ಲಿ ಉದ್ಯುಕ್ತನಾಗಿರುವುದನ್ನೂ, ತಾಯಿಯಾದ ಭಕ್ತಿಯು ಬಲಗೊಂಡಿರುವುದನ್ನೂ, ಮಕ್ಕಳಾದ ಜ್ಞಾನ, ವೈರಾಗ್ಯಗಳು ಮುಪ್ಪನ್ನು ಹೊಂದಿ ನಿಶ್ಶಕ್ತರಾಗಿರುವುದನ್ನೂ ವರ್ಣಿಸಿರುತ್ತದೆ. ಇದರಿಂದ ಈ ಕಲಿಯುಗದಲ್ಲಿ ಭಕ್ತಿಯು ಇದೆಯೆಂದೂ, ಜ್ಞಾನ, ವೈರಾಗ್ಯಗಳು ಎಲ್ಲೋ ಅಲ್ಪ ಸ್ವಲ್ಪವಾಗಿರುವುದೆಂದೂ ವಿಶದವಾಗಿ ಗೊತ್ತಾಗುತ್ತದೆ.

ಹೇಗೆಂದರೆ, ಈ ಕಲಿಯುಗದಲ್ಲಿ ಭಕ್ತಿಯೊಂದೇ ಸಾಕೆ ? ಜ್ಞಾನ, ವೈರಾಗ್ಯಗಳು ಬೇಡವೆ ? ಎಂಬ ಪ್ರಶ್ನೆಯು ತಲೆದೋರಿ ಭಾಗವತ ಸಪ್ತಾಹ

ಎಂಬ ಒಂದು ಉತ್ಸವವನ್ನು ಕಲ್ಪಿಸಿ ಅದನ್ನು ಮಾಡಿದರೆ ಭಕ್ತಿಯೂ, ಜ್ಞಾನ, ವೈರಾಗ್ಯಗಳೂ ಉಂಟಾಗುತ್ತವೆಯೆಂಬ ವಿಷಯವು ಗೋಕರ್ಣನ ಕಥೆಯಿಂದ ವಿಶದವಾಗಿ ತಿಳಿದುಬರುತ್ತದೆ.

ಆ ಭಕ್ತಿ, ಜ್ಞಾನ, ವೈರಾಗ್ಯಗಳು ಉಂಟಾಗುವ ಸಪ್ತಾಹದ ಉತ್ಸವವನ್ನು ನಡೆಸಬೇಕೆಂದು ಹೇಳಿ ಅದರ ನಿಯಮಗಳನ್ನು ಕಥೆಯೊಡನೆ ಸಾಂಗವಾಗಿ ತಿಳಿಯಪಡಿಸಿದೆ.

ಒಟ್ಟಿನಲ್ಲಿ ಭಾಗವತವು ಶ್ರೀ ಕೃಷ್ಣನ ಚರಿತ್ರೆ. ಇದನ್ನು ಶಾಸ್ತ್ರೋಕ್ತವಾದ ನಿಯಮದಿಂದ ಯಾರು ಕೇಳುತ್ತಾರೋ ಅವರಿಗೆ ಭಕ್ತಿ, ಜ್ಞಾನ, ವೈರಾಗ್ಯಗಳು ಮೂರೂ ಪೂರ್ಣವಾಗಿ ಉಂಟಾಗಿ ಅವರು ಮಹಾವಿಷ್ಣುವಿನಲ್ಲಿ ಐಕ್ಯತೆಯನ್ನು ಹೊಂದುತ್ತಾರೆ. ಅಥವಾ ಅವನ ಜೊತೆಯಲ್ಲಿರುತ್ತಾರೆಂಬುದನ್ನು ಪುರಾಣ ಶೈಲಿಯ ಪಾತ್ರಗಳ ಕಲ್ಪನೆಯಿಂದ ವ್ಯಕ್ತಪಡಿಸಿದೆ.

ಅನಂತರ ಎರಡನೆಯದಾದ ಕಾಳಿಂದಿ ಅಥವಾ ಯಮುನಾ ನದಿಯ ವರ್ಣನೆಯನ್ನು ತೆಗೆದುಕೊಂಡು ಆ ಕಾಳಿಂದಿಯು ಗಂಗೆಗೆ ಸಮವೆಂದೂ, ಗಂಗೆಯ ದಡದಲ್ಲಿರುವಂತೆಯೇ ಇಲ್ಲಿಯೂ ಮಹಾ ಪುಣ್ಯತೀರ್ಥಗಳಿವೆಯೆಂದೂ ವರ್ಣಿಸಿರುತ್ತದೆ. ಇದಕ್ಕೆ ಪ್ರಧಾನವಾದ ಸ್ಥಳವು ಇಂದ್ರನ ಖಾಂಡವವನ. ಅದರಲ್ಲಿ ಇಂದ್ರಪ್ರಸ್ಥವು ಸೇರಿದೆ. ಅದಕ್ಕೆ ಸೇರಿದಂತೆ ಅನೇಕ ತೀರ್ಥಗಳಿವೆ. ಇವುಗಳಲ್ಲಿ ಕೆಲವು ಮೋಕ್ಷವನ್ನು ಮಾತ್ರ ಕೊಡತಕ್ಕುವು. ಕೆಲವು ಪೂರ್ವಜನ್ಮದ ಜ್ಞಾನ, ಮೋಕ್ಷಗಳೆರಡನ್ನೂ ಕೊಡತಕ್ಕವು. ಪ್ರಾಣಿಯು ಆ ಕ್ಷೇತ್ರಗಳಲ್ಲಿ ಇರಲಾಗದಿದ್ದರೂ ಆ ಕ್ಷೇತ್ರದ ನೀರನ್ನು ಕುಡಿದರೆ ಸಾಕು. ಅದಕ್ಕೆ ಪೂರ್ವಜನ್ಮ ಜ್ಞಾನವೂ, ಮೋಕ್ಷವೂ ಸಿಕ್ಕುತ್ತದೆ.

ಪ್ರಪಂಚದಲ್ಲಿ ಮನುಷ್ಯನು ಜನನ ಮರಣ ರೂಪವಾದ ಸಂಸಾರವನ್ನು ತಪ್ಪಿಸಿಕೊಳ್ಳಬೇಕಾದರೆ ಬೇಕಾಗುವ ಉಪಾಯಗಳನ್ನು ಈ ತೀರ್ಥಯಾತ್ರೆಗಳ ಮೂಲಕ ದೃಷ್ಟಾಂತಗಳೊಡನೆ ಇಲ್ಲಿ ವಿವರಿಸಿ ಹೇಳಿರುವ ಉಪಾಯಗಳಲ್ಲಿ ಯಾವುದಾದರೂ ಒಂದನ್ನಾದರೂ ನಂಬಿ ಅದನ್ನು ಅನುಸರಿಸಿ ನಡೆದು ಕೃತಾರ್ಥನಾಗಲೆಂದು ಹಾರೈಸಲಾಗಿದೆ.

**ಈ** ನೂತನ ವರ್ಷಾರಂಭದಲ್ಲಿ ನಮ್ಮನ್ನಾಳುವ ಮಹಾಸ್ವಾಮಿಯವರಿಗೆ **ಚಕ್ರವರ್ತಿಯವರು ಜಿ. ಸಿ. ಬಿ.** ಎಂಬ ಉತ್ತಮೋತ್ತರದ ಬಿರುದನ್ನು ದಯಪಾಲಿಸಿ **ಆ**ದರಿಸಿರುವುದಕ್ಕಾಗಿ ಅವರೀರ್ವರಿಗೂ ನನ್ನ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

**ಪಂ**ಡಿತರುಗಳಿಗೆ ಆಶ್ರಯವನ್ನು ಕೊಟ್ಟು ಅವರನ್ನು ಪ್ರೋತ್ಸಾಹಿಸುತ್ತ ಅವರುಗಳಿಂದ ಅನೇಕ ಗ್ರಂಥಗಳು ಕನ್ನಡದಲ್ಲಿ ಹೊರಹೊಮ್ಮುವಂತೆ ಮಾಡಿ ತನ್ಮೂಲಕ ಜನಸಾಮಾನ್ಯರಿಗೂ ಜ್ಞಾನಾಮೃತಪಾನವು ಸುಲಭದಲ್ಲಿ ದೊರಕುವಂತೆ ಲೋಕೋಪಕಾರ ಮಾಡುತ್ತಲಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುಗಳವರಿಗೆ ಭಗವಂತನು ಆಯುರಾರೋಗ್ಯ ಸತ್ಸಂತಾನಗಳನ್ನು ಕೊಟ್ಟು ಸಲಹಲೆಂದು ಅನನ್ಯಮನಸ್ಕನಾಗಿ ಪ್ರಾರ್ಥಿಸುತ್ತೇನೆ.

ಮೈಸೂರು,
25—1—1946

ಅನುವಾದಕ,
**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ.**



॥ ಶ್ರೀಃ ॥

–X–

## ಪದ್ಮಮಹಾಪುರಾಣದ ಉತ್ತರಖಂಡದಲ್ಲಿ ಐದನೆಯ ಭಾಗದ

## ವಿಷಯಾನುಕ್ರಮಣಿಕೆ.



ಪುಟಸಂಖ್ಯೆ

|| ಭಾಗವತ ಮಹಿಮೆಯು ಮುಗಿದುದು ||

ಪುಟಸಂಖ್ಯೆ

॥ ಕಾಳಿಂದಿಯ ಮಹಿಮೆಯು ಮುಗಿದುದು ॥



|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ನವಾಶೀತ್ಯಧಿಕಶತತಮೋಽಧ್ಯಾಯಃ ||



**|| ಪಾರ್ವತ್ಯುವಾಚ ||**

**ದೇವ ದೇವ ಮಹಾದೇವ ಸರ್ವಜ್ಞ ಸಕಲಾರ್ಥದ ।**
**ಕೃಪಾಂ ಮಯಿ ಪರಾಂ ಕೃತ್ವಾ ಯತ್ಪೃಚ್ಛೇ ತದ್ವದಸ್ವಮೇ || ೧ ||**

**ಶ್ರುತಂ ಚ ಗೀತಾಮಾಹಾತ್ಮ್ಯಂ ಮಹಾಶ್ಚರ್ಯ ಕಥಾಯುತಂ ।**
**ತೇನ ಮೇ ಭಕ್ತಿರುತ್ಪನ್ನಾ ಶ್ರೋತುಂ ಕೃಷ್ಣಕಥಾಂ ಪರಾಂ || ೨ ||**

**ಪುರಾಣೇಷು ಚ ಸರ್ವೇಷು ಶ್ರೀಮದ್ಭಾಗವತಂ ಪರಂ ।**
**ಯತ್ರ ಪ್ರತಿಪದಂ ಕೃಷ್ಣೋ ಗೀಯತೇ ಬಹುಧರ್ಷಿಭಿಃ ।**
**ತನ್ಮಾಹಾತ್ಮ್ಯಂ ತಥಾ ತತ್ವಂ ಸೇತಿಹಾಸಂ ವದಾಧುನಾ || ೩ ||**

---

## ನೂರ ಎಂಭತ್ತೊಂಭತ್ತನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು– ದೇವದೇವನೂ, ಮಹಾದೇವನೂ, ಸರ್ವಜ್ಞನೂ, ಸಕಲ ವಿಷಯದ ಅರ್ಥವನ್ನು ಬಲ್ಲವನೂ ಆದ ಎಲೈ ಸ್ವಾಮಿಯೆ! ನನ್ನಲ್ಲಿ ದಯೆಯಿಟ್ಟು ನಾನು ಕೇಳುವುದನ್ನು ಹೇಳು.

೨. ಬಹುವಾದ ಆಶ್ಚರ್ಯದಿಂದ ಕೂಡಿದ ಗೀತೆಯ ಮಹಿಮೆಯನ್ನು ಕೇಳಿದೆನು. ಆದುದರಿಂದ ನನಗೆ ಬಹು ಭಕ್ತಿಯು ಹುಟ್ಟಿರುವುದು. ಉತ್ತಮವಾದ ಶ್ರೀ ಕೃಷ್ಣ ಕಥೆಯನ್ನು ಕೇಳಬೇಕು. ಅದನ್ನು ಹೇಳು.

೩. ಪುರಾಣಗಳಲ್ಲೆಲ್ಲಾ ಶ್ರೀಮದ್ಭಾಗವತವು ಉತ್ತಮವಾದುದು. ಅದರಲ್ಲಿ ಒಂದೊಂದು ಶ್ಲೋಕದಲ್ಲಿಯೂ ಕೃಷ್ಣನು ವರ್ಣಿಸಲ್ಪಡುತ್ತಾನೆ. ಅದರ ಮಹಿಮೆಯನ್ನೂ, ಅದರ ತತ್ವವನ್ನೂ ಇತಿಹಾಸದೊಡನೆ ನನಗೆ ಈಗ ಹೇಳು.

|| ಈಶ್ವರ ಉವಾಚ ||

ಯಂ ಪ್ರವ್ರಜನ್ತಮನುಪೇತಮಪೇತಕೃತ್ಯಂ
ದ್ವೈಪಾಯನೋ ವಿರಹಕಾತರ ಆಜುಹಾವ ।
ಪುತ್ರೇತಿ ತನ್ಮಯತಯಾ ತರವೋಽಭಿನೇದುಃ
ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ || ೪ ||

ನೈಮಿಷೇ ಸೂತಮಾಸೀನಮಭಿವಾದ್ಯ ಮಹಾಮತಿಃ ।
ಕಥಾಮೃತರಸಾಸ್ವಾದಕುಶಲಶ್ಶೌನಕೋಽಬ್ರವೀತ್ || ೫ ||

|| ಶೌನಕ ಉವಾಚ ||

ಅಜ್ಞಾನಧ್ವಾಂತವಿಧ್ವಂಸಿ ಕೋಟಿಜನ್ಮಾಘನಾಶನಂ ।
ಸೂತಾಖ್ಯಾಹಿ ಕಥಾಸಾರಂ ಮಮ ಕರ್ಣರಸಾಯನಂ || ೬ ||

---

೪. ಈಶ್ವರನು ಹೇಳಿದನು- ಎಲ್ಲವನ್ನೂ ಬಿಟ್ಟು ಸನ್ಯಾಸಿಯಾಗುತ್ತಿರುವ ಹತ್ತಿರ ಬರದಿರುವ, ಕೆಲಸವನ್ನು ಮಾಡದಿರುವ, ಶುಕನನ್ನು ನೋಡಿ, ಯಾವ ವ್ಯಾಸನು ಪುತ್ರ ಪುತ್ರ ಎಂಬುದಾಗಿ ಮಗನು ಹೊರಟುಹೋಗುವನಲ್ಲ! ಎಂದು ಕೂಗಲು ಅಲ್ಲಿರುವ ಮರಗಳೂ ಕೂಡ, ಅವನ ಧ್ವನಿಯನ್ನು ಅನುಕಂಪೆಯಿಂದ ಅನುಕರಿಸುತ್ತಿದ್ದುವೋ! ಎಂಬಂತಿದ್ದಿತು. ಅಂತಹ ಎಲ್ಲಾ ಪ್ರಾಣಿಗಳಲ್ಲಿಯೂ ಸೇರಿಕೊಂಡಿರುವ ಮುನಿಯಾದ ವ್ಯಾಸನನ್ನು ನಮಸ್ಕರಿಸುತ್ತೇನೆ.

೫. ಬುದ್ಧಿವಂತನೂ, ಕಥೆಯನ್ನು ಕೇಳುವುದರಲ್ಲಿ ಆಸಕ್ತನೂ ಆದ ಶೌನಕನು ನೈಮಿಷಾರಣ್ಯದಲ್ಲಿ ಕುಳಿತಿರುವ ಸೂತನನ್ನು ನೋಡಿ, ನಮಸ್ಕರಿಸಿ ಇಂತೆಂದನು.

೬. ಶೌನಕನು ಹೇಳಿದನು- ಎಲೈ ಸೂತನೇ! ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡುವ, ಕೋಟಿಜನ್ಮಗಳ ಪಾಪವನ್ನು ನಾಶಮಾಡುವ ಕರ್ಣರಸಾಯನವಾದ, ಕಥೆಯನ್ನು ನನಗೆ ಹೇಳು.

ಭಕ್ತಿಜ್ಞಾನವಿರಾಗಾಪ್ತೋ ವಿವೇಕೋ ವರ್ಧತೇ ಕಥಂ ।
ಮಾಯಾಮೋಹನಿರಾಸಶ್ಚ ವೈಷ್ಣವೈಃ ಕ್ರಿಯತೇ ಕಥಂ ॥ ೭ ॥

ಇಹ ಘೋರೇ ಕಲೌ ಪ್ರಾಯಃ ಜೀವಶ್ಚಾಸುರತಾಂ ಗತಃ ।
ಕ್ಲೇಶಾಕ್ರಾಂತಸ್ಯ ತಸ್ಯೈವ ಶೋಧನೇ ಕಿಂ ಪರಾಯಣಂ ॥ ೮ ॥

ಶ್ರೇಯಸಾಂ ಯದ್ಭವೇಚ್ಛ್ರೇಯಃ ಪಾವನಾನಾಂ ಚ ಪಾವನಂ ।
ಕೃಷ್ಣಪ್ರಾಪ್ತಿಕರಂ ಶಶ್ವತ್ಸಾಧನಂ ತದ್ವದಾಧುನಾ ॥ ೯ ॥

ಚಿಂತಾಮಣಿರ್ಲೋಕಸುಖಂ ಸುರದ್ರುಃ ಸ್ವರ್ಗಸಂಪದಂ ।
ಪ್ರಯಚ್ಛತಿ ಗುರುಃ ಪ್ರೀತೋ ವೈಕುಂಠಂ ಯೋಗಿದುರ್ಲಭಂ ॥ ೧೦ ॥

॥ ಸೂತ ಉವಾಚ ॥

ಪ್ರೀತಿಃ ಶೌನಕ ಚಿತ್ತೇ ತೇ ಹ್ಯತೋ ವಚ್ಮಿ ವಿಚಾರ್ಯ ಚ ।
ಸರ್ವಸಿದ್ಧಾಂತನಿಷ್ಪನ್ನಂ ಸಂಸಾರಭಯನಾಶನಂ ॥ ೧೧ ॥

---

೭. ಭಕ್ತಿಯನ್ನು ಪುರಸ್ಕರಿಸಿಕೊಂಡಿರುವ, ವೈರಾಗ್ಯದಿಂದ ಹೊಂದಿದ ವಿವೇಕವು ಹೇಗೆ ಹುಟ್ಟಿ ಅಭಿವೃದ್ಧಿಯಾಗುತ್ತದೆ? ಮಾಯೆಯೆಂಬ ಮೋಹವನ್ನು ವೈಷ್ಣವರು ಹೇಗೆ ನಾಶಮಾಡುತ್ತಾರೆ?

೮. ಈ ಘೋರವಾದ ಕಲಿಯುಗದಲ್ಲಿ, ಸಾಧಾರಣವಾಗಿ ಪ್ರಾಣಿಗಳೆಲ್ಲಾ ಅಸುರಭಾವವನ್ನು ಹೊಂದಿರುತ್ತವೆ. ಆ ಕಷ್ಟದಿಂದ ತೊಂದರೆಪಡುತ್ತಿರುವ ಅವು ಅದನ್ನು ತಪ್ಪಿಸಿಕೊಳ್ಳಲು ಉತ್ತಮವಾದ ಉಪಾಯವು ಯಾವುದು?

೯. ಯಾವುದು ಶ್ರೇಯಸ್ಸಿಗೆಲ್ಲಾ ಶ್ರೇಯಸ್ಸೋ ಯಾವುದು ಪಾವನಕ್ಕೆಲ್ಲಾ ಪಾವನವೋ ಯಾವುದು ಕೃಷ್ಣನನ್ನು ನಮಗೆ ವಶಮಾಡಿಕೊಡುತ್ತದೆಯೋ ಅಂತಹ ಸಾಧನವೊಂದನ್ನು ನನಗೆ ಈಗ ಹೇಳು.

೧೦. ಗುರುವು ಪ್ರೀತನಾದರೆ ಚಿಂತಾಮಣಿಯಂತೆ ಲೋಕಸುಖವನ್ನೂ ಕಲ್ಪವೃಕ್ಷದಂತೆ ಸ್ವರ್ಗಸಂಪತ್ತನ್ನೂ ಕೊಡುವನಲ್ಲದೆ, ಯೋಗಿಗಳಿಗೆ ದುರ್ಲಭವಾದ ವೈಕುಂಠವನ್ನೂ ಕೊಡುತ್ತಾನೆ.

೧೧. ಸೂತನು ಹೇಳಿದನು ಎಲೈ ಶೌನಕನೇ! ನಿನ್ನ ಮನಸ್ಸಿನಲ್ಲಿ ಪ್ರೀತಿಯಿದೆ. ಆದುದರಿಂದ ಇದನ್ನು ವಿಮರ್ಶಿಸಿ ಎಲ್ಲಾ ಸಿದ್ಧಾಂತವಲ್ಲೂ ಖಚಿತವಾದ ಸಂಸಾರಭಯನಾಶಕವಾದ ಭಾಗವತವನ್ನು ಹೇಳುತ್ತೇನೆ.

ಭಕ್ತಿಪ್ರವರ್ಧನಂ ಯಚ್ಚ ಕೃಷ್ಣಸಂತೋಷಹೇತುಕಂ ।
ತದಹಂ ತೇಭಿಧಾಸ್ಯಾಮಿ ಸಾವಧಾನತಯಾ ಶೃಣು ॥ ೧೨ ॥

ಕಾಲವ್ಯಾಸಮುಖಗ್ರಾಸತ್ರಾಸನಿರ್ನಾಸಹೇತವೇ ।
ಶ್ರೀಮದ್ಭಾಗವತಂ ಶಾಸ್ತ್ರಂ ಕಲೌ ಕೀರೇಣ ಭಾಷಿತಂ ॥ ೧೩ ॥

ಏತಸ್ಮಾದಪರಂ ಕಿಂಚಿನ್ಮನಶ್ಶುದ್ಧ್ಯೈ ನ ವಿದ್ಯತೇ ।
ಜನ್ಮಾಂತರೇ ಲಭೇತ್ಪುಣ್ಯಂ ತದಾ ಭಾಗವತಂ ಲಭೇತ್ ॥ ೧೪ ॥

ಪರೀಕ್ಷಿತೇಃ ಕಥಾಂ ವಕ್ತುಂ ಸಭಾಯಾಂ ಸಂಸ್ಥಿತೇ ಶುಕೇ ।
ಸುಧಾಕುಂಭಂ ಗೃಹೀತ್ವೈವ ದೇವಾಸ್ತತ್ರ ಸಮಾಗಮನ್ ।
ಶುಕಂ ನತ್ವಾಽವದನ್ ಸರ್ವೇ ಸ್ವಕಾರ್ಯಕುಶಲಾಸ್ಸುರಾಃ ॥ ೧೫ ॥

---

೧೨. ಭಕ್ತಿಪ್ರದವಾದ, ಕೃಷ್ಣಸಂತೋಷಕಾರಣವಾದ, ಭಾಗವತವನ್ನು ಹೇಳುತ್ತೇನೆ. ನಿಧಾನವಾಗಿ ಕೇಳು.

೧೩. ಯಮನೆಂಬ ಸರ್ಪದ ಬಾಯಿಗೆ ತುತ್ತಾಗುವಿಕೆಯಿಂದ ಬಿಡಿಸಿ ಕೊಳ್ಳಲು ಕಾರಣವಾದ, ಶ್ರೀಮದ್ಭಾಗವತ ಶಾಸ್ತ್ರವು ಕಲಿಯುಗದಲ್ಲಿ ಶುಕನಿಂದ ಹೇಳಲ್ಪಟ್ಟಿದೆ.

೧೪. ಈ ಭಾಗವತಕ್ಕಿಂತಲೂ ಬೇರೆಯಾದುದು ಮನಶ್ಶುದ್ಧಿಗೆ ಮತ್ತೆ ಯಾವುದೂ ಇಲ್ಲ. ಜನ್ಮಾಂತರದಲ್ಲಿ ಪುಣ್ಯಮಾಡಿದ್ದರೆ ಆಗ ಭಾಗವತ ಶ್ರವಣವು ಸಿಕ್ಕುತ್ತದೆ.

೧೫. ಪರೀಕ್ಷಿದ್ರಾಜನ ಕಥೆಯನ್ನು ಹೇಳಲು, ಶುಕಋಷಿಯು ಸಭೆಯಲ್ಲಿ ಇರಲಾಗಿ, ದೇವತೆಗಳೆಲ್ಲರೂ ಅಮೃತಕಲಶವನ್ನು ತೆಗೆದುಕೊಂಡು ಅಲ್ಲಿಗೆ ಬಂದು ಆತನನ್ನು ನಮಸ್ಕರಿಸಿ, ಸ್ವಕಾರ್ಯದಲ್ಲಿ ಬುದ್ಧಿವಂತರಾದ ಆ ದೇವತೆಗಳು ಇಂತೆಂದರು.

॥ ಸುರಾ ಊಚುಃ ॥

**ಕಥಾ ಸುಧಾಂ ಪ್ರಯಚ್ಛಸ್ವ ಗೃಹೀತ್ವೈವ ಸುಧಾಮಿಮಾಂ ।**
**ಏವಂ ವಿನಿಮಯೇ ಜಾತೇ ಸುಧಾ ರಾಜ್ಞಾ ಪ್ರಪೀಯತಾಂ ।**
**ಪ್ರಪಾಸ್ಯಾಮೋ ವಯಂ ಸರ್ವೇ ಶ್ರೀಮದ್ಭಾಗವತಾಮೃತಂ ॥ ೧೬ ॥**

॥ ಸೂತ ಉವಾಚ ॥

**ಕ್ವ ಕಥಾ ಕ್ವ ಸುಧಾ ಲೋಕೇ ಕ್ವ ಕಾಚಃ ಕ್ವ ಮಣಿರ್ಮಹಾನ್ ।**
**ಬ್ರಹ್ಮರಾತೋ ವಿಚಾರ್ಯೇತಿ ತದಾ ದೇವಾನ್ ಜಹಾಸ ಹ ॥ ೧೭ ॥**

**ಅಭಕ್ತಾಂಸ್ತಾಂಶ್ಚ ವಿಜ್ಞಾಯ ನ ದದೌ ಸ ಕಥಾಮೃತಂ ।**
**ಶ್ರೀಮದ್ಭಾಗವತೀಂ ವಾರ್ತಾಂ ಸುರಾಣಾಮತಿದುರ್ಲಭಾಂ ॥ ೧೮ ॥**

**ರಾಜ್ಞೋ ಮೋಕ್ಷಂ ತಥಾ ವೀಕ್ಷ್ಯ ಪುರಾ ಧಾತಾತಿವಿಸ್ಮಿತಃ ।**
**ಸತ್ಯಲೋಕೇ ತುಲಾಂ ಬದ್ಧ್ವಾಽತೋಲಯತ್ಸಾಧನಾನ್ಯಜಃ ॥ ೧೯ ॥**

---

೧೬. ದೇವತೆಗಳು ಹೇಳಿದರು- ಎಲೈ ಶುಕನೇ ! ಈ ಅಮೃತವನ್ನು ತೆಗೆದುಕೊಂಡು 'ಕಥಾಮೃತವನ್ನು ಕೊಡು' ಎಂಬುದಾಗಿ ಅದಲು ಬದಲು ಮಾಡಿಕೊಳ್ಳಲು ಹೇಳಿದರು. ಅನಂತರ ಈ ಅಮೃತವನ್ನು ರಾಜನಾದ ಪರೀಕ್ಷಿತ್ತು ಕುಡಿಯಲಿ. ನಾವೆಲ್ಲರೂ ಭಾಗವತಾಮೃತವನ್ನು ಕುಡಿಯುತ್ತೇವೆ.

೧೭. ಸೂತನು ಹೇಳಿದನು- ಕಥೆಯೆಷ್ಟರದು ? ಅಮೃತವೆಷ್ಟರದು ? ಗಾಜಿಗೂ ಮಹತ್ತಾದ ಮಣಿಗೂ, ಎಷ್ಟೆಷ್ಟು ವ್ಯತ್ಯಾಸಗಳಿವೆ ? ಎಂಬುದಾಗಿ ಬ್ರಹ್ಮರಾತನು ಯೋಚಿಸಿ ಆ ದೇವತೆಗಳನ್ನು ಹಾಸ್ಯಮಾಡಿದನು.

೧೮. ಆಗ ಶುಕನು ಆ ದೇವತೆಗಳು ಭಕ್ತಿಯಿಲ್ಲದವರೆಂದು ತಿಳಿದು, ಆ ಕಥಾಮೃತವನ್ನು ಕೊಡಲೇ ಇಲ್ಲ. ಆದುದರಿಂದ ದೇವತೆಗಳಿಗೂ ಕೂಡ ಆ ಭಾಗವತವು ದುರ್ಲಭವು.

೧೯. ಈ ಭಾಗವತವನ್ನು ಕೇಳಿದುದರಿಂದ ಪರೀಕ್ಷಿತ್ತಿಗೆ ಮೋಕ್ಷವು ಬಂದುದನ್ನು ನೋಡಿ, ಬ್ರಹ್ಮನು ಆಶ್ಚರ್ಯಪಟ್ಟನು. ಆಗ ಪರೀಕ್ಷಿಸಬೇಕೆಂದು ಸತ್ಯಲೋಕದಲ್ಲಿ ಆ ಬ್ರಹ್ಮನು ತಕ್ಕಡಿಯನ್ನು ನೆಟ್ಟು ಮೋಕ್ಷದ ಮಿಕ್ಕ ಸಾಧನಗಳನ್ನೂ ಭಾಗವತವನ್ನೂ ತೂಗಿದನು.

ಲಘೂನ್ಯನ್ಯಾನಿ ಜಾತಾನಿ ಗೌರವೇಣ ಇದಂ ಮಹತ್ ।
ತದಾ ಋಷಿಗಣಾಸ್ಸರ್ವೇ ವಿಸ್ಮಯಂ ಪರಮಂ ಯಯುಃ ॥ ೨೦ ॥

ಮೇನಿರೇ ಭಗವದ್ರೂಪಂ ಶಾಸ್ತ್ರಂ ಭಾಗವತಂ ಕ್ಷಿತೌ ।
ಪಠನಾಚ್ಛ್ರವಣಾತ್ಸದ್ಯೋ ವೈಕುಂಠಫಲದಾಯಕಂ ॥ ೨೧ ॥

ವರ್ಷೇಣ ಶ್ರವಣಂ ತಸ್ಯ ಬಹುಸೌಖ್ಯಪ್ರದಾಯಕಂ ।
ಮಾಸೇನ ಭಕ್ತಿಕಾಮಸ್ಯ ಲಭತೇ ದ್ವಿಜಸತ್ತಮ ॥ ೨೨ ॥

ಸಪ್ತಾಹೇನ ಶ್ರುತಂ ಚೈತತ್ಸರ್ವಥಾ ಮುಕ್ತಿದಾಯಕಂ ।
ಸನಕಾದ್ಯೈಃ ಪುರಾ ಪ್ರೋಕ್ತಂ ನಾರದಾಯ ದಯಾಪರೈಃ ॥ ೨೩ ॥

ಯದ್ಯಪಿ ಬ್ರಹ್ಮಸಂಬಂಧಾಚ್ಛ್ರುತಮೇತತ್ಸುರರ್ಷಿಣಾ ।
ಸಪ್ತಾಹಶ್ರವಣವಿಧಿಃ ಕುಮಾರೈಸ್ತಸ್ಯ ಭಾಷಿತಃ ॥ ೨೪ ॥

---

೨೦. ಮಿಕ್ಕವುಗಳೆಲ್ಲವೂ ಹಗುರುವಾದುವು. ಈ ಭಾಗವತವು ಭಾರವಾಯಿತು. ಆಗ ಋಷಿಗಳೆಲ್ಲರೂ ಆಶ್ಚರ್ಯವನ್ನು ಹೊಂದಿದರು.

೨೧. ಆಗ ಭಾಗವತವು ಭೂಮಿಯಲ್ಲಿರುವ ಭಗವದ್ರೂಪವೆಂದು ಎಲ್ಲರಿಗೂ ಗೊತ್ತಾಯಿತು. ಓದುವುದರಿಂದಲೂ, ಕೇಳುವುದರಿಂದಲೂ ಒಡನೆಯೇ ವೈಕುಂಠವನ್ನು ಹೊಂದುವ ಫಲವನ್ನು ಕೊಡುತ್ತದೆ.

೨೨. ಒಂದು ವರ್ಷಕಾಲ ಈ ಭಾಗವತವನ್ನು ಕೇಳಿದರೆ ಬಹುವಾದ ಸೌಖ್ಯವು ಬರುತ್ತದೆ. ಭಕ್ತಿಯಿಂದ ಕೇಳಿದರೆ ಒಂದು ತಿಂಗಳಿಗೆ ಸೌಖ್ಯವು ಲಭಿಸುತ್ತದೆ.

೨೩. ಭಕ್ತಿಯಿಂದ ಒಂದು ವಾರದ ದಿವಸ ಕೇಳಿದರೇನೇ ಮುಕ್ತಿಯು ಬರುತ್ತದೆ. ದಯಾವಂತರಾದ ಸನಕಾದಿಗಳು ಪೂರ್ವದಲ್ಲಿ ನಾರದನಿಗೆ ಹೇಳಿದರು.

೨೪. ಇದರಲ್ಲಿ ಬ್ರಹ್ಮಸಂಬಂಧವಿದ್ದುದರಿಂದಲೇ ನಾರದನು ಇದನ್ನು ಕೇಳಿದನು. ಸಪ್ತಾಹಶ್ರವಣ ವಿಧಿಯನ್ನು ಋಷಿಕುಮಾರರು ಆ ನಾರದನಿಗೆ ಹೇಳಿದರು.

॥ ಶೌನಕ ಉವಾಚ ॥

ಲೋಕವಿಗ್ರಹಯುಕ್ತಸ್ಯ ನಾರದಸ್ಯಾಸ್ಥಿರಸ್ಯ ಚ ।
ವಿಧಿಶ್ರವೇ ಕುತಃ ಪ್ರೀತಿಃ ಸಂಯೋಗಃ ಕುತ್ರ ಕೈಸ್ಸಹ ॥ ೨೫ ॥

॥ ಸೂತ ಉವಾಚ ॥

ಅತ್ರ ತೇ ಕೀರ್ತಯಿಷ್ಯಾಮಿ ಭಕ್ತಿಪುಷ್ಟಂ ಕಥಾನಕಂ ।
ಶುಕೇನ ಮಮ ಯತ್ಪ್ರೋಕ್ತಂ ರಹಃ ಶಿಷ್ಯಂ ವಿಚಾರ್ಯ ಚ ॥ ೨೬ ॥

ಏಕದಾ ತು ವಿಶಾಲಾಯಾಂ ಚತ್ವಾರ ಋಷಯೋಽಮಲಾಃ ।
ಸತ್ಸಂಗಾರ್ಥಂ ಸಮಾಯಾತಾ ದದೃಶುಸ್ತತ್ರ ನಾರದಂ ॥ ೨೭ ॥

॥ ಶ್ರೀ ಕುಮಾರಾ ಊಚುಃ ॥

ಕಥಂ ಬ್ರಹ್ಮನ್ ದೀನಮುಖಃ ಕುತಶ್ಚಿಂತಾತುರೋ ಭವಾನ್ ।
ತ್ವರಿತಂ ಗಮ್ಯತೇ ಕುತ್ರ ಕುತಶ್ಚಾಗಮನಂ ತವ ॥ ೨೮ ॥

---

೨೫. ಶೌನಕನು ಹೇಳಿದನು– ಆ ನಾರದನು ಯಾವಾಗಲೂ ಜನಗಳಿಗೆ ಜಗಳವನ್ನು ತಂದುಹಾಕತಕ್ಕವನು ಸ್ಥಿರವಲ್ಲದವನು. ಅವನಿಗೆ ಈ ವಿಧಿಯನ್ನು ಕೇಳುವುದರಲ್ಲಿ ಪ್ರೀತಿಯೆಲ್ಲಿಂದ ಬಂದೀತು ? ಆ ಕುಮಾರರೊಡನೆ ಸೇರುವಿಕೆ ಯಾದರೂ ಎಲ್ಲಿಂದ ಬಂದೀತು ?

೨೬. ಸೂತನು ಹೇಳಿದನು– ಈ ವಿಷಯದಲ್ಲಿ ಭಕ್ತಿಯಿಂದ ಕೂಡಿರುವ ಒಂದು ಕಥೆಯನ್ನು ನಿನಗೆ ಹೇಳುತ್ತೇನೆ. ಶುಕನು ಅದನ್ನು ಶಿಷ್ಯನಾದ ನನ್ನನ್ನು ಪರೀಕ್ಷಿಸಿ ಹೇಳಿದನು.

೨೭. ಒಂದು ಸಾರಿ ವಿಶಾಲನಗರದಲ್ಲಿ ನಾಲ್ಕುಜನ ಉತ್ತಮರಾದ ಋಷಿಗಳು ಸಜ್ಜನರ ಸಹವಾಸವನ್ನಪೇಕ್ಷಿಸಿ ಬರುತ್ತಿರಲು ಅಲ್ಲಿ ನಾರದನನ್ನು ಕಂಡರು.

೨೮ ಶ್ರೀಕುಮಾರರು ಹೇಳಿದರು- ಎಲೈನಾರದನೇ ! ಮುಖವು ಕಾಂತಿ ಹೀನವಾಗಿರಲು ಕಾರಣವೇನು ? ಚಿಂತೆಯಿಂದ ಏತಕ್ಕೆ ಇದ್ದೀಯೆ ? ಜಾಗ್ರತೆ ಯಾಗಿ ಹೋಗುತ್ತಿರುವೆಯಲ್ಲ ? ಎಲ್ಲಿಗೆ ಹೋಗುತ್ತೀಯೆ ? ಎಲ್ಲಿಂದ ಬರುತ್ತ ಇದ್ದೀಯೆ.

ಇದಾನೀಂ ಶೂನ್ಯಚಿತ್ತೋಽಸಿ ಗತವಿತ್ತೋ ಯಥಾ ಜನಃ ।
ತವೇದಂ ಮುಕ್ತಸಂಗಸ್ಯ ನೋಚಿತಂ ವದ ಕಾರಣಂ ॥ ೨೯ ॥

॥ ನಾರದ ಉವಾಚ ॥

ಅಹಂ ತು ಪೃಥಿವೀಂ ಯಾತೋ ಜ್ಞಾತ್ವಾ ಸರ್ವೋತ್ತಮಾ ಇತಿ ।
ತೀರ್ಥೈರ್ನಾನಾವಿಧೈರ್ಯುಕ್ತಾಂ ಪುಣ್ಯದೈಃ ಪುಣ್ಯರೂಪಿಣೀಂ ॥ ೩೦ ॥

ಪುಷ್ಕರಂ ಚ ಪ್ರಯಾಗಂ ಚ ಕಾಶೀಂ ಗೋದಾವರೀಂ ತಥಾ ।
ಹರಿಕ್ಷೇತ್ರಂ ಕುರುಕ್ಷೇತ್ರಂ ಶ್ರೀರಂಗಂ ಸೇತುಬಂಧನಂ ॥ ೩೧ ॥

ಏವಮಾದಿಷು ತೀರ್ಥೇಷು ಭ್ರಮಮಾಣ ಇತಸ್ತತಃ ।
ನಾಪಶ್ಯಂ ಕುತ್ರಚಿಚ್ಛರ್ಮ ಮನಸ್ಸಂತೋಷಕಾರಕಂ ॥ ೩೨ ॥

ಕಲಿನಾಧರ್ಮಮಿತ್ರೇಣ ಧರೇಯಂ ಬಾಧಿತಾಧುನಾ ।
ಸತ್ಯಂ ನಾಸ್ತಿ ತಪಶ್ಶೌಚಂ ದಯಾ ದಾನಂ ನ ವಿದ್ಯತೇ ॥ ೩೩ ॥

---

೨೯. ಹಣವನ್ನು ಕಳೆದುಕೊಂಡ ಜನರಂತೆ ಮನಸ್ಸಿಲ್ಲದವನಾಗಿದ್ದೀಯೆ. ಮುಕ್ತಿಯನ್ನು ಹೊಂದಿರುವ ನಿನಗೆ ಇದು ಸರಿಯಲ್ಲ. ಕಾರಣವೇನು ? ಹೇಳು.

೩೦. ನಾರದನು ಹೇಳಿದನು- ಪುಣ್ಯವನ್ನು ಕೊಡುವ ನಾನಾ ತೀರ್ಥಗಳಿಂದ ಕೂಡಿರುವ ಈ ಭೂಮಿಯು ಪುಣ್ಯರೂಪಿಣೀ ಎಂದೂ ಸರ್ವೋತ್ತಮವೆಂದು ತಿಳಿದು ಇಲ್ಲಿಗೆ ಬಂದೆನು.

೩೧-೩೨. ಪುಷ್ಕರ, ಪ್ರಯಾಗ, ಕಾಶಿ, ಗೋದಾವರಿ, ಹರಿಕ್ಷೇತ್ರ, ಕುರುಕ್ಷೇತ್ರ, ಶ್ರೀರಂಗ, ಸೇತುಬಂಧ ಮುಂತಾದ ತೀರ್ಥಗಳಲ್ಲಿ ಇಲ್ಲಿಂದಲ್ಲಿಗೆ ಅಲ್ಲಿಂದ ಇಲ್ಲಿಗೆ ಸುತ್ತುತ್ತಿದ್ದರೂ, ಮನಸ್ಸಿಗೆ ಸಂತೋಷವನ್ನುಂಟುಮಾಡುವ ಸುಖಕರವಾದುದನ್ನು ಎಲ್ಲಿಯೂ ಕಾಣಲಿಲ್ಲ.

೩೩. ಈ ಭೂಮಿಯು ಅಧರ್ಮಕ್ಕೆ ಸ್ನೇಹಿತನಾದ ಕಲಿಯಿಂದ ತೊಂದರೆ ಪಡಿಸಲ್ಪಟ್ಟಿದೆ. ಸತ್ಯವಿಲ್ಲ. ತಪಸ್ಸಿಲ್ಲ. ಶೌಚವಿಲ್ಲ. ದಯೆ, ದಾನಗಳೊಂದೂ ಇಲ್ಲ.

**ಉದರಂಭರಿಣೋ ಜೀವಾ ವರಾಕಾಃ ಕೂಟಭಾಷಿಣಃ ।**
**ಮುದಾಃ ಸುಮಂದಮತಯೋ ಮಂದಭಾಗ್ಯಾ ಹ್ಯುಪದ್ರುತಾಃ ॥ ೩೪ ॥**

**ಪಾಷಂಡನಿರತಾಸ್ಸಂತೋ ವಿರಕ್ತಾಸ್ಸಪರಿಗ್ರಹಾಃ ।**
**ತರುಣೀಪ್ರಭುತಾ ಗೇಹೇ ಶಾಲಕೋ ಬುದ್ಧಿದಾಯಕಃ ॥ ೩೫ ॥**

**ಕನ್ಯಾಯಾ ವಿಕ್ರಯೋ ಲೋಭಾದ್ದಂಪತೀನಾಂ ಚ ಕಲ್ಕಲಃ ।**
**ಭ್ರಷ್ಟಾಚಾರಾದಭಿನ್ನಶ್ಚ ಸ್ವೇಚ್ಛಾಚಾರನಿದರ್ಶಿತಃ ॥ ೩೬ ॥**

**ಆಶ್ರಮಾ ಯವನೈರುದ್ಧಾಸ್ತೀರ್ಥಾನಿ ಸರಿತಸ್ತಥಾ ।**
**ದೇವತಾಯತನಾನ್ಯತ್ರ ದುಷ್ಟೈರ್ನಷ್ಟಾನಿ ಭೂರಿಶಃ ॥ ೩೭ ॥**

**ನ ಯೋಗೀ ನೈವ ಸಿದ್ಧೋ ವಾ ನ ಜ್ಞಾನೀ ಸತ್ಕ್ರಿಯೋ ನರಃ ।**
**ಕಲಿದಾವಾನಲೇನಾದ್ಯ ಸಾಧನಂ ಭಸ್ಮತಾಂ ಗತಂ ॥ ೩೮ ॥**

---

೩೪. ಜನಗಳು ಹೊಟ್ಟೆಪಾಡನ್ನು ಮಾತ್ರ ನೋಡಿಕೊಳ್ಳುತ್ತಾರೆ. ದೀನರಾಗಿದ್ದಾರೆ. ಸುಳ್ಳನ್ನು ಹೇಳುತ್ತಾರೆ. ಸೋಮಾರಿಗಳು, ಬುದ್ಧಿಯಿಲ್ಲದವರು, ಅದೃಷ್ಟಹೀನರು, ರೋಗಿಗಳೂ ಆಗಿದ್ದಾರೆ.

೩೫-೩೬. ಅವರೆಲ್ಲರೂ ನಾಸ್ತಿಕರಾಗಿದ್ದಾರೆ. ಆಸೆಯನ್ನು ಬಿಟ್ಟಿದ್ದಾರೆ. ಆದರೆ ಮದುವೆಮಾಡಿಕೊಂಡಿರುತ್ತಾರೆ. ಮನೆಯಲ್ಲಿ ಹೆಂಗಸರ ಯಜಮಾನಿಕೆಯೇ ಹೆಚ್ಚು, ಮೈದಂದಿರೇ ಬುದ್ಧಿಹೇಳತಕ್ಕವರು. ಕನ್ಯೆಯರನ್ನು ಲೋಭಕ್ಕೆ ಒಳಗಾಗಿ ಮಾರುತ್ತಾರೆ. ದಂಪತಿಗಳಿಗೆ ಜಗಳವೇ ಹೆಚ್ಚು. ಅಯೋಗ್ಯವಾದ ಅನಾಚಾರ ಮಾಡುವವರಂತೆ ಇದ್ದಾರೆ. ತಮಗೆ ಮನಸ್ಸಿಗೆ ಬಂದಂತೆ ಆಚಾರವನ್ನು ಮಾಡುತ್ತಾ ನಡೆಯುತ್ತಾರೆ.

೩೭. ಆಶ್ರಮಗಳು, ತೀರ್ಥಗಳು, ನದಿಗಳು, ಇವುಗಳನ್ನು ಯವನರು ಆಕ್ರಮಿಸಿಕೊಂಡಿರುವರು, ಅಲ್ಲಿರುವ ದೇವಸ್ಥಾನಗಳಲ್ಲೆಲ್ಲಾ ದುಷ್ಟರು ಸೇರಿಕೊಂಡು ನಾಶಮಾಡಿದ್ದಾರೆ.

೩೮. ಯೋಗಿಯೆಂಬುವನಾಗಲೀ, ಸಿದ್ಧನಾಗಲೀ, ಜ್ಞಾನಿಯಾಗಲೀ ಸತ್ಕ್ರಿಯೆಗಳನ್ನು ಮಾಡುವ ಮನುಷ್ಯನಾಗಲೀ ಎಲ್ಲಿಯೂ ಒಬ್ಬನೂ ಇಲ್ಲ. ಕಲಿಯೆಂಬ ಕಾಳ್ಗಿಚ್ಚಿನಿಂದ ಆ ಮೋಕ್ಷ ಸಾಧನಗಳೆಲ್ಲವೂ ಸುಟ್ಟು ಬೂದಿಯಾಗಿವೆ.

ಅಟ್ಟಶೂಲಾ ಜನಪದಾಃ ಶಿವಶೂಲಾ ದ್ವಿಜಾತಯಃ ।
ಕಾಮಿನ್ಯಃ ಕೇಶಶೂಲಿನ್ಯೋ ದೃಶ್ಯಂತೇ ಭುವಿ ಸರ್ವತಃ ॥ ೩೯ ॥

ಅಟ್ಟಮನ್ನಮಿತಿ ಪ್ರೋಕ್ತಂ ಶೂಲೋ ವಿಕ್ರಯ ಉಚ್ಯತೇ ।
ಶಿವೋ ವೇದ ಇತಿ ಪ್ರೋಕ್ತಃ ಕೇಶೋ ಭಗ ಇತೀರಿತಃ ॥ ೪೦ ॥

ಏವಂ ಪಶ್ಯನ್ ಕಲೇರ್ದೋಷಾನ್ ಪರ್ಯಟನ್ನವನೀಮಹಂ ।
ಯಾಮುನಂ ತಟಮಾಪನ್ನೋ ಯತ್ರ ಲೀಲಾ ಹರೇರಭೂತ್ ॥ ೪೧ ॥

ತತ್ರಾಶ್ಚರ್ಯಂ ಮಯಾ ದೃಷ್ಟಂ ಶ್ರೂಯತಾಂ ತನ್ಮುನೀಶ್ವರಾಃ ।
ಏಕಾ ತು ತರುಣೀ ತತ್ರ ನಿಷಣ್ಣಾ ಖಿನ್ನಮಾನಸಾ ॥ ೪೨ ॥

ದ್ವೌ ವೃದ್ಧೌ ಪತಿತೌ ಪಾರ್ಶ್ವೇ ನಿಶ್ವಸಂತಾವಚೇತಸೌ ।
ಶುಶ್ರೂಷನ್ತೀ ಪ್ರಬೋಧಯನ್ತೀ ರುದತೀ ಚ ತಯೋಃ ಪುರಃ ॥ ೪೩ ॥

---

೩೯. ದೇಶದ ಜನರೆಲ್ಲರೂ, ಅನ್ನವನ್ನು ಮಾರುತ್ತಾರೆ. ಬ್ರಾಹ್ಮಣರೆಲ್ಲರೂ ವೇದವನ್ನು ಮಾರುತ್ತಾರೆ. ಹೆಂಗಸರು ಹಣಕ್ಕೋಸ್ಕರ ಅತ್ಯಾಚಾರವನ್ನು ಮಾಡುತ್ತಾರೆ. ಈ ರೀತಿಯಾಗಿ ಎಲ್ಲಾ ಕಡೆಯಲ್ಲಿಯೂ ಕಂಡುಬರುತ್ತಿದೆ.

೪೦. ಅಟ್ಟವೆಂದರೆ ಅನ್ನವೆಂಬುದಾಗಿಯೂ, ಶೂಲವೆಂದರೆ ಮಾರುವುದೆಂಬುದಾಗಿಯೂ, ಶಿವವೆಂದರೆ ವೇದವೆಂದೂ, ಕೇಶವೆಂದರೆ ಹೆಂಗಸರ ಮರ್ಮಸ್ಥಾನವೆಂದೂ ಅರ್ಥವನ್ನು ತಿಳಿಯಬೇಕು.

೪೧. ಭೂಮಿಯಲ್ಲೆಲ್ಲಾ ಸುತ್ತುತ್ತ ಈ ರೀತಿಯಾಗಿ ಕಲಿಯ ದೋಷಗಳನ್ನು ತಿಳಿಯುತ್ತ ಹರಿಯು ಕ್ರೀಡಿಸಿದ ಜಾಗವಾದ ಯಮುನಾ ನದಿಯ ದಡಕ್ಕೆ ಬಂದೆನು.

೪೨. ಎಲೈ ಮುನಿಗಳಿರಾ ! ಅಲ್ಲಿ ಒಂದು ಆಶ್ಚರ್ಯವನ್ನು ನೋಡಿದೆನು. ಅದನ್ನು ಕೇಳಿರಿ. ಒಬ್ಬಳು ಯುವತಿಯು ಮನಸ್ಸಿನಲ್ಲಿ ದುಃಖವನ್ನು ಹೊಂದಿ ಬೇಸರದಿಂದ ಅಲ್ಲಿ ಕುಳಿತಿದ್ದಳು.

೪೩-೪೪. ಆಕೆಯ ಪಕ್ಕದಲ್ಲಿ ಇಬ್ಬರು ಮುದುಕರು ಬಿದ್ದಿದ್ದರು. ಅವರು ಜ್ಞಾನವಿಲ್ಲದೆ ನಿಟ್ಟುಸುರು ಬಿಡುತ್ತಿದ್ದರು. ಈ ಯುವತಿಯನ್ನು ಅನೇಕ ಜನ ಹೆಂಗಸರು ಬಂದು ಉಪಚರಿಸುತ್ತಿದ್ದರು. ಸಮಾಧಾನ ಹೇಳುತ್ತಿದ್ದರು.

ದಶದಿಕ್ಷು ನಿರೀಕ್ಷಂತೀ ರಕ್ಷಿತಾರಂ ನಿಜಂ ಪುನಃ ।
ವೀಜ್ಯಮಾನಾ ಶತಸ್ತ್ರೀಭಿಃ ಬೋಧ್ಯಮಾನಾ ಮುಹುರ್ಮುಹುಃ　॥ ೪೪ ॥

ದೃಷ್ಟ್ವಾ ದೂರಾದ್ಗತಸ್ಸೋಽಹಂ ಕೌತುಕೇನ ತದಂತಿಕಂ ।
ಮಾಂ ದೃಷ್ಟ್ವಾ ಚೋತ್ಥಿತಾ ಬಾಲಾ ವಿಹ್ವಲಾ ಚಾಬ್ರವೀದ್ವಚಃ　॥ ೪೫ ॥

॥ ಬಾಲೋವಾಚ ॥

ಭೋ ಭೋ ಸಾಧೋ ಕ್ಷಣಂ ತಿಷ್ಠ ಮಚ್ಚಿಂತ್ಯಾಮಪಿ ನಾಶಯ ।
ದರ್ಶನಂ ತವ ಲೋಕಸ್ಯ ಸರ್ವಥಾಽಘಹರಂ ಪರಂ　॥ ೪೬ ॥

ಬಹುಧಾ ತವ ವಾಕ್ಯೇನ ದುಃಖಶಾಂತಿರ್ಭವಿಷ್ಯತಿ ।
ಯದಾ ಭಾಗ್ಯಂ ಭವೇದ್ಭೂರಿ ಭವತೋ ದರ್ಶನಂ ತದಾ　॥ ೪೭ ॥

॥ ನಾರದ ಉವಾಚ ॥

ಏವಮುಕ್ತಸ್ತದಾ ಚಾಹಂ ಕೃಪಯಾ ಸ್ನಿಗ್ಧಮಾನಸಃ ।
ಅಪೃಚ್ಛಂ ತಾಂ ವರಾರೋಹಾಂ ಕೌತುಕೇನ ಸಮಾಕುಲಃ　॥ ೪೮ ॥

---

ಯುವತಿಯು ಆ ಮಕ್ಕಳನ್ನು ಉಪಚರಿಸುತ್ತಾ ಒಳ್ಳೆಯ ಮಾತಾಡುತ್ತಾ ಅವರೆದುರಿಗೆ ಅಳುತ್ತಿದ್ದಳು. ಮತ್ತು ತನ್ನನ್ನು ರಕ್ಷಿಸುವವರಾರನ್ನೂ ಕಾಣದ ಎಲ್ಲಾ ಕಡೆಗೂ ನೋಡುತ್ತಿದ್ದಳು.

೪೫. ಅವರನ್ನು ದೂರದಿಂದಲೇ ನೋಡಿ ನಾನು ಆಶ್ಚರ್ಯದಿಂದ ಅವರ ಬಳಿಗೆ ಹೋದೆನು. ನನ್ನನ್ನು ನೋಡಿ ಆಕೆಯು ಮೇಲಕ್ಕೆದ್ದು ದುಃಖಪಡುತ್ತಾ ಇಂತೆಂದಳು.

೪೬. ಬಾಲೆಯು ಹೇಳಿದಳು-ಎಲೈ ಸಾಧುವೆ ! ಕ್ಷಣಕಾಲ ಇಲ್ಲಿರು. ನನ್ನ ದುಃಖವನ್ನು ನಾಶಮಾಡು. ನಿನ್ನ ದರ್ಶನವು ಜನಗಳ ಪಾಪಗಳನ್ನೆಲ್ಲಾ ನಾಶಮಾಡುತ್ತದೆ.

೪೭. ನಿನ್ನ ಮಾತಿನಿಂದ ಬಹುವಾಗಿ ನನಗೆ ಶಾಂತಿಯುಂಟಾಗುತ್ತಿದೆ. ಪ್ರಾಣಿಗಳಿಗೆ ಪುಣ್ಯವು ಹೆಚ್ಚಾದರೆ ಆಗ ನಿನ್ನ ದರ್ಶನವು ಉಂಟಾಗುತ್ತದೆ.

೪೮. ನಾರದನು ಹೇಳಿದನು-ಆಕೆಯು ಹಾಗೆನ್ನುತ್ತಲೂ ನನಗೆ ಬಹುವಾದ ಕನಿಕರವುಂಟಾಯಿತು. ಆಗ ಆಸೆಯಿಂದ ಆಕೆಯನ್ನು ಕುರಿತು ಇಂತೆಂದು ಕೇಳಿದೆನು.

ಕಾ ಚ ತ್ವಂ ಕಾವಿಮೌ ಚೇಮಾ ನಾರ್ಯಃ ಕಾಃ ಪದ್ಮಲೋಚನಾಃ ।
ಸವಿಸ್ತರಂ ದೇವಿ ವದ ವದ ದುಃಖಸ್ಯ ಕಾರಣಂ ॥ ೪೯ ॥

ಇತಿ ಪೃಷ್ಟಾ ಮಯಾ ಸಾ ತು ಬಾಲಾ ದುಃಖಿತಮಾನಸಾ ।
ಪ್ರೋವಾಚ ನಿಖಿಲಂ ದುಃಖಮಾತ್ಮನೋ ದುಃಖಕಾರಣಂ ॥ ೫೦ ॥

॥ ಬಾಲೋವಾಚ ॥

ಅಹಂ ಭಕ್ತಿರಿತಿ ಖ್ಯಾತಾ ಇಮೌ ಮೇ ತನಯೌ ಮತೌ ।
ಜ್ಞಾನವೈರಾಗ್ಯನಾಮಾನೌ ಕಾಲಯೋಗೇನ ಜರ್ಜರೌ ॥ ೫೧ ॥

ಗಂಗಾದ್ಯಸ್ಸರಿತಶ್ಚೇಮಾ ಮತ್ಸೇವಾರ್ಥಂ ಸಮಾಗತಾಃ ।
ತಥಾಪಿ ನ ಚ ಮೇ ಶ್ರೇಯಃ ಸೇವಿತಾಯಾಃ ಸುರೈರಪಿ ॥ ೫೨ ॥

ಇದಾನೀಂ ಶೃಣು ಮದ್ವಾಕ್ಯಂ ಸಚಿತ್ತಸ್ತ್ವಂ ತಪೋಧನ ।
ವಾರ್ತಾ ಮೇ ವಿತತಾಪ್ಯಸ್ತಿ ತಾಂ ಶ್ರುತ್ವಾ ಸುಖಮಾವಹ ॥ ೫೩ ॥

---

೪೯. ಎಲೈ ದೇವಿಯೆ ! ನೀನಾರು ? ಈ ಇಬ್ಬರು ಗಂಡಸರು ಯಾರು ? ಈ ಕಮಲಲೋಚನೆಯರಾದ ಹೆಂಗಸರು ಯಾರು ? ಇದೆಲ್ಲವನ್ನೂ ವಿಸ್ತಾರವಾಗಿ ತಿಳಿಸು. ಮತ್ತು ದುಃಖಕ್ಕೆ ಕಾರಣವನ್ನೂ ತಿಳಿಸು.

೫೦. ನಾನು ಹೀಗೆಂದು ಕೇಳುತ್ತಲೂ ಆ ಹುಡುಗಿಯು ದುಃಖಗೊಂಡು ತನ್ನ ದುಃಖಕ್ಕೆ ಕಾರಣವಾದ ಎಲ್ಲಾ ವಿಷಯಗಳನ್ನೂ ಹೇಳಿದಳು

೫೧ ಬಾಲೆಯು ಹೇಳಿದಳು-ನಾನು ಭಕ್ತಿಯೆಂಬವಳಾಗಿ ಪ್ರಸಿದ್ಧಗೊಂಡಿದ್ದೇನೆ. ಇವರಿಬ್ಬರೂ ನನ್ನ ಮಕ್ಕಳು. ಇವರ ಹೆಸರು ಜ್ಞಾನ ವೈರಾಗ್ಯರೆಂದು. ಇವರು ಕಾಲದ ಮಹಿಮೆಯಿಂದ ಹೀಗೆ ಮುದುಕರಾಗಿ ಹೋಗಿದ್ದಾರೆ.

೫೨. ಇವರೆಲ್ಲರೂ, ಗಂಗೆ ಗೋದಾವರಿ ಮುಂತಾದ ನದಿಗಳು. ನನ್ನ ಸೇವೆಗೋಸ್ಕರವೇ ಬಂದಿದ್ದಾರೆ. ಅವರೂ ದೇವತೆಗಳೂ ಸೇವಿಸುತ್ತಿದ್ದರೂ ನನಗೆ ಕ್ಷೇಮವಿಲ್ಲ.

೫೩. ಎಲೈ ತಪಸ್ವಿಯೆ ! ನೀನು ಮನಸ್ಸಿಟ್ಟು ಈಗ ನನ್ನ ಮಾತನ್ನು ಕೇಳು. ನಾನು ಹೇಳತಕ್ಕದ್ದು ಬಹಳವಾಗಿದೆ. ಅದನ್ನು ಕೇಳಿ ನನಗೆ ಅನುಕೂಲವಾಗುವಂತೆ ಮಾಡು.

ಉತ್ಪನ್ನಾ ದ್ರವಿಡೇ ಸಾಹಂ ವೃದ್ಧಿಂ ಕರ್ಣಾಟಿಕೇ ಗತಾ |
ಕ್ವಚಿತ್ಕ್ವಚಿನ್ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ || ೫೪ ||

ತತ್ರ ಘೋರಕಲೇರ್ಯೋಗಾತ್ಪಾಷಂಡೈಃ ಖಂಡಿತಾಂಗಕಾ |
ದುರ್ಬಲಾಹಂ ಚಿರಂ ಜಾತಾ ಪುತ್ರಾಭ್ಯಾಂ ಸಹ ಸಮ್ಮತಂ || ೫೫ ||

ವೃಂದಾವನಂ ಪುನಃ ಪ್ರಾಪ್ಯ ನವೀನೇವ ಸುರೂಪಿಣೀ |
ಜಾತಾಹಂ ಯುವತೀ ಸಮ್ಯಕ್ ಶ್ರೇಷ್ಠರೂಪಾ ತು ಸಾಂಪ್ರತಂ || ೫೬ ||

ಇಮೌ ತು ಶಯಿತಾವತ್ರ ಸುತೌ ಮೇ ಕ್ಲಿಶ್ಯತಃ ಶ್ರಮಾತ್ |
ಇದಂ ಸ್ಥಾನಂ ಪರಿತ್ಯಜ್ಯ ವಿದೇಶಂ ಗಮ್ಯತೇ ಮಯಾ || ೫೭ ||

ಜರಠತ್ವಂ ಸಮಾಯಾತೌ ತೇನ ದುಃಖೇನ ದುಃಖಿತೌ |
ಸಾಹಂ ತು ತರುಣೀ ಕಸ್ಮಾತ್ ಸುತೌ ವೃದ್ಧಾವಿಮೌ ಕುತಃ || ೫೮ ||

---

೫೪. ನಾನು ದ್ರಾವಿಡದೇಶದಲ್ಲಿ ಹುಟ್ಟಿದೆನು. ಕರ್ಣಾಟಕ ದೇಶದಲ್ಲಿ ಬೆಳೆದೆನು. ಮಹಾರಾಷ್ಟ್ರದಲ್ಲಿ ಅಲ್ಲಲ್ಲಿ ಓಡಾಡಿಕೊಂಡಿದ್ದೆನು. ಗುಜರಾತಿನಲ್ಲಿ ಮುಪ್ಪು ಬಂದಿತು.

೫೫. ಅಲ್ಲಿ ಕೆಟ್ಟ ಕಲಿಯ ಸಂಬಂಧದಿಂದ ನಾಸ್ತಿಕರು ನನ್ನನ್ನು ಅಲ್ಲಲ್ಲೇ ಕತ್ತರಿಸಿದರು. ಕೆಲವು ಕಾಲದ ಮೇಲೆ ನಾನು ಬಲಹೀನಳಾದೆನು ನನ್ನ ಮಕ್ಕಳೂ ಬಲಹೀನರಾದರು.

೫೬. ವೃಂದಾವನಕ್ಕೆ ಮತ್ತೆ ಬಂದೆನು ಇಲ್ಲಿ ಹೊಸಬಳಂತೆ ರೂಪವನ್ನು ಹೊಂದಿದ್ದೇನೆ. ನೋಡುವುದಕ್ಕೆ ಒಳ್ಳೆಯ ಯುವತಿಯಾದೆನು. ಸುಂದರ ರೂಪವೂ ಬಂದಿತು.

೫೭. ನನ್ನ ಇಬ್ಬರು ಮಕ್ಕಳು ಶ್ರಮದಿಂದ ಕಂಗೆಡುತ್ತಿದ್ದಾರೆ. ಆದ್ದರಿಂದ ಈ ಜಾಗವನ್ನು ಬಿಟ್ಟು ನಾನು ಬೇರೆ ದೇಶಕ್ಕೆ ಹೋಗುತ್ತೇನೆ.

೫೮-೫೯. ಈ ನನ್ನ ಮಕ್ಕಳಿಬ್ಬರಿಗೂ ಮುಪ್ಪು ಬಂದಿತು. ಅದೇ ದುಃಖದಿಂದ ನಾನು ಯಾವಾಗಲೂ ಕೂಡಿದ್ದೇನೆ. ದೊಡ್ಡವಳೂ ತಾಯಿಯೂ ಆದ ನಾನು ಯುವತಿಯಾಗಲು ಕಾರಣವೇನು ? ಈ ಮಕ್ಕಳಿಬ್ಬರೂ ಮುದುಕರಾಗಲು ಕಾರಣವೇನು ? ನಾವು ಮೂರು ಜನವೂ ಒಬ್ಬರಿಗೊಬ್ಬರು

ತ್ರಯಾಣಾಂ ಸಹಕಾರಿತ್ವಾದ್ವೈಪರೀತ್ಯಂ ಕುತಸ್ಸ್ಥಿತಂ ।
ಘಟತೇ ಜರಠಾ ಮಾತಾ ತರುಣೌ ತನಯಾವಿತಿ ॥ ೫೯ ॥

ಅತಃ ಶೋಚಾಮಿ ಚಾತ್ಮಾನಂ ವಿಸ್ಮಯಾವಿಷ್ಟಮಾನಸಾ ।
ವದ ಯೋಗನಿಧೇ ಧೀಮರ್ನ್ ಕಾರಣಂ ಚಾತ್ರ ಕಿಂ ಭವೇತ್ ॥ ೬೦ ॥

॥ ನಾರದ ಉವಾಚ ॥

ಏವಂ ಪೃಷ್ಟಸ್ತಥಾ ಚಾಹಂ ಕ್ಷಣಂ ಚೈವ ವಿಮೃಶ್ಯ ತು ।
ಅವೋಚಂ ಭಕ್ತಿಮಾಭಾಷ್ಯ ಕ್ಲಿಷ್ಟಾಂ ಕಾಲೇನ ಭೂಯಸಾ ॥ ೬೧ ॥

ಜ್ಞಾನೇನಾತ್ಮನಿ ಪಶ್ಯಾಮಿ ಸರ್ವಮೇತತ್ತವಾನಘೇ ।
ನ ವಿಷಾದಸ್ತ್ವಯಾ ಕಾರ್ಯೋ ಹರಿಶ್ಶಾನ್ತಿಂ ಕರಿಷ್ಯತಿ ॥ ೬೨ ॥

॥ ಸೂತ ಉವಾಚ ॥

ಕ್ಷಣಮಾತ್ರೇಣ ತಜ್ಜ್ಞಾತ್ವಾ ವಾಕ್ಯಮೂಚೇ ಮುನೀಶ್ವರಃ ॥ ೬೩ ॥

---

ಅನ್ಯೋನ್ಯವಾಗಿ ಸಹಾಯ ಮಾಡುತ್ತಿದ್ದರೂ ಈ ವ್ಯತ್ಯಾಸವು ಏಕೆ ಬಂದಿತು ? ಲೋಕದಲ್ಲಿ ತಾಯಿಯಾದವಳು ಮುದುಕಿಯಾಗಿರಬೇಕು. ಮಕ್ಕಳು ಯುವಕರಾಗಿರಬೇಕು. ಇದು ಸ್ವಭಾವವು. ನಮ್ಮಲ್ಲಿ ಅದು ವ್ಯತ್ಯಾಸವಾಗಿರುವುದಲ್ಲ ! ಕಾರಣವೇನು ?

೬೦. ಆಶ್ಚರ್ಯಗೊಂಡು ಅದರಿಂದಲೇ ನಾನು ಈ ಯೋಚನೆಗೆ ಒಳಗಾಗಿದ್ದೇನೆ. ಎಲೈ ಯೋಗಿಯೆ ! ನೀನು ಬುದ್ಧಿವಂತನು. ಇದಕ್ಕೆ ಕಾರಣವನ್ನು ಹೇಳು.

೬೧. ನಾರದನು ಹೇಳಿದನು–ಅವಳು ಹೀಗೆ ಕೇಳುತ್ತಲೂ ನಾನು ಒಂದು ಕ್ಷಣಕಾಲ ಯೋಚಿಸಿ ಕಾಲಯೋಗದಿಂದ ಕಷ್ಟಪಡುತ್ತಾ ಕಂಗೆಟ್ಟಿರುವ ಭಕ್ತಿಯನ್ನು ಕುರಿತು ಇಂತೆಂದೆನು.

೬೨. ಎಲೈ ಪುಣ್ಯವಂತಳೆ ! ನಾನು ಜ್ಞಾನದೃಷ್ಟಿಯಿಂದ ನಿನ್ನ ವಿಷಯವೆಲ್ಲವನ್ನೂ ತಿಳಿಯುತ್ತಿದ್ದೇನೆ. ನೀನು ದುಃಖಪಡಬೇಡ. ಹರಿಯು ನಿನಗೆ ಒಳ್ಳೆಯದನ್ನು ಮಾಡುತ್ತಾನೆ.

೬೩. ಸೂತನು ಹೇಳಿದನು-ಕ್ಷಣಕಾಲದಲ್ಲಿಯೇ ನಾರದನು ಅದೆಲ್ಲವನ್ನೂ ತಿಳಿದು ಇಂತೆಂದನು.

|| ನಾರದ ಉವಾಚ ||

ಶೃಣುಷ್ವಾವಹಿತಾ ಬಾಲೇ ಯುಗೋಽಯಂ ದಾರುಣಃ ಕಲಿಃ |
ತೇನ ಲುಪ್ತಸ್ಸದಾಚಾರೋ ಯೋಗಮಾರ್ಗಸ್ತಪಾಂಸಿ ಚ || ೬೪ ||

ಜನಾ ಅದ್ಯಾಸುರಾಯನ್ತೇ ಶಾಠ್ಯದುಷ್ಕರ್ಮಕಾರಿಣಃ |
ಇಹ ಸಂತೋ ವಿಷೀದಂತಿ ಪ್ರಹೃಷ್ಯಂತಿ ಸದಾಧಮಾಃ || ೬೫ ||

ಧತ್ತೇ ಧೈರ್ಯಂ ತು ಯೋ ಧೀಮಾನ್ ಸ ಧೀರಃ ಪಂಡಿತೋಽಥವಾ |
ಅಸ್ಪೃಶ್ಯಾನವಲೋಕ್ಯೇಯಂ ಶೇಷಭಾರಕರೀ ಧರಾ || ೬೬ ||

ವರ್ಷೇ ವರ್ಷೇ ಕ್ರಮಾಜ್ಜಾತಾ ಮಂಗಳಂ ನಾಪಿ ದೃಶ್ಯತೇ |
ನ ತ್ವಾಮಪಿ ಸುತೈಸ್ಸಾಕಂ ಕೋಽಪಿ ಪಶ್ಯತಿ ಸಾಂಪ್ರತಂ || ೬೭ ||

ಉಪೇಕ್ಷಿತಾನುರಾಗಾದ್ಯೈಃ ಜರ್ಜರತ್ವೇನ ಸಂಸ್ಥಿತಾ |
ವೃಂದಾವನಸ್ಯ ಸಂಯೋಗಾತ್ ಪುನಸ್ತ್ವಂ ತರುಣೀ ನವಾ || ೬೮ ||

---

೬೪. ನಾರದನು ಹೇಳಿದನು–ಎಲೈ ಬಾಲೆಯೆ ! ಮನಸ್ಸಿಟ್ಟು ಕೇಳು. ಈ ಯುಗವು ಕಲಿಯುಗವು. ಬಹು ದಾರುಣವಾದುದು. ಅದರಿಂದ ಯೋಗವೂ, ಸದಾಚಾರವೂ, ತಪಸ್ಸುಗಳೂ ಎಲ್ಲವೂ ಲೋಪಹೊಂದಿದುವು.

೬೫. ಈ ಯುಗದಲ್ಲಿ ಜನಗಳು ರಾಕ್ಷಸರ ಕೃತ್ಯಗಳನ್ನು ಮಾಡುತ್ತಾರೆ. ಶಠರಾಗಿಯೂ, ದುಷ್ಕರ್ಮಿಗಳಾಗಿಯೂ ಆಗುತ್ತಾರೆ. ಸತ್ಪುರುಷರೆಲ್ಲರೂ ಈ ಕಲಿಗಾಲದಲ್ಲಿ ದುಃಖಿಸುತ್ತಾರೆ. ಅಯೋಗ್ಯರು ಸಂತೋಷಪಡುತ್ತಾರೆ.

೬೬. ಈ ಕಲಿಯುಗದಲ್ಲಿ, ಯಾವನು ಧೈರ್ಯವನ್ನು ಹೊಂದುವನೋ ಅವನೇ ಧೀರನು. ಅಥವಾ ಪಂಡಿತನು. ಅಸ್ಪೃಶ್ಯರನ್ನು ನೋಡಿ ಈ ಭೂಮಿಯು ಶೇಷನಿಗೆ ಭಾರವನ್ನುಂಟುಮಾಡುವುದಾಗಿರುತ್ತದೆ.

೬೭. ನೀನು ವರ್ಷವರ್ಷಕ್ಕೂ ಹೀನಳಾಗುತ್ತೀಯೆ. ಮಂಗಳವೆಂಬುದೇ ಕಾಣಲ್ಪಡುವುದಿಲ್ಲ. ಈಗಲೇನೆ ನಿನ್ನನ್ನು ನಿನ್ನ ಮಕ್ಕಳೊಡನೆ ಜನಗಳೂ ನೋಡುತ್ತಿಲ್ಲ.

೬೮. ಅನುರಾಗನೇ ಮುಂತಾದವರು ನಿನ್ನನ್ನು ಉಪೇಕ್ಷಿಸಿದ್ದಾರೆ ಆದುದರಿಂದಲೇ ನೀನು ಮುದುಕಿಯಾಗಿದ್ದೀಯೆ. ಈ ವೃಂದಾವನದ ಸಂಬಂಧವನ್ನು ಹೊಂದಿದೆಯಾದ ಕಾರಣ ಮತ್ತೆ ನೀನು ಯುವತಿಯಾದೆ.

ಧನ್ಯಂ ವೃಂದಾವನಂ ತೇನ ಭಕ್ತಿರ್ನೃತ್ಯತಿ ಯತ್ರ ಚ ।
ಅತ್ರೇಮೌ ಗ್ರಾಹಕಾಭಾವಾನ್ನ ಜರಾಮಪಿ ಮುಂಚತಃ
ಕಿಂಚಿದಾತ್ಮಸುಖಾನೇಹ ಪ್ರಸುಪ್ತಿರ್ಮನ್ಯತೇ ತಯೋಃ ॥ ೧೯ ॥

॥ ಶ್ರೀ ಭಕ್ತಿರುವಾಚ ॥

ಕಥಂ ಪರೀಕ್ಷಿತಾ ರಾಜ್ಞಾ ಸ್ಥಾಽಪಿತೋತ್ಯಶುಚಿಃ ಕಲಿಃ ।
ಪ್ರವೃತ್ತೇ ತು ಕಲೌ ಸರ್ವಃ ಸಾರಃ ಕುತ್ರ ಗತೋ ಮಹಾನ್ ॥ ೨೦ ॥

ಕರುಣಾಪರೇಣ ಹರಿಣಾಪ್ಯಧರ್ಮಃ ಕಥಮೀಕ್ಷತೇ ।
ಇಮಂ ಮೇ ಸಂಶಯಂ ಛಿಂದಿ ತ್ವದ್ವಾಚಾ ಸುಖಿತಾಸ್ಮ್ಯಹಂ ॥ ೨೧ ॥

॥ ನಾರದ ಉವಾಚ ॥

ಯದಿ ಪೃಷ್ಟಸ್ತ್ವಯಾ ಬಾಲೇ ಪ್ರೇಮತಃ ಶ್ರವಣಂ ಕುರು ।
ಸರ್ವಂ ವಕ್ಷ್ಯಾಮಿ ತೇ ಭದ್ರೇ ಕಶ್ಮಲಂ ತೇ ಗಮಿಷ್ಯತಿ ॥ ೨೨ ॥

---

೧೯. ಈ ಬೃಂದಾವನದಲ್ಲಿ ಭಕ್ತಿಯು ಕುಣಿಯುತ್ತಿರುವುದರಿಂದಲೇ ಇದು ಧನ್ಯವಾದ ಜಾಗವು. ಈ ನಿನ್ನ ಮಕ್ಕಳಿಬ್ಬರನ್ನೂ ಯಾರೂ ಪರಿಗ್ರಹಿಸದಿರುವುದರಿಂದ ಅವರಿಗೆ ಮುಪ್ಪು ಹೋಗಲಿಲ್ಲ. ಅವರೂ ಇವರಿಗೆ ಈ ಜಾಗದಲ್ಲಿ ಆತ್ಮಸುಖವಿರುವುದರಿಂದ ಶಾಂತಿಯಿಂದ ಸ್ವಲ್ಪ ನಿದ್ದೆ ಬರುತ್ತದೆ.

೨೦. ಶ್ರೀ ಭಕ್ತಿಯು ಹೇಳಿದಳು-ಅತ್ಯಂತ ಅಶುಚಿಯಾದ ಪರೀಕ್ಷಿದ್ರಾಜನೂ ಕಲಿಯನ್ನು ಓಡಿಸದೆ ಹೇಗೆ ತಾನೆ ಇಟ್ಟುಕೊಂಡನು ? ಆ ಕಲಿಯು ಕಾಲಿಡುತ್ತಿರಲಾಗಿ ಆ ಮಹತ್ತಾದ ಸಾರವು ಎಲ್ಲಿ ಹೋಯಿತು ?

೨೧. ಕರುಣಾಶಾಲಿಯಾದ ಹರಿಯು ಅಧರ್ಮಗಳನ್ನು ನೋಡುತ್ತ ಹೇಗೆ ತಾನೆ ಸಹಿಸಿಕೊಂಡಿದ್ದಾನೆ ? ಈ ಸಂದೇಹವನ್ನು ಹೋಗಲಾಡಿಸು. ನಿನ್ನ ಮಾತಿನಿಂದಲೇ ಈಗ ನಾನು ಎಷ್ಟೋ ಸುಖವನ್ನು ಹೊಂದಿರುವೆನು.

೨೨. ನಾರದನು ಹೇಳಿದನು-ಅಮ್ಮಾ! ನೀನು ಕೇಳಿದುದೇನೋ ಸರಿ. ಆದರೆ ಪ್ರೀತಿಯಿಟ್ಟು ಕೇಳು. ಎಲ್ಲಾ ವಿಷಯವನ್ನೂ ಹೇಳುತ್ತೇನೆ. ನಿನ್ನ ಅನುಮಾನವು ಹೋಗುತ್ತದೆ.

ಯದಾ ಮುಕುಂದೋ ಭಗವಾನ್ ಕ್ಷ್ಮಾಂ ತ್ಯಕ್ತ್ವಾ ಸ್ವಪದಂ ಗತಃ ।
ತದ್ದಿನಾತ್ಕಲಿರಾಯಾತಃ ಸರ್ವಸಾಧನಬಾಧಕಃ ॥ ೭೩ ॥

ದೃಷ್ಟೋ ದಿಗ್ವಿಜಯೇ ರಾಜ್ಞಾ ದೀನವಚ್ಛರಣಂ ಗತಃ ।
ನ ಮಯಾ ಮಾರಣೀಯೋಽಯಂ ಸಾರಂಗ ಇವ ಸಾರಭುಕ್ ॥ ೭೪ ॥

ಯತ್ಫಲಂ ನಾಸ್ತಿ ತಪಸಾ ನ ಯೋಗೇನ ಸಮಾಧಿನಾ ।
ತತ್ಫಲಂ ಲಭತೇ ಸಮ್ಯಕ್ಕಲೌ ಕೇಶವಕೀರ್ತನಾತ್ ॥ ೭೫ ॥

ಏಕಾಕಾರಂ ಕಲಿಂ ದೃಷ್ಟ್ವಾ ಸಾರಾತ್ಸಾರಫಲಪ್ರದಂ ।
ವಿಷ್ಣುರಾತಃ ಸ್ಥಾಪಿತವಾನ್ ಕಲಿಜಾನಾಂ ಸುಖಾಯ ಚ ॥ ೭೬ ॥

---

೭೩. ಭಗವಂತನಾದ ಮುಕುಂದನು ಭೂಮಿಯನ್ನು ಬಿಟ್ಟು ತನ್ನ ಜಾಗವಾದ ಕ್ಷೀರಸಮುದ್ರಕ್ಕೆ ಯಾವಾಗ ಹೊರಟುಹೋದನೋ ಅಂದಿನಿಂದ ಮೊದಲು ಮಾಡಿಕೊಂಡು ಕಲಿಯು ಬಂದಿದ್ದಾನೆ ಒಳ್ಳೆಯದೆಲ್ಲವನ್ನೂ ನಾಶಮಾಡುತ್ತಿದ್ದಾನೆ.

೭೪. ಪರೀಕ್ಷಿದ್ರಾಜನು ದಿಗ್ವಿಜಯಕ್ಕೆ ಹೋಗಿದ್ದಾಗ ಈ ಕಲಿಯನ್ನು ನೋಡಿದನು. ಆಗ ಕಲಿಯು ಕಾತರನಾಗಿ ರಾಜನಿಗೆ ಶರಣಾಗತನಾದನು. ಈತನನ್ನು ಕೊಲ್ಲಬಾರದೆಂದು ಸುಮ್ಮನಾದನು. ಆದರೆ ಇವನು ಸಾರಗದಂತೆ ಸಾರವಾದ ಅಂಶಗಳನ್ನೆಲ್ಲಾ ನಾಶಮಾಡಿ ತಿನ್ನುತ್ತಿರುವನು.

೭೫. ತಪಸ್ಸಿನಿಂದಾಗಲೀ ಯೋಗದಿಂದಾಗಲೀ ಸಮಾಧಿಯಿಂದಾಗಲೀ ಯಾವ ಫಲವನ್ನು ಮನುಷ್ಯನು ಹೊಂದುತ್ತಾನೆಯೋ ಅದನ್ನು ಈ ಕಲಿ ಯುಗದಲ್ಲಿ ಕೇಶವನ ನಾಮಸ್ಮರಣದಿಂದಲೇ ಮನುಜನು ಹೊಂದುತ್ತಾನೆ. ಆದರೆ ಕೇಶವನಾಮಸ್ಮರಣದಿಂದ ಬರುವ ಫಲವು ಅವುಗಳೊಂದರಿಂದಲೂ ಬರುವುದಿಲ್ಲ.

೭೬. ಕಲಿಯು ಎಲ್ಲಾ ಕಡೆಯಲ್ಲಿಯೂ ಏಕಪ್ರಕಾರವಾಗಿ ಹರಡಿಕೊಂಡು ಸಾರಾಂಶದಿಂದಲೂ ಸಾರವನ್ನು ತೆಗೆದುಕೊಳ್ಳುತ್ತಿರುವುದನ್ನು ನೋಡಿ ಆ ಪರೀಕ್ಷಿದ್ರಾರಾಜನು ಕಲಿಯುಗದಲ್ಲಿ ಹುಟ್ಟಿದವರ ಹಿತಕೋಸ್ಕರ ಅವನನ್ನು ಇಟ್ಟುಕೊಂಡನು.

ಶುಕರ್ಮಾಚರಣಾತ್ಸಾರಃ ಸರ್ವತೋ ನಿರ್ಗತೋಧುನಾ ।
ಪದಾರ್ಥಾಸ್ಸಂಸ್ಥಿತಾ ಭೂಮೌ ಬೀಜಹೀನಾಸ್ತುಷಾ ಯಥಾ ॥ ೭೭ ॥

ವಿಪ್ರೈರ್ಭಾಗವತೀ ವಾರ್ತಾ ಗೇಹೇ ಗೇಹೇ ಜನೇ ಜನೇ ।
ಕಾರಿತಾ ಧನಲೋಭೇನ ಕಥಾಸಾರಸ್ತತೋ ಗತಃ ॥ ೭೮ ॥

ಅತ್ಯುಗ್ರಭೂರಿಕರ್ಮಾಣೋ ನಾಸ್ತಿಕಾ ದಾಂಭಿಕಾ ಜನಾಃ ।
ತೇಪಿ ತಿಷ್ಠಂತಿ ತೀರ್ಥೇಷು ತೀರ್ಥಸಾರಸ್ತತೋ ಗತಃ ॥ ೭೯ ॥

ಕಾಮಕ್ರೋಧಮಹಾಲೋಭತೃಷ್ಣಾವ್ಯಾಕುಲಚೇತಸಃ ।
ತೇಪಿ ತಿಷ್ಠಂತಿ ತಪಸಿ ತಪಸ್ಸಾರಸ್ತತೋ ಗತಃ ॥ ೮೦ ॥

ಮನಸಶ್ಚಾಜಯಾಲ್ಲೋಭಾದ್ದಂಭಾತ್ಪಾಷಂಡಸಂಶ್ರಯಾತ್ ।
ಶಾಸ್ತ್ರಾನಭ್ಯಸನಾಚ್ಚೈವ ಧ್ಯಾನಯೋಗಫಲಂ ಗತಂ ॥ ೮೧ ॥

---

೭೭. ಅಧರ್ಮವನ್ನು ಆಚರಿಸುವುದರಿಂದ ಸಾರವು ಎಲ್ಲದರಿಂದಲೂ ಹೊರಟುಹೋಯಿತು. ಭೂಮಿಯಲ್ಲಿರುವ ಪದಾರ್ಥಗಳು ಬೀಜವಿಲ್ಲದಿರುವ ಜಳ್ಳಿನನಂತೆ ಭೂಮಿಯಲ್ಲಿವೆ.

೭೮ ಬ್ರಾಹ್ಮಣರಾದವರು ಮನೆ ಮನೆಯಲ್ಲಿಯೂ ಸಿಕ್ಕಿದವರ ಸಂಗಡಲೂ ಹಣದ ಆಸೆಯಿಂದ ಭಾಗವತದ ವಿಷಯವನ್ನು ಪ್ರಸ್ತಾಪಿಸಿ ಮಾತನಾಡುತ್ತಾರೆ. ಆದುದರಿಂದ ಆ ಕಥೆಯಲ್ಲಿನ ಸಾರವು ಹೊರಟುಹೋಗಿದೆ. ಕಥೆಯು ಉಳಿದಿದೆ.

೭೯. ಬಹು ಕೆಟ್ಟ ಕೆಲಸಗಳನ್ನು ಮಾಡುತ್ತಾ ನಾಸ್ತಿಕರಾಗಿಯೂ ಡಾಂಭಿಕರಾಗಿಯೂ ಇರುವ ಜನರು ತೀರ್ಥಗಳಲ್ಲಿ ಸೇರಿಕೊಂಡಿರುತ್ತಾರೆ. ಆದುದರಿಂದ ತೀರ್ಥದ ಸಾರವು ಹೊರಟುಹೋಯಿತು.

೮೦. ಕಾಮ, ಕ್ರೋಧ, ಲೋಭ, ತೃಷ್ಣೆಗಳಿಂದ ಕೂಡಿರುವ ಜನರು ತಪಸ್ಸನ್ನು ಮಾಡಲು ಮೊದಲು ಮಾಡಿದರು. ಆದುದರಿಂದ ತಪಸ್ಸಿನ ಸಾರವು ಹೊರಟುಹೋಯಿತು.

೮೧. ಮನಸ್ಸನ್ನು ಜಯಿಸದಿರುವುದರಿಂದಲೂ ಲೋಭದಿಂದಲೂ ದಂಭದಿಂದಲೂ ನಾಸ್ತಿಕರನ್ನು ಆಶ್ರಯಿಸಿರುವುದರಿಂದಲೂ ಶಾಸ್ತ್ರಾಭ್ಯಾಸವನ್ನು ಮಾಡದಿರುವುದರಿಂದಲೂ ಧ್ಯಾನ ಮತ್ತು ಯೋಗಗಳ ಫಲವು ಹೋಯಿತು.

ಪಂಡಿತಾಸ್ತು ಕಳತ್ರೇಣ ರಮಂತೇ ಮಹಿಷಾ ಇವ ।
ಪುತ್ರೋತ್ಪಾದನದಕ್ಷಾಸ್ತೇಽಪ್ಯದಕ್ಷಾ ಮುಕ್ತಿಸಾಧನೇ ॥ ೮೨ ॥

ನ ಹಿ ವೈಷ್ಣವತಾ ಕುತ್ರ ಸಂಪ್ರದಾಯಪುರಸ್ಸರಂ ।
ಏವಂ ಪ್ರಲಯತಾಂ ಪ್ರಾಪ್ತೋ ವಸ್ತುಸಾರಃ ಸ್ಥಲೇ ಸ್ಥಲೇ ॥ ೮೩ ॥

ಅಯಂ ತು ಯುಗಧರ್ಮೋ ಹಿ ವರ್ತತೇ ಕಸ್ಯ ದೂಷಣಂ ।
ಅತಸ್ತು ಪುಂಡರೀಕಾಕ್ಷಃ ಸ ಹಿ ತೇ ನಿಕಟಸ್ಥಿತಃ ॥ ೮೪ ॥

॥ ಸೂತ ಉವಾಚ ॥

ಇತಿ ತದ್ವಚನಂ ಶ್ರುತ್ವಾ ವಿಸ್ಮಯಂ ಪರಮಂ ಗತಾ ।
ಭಕ್ತಿರೂಚೇ ವಚೋ ಭೂಯಃ ಶ್ರೂಯತಾಂ ತಚ್ಚ ಶೌನಕ ॥ ೮೫ ॥

॥ ಶ್ರೀ ಭಕ್ತಿರುವಾಚ ॥

ಸುರರ್ಷೇ ತ್ವಂ ಚ ಧನ್ಯೋಽಸಿ ಮದ್ಭಾಗ್ಯೇನ ಸಮಾಗತಃ ।
ಸಾಧೂನಾಂ ದರ್ಶನಂ ಲೋಕೇ ಸರ್ವಸಿದ್ಧಿಕರಂ ಪರಂ ॥ ೮೬ ॥

---

೮೨. ಪಂಡಿತರೆಲ್ಲರೂ ಕೋಣಗಳಂತೆ ಹೆಂಡಿರಲ್ಲಿ ರಮಿಸುತ್ತಿರುತ್ತಾರೆ. ಅವರೆಲ್ಲರೂ ಮಕ್ಕಳನ್ನು ಹುಟ್ಟಿಸುವುದರಲ್ಲಿ ಶಕ್ತರೇ ಹೊರತು ಮುಕ್ತಿಯನ್ನು ಸಾಧಿಸುವುದರಲ್ಲಿ ಶಕ್ತರಾಗಿಲ್ಲ.

೮೩. ಸಂಪ್ರದಾಯವನ್ನು ಅನುಸರಿಸಿಕೊಂಡ ವೈಷ್ಣವ ಧರ್ಮವು ಎಲ್ಲಿಯೂ ಇಲ್ಲ. ಈ ರೀತಿಯಾಗಿ ಪದಾರ್ಥಗಳ ಒಳಸಾರವು ಎಲ್ಲಾ ಜಾಗದಲ್ಲಿಯೂ ಹೋಯಿತು.

೮೪. ಎಲೈ ಭಕ್ತಿಯೆ! ಇದು ಯುಗದ ಧರ್ಮವು. ಆದುದರಿಂದ ನಾವು ಯಾರನ್ನೂ ದೂಷಿಸುವಂತಿಲ್ಲ. ಆದುದರಿಂದಲೇ ಈ ಪುಂಡರೀಕಾಕ್ಷನಾದ ವಿಷ್ಣುವು ನಿನ್ನ ಹತ್ತಿರದಲ್ಲಿಯೇ ಇದ್ದಾನೆ.

೮೫. ಸೂತನು ಹೇಳಿದನು-ಭಕ್ತಿಯು ನಾರದನು ಹೀಗೆ ಹೇಳಿದುದನ್ನು ಕೇಳಿ ಬಹು ಆಶ್ಚರ್ಯ ಪಟ್ಟಳು. ಅದನ್ನೂ ಹೇಳುತ್ತೇನೆ ಕೇಳು.

೮೬. ಶ್ರೀ ಭಕ್ತಿಯು ಹೇಳಿದಳು-ಎಲೈ ನಾರದನೇ! ನೀನೇ ಧನ್ಯನು. ನನ್ನ ಅದೃಷ್ಟದ ಸುಯೋಗದಿಂದ ಇಲ್ಲಿಗೆ ಬಂದಿದ್ದೀಯೆ. ಲೋಕದಲ್ಲಿ ಸಾಧುಗಳ ದರ್ಶನವು ಸರ್ವಸಿದ್ಧಿಯನ್ನೂ ಉಂಟುಮಾಡುತ್ತದೆ.

ಇಹಾನಂದೋ ಯಥಾ ಮೇ ಸ್ಯಾತ್ತಥೋಪಾಯಃ ತ್ವಯೋಚ್ಯತಾಂ ।
ಯೋಗೇಶಸ್ಯಾಪಿ ತೇ ಬ್ರಹ್ಮನ್ನಸಾಧ್ಯಂ ವರ್ತತೇಧುನಾ ॥ ೮೭ ॥

ತ್ಯಜತಿ ಜಗತಿ ಮಾಯಾಂ ಯಸ್ಯ ಕಾಯಾಧವಸ್ತೇ
ವಚನರಚನಮೇಕಂ ಕೇವಲಂ ಚಾಕಲಯ್ಯ ।
ಧ್ರುವಪದಮಪಿ ಯಾತೋ ಯತ್ಕೃಪಾತೋ ಧ್ರುವೋಯಂ
ಸಕಲಕುಶಲಪಾತ್ರಂ ಬ್ರಹ್ಮಪುತ್ರಂ ನತಾಸ್ಮಿ ॥ ೮೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಭಾಗವತ ಮಾಹಾತ್ಮ್ಯೇ ಭಕ್ತಿ ನಾರದ ಸಮಾಗಮೋ
ನಾಮ ನವಾಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೮೭. ಎಲೈ ದೇವರ್ಷಿಯೆ! ಈ ಲೋಕದಲ್ಲಿ ನನಗೆ ಆನಂದವು ಹೇಗೆ ಉಂಟಾಗುತ್ತದೆಯೋ ಹಾಗೆ ಒಂದು ಉಪಾಯವನ್ನು ಹೇಳಿಕೊಡು. ಯೋಗಿ ಪ್ರವರನಾದ ನಿನಗೆ ಅಸಾಧ್ಯವಾದುದು ಒಂದೂ ಇಲ್ಲ.

೮೮. ದೇಹದೊಳಕ್ಕೆ ಸೇರಿರುವ ಆತ್ಮನು ಯಾವ ನಾರದನ ಮಾತಿನ ರೀತಿಯನ್ನು ಕೇಳಿಯೇನೇ ಪ್ರಪಂಚದಲ್ಲಿನ ಮಾಯೆಯನ್ನು ಹೋಗಲಾಡಿಸಿಕೊಳ್ಳುತ್ತಾನೆಯೋ ಯಾವ ನಾರದನ ಕೃಪೆಯಿಂದಲೇ ಧ್ರುವನು ಶಾಶ್ವತವಾದ ಮೋಕ್ಷವನ್ನು ಹೊಂದಿದನೋ ಬ್ರಹ್ಮನ ಪುತ್ರನಾದ ಅಂತಹ ನಾರದನನ್ನು ಶರಣು ಹೊಕ್ಕಿದ್ದೇನೆ. ಅವನಿಗೆ ನಮಸ್ಕಾರವು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಭಾಗವತ ಮಹಿಮೆಯಲ್ಲಿ ಭಕ್ತಿ ನಾರದ ಸಮಾಗಮ
ಎಂಬ ನೂರ ಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ನವತ್ಯಧಿಕಶತತಮೋಽಧ್ಯಾಯಃ ॥



॥ ಸೂತ ಉವಾಚ ॥

ಏವಂ ಸಂಪ್ರಾರ್ಥಿತೋ ವಿಪ್ರಸ್ತಯಾ ಭಕ್ತ್ಯಾತಿದೀನಯಾ ।
ಪುನಶ್ಚಾ ಕಥಯದ್ಯದ್ವೈ ತಚ್ಛೃಣುಧ್ವಂ ದಯಾಳವಃ ॥ ೧ ॥

॥ ನಾರದ ಉವಾಚ ॥

ವೃಥಾ ಖೇದಾಯಸೇ ಬಾಲೇ ಅಹೋ ಚಿಂತಾತುರಾ ಕಥಂ ।
ಶ್ರೀಕೃಷ್ಣಚರಣಾಂಭೋಜಂ ಸ್ಮರ ದುಃಖಂ ಗಮಿಷ್ಯತಿ ॥ ೨ ॥

ದ್ರೌಪದೀ ಚ ಪರಿತ್ರಾತಾ ಯೇನ ಕೌರವಕಶ್ಮಲಾತ್ ।
ಪಾಲಿತಾ ಗೋಪಸುಂದರ್ಯಃ ಸ ಕೃಷ್ಣಃ ಕ್ವಾಪಿ ನೋ ಗತಃ ॥ ೩ ॥

---

### ನೂರ ತೊಂಭತ್ತನೆಯ ಅಧ್ಯಾಯವು



೧. ಸೂತನು ಹೇಳಿದನು-ಎಲೈ ಬ್ರಾಹ್ಮಣರಿರಾ ! ಆ ದೀನಳಾದ ಭಕ್ತಿಯು ಹೀಗೆ ಆ ನಾರದನನ್ನು ಕೇಳಿಕೊಳ್ಳಲು ಅವನು ಮತ್ತೆ ಏನೇನನ್ನು ಹೇಳಿದನೋ ಅವೆಲ್ಲವನ್ನೂ ಕೇಳಿರಿ. ಹೇಳುತ್ತೇನೆ.

೨. ನಾರದನು ಹೇಳಿದನು-ಎಲೈ ಬಾಲೆಯೆ ! ವ್ಯರ್ಥವಾಗಿ ಕಷ್ಟಪಡುತ್ತೀಯೆ ! ಇಷ್ಟೊಂದು ಚಿಂತೆಯನ್ನೇಕೆ ಹೊಂದುತ್ತೀಯೆ ? ಶ್ರೀ ಕೃಷ್ಣನ ಚರಣ ಕಮಲಗಳನ್ನು ಸ್ಮರಿಸು. ನಿನ್ನ ದುಃಖವು ಹೋಗುತ್ತದೆ.

೩. ಯಾವನು ಕೌರವರ ತೊಂದರೆಯಿಂದ ದ್ರೌಪದಿಯನ್ನು ಕಾಪಾಡಿದನೋ ಯಾವನು ಗೋಪಿಯರನ್ನು ತೊಂದರೆಯಿಂದ ರಕ್ಷಿಸಿದನೋ ಅಂತಹ ಕೃಷ್ಣನು ಎಲ್ಲಿಗೂ ಹೋಗಿಲ್ಲವಷ್ಟೆ !

ತ್ವಂ ತು ಭಕ್ತಿಃ ಪ್ರಿಯಾ ತಸ್ಯ ಸತತಂ ಪ್ರಾಣತೋಧಿಕಾ ।
ತ್ವಯಾ ಹ್ಯತಸ್ತು ಭಗವಾನ್ ಯಾತಿ ನೀಚಗೃಹೇಷ್ವಪಿ ॥ ೪ ॥

ಸತ್ಯಾದಿತ್ರಿಯುಗೇ ಬೋಧವೈರಾಗ್ಯೌ ಮುಕ್ತಿಸಾಧಕೌ ।
ಕಲೌ ತು ಕೇವಲಂ ಭಕ್ತಿರ್ಬ್ರಹ್ಮಸಾಯುಜ್ಯಕಾರಿಣೀ ॥ ೫ ॥

ಇತಿ ನಿಶ್ಚಿತ್ಯ ಚಿದ್ರೂಪಃ ಸದ್ರೂಪಾಂ ತ್ವಾಂ ಸಸರ್ಜ ಹ ।
ಪರಮಾನಂದಚಿನ್ಮೂರ್ತಿಂ ಸುಂದರೀಂ ಕೃಷ್ಣವಲ್ಲಭಾಂ ॥ ೬ ॥

ಬದ್ಧಾಂಜಲಿಃ ತ್ವಯಾ ಪೃಷ್ಟಃ ಕಿಂ ಕರೋಮೀತಿ ಚೈಕದಾ ।
ತ್ವಾಂ ತದಾಜ್ಞಾಪಯತ್ಕೃಷ್ಣೋ ಮದ್ಭಕ್ತಾನ್ಪೋಷಯೇತಿ ಚ ॥ ೭ ॥

ಅಂಗೀಕೃತಂ ತ್ವಯಾ ತದ್ವೈ ಪ್ರಸನ್ನೋಭೂದ್ಧರಿಸ್ತದಾ ।
ಮುಕ್ತಿಂ ದಾಸೀಂ ದದೌ ತುಭ್ಯಂ ಜ್ಞಾನವೈರಾಗ್ಯಕಾವಿಮೌ ॥ ೮ ॥

---

೪. ಎಲೈ ಭಕ್ತಿಯೇ ! ನೀನು ಆ ಕೃಷ್ಣನಿಗೆ ಬಹು ಪ್ರಿಯಳು. ಅಲ್ಲದೆ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯಳು. ನಿನಗೆ ವಶವಾಗಿರುವುದರಿಂದ ನೀನು ಕರೆದಂತೆಲ್ಲಾ ನೀಚರ ಮನೆಗೂ ಕೂಡ ಹೋಗುತ್ತಿರುವನು.

೫. ಸತ್ಯವನ್ನೇ ಪ್ರಧಾನವಾಗಿ ಉಳ್ಳ ಕೃತ, ತ್ರೇತಾ, ದ್ವಾಪರಯುಗಗಳಲ್ಲಿ ಜ್ಞಾನ ವೈರಾಗ್ಯಗಳು ಮುಕ್ತಿಯನ್ನು ಕೊಡುತ್ತವೆ. ಕಲಿಯುಗದಲ್ಲಿ ಯಾದರೋ ಭಕ್ತಿಯೊಂದೇನೇ ಬ್ರಹ್ಮನ ಬಳಿಗೊಯ್ಯತಕ್ಕದ್ದು.

೬-೭. ಹೀಗೆಂಬುದಾಗಿ ಆ ಚಿದ್ರೂಪನಾದ ಕೃಷ್ಣನು ಭಕ್ತಿಯಾದ ನಿನ್ನನ್ನು ಸೃಷ್ಟಿಸಿದನು. ನೀನೂ ಕೂಡ ಪರಮಾನಂದ ಚಿನ್ಮೂರ್ತಿಯೂ ಸುಂದರಿಯೂ ಕೃಷ್ಣ ವಲ್ಲಭಳೂ ಆಗಿದ್ದೀಯೆ. ಒಂದು ಸಾರಿ ನೀನು ಕೈ ಮುಗಿದುಕೊಂಡು ಏನು ಮಾಡಲಿ ಎಂದು ಆ ಕೃಷ್ಣನನ್ನು ಕೇಳಿದೆ. ಆಗ ಕೃಷ್ಣನು ನನ್ನ ಭಕ್ತರನ್ನು ನನ್ನಲ್ಲಿಟ್ಟಿರುವ ಭಕ್ತಿಯಿಂದ ಪೋಷಿಸು. ಎಂದು ಆಜ್ಞೆ ಮಾಡಿದನು.

೮. ಆಗ ಆ ಹರಿಯು ಇಂತೆಂದು ಹೇಳಲು ನೀನು ಅದನ್ನು ಒಪ್ಪಿಕೊಂಡೆ. ಹರಿಯು ಸಂತೋಷಗೊಂಡು ಮುಕ್ತಿಯನ್ನು ನಿನಗೆ ದಾಸಿಯನ್ನಾಗಿ ಕೊಟ್ಟನು. ಈ ಜ್ಞಾನ ವೈರಾಗ್ಯರನ್ನೂ ಕೂಡ ದಾಸರನ್ನಾಗಿ ನಿನಗೆ ಕೊಟ್ಟನು.

**ಪೋಷಣಂ ಸ್ವೇನ ರೂಪೇಣ ವೈಕುಂಠೇ ತ್ವಂ ಕರೋಷಿ ಚ ।**
**ಭೂಮೌ ಭಕ್ತವಿಪೋಷಾಯ ಛಾಯಾರೂಪಂ ತ್ವಯಾ ಕೃತಂ ॥ ೯ ॥**

**ಮುಕ್ತಿಜ್ಞಾನಂ ವಿರಕ್ತಿಂ ಚ ಸಹಕೃತ್ಯಾಗತಾ ಭುವಿ ।**
**ಕೃತಾದಿದ್ವಾಪರಸ್ಯಾಂತಂ ಮಹಾನಂದೇನ ಸಂಸ್ಥಿತಾ ॥ ೧೦ ॥**

**ಕಲೌ ಮುಕ್ತಿಃ ಕ್ಷಯಂ ಪ್ರಾಪ್ತಾ ಪಾಷಂಡಾಮಯಪೀಡಿತಾ ।**
**ತ್ವದಾಜ್ಞಯಾ ಗತಾ ಶೀಘ್ರಂ ವೈಕುಂಠಂ ಪುನರೇವ ಸಾ ॥ ೧೧ ॥**

**ಸ್ಮೃತಾ ತ್ವಯಾಪಿ ಚಾತ್ರೈವ ಮುಕ್ತಿರಾಯಾತಿ ಯಾತಿ ಚ ।**
**ಪುತ್ರೀಕೃತ್ಯ ತ್ವಯೇಮೌ ಚ ಪಾರ್ಶ್ವೇ ಸ್ವಸ್ಯೈವ ರಕ್ಷಿತೌ ॥ ೧೨ ॥**

**ಉಪೇಕ್ಷಾತಃ ಕಲೌ ಮಂದೌ ವೃದ್ಧೌ ಜಾತೌ ಸುತೌ ತವ ।**
**ತಥಾಪಿ ಚಿಂತಾಂ ಮುಂಚ ತ್ವಮುಪಾಯಂ ಚಿನ್ತಯಾಮ್ಯಹಂ ॥ ೧೩ ॥**

---

೯. ನೀನು ನಿನ್ನ ರೂಪದಲ್ಲಿಯೇ ಇದ್ದುಕೊಂಡು ವೈಕುಂಠದಲ್ಲಿ ಆ ಸ್ವಾಮಿಯನ್ನು ಪೋಷಿಸುತ್ತಿದ್ದೀಯೆ. ಈ ಭೂಲೋಕದಲ್ಲಿ ಭಕ್ತರನ್ನು ಪೋಷಿಸಲು ನೀನು ನಿನ್ನಂತೆಯೇ ಒಂದು ಆಕೃತಿಯನ್ನು ಸೃಷ್ಟಿಸಿ ಅವರಿಂದ ಪೋಷಿಸುತ್ತಿದ್ದೀಯೆ.

೧೦. ಮುಕ್ತಿ, ಜ್ಞಾನ, ವಿರಕ್ತಿಗಳನ್ನು ಸಹಾಯಕ್ಕೆ ಕರೆದುಕೊಂಡು ಭೂಲೋಕಕ್ಕೆ ಬಂದಿದ್ದೆ. ಕೃತ, ತ್ರೇತ, ದ್ವಾಪರಯುಗಗಳ ಕೊನೆಯವರೆಗೂ ಸಂತೋಷದಿಂದ ನೀನಿಲ್ಲಿದ್ದೆ.

೧೧. ಕಲಿಯುಗದಲ್ಲಿ ಪಾಷಂಡರೆಂಬ ರೋಗದಿಂದ ತೊಂದರೆಪಡಿಸಲ್ಪಟ್ಟ ಆ ಮುಕ್ತಿಯು ಕ್ಷೀಣಳಾಗಿ ನಿನ್ನ ಅಪ್ಪಣೆಯಂತೆ ಮತ್ತೆ ವೈಕುಂಠಕ್ಕೆ ಹೊರಟು ಹೋದಳು.

೧೨. ನೀನು ಈ ಭೂಮಿಯಲ್ಲಿದ್ದುಕೊಂಡು ಸ್ಮರಿಸಿದಾಗ ಆ ಮುಕ್ತಿಯು ಬಂದು ಅನಂತರ ಹೋಗುತ್ತಲೂ ಇದ್ದಾಳೆ. ನೀನು ಜ್ಞಾನ ವೈರಾಗ್ಯಗಳನ್ನು ಮಕ್ಕಳನ್ನಾಗಿ ಮಾಡಿಕೊಂಡು ನಿನ್ನ ಪಕ್ಕದಲ್ಲಿಯೇ ಇಟ್ಟುಕೊಂಡಿದ್ದೀಯೆ.

೧೩. ಕಲಿಯುಗದಲ್ಲಿ ಇವರನ್ನು ಉಪೇಕ್ಷೆಮಾಡಿದುದರಿಂದ ಆ ನಿನ್ನ ಮಕ್ಕಳು ಮುದುಕರಾದರು. ಆದರೂ ಚಿಂತೆಯನ್ನು ಬಿಡು. ನಾನು ಒಂದು ಉಪಾಯವನ್ನು ಯೋಚಿಸಿ ಹೇಳುತ್ತೇನೆ.

ಕಲಿನಾ ಸದೃಶಃ ಕೋಽಪಿ ಯುಗೋ ನಾಸ್ತಿ ವರಾನನೇ ।
ತಸ್ಮಿಂಸ್ತ್ವಾಂ ಸ್ಥಾಪಯಿಷ್ಯಾಮಿ ಗೇಹೇ ಗೇಹೇ ಜನೇ ಜನೇ ॥ ೧೪ ॥

ಅನ್ಯಧರ್ಮಾಂಸ್ತಿರಸ್ಕೃತ್ಯ ಪುರಸ್ಕೃತ್ಯ ಮಹೋತ್ಸವಾನ್ ।
ತದಾ ನಾಹಂ ಹರೇರ್ದಾಸೋ ಲೋಕೇ ತ್ವಾಂ ನ ಪ್ರವರ್ತಯೇ ॥ ೧೫ ॥

ತ್ವದನ್ವಿತಾಶ್ಚ ಯೇ ಜೀವಾ ಭವಿಷ್ಯಂತಿ ಕಲಾವಿಹ ।
ಪಾಪಿನೋಽಪಿ ಗಮಿಷ್ಯಂತಿ ನಿರ್ಭಯಾಃ ಕೃಷ್ಣಮಂದಿರಂ ॥ ೧೬ ॥

ಯೇಷಾಂ ಚಿತ್ತೇ ವಸೇದ್ಭಕ್ತಿಃ ಸರ್ವದಾ ಪ್ರೇಮರೂಪಿಣೀ ।
ನ ತೇ ಪಶ್ಯಂತಿ ಕೀನಾಶಂ ಸ್ವಪ್ನೇಽಪ್ಯಮಲಮೂರ್ತಯಃ ॥ ೧೭ ॥

ನ ಪ್ರೇತೋ ನ ಪಿಶಾಚೋ ವಾ ರಾಕ್ಷಸೋ ವಾ ಸುರೋಽಪಿ ವಾ ।
ಭಕ್ತಿಯುಕ್ತಮನಸ್ಕಾನಾಂ ಸ್ಪರ್ಶನೇಽಪಿ ಪ್ರಭುರ್ಭವೇತ್ ॥ ೧೮ ॥

---

೧೪. ಈ ಕಲಿಯುಗಕ್ಕೆ ಸಮವಾದ ಯುಗವು ಮತ್ತೊಂದಿಲ್ಲ ಆ ಯುಗದಲ್ಲಿ ನಿನ್ನನ್ನು ಮನೆಮನೆಯಲ್ಲಿಯೂ, ಜನಜನದಲ್ಲಿಯೂ ನಿಲ್ಲಿಸುತ್ತೇನೆ.

೧೫. ಆಗ ನಾನು ಮಿಕ್ಕ ಧರ್ಮಗಳೆಲ್ಲವನ್ನೂ ತಿರಸ್ಕರಿಸಿಬಿಡುತ್ತೇನೆ. ಉತ್ಸವಗಳನ್ನು ಪುರಸ್ಕರಿಸುತ್ತೇನೆ. ಆಗ ನಾನು ಹರಿಗೆ ದಾಸನಾಗಿರುವುದಿಲ್ಲ. ಲೋಕದಲ್ಲಿ ನಿನ್ನನ್ನು ಪ್ರಚಾರಮಾಡುವುದಿಲ್ಲ.

೧೬. ಈ ಕಲಿಯುಗದಲ್ಲಿ ಯಾವ ಪ್ರಾಣಿಗಳು ನಿನ್ನನ್ನು ಅನುಸರಿಸಿ ಕೊಂಡು ಇರುತ್ತವೆಯೋ ಅಂತಹವರುಗಳು ಪಾಪಿಯಾದರೂ ಭಯವಿಲ್ಲದೆ ವೈಕುಂಠವನ್ನು ಹೊಂದುತ್ತಾರೆ.

೧೭. ಪ್ರೇಮರೂಪವಾದ ಭಕ್ತಿಯು ಯಾರ ಮನಸ್ಸಿನಲ್ಲಿ ಯಾವಾಗಲೂ ಇರುತ್ತದೆಯೋ ಅವರು ನಿರ್ಮಲರಾಗಿ ಸ್ವಪ್ನದಲ್ಲಿಯೂ ಯಮನನ್ನು ನೋಡು ವುದೇ ಇಲ್ಲ.

೧೮. ಪ್ರೇತವಾಗಲೀ, ಪಿಶಾಚವಾಗಲೀ, ರಾಕ್ಷಸನಾಗಲೀ, ಅಸುರ ನಾಗಲೀ, ಯಾವನೂ ಕೂಡ ಭಕ್ತಿಯಿಂದ ಕೂಡಿರುವ ಮನಸ್ಸುಳ್ಳವನನ್ನು ಮುಟ್ಟುವುದಕ್ಕೂ ಸಮರ್ಥನಾಗಲಾರನು.

ನ ತಪೋಭಿರ್ನ ವೇದೈಶ್ಚ ನ ಜ್ಞಾನೇನಾಪಿ ಕರ್ಮಣಾ |
ಹರಿರ್ಹಿ ಸಾಧ್ಯತೇ ಭಕ್ತ್ಯಾ ಪ್ರಮಾಣಂ ತತ್ರ ಗೋಪಿಕಾಃ || ೧೯ ||

ನೃಣಾಂ ಜನ್ಮಸಹಸ್ರೇಣ ಭಕ್ತೌ ಪ್ರೀತಿರ್ಹಿ ಜಾಯತೇ |
ಕಲೌ ಭಕ್ತಿಃ ಕಲೌ ಭಕ್ತಿಃ ಭಕ್ತ್ಯಾ ಕೃಷ್ಣಃ ಪುರಸ್ಥಿತಃ || ೨೦ ||

ಭಕ್ತಿದ್ರೋಹಕರಾ ಯೇ ಚ ತೇ ಸೀದಂತಿ ಜಗತ್ತ್ರಯೇ |
ದೂರ್ವಾಸಾ ದುಃಖಮಾಪನ್ನಃ ಪುರಾ ಭಕ್ತವಿನಿಂದಕಃ || ೨೧ ||

ಅಲಂ ವ್ರತೈರಲಂ ತೀರ್ಥೈರಲಂ ಯೋಗೈರಲಂ ಮಖೈಃ |
ಅಲಂ ಜ್ಞಾನಕಥಾಲಾಪೈರ್ಭಕ್ತಿರೇಕೈವ ಮುಕ್ತಿದಾ || ೨೨ ||

|| ಸೂತ ಉವಾಚ ||

ಇತಿ ನಾರದನಿರ್ಣೀತಂ ಸ್ವಮಾಹಾತ್ಮ್ಯಂ ನಿಶಮ್ಯ ಸಾ |
ಸರ್ವಾಂಗಪುಷ್ಟಿಸಂಯುಕ್ತಾ ನಾರದಂ ವಾಕ್ಯಮಬ್ರವೀತ್ || ೨೩ ||

---

೧೯. ತಪಸ್ಸು, ವೇದ, ಜ್ಞಾನ, ಕರ್ಮ ಇವುಗಳೊಂದರಿಂದಲೂ ಹರಿಯನ್ನು ಸಾಧಿಸಲಾಗುವುದಿಲ್ಲ. ಭಕ್ತಿಯೊಂದರಿಂದಲೇ ಆ ಹರಿಯನ್ನು ವಶಮಾಡಿಕೊಳ್ಳಬಹುದು. ಇದರಲ್ಲಿ ಗೋಪಿಯರೇ ಉದಾಹರಣೆಯಾಗಿದ್ದಾರೆ.

೨೦. ಮನುಷ್ಯರು ಸಾವಿರ ಜನ್ಮವೆತ್ತಿದ ಮೇಲೆ ಭಕ್ತಿಯಲ್ಲಿ ಪ್ರೀತಿಯು ಉಂಟಾಗುತ್ತದೆ. ಕಲಿಯುಗದಲ್ಲಿ ಭಕ್ತಿಯು ಬೇಕು. ಭಕ್ತಿಯು ಬೇಕೇ ಬೇಕು. ಭಕ್ತಿಯಿಂದಲೇ ಕೃಷ್ಣನು ಎದುರಿಗೆ ನಿಲ್ಲುತ್ತಾನೆ.

೨೧. ಭಕ್ತಿಗೆ ದ್ರೋಹವನ್ನು ಮಾಡುವವರು ಮೂರು ಲೋಕದಲ್ಲಿದ್ದರೂ ಅವರು ದುಃಖಪಡುತ್ತಾರೆ. ಪೂರ್ವದಲ್ಲಿ ಭಕ್ತನನ್ನು ನಿಂದಿಸಿದ ದೂರ್ವಾಸನು ಬಹುವಾಗಿ ದುಃಖಪಟ್ಟನು.

೨೨. ವ್ರತವು ಬೇಕಿಲ್ಲ. ತೀರ್ಥವು ಬೇಕಿಲ್ಲ. ಯೋಗವು ಬೇಕಿಲ್ಲ. ಕೊನೆಗೆ ಜ್ಞಾನದ ಮಾತೂ ಬೇಕಿಲ್ಲ. ಭಕ್ತಿಯೊಂದೇನೇ ಮುಕ್ತಿಯನ್ನು ಸಾಧಿಸಿ ಕೊಡುತ್ತದೆ.

೨೩. ಸೂತನು ಹೇಳಿದನು–ಹೀಗೆ ನಾರದನು ನಿರ್ಣಯಮಾಡಿರುವ ತನ್ನ ಮಹಿಮೆಯನ್ನು ಆ ಭಕ್ತಿಯು ಕೇಳಿ ಬಹು ಸಂತೋಷಗೊಂಡು ಮೈಯುಬ್ಬಿದವಳಾಗಿ ನಾರದನನ್ನು ಕುರಿತು ಇಂತೆಂದಳು.

॥ ಶ್ರೀ ಭಕ್ತಿರುವಾಚ ॥

ಅಹೋ ನಾರದ ಧನ್ಯೋಽಸಿ ಪ್ರೀತಿಸ್ತೇ ಮಯಿ ನಿಶ್ಚಲಾ ।
ನ ಕದಾಚಿದ್ವಿಮುಂಚಾಮಿ ಚಿತ್ತೇ ಸ್ಥಾಸ್ಯಾಮಿ ಸರ್ವದಾ ॥ ೨೪ ॥

ಕೃಪಾಲುನಾ ತ್ವಯಾ ಸಾಧೋ ಮದ್ಬಾಧಾ ಧ್ವಂಸಿತಾ ಕ್ಷಣಾತ್ ।
ಪುತ್ರಯೋಶ್ಚೇತನಂ ನಾಸ್ತಿ ತತೋ ಬೋಧಯ ಬೋಧಯ ॥ ೨೫ ॥

॥ ಸೂತ ಉವಾಚ ॥

ತಸ್ಯಾ ವಚಸ್ಸಮಾಕರ್ಣ್ಯ ಕಾರುಣ್ಯಂ ನಾರದೋ ಗತಃ ।
ತಯೋರ್ಬೋಧನಮಾರೇಭೇ ಕರಾಗ್ರೇಣ ವಿಮರ್ದಯನ್ । ॥ ೨೬ ॥

ಮುಖಂ ಸಂಯೋಜ್ಯ ಕರ್ಣಾಂತೇ ಶಬ್ದಮುಚ್ಚೈಸ್ಸಮುಚ್ಚರನ್ ।
ಜ್ಞಾನ ಪ್ರಬುಧ್ಯತಾಂ ಶೀಘ್ರಂ ರೇ ವೈರಾಗ್ಯ ವಿಬುಧ್ಯತಾಂ ॥ ೨೭ ॥

---

೨೪. ಶ್ರೀ ಭಕ್ತಿಯು ಹೇಳಿದಳು– ಎಲೈ ನಾರದನೇ ! ನಿನಗೆ ನನ್ನಲ್ಲಿ ಪ್ರೀತಿಯು ಚಲಿಸದಂತಿದೆ. ಆದುದರಿಂದ ನಿನ್ನನ್ನು ನಾನು ಯಾವಾಗಲೂ ಬಿಡುವುದಿಲ್ಲ. ಸರ್ವಕಾಲದಲ್ಲಿಯೂ ನಿನ್ನ ಮನಸ್ಸಿನಲ್ಲಿಯೇ ಇರುತ್ತೇನೆ.

೨೫. ದಯಾವಂತನಾದ ನೀನು ನನ್ನ ತೊಂದರೆಯನ್ನು ಕ್ಷಣಕಾಲದಲ್ಲಿ ನಾಶಮಾಡಿದೆ. ಈ ನನ್ನಿಬ್ಬರು ಮಕ್ಕಳಿಗೂ ಜ್ಞಾನವಿಲ್ಲ. ಅವರಿಗೆ ಜ್ಞಾನವನ್ನುಂಟುಮಾಡು.

೨೬. ಸೂತನು ಹೇಳಿದನು– ಆಕೆಯ ಆ ದೀನತೆಯ ಮಾತನ್ನು ಕೇಳಿ ನಾರದನು ಕೃಪೆಯನ್ನು ಹೊಂದಿ ಅವರಿಬ್ಬರನ್ನೂ ಕೈಯ್ಯಿಂದ ತಟ್ಟುತ್ತಾ ಎಚ್ಚರಪಡಿಸುವುದಕ್ಕೆ ಮೊದಲಿಟ್ಟನು.

೨೭. ಕಿವಿಗಳ ಬುಡಕ್ಕೆ ಬಾಯನ್ನು ಹಾಕಿಕೊಂಡು ಗಟ್ಟಿಯಾಗಿ ಕೂಗುತ್ತ ಎಲೈ ಜ್ಞಾನವೇ ! ಹೇಳು. ಎಲೈ ವೈರಾಗ್ಯವೇ ! ಎಚ್ಚರಿಕೆಗೊಳ್ಳು. ಎಂದು ಕೂಗಿದನು.

**ವೇದವೇದಾಂತಘೋಷೈಶ್ಚ ಗೀತಾಪಾಠೈರ್ಮುಹುರ್ಮುಹುಃ ।**
**ಬೋಧ್ಯಮಾನೌ ತದಾ ತೇನ ಕಥಂಚಿಚೋತ್ಥಿತೌ ಬಲಾತ್ ॥ ೨೮ ॥**

**ನೇತ್ರೈರನವಲೋಕಂತೋ ಜೃಂಭಂತೌ ಸಾಲಸಾವುಭೌ ।**
**ಬಕವತ್ಪಲಿತೌ ಪ್ರಾಯಃ ಶುಷ್ಕಕಾಷ್ಠಸಮಾಂಗಕೌ ॥ ೨೯ ॥**

**ಕ್ಷುತ್‌ಕ್ಷಾಮೌ ತೌ ನಿರೀಕ್ಷ್ಯೈವ ಪುನಃ ಸ್ವಾಪಪರಾಯಣೌ ।**
**ಋಷಿಶ್ಚಿಂತಾಪರೋ ಜಾತಃ ಕಿಂ ವಿಧೇಯಂ ಮಯೇತಿ ಚ ॥ ೩೦ ॥**

**ಅಹೋ ನಿದ್ರಾ ಕಥಂ ಯಾತಿ ವೃದ್ಧತ್ವಂ ಚ ಮಹತ್ತರಂ ।**
**ಚಿಂತಯನ್ನಿತಿ ಗೋವಿಂದಂ ಸ್ಮರಯಾಮಾಸ ಭಾರ್ಗವ ॥ ೩೧ ॥**

**ವ್ಯೋಮವಾಣೀ ತದೈವಾಭೂನ್ಮಾ ಋಷೇ ಖಿದ್ಯತಾಮಿತಿ ।**
**ಉದ್ಯಮಸ್ಸಫಲಸ್ತೇ ತು ಭವಿಷ್ಯತಿ ನ ಸಂಶಯಃ ॥ ೩೨ ॥**

---

೨೮. ಆ ಮೇಲೆ ನಾರದನು ವೇದ ವೇದಾಂಗಗಳ ಧ್ವನಿಗಳಿಂದಲೂ ಗೀತೆಯ ಪಾಠವನ್ನು ಪದೇ ಪದೇ ಹೇಳುವುದರಿಂದಲೂ ಅವರನ್ನು ಎಚ್ಚರಗೊಳಿಸಿದನು. ಅನಂತರ ಅವರಿಬ್ಬರೂ ಎದ್ದರು.

೨೯. ಅವರಿಬ್ಬರೂ ಎಚ್ಚರವಾದರೂ ಕಣ್ಣುಬಿಟ್ಟು ನೋಡಲಾರದವರಾದರು. ಆಕಳಿಸುತ್ತಿದ್ದರು. ಸೋಮಾರಿಗಳಾಗಿದ್ದರು. ಬಕದಂತೆ ತಲೆಯೆಲ್ಲವೂ ಬೆಳ್ಳಗಾಗಿದ್ದಿತು. ದೇಹವೆಲ್ಲವೂ ಸಾಧಾರಣವಾಗಿ ಒಣಗಿದ ಕಡ್ಡಿಗಳಂತೆ ಆಗಿದ್ದುವು.

೩೦. ಅವರು ಬಹುವಾಗಿ ಹಸಿವುಗೊಂಡಿದ್ದರು. ಸ್ವಲ್ಪ ಕಣ್ಣುಬಿಟ್ಟು ನೋಡಿ ಮತ್ತೆ ಮಲಗುವುದರಲ್ಲಿಯೇ ಆಸಕ್ತರಾದರು. ಆಗ ಆ ನಾರದನು ಏನು ಮಾಡಬೇಕೆಂದು ಆಲೋಚನೆಗೊಳಗಾದನು.

೩೧. ಅಹೋ ಇವರಿಗೆ ಈ ನಿದ್ರೆಯು ಹೋಗುವುದು ಹೇಗೆ? ಈ ಮುಪ್ಪು ತಾನೆ ಹೇಗೆ ಹೋಗುತ್ತದೆ? ಎಂದು ಯೋಚಿಸುತ್ತ ಗೋವಿಂದನನ್ನು ಸ್ಮರಿಸಿದನು.

೩೨. ಆಗ ಅಶರೀರವಾಣಿಯು ಎಲೈ ಋಷಿಯೇ! ದುಃಖಗೊಳ್ಳಬೇಡ. ನಿನ್ನ ಉದ್ಯೋಗವು ಸಫಲವಾಗುತ್ತದೆ. ಸಂಶಯವಿಲ್ಲ. ಎಂದು ಹೇಳಿತು.

ಏತದರ್ಥಂ ತು ಸತ್ಕರ್ಮ ಸುರರ್ಷೇ ತ್ವಂ ಸಮಾಚರ ।
ತತ್ತೇ ಽವರ್ಮಾಭಿದಾಸ್ಯಂತಿ ಸಾಧವಸ್ಸಾಧುಭೂಷಣಾಃ ॥ ೩೩ ॥

ಸತ್ಕರ್ಮಣಿ ಕೃತೇ ತಸ್ಮಿನ್ ಸಾ ನಿದ್ರಾ ವೃದ್ಧತಾನಯೋಃ ।
ಗಮಿಷ್ಯತಿ ಕ್ಷಣಾದ್ಭಕ್ತಿಃ ಸರ್ವತಃ ಪ್ರಸರಿಷ್ಯತಿ ॥ ೩೪ ॥

ಇತ್ಯಾಕಾಶವಚಸ್ಸ್ಪಷ್ಟಂ ತತ್ಸರ್ವೈರಪಿ ವಿಶ್ರುತಂ ।
ನಾರದೋ ವಿಸ್ಮಯಂ ಲೇಭೇ ನೇದಂ ಜ್ಞಾತಮಿತಿ ಬ್ರುವನ್ ॥ ೩೫ ॥

॥ ನಾರದ ಉವಾಚ ॥

ಅನಯಾಕಾಶವಾಣ್ಯಾಪಿ ಗೋಪ್ಯತ್ವೇನ ನಿರೂಪಿತಂ ।
ಕಿಂ ವಾ ತತ್ಸಾಧಕಂ ಕಾರ್ಯಂ ಯೇನ ಕಾರ್ಯಂ ಭವೇತ್ತಯೋಃ ॥ ೩೬ ॥

ಕ್ವ ಭವಿಷ್ಯಂತಿ ಸಂತಸ್ತೇ ಕಥಂ ದಾಸ್ಯಂತಿ ಸಾಧನಂ ।
ಮಯಾತ್ರ ಕಿಂ ಪ್ರಕರ್ತವ್ಯಂ ಯದುಕ್ತಂ ವ್ಯೋಮಭಾಷಯಾ ॥ ೩೭ ॥

---

೩೩. ಎಲೈ ದೇವರ್ಷಿಯೇ ! ಇವರಿಗೋಸ್ಕರ ನೀನು ಒಳ್ಳೆಯ ಕೆಲಸಗಳನ್ನು ಮಾಡು. ಸಾಧುಗಳಲ್ಲಿ ಉತ್ತಮರಾದವರು ಆ ಒಳ್ಳೆಯ ಕೆಲಸಗಳನ್ನು ನಿನಗೆ ಹೇಳುತ್ತಾರೆ.

೩೪. ಆ ಸತ್ಕರ್ಮವನ್ನು ಮಾಡಿದರೆ ಅವರಿಬ್ಬರ ನಿದ್ದೆಯೂ ಆ ಮುಪ್ಪೂ ಹೋಗುತ್ತವೆ. ಭಕ್ತಿಯೂ ಕೂಡ ಕ್ಷಣಕಾಲದಲ್ಲಿಯೇ ಎಲ್ಲ ಕಡೆಯಲ್ಲಿಯೂ ಹರಡುತ್ತದೆ.

೩೫. ಈ ರೀತಿಯಾದ ಆಕಾಶವಾಣಿಯು ಸ್ಪಷ್ಟವಾಗಿ ಎಲ್ಲರಿಗೂ ಕೇಳಿತು. ನಾರದನು ಇದು ನನಗೆ ತಿಳಿಯಲಿಲ್ಲವೆಂದು ಆಶ್ಚರ್ಯಪಟ್ಟನು.

೩೬. ನಾರದನು ಹೇಳಿದನು– ಈ ಆಕಾಶವಾಣಿಯೂ ಕೂಡ ಗುಟ್ಟಾಗಿ ಹೇಳಿಬಿಟ್ಟಿತು. ವಿವರಿಸಲಿಲ್ಲ. ಅವರ ಕೆಲಸಗಳು ಕೈಗೂಡುವ ಅದಕ್ಕೆ ಬೇಕಾಗುವ ಕಾರಣಗಳು ಯಾವುವಿರಬಹುದು ?

೩೭. ಆ ಸತ್ಪುರುಷರು ಎಲ್ಲಿರುವರು ? ಅವರು ಸಾಧನವನ್ನು ಹೇಗೆ ಕೊಟ್ಟಾರು ? ಈ ವಿಷಯದಲ್ಲಿ ನಾನೇನು ಮಾಡಬೇಕು ? ಆ ಆಕಾಶವಾಣಿಯು ಹೇಳಿದುದು ನೆರವೇರುವುದು ಹೇಗೆ ?

|| ಸೂತ ಉವಾಚ ||

ತತ್ರ ತಾವಥ ಸಂಸ್ಥಾಪ್ಯ ನಿರ್ಗತೋ ನಾರದೋ ಮುನಿಃ |
ತೀರ್ಥಂ ತೀರ್ಥಂ ವಿನಿಷ್ಕ್ರಮ್ಯ ಪೃಚ್ಛನ್ಮಾರ್ಗೇ ಮುನೀಶ್ವರಾನ್ || ೩೮ ||

ವೃತ್ತಾಂತಶ್ರೂಯತೇ ಸರ್ವೈಃ ಕಿಂಚಿನ್ನಿಶ್ಚಿತ್ಯ ನೋಚ್ಯತೇ |
ಅಸಾಧ್ಯಂ ಕೇಚನ ಪ್ರೋಚುಃ ದುರ್ಜ್ಞೇಯಮಿತಿ ಚಾಪರೇ || ೩೯ ||

ಮೂಕೀಭೂತಾಸ್ತಥಾನ್ಯೇ ತು ಕಿಯಂತಸ್ತು ಪಲಾಯಿತಾಃ |
ಹಾ ಹಾ ಕಾರೋ ಮಹಾನಾಸೀತ್ತ್ರಿಲೋಕೀ ವಿಸ್ಮಯಾವಹಃ || ೪೦ ||

ವೇದವೇದಾಂತಘೋಷೈಶ್ಚ ಗೀತಾಪಾಠೈರ್ವಿಬೋಧಿತಂ |
ಭಕ್ತಿಜ್ಞಾನವಿರಾಗಾಣಾಂ ನೋದತಿಷ್ಠತ್ತ್ರಿಕಂ ತು ತತ್ || ೪೧ ||

ಉಪಾಯೋ ನಾಪರಸ್ತ್ರೀತಿ ಕರ್ಣೇ ಕರ್ಣೇ ಜಪನ್ ಜನಾಃ |
ಯೋಗಿನಾ ನಾರದೇನಾಪಿ ಸ್ವಯಂ ನ ಜ್ಞಾಯತೇ ತು ಯತ್ || ೪೨ ||

---

೩೮. ಸೂತನು ಹೇಳಿದನು-ಅವರಿಬ್ಬರನ್ನು ಅಲ್ಲಿ ಬಿಟ್ಟು ನಾರದನು ಹೊರಟನು. ಹೊರಟವನು ತೀರ್ಥ ತೀರ್ಥಗಳಲ್ಲಿಯೂ ದಾರಿ ದಾರಿಯಲ್ಲಿಯೂ ಸಿಕ್ಕಿದ ಮುನಿಗಳನ್ನೆಲ್ಲಾ ಉಪಾಯವನ್ನು ಕೇಳುತ್ತ ಬಂದನು.

೩೯. ಉಪಾಯ ಉಂಟೆಂಬುದು ಮಾತ್ರ ಜನಗಳು ಹೇಳುತ್ತಾರೆಂದು ಎಲ್ಲರಿಗೂ ಗೊತ್ತು. ಆದರೆ ನಿಶ್ಚಯವಾಗಿ ತಿಳಿದು ಹೇಳಲು ಯಾರಿಗೂ ಸಾಧ್ಯವಾಗಲಿಲ್ಲ. ಕೆಲವರು ಇವರನ್ನು ಎಬ್ಬಿಸುವಿಕೆಯು ಅಸಾಧ್ಯವೆಂದರು. ಕೆಲವರು ತಮಗೆ ತಿಳಿಯದೆಂದರು.

೪೦. ಕೆಲವರು ಸುಮ್ಮನಿದ್ದರು. ಕೆಲವರು ಏನೂ ಹೇಳದೆ ಓಡಿಹೋದರು. ಇದರ ವಿಷಯದಲ್ಲಿ ಎಲ್ಲೆಡೆಯಲಿಯೂ ಹಾಹಾಕಾರವುಂಟಾಯಿತು. ಮೂರುಲೋಕವೂ ಆಶ್ಚರ್ಯಪಟ್ಟಿತು.

೪೧-೪೨. ವೇದವೇದಾಂತಗಳ ಘೋಷದಿಂದಲೂ ಗೀತಾಪಾಠದಿಂದಲೂ, ಎಷ್ಟು ಎಬ್ಬಿಸಿದರೂ ಭಕ್ತಿ, ಜ್ಞಾನ, ವೈರಾಗ್ಯಗಳು, ಆ ಮೂವರೂ ಎಚ್ಚರಗೊಳ್ಳಲೇ ಇಲ್ಲ. ಆಗ ಜನಗಳು ಒಬ್ಬರಿಗೊಬ್ಬರು ಬೇರೆ ಉಪಾಯಗಳೇ ಇಲ್ಲವೆಂದು ಕಿವಿಕಿವಿಯಲ್ಲಿ ಹೇಳಿಕೊಳ್ಳುತ್ತಿದ್ದರು. ಆಗ ಋಷಿಗಳೆಲ್ಲರೂ ಸೇರಿ ಯೋಗಿಯಾದ ನಾರದನಿಗೇ ಯಾವುದು ತಿಳಿಯುವುದಿಲ್ಲವೋ ಅದನ್ನು ಇತರ

ತತ್ಕಥಂ ಶಕ್ಯತೇ ವಕ್ತುಮಿತರೈರಿಹ ಮಾನುಷೈಃ ।
ಏವಮೃಷಿಗಣೈಃ ಪೃಷ್ಟೈರ್ನಿರ್ಣೀಯೋಕ್ತಂ ದುರಾಸದಂ ॥ ೪೩ ॥

ತತಶ್ಚಿಂತಾತುರಸ್ಸೋಽಥ ಬದರೀವನಮಾಗತಃ ।
ತಪಶ್ಚರಾಮಿ ಚಾತ್ರೇತಿ ತದರ್ಥಕೃತನಿಶ್ಚಯಃ ॥ ೪೪ ॥

ತಾವದ್ದದರ್ಶ ಪುರತಃ ಸನಕಾದ್ಯಾನ್ ಮುನೀಶ್ವರಾನ್ ।
ಕೋಟಿಸೂರ್ಯಸಮಾಭಾಸಾನ್ ಉವಾಚ ಮುನಿಸತ್ತಮ ॥ ೪೫ ॥

॥ ನಾರದ ಉವಾಚ ॥

ಇದಾನೀಂ ಭೂರಿಭಾಗ್ಯೇನ ಭವದ್ಭಿಸ್ಸಂಗಮಾಸ್ಥಿತಃ ।
ಶೀಘ್ರಂ ಕುಮಾರಾ ವದತ ಕೃಪಾಂ ಕೃತ್ವಾ ಮಮೋಪರಿ ॥ ೪೬ ॥

ಭವಂತೋ ಯೋಗಿನಸ್ಸರ್ವೇ ಬುದ್ಧಿಮಂತೋ ಬಹುಶ್ರುತಾಃ ।
ಪಂಚಹಾಯನಸಂಯುಕ್ತಾಃ ಪೂರ್ವೇಷಾಮಪಿ ಪೂರ್ವಜಾಃ ॥ ೪೭ ॥

---

ಮನುಷ್ಯರು ಹೇಗೆ ತಾನೇ ಹೇಳಲು ಸಾಧ್ಯವಾಗುತ್ತದೆ? ಎಂಬುದಾಗಿ ತಿಳಿದು ಆ ಕಷ್ಟವಾದ ವಿಷಯವನ್ನು ಸಾಧ್ಯವಿಲ್ಲವೆಂದು ಹೇಳಿಬಿಟ್ಟರು.

೪೪-೪೫. ಆಗ ನಾರದನು ಚಿಂತೆಗೊಳಗಾಗಿ ಬದರ್ಯಾಶ್ರಮಕ್ಕೆ ಬಂದನು. ಅಲ್ಲಿ ತಪಸ್ಸನ್ನು ಮಾಡಬೇಕೆಂದು ನಿಶ್ಚಯಿಸಿಕೊಂಡನು. ಅಷ್ಟರಲ್ಲಿಯೇ ಎದುರಿಗೆ ಕೋಟಿಸೂರ್ಯರಂತೆ ಬೆಳಕು ಮಾಡಿಕೊಂಡು ಕೆಲವರು ಬರುತ್ತಿರಲು ಅವರು ಯಾರೆಂದು ನೋಡಿದನು. ಅವರು ಸನಕಾದಿ ಮುನಿಗಳಾಗಿದ್ದರು. ಅವರನ್ನು ನೋಡಿ ನಾರದನು ಇಂತೆಂದನು.

೪೬. ನಾರದನು ಹೇಳಿದನು-ಎಲೈ ಕುಮಾರರಿರಾ! ನನ್ನ ಅದೃಷ್ಟವಿಶೇಷದಿಂದ, ಇಲ್ಲಿಗೆ ನೀವು ಬಂದಿರಿ. ನನ್ನ ಮೇಲೆ ಕೃಪೆಯನ್ನು ತೋರಿಸಿ ನಾನು ಕೇಳುವುದಕ್ಕೆ ಜಾಗ್ರತೆಯಾಗಿ ಉತ್ತರವನ್ನು ಹೇಳಿರಿ.

೪೭. ನೀವು ಯಾವಾಗಲೂ ವೈಕುಂಠದಲ್ಲಿದ್ದೀರಿ. ನೀವು ಯಾವಾಗಲೂ ಐದು ವರ್ಷ ವಯಸ್ಸುಳ್ಳವರು. ಆದರೂ ಪೂರ್ವದಲ್ಲಿ ಹುಟ್ಟಿದವರಿಗಿಂತಲೂ ಹಿಂದಿನವರು.

**ಸದಾ ವೈಕುಂಠನಿಲಯಾ ಹರಿಕೀರ್ತನತತ್ಪರಾಃ ।**
**ಲೀಲಾಮೃತರಸೋನ್ಮತ್ತಾಃ ಕಥಾಮಾತ್ರೈಕಜೀವಿನಃ ॥ ೪೮ ॥**

**ಹರಿಶ್ಶರಣಮೇವಂ ಹಿ ನಿತ್ಯಂ ಯೇಷಾಂ ಮುಖೇ ವಚಃ ।**
**ಅತಃ ಕಾಲಸಮಾದಿಷ್ಟಾ ಜರಾ ಯುಷ್ಮಾನ್ನಬಾಧತೇ ॥ ೪೯ ॥**

**ಯೇಷಾಂ ಭ್ರೂಭಂಗಮಾತ್ರೇಣ ದ್ವಾರಪಾಲೌ ಹರೇಃ ಪುರಾ ।**
**ಭೂಮೌ ನಿಪತಿತೌ ಸದ್ಯೋ ಯತ್ಕೃಪಾತಃ ಪರಂ ಗತೌ ॥ ೫೦ ॥**

**ಅಹೋ ಭಾಗ್ಯಸ್ಯ ಯೋಗೇನ ದರ್ಶನಂ ಭವತಾಮಿಹ ।**
**ಅನುಗ್ರಹಸ್ತು ಕರ್ತವ್ಯೋ ಮಯಿ ದೀನೇ ದಯಾಪರೈಃ ॥ ೫೧ ॥**

**ಅಶರೀರಗಿರೋಕ್ತಂ ಯತ್ತತ್ಕಿಂ ಸಾಧನಮುಚ್ಯತಾಂ ।**
**ಅನುಷ್ಠೇಯಂ ಕಥಂ ತಾವತ್ಪ್ರಬ್ರುವಂತು ಸವಿಸ್ತರಂ ॥ ೫೨ ॥**

---

೪೮. ನೀವು ಯಾವಾಗಲೂ ವೈಕುಂಠದಲ್ಲಿದ್ದೀರಿ. ಹರಿಯ ಕೀರ್ತನೆಯಲ್ಲಿಯೇ ಆಸಕ್ತರಾಗಿದ್ದೀರಿ. ಹರಿಯ ಲೀಲೆಯೆಂಬ ಅಮೃತರಸದಿಂದಲೇ ಮಿಸಿದ್ದೀರಿ. ಅವನ ಕಥೆಯಿಂದಲೇ ನೀವು ಪ್ರಾಣಗಳನ್ನಿಟ್ಟುಕೊಂಡಿದ್ದೀರಿ.

೪೯. ನಿಮಗೆ ಹರಿಯೇ ಶರಣನು. ಅವನ ಸಂಬಂಧವಾದ ಮಾತೇ ಯಾವಾಗಲೂ ನಿಮ್ಮ ಬಾಯಲ್ಲಿ ಹೊರಡುತ್ತಿರುವುದು. ಆದುದರಿಂದಲೇ ಕಾಲಾನುಗುಣವಾಗಿ ಬರತಕ್ಕ ಮುಪ್ಪು ನಿಮ್ಮನ್ನು ಹೊಂದಿ ತೊಂದರೆಪಡಿಸುವುದಿಲ್ಲ

೫೦. ಯಾವ ನಿಮ್ಮ ಹುಬ್ಬು ಸನ್ನೆಯಿಂದಲೇನೇ ಪೂರ್ವದಲ್ಲಿ ಹರಿಯ ಮಂದಿರದ ದ್ವಾರಪಾಲಕರು ಭೂಮಿಯಲ್ಲಿ ಒಡನೆಯೇ ಬಿದ್ದು ಬಿಟ್ಟು ಅವರ ಕೃಪೆಯಿಂದಲೇ ಮತ್ತೆ ಸ್ವರ್ಗವನ್ನು ಹೊಂದಿದರೋ ಅಂತಹ ಮಹಾಮುನಿಮರು ನೀವುಗಳು.

೫೧. ನನ್ನ ಅದೃಷ್ಟದ ಯೋಗದಿಂದ ನಿಮ್ಮ ದರ್ಶನವು ಈಗ ನನಗೆ ಉಂಟಾಗಿದೆ. ದೀನನೂ ದಯೆಯನ್ನು ಹೊಂದಲು ಯೋಗ್ಯನೂ ಆದ ನನ್ನಲ್ಲಿ ಅನುಗ್ರಹವನ್ನು ಮಾಡಿರಿ.

೫೨. ಅಶರೀರ ವಾಣಿಯು ಹೇಳಿದ ಸಾಧನವಾದುದು ? ಅದನ್ನು ಹೇಳಿ. ಅದನ್ನು ಮಾಡುವುದು ತಾನೆ ಹೇಗೆ? ಎಂಬುದನ್ನು ವಿಸ್ತಾರವಾಗಿ ಹೇಳಿರಿ

ಭಕ್ತಿಜ್ಞಾನವಿರಾಗಾಣಾಂ ಸುಖಮುತ್ಪದ್ಯತೇ ಕಥಂ ।
ವ್ಯಾಪನಂ ಸರ್ವವರ್ಣೇಷು ಪ್ರೇಮಪೂರ್ವಪ್ರಯತ್ನತಃ ॥ ೫೩ ॥

॥ ಶ್ರೀ ಸನತ್ಕುಮಾರಾ ಊಚುಃ ॥

ಮಾ ಚಿಂತಾಂ ಕುರು ದೇವರ್ಷೇ ಹರ್ಷಂ ಚಿತ್ತೇ ಸಮಾವಹ ।
ಉಪಾಯಸ್ಸುಖಸಾಧ್ಯೋऽತ್ರ ವರ್ತತೇऽಪೂರ್ವ ಏವ ಹಿ ॥ ೫೪ ॥

ಅಹೋ ನಾರದ ಧನ್ಯೋऽಸಿ ವಿರಕ್ತಾನಾಂ ಶಿರೋಮಣಿಃ ।
ಸದಾ ಶ್ರೀಕೃಷ್ಣದಾಸಾನಾಮಗ್ರಣೀರ್ಯೋಗಭಾಸ್ಕರಃ ॥ ೫೫ ॥

ತ್ವಯಿ ಚಿತ್ರಂ ನ ಮಂತವ್ಯಂ ಭಕ್ತ್ಯರ್ಥಮನುವರ್ತಿನಿ ।
ಘಟತೇ ಕೃಷ್ಣದಾಸಸ್ಯ ಭಕ್ತೇಃ ಸ್ಥಾಪನತಾ ಸದಾ ॥ ೫೬ ॥

ಋಷಿಭಿರ್ಬಹವೋ ಲೋಕೇ ಪಂಥಾನಃ ಪ್ರಕಟೀಕೃತಾಃ ।
ಶ್ರಮಸಾಧ್ಯಾಶ್ಚ ತೇ ಸರ್ವೇ ಪ್ರಾಯಃ ಸ್ವರ್ಗಫಲಪ್ರದಾಃ ॥ ೫೭ ॥

---

೫೩. ಭಕ್ತಿ ಜ್ಞಾನ ವೈರಾಗ್ಯಗಳಿಗೆ ಸುಖವುಂಟಾಗುವುದು ಹೇಗೆ ? ಅವು ಪ್ರೇಮಪೂರ್ವಕವಾಗಿ ಎಲ್ಲ ವರ್ಣದಲ್ಲಿಯೂ ಹರಡುವುದು ಹೇಗೆ ?

೫೪. ಶ್ರೀ ಸನತ್ಕುಮಾರರು ಹೇಳಿದರು-ಎಲೈ ದೇವರ್ಷಿಯೆ ! ಚಿಂತಿಸಬೇಡ. ಮನಸ್ಸಿನಲ್ಲಿ ಹರ್ಷವನ್ನು ಹೊಂದು. ಇದಕ್ಕೆ ಒಂದು ಸುಲಭವಾದ ಉಪಾಯವಿದೆ. ಅದು ಅಪೂರ್ವವಾದುದು.

೫೫. ಎಲೈ ನಾರದನೆ ! ನೀನೇ ಧನ್ಯನು. ವೈರಾಗ್ಯವನ್ನು ಹೊಂದಿದವರಲ್ಲಿ ಶ್ರೇಷ್ಠನು. ಶ್ರೀ ಕೃಷ್ಣನ ದಾಸರೊಳಗೆ ನೀನೇ ಮುಂದಾಳು. ಯೋಗದಲ್ಲಿಯೂ ನೀನೇ ಶ್ರೇಷ್ಠನು.

೫೬. ಭಕ್ತಿಗೋಸ್ಕರವಾಗಿ ತೊಂದರೆ ಪಡುತ್ತಿರುವ ನಿನ್ನಲ್ಲಿ ಇದೇನೂ ಆಶ್ಚರ್ಯವಲ್ಲ. ಕೃಷ್ಣದಾಸನಾಗಿರುವವನಲ್ಲಿ ಭಕ್ತಿಯು ಯಾವಾಗಲೂ ಇದ್ದೇ ಇರುವುದು.

೫೭. ಋಷಿಗಳು ಲೋಕದಲ್ಲಿ ಇದಕ್ಕೆ ಬಹುದಾರಿಗಳನ್ನು ಹೇಳಿದ್ದಾರೆ. ಅವೆಲ್ಲವೂ ಶ್ರಮಸಾಧ್ಯಗಳು. ಅವೆಲ್ಲವೂ ಸಾಧಾರಣವಾಗಿ ಸ್ವರ್ಗಫಲವನ್ನೇ ಕೊಡುತ್ತವೆ.

ವೈಕುಂಠಸಾಧಕಃ ಪಂಥಾಃ ಸ ತು ಗೋಪ್ಯೋ ಹಿ ವರ್ತತೇ ।
ತಸ್ಯೋಪದೇಷ್ಟಾ ಪುರುಷಃ ಪ್ರಾಯೋ ಭಾಗ್ಯೇನ ಲಭ್ಯತೇ ॥ ೫೮ ॥

ಯತ್ಕರ್ತವ್ಯಂ ವಿನಿರ್ದಿಷ್ಟಂ ವ್ಯೋಮವಾಚಾಭವತ್ಪುರಾ ।
ತದುಚ್ಯತೇ ಶೃಣುಷ್ವಾದ್ಯ ಸ್ಥಿರಚಿತ್ತಃ ಪ್ರಸನ್ನಧೀಃ ॥ ೫೯ ॥

ದ್ರವ್ಯಯಜ್ಞಾಸ್ತಪೋಯಜ್ಞಾಃ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ತೇ ತು ಕರ್ಮವಿಸೂಚಕಾಃ ॥ ೬೦ ॥

ಸತ್ಕರ್ಮಸೂಚಕೋ ನೂನಂ ಜ್ಞಾನಯಜ್ಞಃ ಸ್ಮೃತೋ ಬುಧೈಃ ।
ಶ್ರೀಮದ್ಭಾಗವತಾಲಾಪಃ ಸ ತು ಗೀತಃ ಶುಕಾದಿಭಿಃ ॥ ೬೧ ॥

ಭಕ್ತಿಜ್ಞಾನವಿರಾಗಾಣಾಂ ತದ್ಘೋಷೇಣ ಬಲಂ ಮಹತ್ ।
ವ್ರಜಿಷ್ಯತಿ ದ್ವಯೋಃ ಕಷ್ಟಂ ಸುಖಂ ಭಕ್ತೇರ್ಭವಿಷ್ಯತಿ ॥ ೬೨ ॥

---

೫೮. ವೈಕುಂಠವನ್ನು ಹೊಂದುವ ದಾರಿಯು ಗುಟ್ಟಾಗಿಡಲ್ಪಟ್ಟಿದೆ. ಅದನ್ನು ಹೇಳಿಕೊಡುವ ಮನುಷ್ಯನು ಹೇಳಿಸಿಕೊಳ್ಳುವವನ ಭಾಗ್ಯದಿಂದ ಸಿಕ್ಕಬೇಕು.

೫೯. ಅಶರೀರವಾಣಿಯು ಮಾಡಬೇಕೆಂಬುದಾಗಿ ಯಾವುದನ್ನು ಹಿಂದೆ ಹೇಳಿತೋ ಅದನ್ನು ಹೇಳುತ್ತೇನೆ. ಸಂತೋಷದಿಂದಲೂ ಒಂದೇ ಮನಸ್ಸಿನಿಂದಲೂ ಕೇಳು.

೬೦. ದ್ರವ್ಯಯಜ್ಞ ತಪೋಯಜ್ಞ ಯೋಗಯಜ್ಞ ಸ್ವಾಧ್ಯಾಯಯಜ್ಞ ಜ್ಞಾನಯಜ್ಞ ಇವೆಲ್ಲವೂ ಕರ್ಮವನ್ನು ಸೂಚಿಸುತ್ತವೆ.

೬೧. ಇವುಗಳೊಳಗೆ ಸತ್ಕರ್ಮವನ್ನು ಹೇಳುವ ಯಜ್ಞವು ಜ್ಞಾನಯಜ್ಞವು ಎಂದು ಪಂಡಿತರು ಹೇಳಿದ್ದಾರೆ. ಈ ಯಜ್ಞವೇ ಶ್ರೀಮದ್ಭಾಗವತದ ಹೇಳುವಿಕೆ ಕೇಳುವಿಕೆಗಳೆಂದು ಶುಕನೇ ಮುಂತಾದವರು ಹೇಳಿದ್ದಾರೆ.

೬೨. ಆ ಭಾಗವತದ ಹೇಳುವಿಕೆಯಿಂದ ಭಕ್ತಿ ಜ್ಞಾನ ವೈರಾಗ್ಯಗಳಿಗೆ ಬಹುವಾದ ಬಲವು ಬರುತ್ತದೆ. ಅವರಿಬ್ಬರ ಕಷ್ಟವೂ ಹೋಗುತ್ತದೆ. ಭಕ್ತಿಗೂ ಸುಖವುಂಟಾಗುತ್ತದೆ.

ಪ್ರಲಯಂ ಹಿ ಗಮಿಷ್ಯಂತಿ ಶ್ರೀಮದ್ಭಾಗವತಧ್ವನೌ ।
ಕಲಿದೋಷಾ ಇಮೇ ಸರ್ವೇ ಸಿಂಹಶಬ್ದಾದ್ವೃಕಾ ಇವ ॥ ೬೩ ॥

ಜ್ಞಾನವೈರಾಗ್ಯಸಂಯುಕ್ತಾ ಭಕ್ತಿಃ ಪ್ರೇಮರಸಾವಹಾ ।
ಪ್ರತಿಗೇಹಂ ಪ್ರತಿಜನಂ ತತಃ ಕ್ರೀಡಾಂ ಕರಿಷ್ಯತಿ ॥ ೬೪ ॥

॥ ನಾರದ ಉವಾಚ ॥

ವೇದವೇದಾಂತಘೋಷೈಶ್ಚ ಗೀತಪಾಠೈಃ ಪ್ರಬೋಧಿತಂ ।
ಭಕ್ತಿಜ್ಞಾನವಿರಾಗಾಣಾಂ ನೋದತಿಷ್ಠತ್ತ್ರಿಕಂ ತು ಯತ್ ॥ ೬೫ ॥

ಶ್ರೀಮದ್ಭಾಗವತಾಲಾಪಾತ್ತತ್ಕಥಂ ಬೋಧಮೇಷ್ಯತಿ ।
ತತ್ಕಥಾ ಸು ಚ ವೇದಾರ್ಥಃ ಶ್ಲೋಕೇ ಶ್ಲೋಕೇ ಪದೇ ಪದೇ । ॥ ೬೬ ॥

ಛಿಂದಂತು ಸಂಶಯಂ ಹ್ಯೇನಂ ಭವಂತೋಽಮೋಘದರ್ಶನಾಃ ।
ವಿಲಂಬೋ ನಾತ್ರ ಕರ್ತವ್ಯಃ ಶರಣಾಗತವತ್ಸಲಾಃ ॥ ೬೭ ॥

---

೬೩. ಶ್ರೀಮದ್ಭಾಗವತದ ಧ್ವನಿಯಿಂದ ಈ ಕಲಿದೋಷಗಳೆಲ್ಲವೂ ಸಿಂಹದ ಶಬ್ದವನ್ನು ಕೇಳಿದರೆ ತೋಳಗಳು ಓಡಿಹೋಗುವಂತೆ ಕಲಿಯ ದೋಷಗಳೆಲ್ಲವೂ ಓಡಿಹೋಗಿ ನಾಶವಾಗುತ್ತವೆ.

೬೪. ಜ್ಞಾನ ವೈರಾಗ್ಯಗಳಿಂದ ಕೂಡಿದ ಭಕ್ತಿಯೇನೇ ಪ್ರೇಮರಸವನ್ನುಂಟುಮಾಡತಕ್ಕದ್ದು. ಅದನ್ನು ಕೇಳಿದಮೇಲೆ ಆ ಭಕ್ತಿಯು ಅವರೊಡನೆ ಮನೆಮನೆಯಲ್ಲಿಯೂ ಕ್ರೀಡಿಸುತ್ತದೆ.

೬೫. ನಾರದನು ಹೇಳಿದನು-ವೇದವೇದಾಂತಗಳಿಂದಲೂ ಗೀತೆಯ ಪಾಠದಿಂದಲೂ ಆ ಭಕ್ತಿ ಜ್ಞಾನ ವೈರಾಗ್ಯಗಳು ಮೂವರೂ ಏಳಲಿಲ್ಲವಷ್ಟೆ! ಅವುಗಳಿಂದಲೇ ಏಳದವರು ಈ ಶ್ರೀಮದ್ಭಾಗವತಾಲಾಪದಿಂದ ಹೇಗೆ ತಾನೇ ಎಚ್ಚರಗೊಂಡಾರು ? ಹೇಳು.

೬೬-೬೭. ಆ ಭಾಗವತದ ಕಥೆಯಲ್ಲಿ ಶ್ಲೋಕ ಶ್ಲೋಕದಲ್ಲಿಯೂ ಪದಪದದಲ್ಲಿಯೂ ವೇದಾರ್ಥಗಳಿವೆಯೆ? ವ್ಯರ್ಥವಾಗದ ದರ್ಶನವುಳ್ಳ ನೀವು ಈ ಸಂಶಯವನ್ನು ನಾಶಮಾಡಿರಿ. ಎಲೈ ಶರಣಾಗತವತ್ಸಲರೇ ! ನೀವು ಸಾವಕಾಶಮಾಡದೆ ಹೇಳಿರಿ.

॥ ಸೂತ ಉವಾಚ ॥

ತತಸ್ತೇ ಸನಕಾದ್ಯಾಸ್ತು ವಿರಕ್ತಾ ಹ್ಯೂರ್ಧ್ವರೇತಸಃ ।
ಸಿದ್ಧಾಸ್ಸನಾತನಾ ವಿಪ್ರಾ ನಾರದಂ ಪ್ರೋಚುರಾದರಾತ್ ॥ ೬೮ ॥

॥ ಕುಮಾರಾ ಊಚುಃ ॥

ವೇದೋಪನಿಷದಾಂ ಸಾರಾಜ್ಜಾತಾ ಭಾಗವತೀಕಥಾ ।
ಅತ್ಯುತ್ತಮಾ ತತೋ ಭಾತಿ ಪೃತಗ್ಭೂತಾ ಫಲೋನ್ನತಿಃ ॥ ೬೯ ॥

ಆಮೂಲಾಗ್ರಂ ರಸಸ್ತಿಷ್ಠನ್ನಾಮ್ರೇ ನ ಸ್ವಾದ್ಯತೇ ಯಥಾ ।
ಸಂಭೂಯ ಸ ಪೃಥಗ್ಭೂತಃ ಫಲೇ ವಿಶ್ವಮನೋಹರಃ ॥ ೭೦ ॥

ಯಥಾ ದುಗ್ಧೇ ಸ್ಥಿತಂ ಸರ್ಪಿಃ ನ ಸುಸ್ವಾದುಫಲಪ್ರದಂ ।
ಪೃಥಗ್ಭೂತಂ ಹಿ ತದ್ದಿವ್ಯಂ ದೇವಾನಾಂ ರಸವರ್ಧನಂ ॥ ೭೧ ॥

---

೬೮. ಸೂತನು ಹೇಳಿದನು-ವಿರಕ್ತರೂ ಊರ್ಧ್ವರೇತಸ್ಕರೂ ಸಿದ್ಧರೂ ಸನಾತನರೂ ಆದ ಸನಕಾದಿಗಳು ನಾರದನನ್ನು ಕುರಿತು ಆದರದಿಂದ ಇಂತೆಂದರು.

೬೯. ಕುಮಾರರು ಹೇಳಿದರು-ಈ ಭಾಗವತದ ಕಥೆಯು ವೇದ ಉಪನಿಷತ್ತುಗಳ ಸಾರಗಳಿಂದ ಹುಟ್ಟಿದೆ. ಅದರಿಂದಲೇ ಅತ್ಯುತ್ತಮವಾದುದು. ಫಲಗಳೂ ಬೇರೆ ಬೇರೆಯಾಗಿವೆ.

೭೦. ಮೊದಲಿನಿಂದ ಕೊನೆಯವರೆಗೂ ಮಾವಿನ ಮರದಲ್ಲಿ ರಸವಿರುತ್ತದೆ. ರುಚಿಯಾಗಿಯೂ ಇರುತ್ತದೆ. ಆದರೆ ಆ ಮಾವಿನ ಮರವನ್ನು ಬೇರೆ ಬೇರೆಯಾಗಿ ಹಣ್ಣುಗಳ ರೂಪದಲ್ಲಿ ಕೊಡುತ್ತದೆ. ಹಾಗೆಯೇ ಈ ಭಾಗವತವು ಬೇರೆ ಬೇರೆಯಾಗಿ ಹೇಳುತ್ತ ಅದರಿಂದ ತನ್ನ ವಿಷಯವನ್ನು ಬೋಧಿಸುತ್ತದೆ.

೭೧. ಹಾಲಿನಲ್ಲಿ ತುಪ್ಪವು ಇದೆ. ಆದರೆ ಅದು ಆ ಹಾಲಿನಲ್ಲಿ ತನ್ನ ರುಚಿಯನ್ನು ಕೊಡುವುದಿಲ್ಲ. ಅದು ಬೇರೆಯಾಗಿ ಬಂದಾಗ ದೇವತೆಗಳಿಗೂ ರಸವನ್ನು ಕೊಡುತ್ತದೆ. ಚೆನ್ನಾಗಿರುತ್ತದೆ.

ಇಕ್ಷೂಣಾಮಾದಿಮಧ್ಯಾನ್ತಂ ಶರ್ಕರಾ ವ್ಯಾಪ್ಯ ತಿಷ್ಠತಿ ।
ಪೃಥಗ್ಭೂತಾ ಚ ಸಾ ಮಿಷ್ಟಾ ತಥಾ ಭಾಗವತೀ ಕಥಾ ॥ ೭೨ ॥

ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಂ ।
ಬ್ರಹ್ಮಜ್ಞಾನವಿರಾಗಾಣಾಂ ಖ್ಯಾಪನಾಯ ಪ್ರಕಾಶಿತಂ ॥ ೭೩ ॥

ವೇದವೇದಾಂತಸುಸ್ನಾತೇ ಗೀತಾಯಾ ಅಪಿ ಕರ್ತರಿ ।
ಪರಿತಾಪವತಿ ವ್ಯಾಸೇ ಮುಹ್ಯತ್ಯಜ್ಞಾನಸಾಗರೇ ॥ ೭೪ ॥

ತದಾ ತ್ವಯಾ ಪುರಾ ಪ್ರೋಕ್ತಂ ಚತುಶ್ಶ್ಲೋಕಸಮನ್ವಿತಂ ।
ತದೀಯಶ್ರವಣಾತ್ಸದ್ಯೋ ನಿರ್ಬಾಧೋ ಬಾದರಾಯಣಃ ॥ ೭೫ ॥

ತತ್ರ ತೇ ವಿಸ್ಮಯಃ ಕೇನ ಯತಃ ಪ್ರಶ್ನಕರೋ ಭವಾನ್ ।
ಶ್ರೀಮದ್ಭಾಗವತಂ ಶಾಸ್ತ್ರಂ ಶೋಕದುಃಖವಿನಾಶನಂ ॥ ೭೬ ॥

---

೭೨. ಕಬ್ಬಿನಲ್ಲಿ ಬುಡದಿಂದ ತುದಿಯವರೆಗೂ ಸಕ್ಕರೆಯು ವ್ಯಾಪಿಸಿಕೊಂಡಿರುತ್ತದೆ. ಆದರೆ ಆ ಸಕ್ಕರೆಯ ರುಚಿಯು ಬೇರೆ. ಅದು ಬೇರೆ ರೀತಿಯಾಗಿರುವಂತೆ ಭಾಗವತದ ಕಥೆಯೂ ಹಾಗೆಯೇ ಇರುತ್ತದೆ.

೭೩. ಈ ಭಾಗವತ ಪುರಾಣವು ಬ್ರಹ್ಮಸದೃಶವಾದುದು. ಬ್ರಹ್ಮನನ್ನು ತಿಳಿಯುವುದಕ್ಕೂ ಜ್ಞಾನಕ್ಕೂ ವೈರಾಗ್ಯಕ್ಕೂ ಮೂರಕ್ಕೂ ಇದು ಲೋಕದಲ್ಲಿ ಪ್ರಕಾಶಿತವಾಗಿದೆ.

೭೪-೭೫. ವೇದ ವೇದಾಂಗಗಳನ್ನು ಚೆನ್ನಾಗಿ ಬಲ್ಲ ಗೀತೆಯ ಕರ್ತೃವಾದ ವ್ಯಾಸನು ಅಜ್ಞಾನಸಾಗರದಲ್ಲಿ ಮುಳುಗಿ ಪರಿತಾಪವನ್ನು ಹೊಂದುತ್ತಿರಲು ಆಗ ನೀನು ನಾಲ್ಕು ಶ್ಲೋಕಗಳಿಂದ ಕೂಡಿದ ಒಂದು ವಿಷಯವನ್ನು ಪೂರ್ವದಲ್ಲಿ ಹೇಳಿದೆ ಅದನ್ನು ಕೇಳಿದೊಡನೆಯೇ ಆ ವ್ಯಾಸನ ದುಃಖವು ಪರಿಹಾರವಾಯಿತು.

೭೬. ಆ ವಿಷಯದಲ್ಲಿ ನಿನಗೇಕೆ ಸಂಶಯವು ಬಂದಿತು ? ನೀನೇಕೆ ಪ್ರಶ್ನೆಯನ್ನು ಮಾಡಿದೆ? ಶ್ರೀಮದ್ಭಾಗವತ ಶಾಸ್ತ್ರವು ಶೋಕ ದುಃಖಗಳನ್ನೂ ನಾಶಮಾಡುತ್ತದೆ.

॥ ನಾರದ ಉವಾಚ ॥

ಯದ್ದರ್ಶನಂ ಚ ವಿನಿಹಂತ್ಯಶುಭಾನಿ ಸದ್ಯಃ
ಶ್ರೇಯಸ್ತನೋತಿ ಭವದುಃಖದವಾರ್ದಿತಾನಾಂ ।
ನಿಶ್ಶೇಷಶೇಷಮುಖಗೀತಕಥೈಕಪಾನಾತ್
ಪ್ರೇಮಪ್ರಕಾಶಕೃತಯೇ ಶರಣಂ ಗತೋಽಸ್ಮಿ ॥ ೭೭ ॥

ಭಾಗ್ಯೋದಯೇನ ಬಹುಜನ್ಮಸಮಾರ್ಜಿತೇನ
ಸತ್ಸಂಗಮೇವ ಲಭತೇ ಪುರುಷೋ ಯದಾ ವೈ ।
ಅಜ್ಞಾನಹೇತುಕೃತಮೋಹಮದಾಂಧಕಾರ
ನಾಶಂ ವಿಧಾಯ ಹಿ ತದೋದಯತೇ ವಿವೇಕಃ ॥ ೭೮ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಭಾಗವತ ಮಾಹಾತ್ಮ್ಯೇ ಕುಮಾರ ನಾರದ ಸಮಾಗಮೋ ನಾಮ ನವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೭೭. ನಾರದನು ಹೇಳಿದನು-ಯಾವ ನಿಮ್ಮಗಳ ದರ್ಶನವು ಅಶುಭಗಳನು ಒಡನೆಯೇ ನಾಶಮಾಡುತ್ತದೆಯೋ ಶ್ರೇಯಸ್ಸನ್ನುಂಟುಮಾಡುತ್ತದೆಯೊ ಸಂಸಾರ ವೆಂಬ ಕಾಳ್ಗಿಚ್ಚಿನಿಂದ ತೊಂದರೆ ಪಟ್ಟವರ ತೊಂದರೆಯನ್ನು ಬಿಡಿಸುತ್ತದೆಯೋ ಅಂತಹ ನಿಮ್ಮನ್ನು ಶೇಷನು ಹೇಳಿರುವ ಆ ಭಾಗವತದ ಕಥೆಯನ್ನು ಕೇಳು ವುದಕ್ಕೋಸ್ಕರ ಶರಣು ಹೊಂದಿದ್ದೇನೆ.

೭೮. ಬಹುವಾದ ಜನ್ಮದಿಂದ ಸಂಪಾದಿಸಿದ ಭಾಗ್ಯಗಳು ಬಂದಾಗಲೇ ಮನುಷ್ಯನು ಸತ್ಪುರುಷರ ಸಹವಾಸವನ್ನು ಹೊಂದುತ್ತಾನೆ. ಆಗ ಅಜ್ಞಾನದಿಂದ ಉಂಟಾದ ಮೋಹ ಮದಗಳೆಂಬ ಅಂಧಕಾರವನ್ನು ನಾಶಮಾಡುವ ವಿವೇಕವು ಹುಟ್ಟುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಭಾಗವತ ಮಹಿಮೆಯಲ್ಲಿ ಕುಮಾರ ನಾರದ ಸಮಾಗಮ ಎಂಬ ನೂರ ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

॥ ಏಕನವತ್ಯಧಿಕಶತತಮೋಽಧ್ಯಾಯಃ ॥



॥ ಸೂತ ಉವಾಚ ॥

ಅಥ ದೇವರ್ಷಿಸ್ತತ್ರೈವ ಕುಮಾರಾನನುಮಾನ್ಯ ಚ ।
ಉವಾಚ ಪ್ರಣತೋ ವಾಕ್ಯಂ ಜ್ಞಾನಯಜ್ಞಕೃತಾದರಃ ॥ ೧ ॥

॥ ನಾರದ ಉವಾಚ ॥

ಜ್ಞಾನಯಜ್ಞಂ ಕರಿಷ್ಯಾಮಿ ಶುಕಶಾಸ್ತ್ರಕಥೋಜ್ಜ್ವಲಂ ।
ಭಕ್ತಿಜ್ಞಾನವಿರಾಗಾಣಾಂ ಸ್ಥಾಪನಾರ್ಥಂ ಪ್ರಯತ್ನತಃ ॥ ೨ ॥

ಕುತ್ರ ಕಾರ್ಯೋ ಮಯಾ ಯಜ್ಞಃ ಸ್ಥಲಂ ತದ್ವಾಚ್ಯತಾಮಿಹ ।
ಮಹಿಮಾ ಶುಕಶಾಸ್ತ್ರಸ್ಯ ವಕ್ತವ್ಯೋ ವೇದಪಾರಗೈಃ ॥ ೩ ॥

---

## ನೂರ ತೊಂಭತ್ತೊಂದನೆಯ ಅಧ್ಯಾಯವು



೧. ಸೂತನು ಹೇಳಿದನು-ಅನಂತರ ದೇವರ್ಷಿಯಾದ ನಾರದನು ಆ ಸನತ್ಕುಮಾರರನ್ನು ಗೌರವಿಸಿ ಜ್ಞಾನ ಯಜ್ಞದಲ್ಲಿ ಆಸೆಯುಳ್ಳವನಾಗಿ ನಮ್ರತೆಯಿಂದ ಇಂತೆಂದನು.

೨. ನಾರದನು ಹೇಳಿದನು-ಎಲೈ ಕುಮಾರರಿರಾ! ನಾನು ಶುಕನ ಶಾಸ್ತ್ರದ ರೀತಿಯಿಂದ ಪ್ರಸಿದ್ಧಳಾದ ಜ್ಞಾನಯಜ್ಞವನ್ನು ಮಾಡುತ್ತೇನೆ. ಅದನ್ನು ಮಾಡಿ ಪ್ರಯತ್ನಪಟ್ಟು ಭಕ್ತಿ ಜ್ಞಾನ ವಿರಾಗರನ್ನು ಸ್ಥಿರವಾಗಿರುವಂತೆ ಮಾಡುತ್ತೇನೆ.

೩. ನಾನು ಆ ಜ್ಞಾನಯಜ್ಞವನ್ನು ಎಲ್ಲಿ ಮಾಡಬೇಕು? ಆ ಸ್ಥಳವನ್ನು ಹೇಳಿರಿ? ವೇದಪಾರಂಗರಾದ ನೀವು ಆ ಶುಕಶಾಸ್ತ್ರದ ಮಹಿಮೆಯನ್ನು ಹೇಳಿರಿ.

ಕಿಯದ್ಭಿರ್ದಿವಸೈಶ್ಶ್ರಾವ್ಯಾ ಶ್ರೀಮದ್ಭಾಗವತೀ ಕಥಾ ।
ಕೋ ವಿಧಿಸ್ತತ್ರ ಕರ್ತವ್ಯೋ ಜ್ಞಾನಯಜ್ಞವಿಶಾರದಾಃ ॥ ೪ ॥

॥ ಕುಮಾರಾ ಊಚುಃ ॥

ಶೃಣು ನಾರದ ವಕ್ಷ್ಯಾಮೋ ವಿನಮ್ರಾಯ ವಿವೇಕಿನೇ ।
ಗಂಗಾದ್ವಾರಸಮೀಪೇ ತು ಕಾಮೋದಾಖ್ಯಂ ಪುರಂ ಮಹತ್ ॥ ೫ ॥

ಸ್ವರ್ಣದ್ಯಾಶ್ಚೋತ್ತರಂ ಪುಣ್ಯಂ ತಟಮಾನಂದನಾಮಕಂ ।
ನಾನಾಋಷಿಗಣೈರ್ಜುಷ್ಟಂ ದೇವಸಿದ್ಧನಿಷೇವಿತಂ ॥ ೬ ॥

ನಾನಾತರುಲತಾಕೀರ್ಣಂ ನವಕೋಮಲವಾಲುಕಂ ।
ರಮ್ಯಮೇಕಾನ್ತದೇಶಸ್ಥಂ ಹೈಮಪದ್ಮಸುಶೋಭಿತಂ ॥ ೭ ॥

ಯತ್ಸಮೀಪಸ್ಥಜೀವಾನಾಂ ಕ್ಷೇತ್ರಸ್ಯೈವ ಪ್ರಭಾವತಃ ।
ಮಿಥಸ್ಸಂಸ್ನಿಗ್ಧಚಿತ್ತಾನಾಂ ವೈರಂ ಚೇತಸಿ ನ ಸ್ಥಿತಂ ॥ ೮ ॥

---

೪. ಎಲೈ ಜ್ಞಾನಯಜ್ಞ ವಿಶಾರದರೆ! ಆ ಭಾಗವತ ಕಥೆಯನ್ನು ಎಷ್ಟು ದಿವಸದಲ್ಲಿ ಕೇಳಬೇಕು? ಅದರ ವಿಧಿಗಳೇನು ? ಹೇಳಿರಿ.

೫-೬. ಕುಮಾರರು ಹೇಳಿದರು-ಎಲೈ ನಾರದನೆ! ನೀನು ವಿವೇಕಿಯು. ನಮ್ರನಾಗಿ ಕೇಳುತ್ತಿದ್ದೀಯೆ. ಆದುದರಿಂದ ಹೇಳುತ್ತೇವೆ. ಕೇಳು. ಗಂಗಾದ್ವಾರದ ಹತ್ತಿರ ಕಾಮೋದವೆಂಬ ಪಟ್ಟಣವೊಂದಿರುವುದು. ಅದು ಗಂಗಾನದಿಯ ಉತ್ತರದಡದಲ್ಲಿದೆ. ಅಲ್ಲಿ ಆನಂದವನವೆಂಬ ಒಂದು ವನವಿದೆ. ಅಲ್ಲಿ ನಾನಾ ಬಗೆಯಾದ ಋಷಿಗಳೂ ದೇವತೆಗಳೂ ಸಿದ್ಧರೂ ಇದ್ದಾರೆ.

೭. ಅನೇಕ ಬಗೆಯಾದ ಮರಗಳೂ ಬಳ್ಳಿಗಳೂ ಅಲ್ಲಿವೆ. ಹೊಸದಾಗಿಯೂ ನುಣುಪಾಗಿಯೂ ಇರುವ ಮರಳಿದೆ. ಮನೋಹರವಾಗಿವೆ. ಒಬ್ಬರಿಗೂ ತಿಳಿಯದ ಸ್ಥಳವು. ಚಿನ್ನದ ಪದ್ಮಗಳು ಅಲ್ಲಿ ಬೇಕಾದಂತಿವೆ.

೮. ಆದರ ಹತ್ತಿರದಲ್ಲಿರುವ ಪ್ರಾಣಿಗಳು ಆ ಕ್ಷೇತ್ರದ ಮಹಿಮೆಯಿಂದ ತಮ್ಮ ಮನಸ್ಸಿನ ವೈರವನ್ನು ಬಿಟ್ಟುಬಿಟ್ಟು ಅನ್ಯೋನ್ಯವಾಗಿ ಸ್ನೇಹದಿಂದಿವೆ.

ಜ್ಞಾನಯಜ್ಞಸ್ತ್ವಯಾ ತತ್ರ ಕರ್ತವ್ಯೋ ಹ್ಯಪ್ರಯತ್ನತಃ ।
ಅಪೂರ್ವಾ ರಸರೂಪಾ ಚ ಕಥಾ ತತ್ರ ಭವಿಷ್ಯತಿ ॥ ೯ ॥

ಪುರಸ್ಥಂ ನಿರ್ಬಲಂ ಚೈವ ಜರಾಜೀರ್ಣಕಳೇಬರಂ ।
ಸುತದ್ವಯಂ ಪುರಸ್ಕೃತ್ಯ ಭಕ್ತಿಸ್ತತ್ರಾಗಮಿಷ್ಯತಿ ॥ ೧೦ ॥

ಯತ್ರ ಭಾಗವತೀ ವಾರ್ತಾ ತತ್ರ ಭಕ್ತ್ಯಾದಿಕಂ ವ್ರಜೇತ್ ।
ಕಥಾಶಬ್ದಂ ಸಮಾಕರ್ಣ್ಯ ತತ್ತ್ರಿಕಂ ತರುಣಾಯತೇ ॥ ೧೧ ॥

॥ ಸೂತ ಉವಾಚ ॥

ಏವಮುಕ್ತ್ವಾ ಕುಮಾರಾಸ್ತೇ ನಾರದೇನ ಸಮಂ ತತಃ ।
ಗಂಗಾತಟಂ ಸಮಾಜಗ್ಮುಃ ಕಥಾಪಾನಾಯ ಸತ್ವರಾಃ ॥ ೧೨ ॥

ಯದಾ ಯಾತಾಸ್ತಟಂ ತೇ ತು ತದಾ ಕೋಲಾಹಲೋಽಪ್ಯಭೂತ್ ।
ಭೂರ್ಲೋಕೇ ದೇವಲೋಕೇ ಚ ಬ್ರಹ್ಮಲೋಕೇ ತಥೈವ ಚ ॥ ೧೩ ॥

---

೯. ಅಲ್ಲಿ ನೀನು ಸುಲಭವಾಗಿ ಜ್ಞಾನಯಜ್ಞವನ್ನು ಮಾಡಬಹುದು. ಅಪೂರ್ವವಾದ ರಸವತ್ತಾದ ಕಥೆಗಳು ಅಲ್ಲಿ ಜರುಗುತ್ತವೆ.

೧೦. ತನ್ನೆದುರಿಗೆ ಬಲವಿಲ್ಲದೆ ಮುಪ್ಪಿನಿಂದ ಸುಕ್ಕುಹಿಡಿದಿರುವ ದೇಹವುಳ್ಳ ಮಕ್ಕಳಿಬ್ಬರನ್ನೂ ಆ ಭಕ್ತಿಯು ಕರೆದುಕೊಂಡು ಅಲ್ಲಿಗೆ ಬರುತ್ತಾಳೆ.

೧೧. ಎಲ್ಲಿ ಭಾಗವತದ ಮಾತು ನಡೆಯುತ್ತದೆಯೋ ಅಲ್ಲಿಗೆ ಭಕ್ತಿ ಜ್ಞಾನವಿರಾಗರು ಹೋಗುತ್ತಾರೆ. ಆ ಕಥೆಯ ಶಬ್ದವನ್ನು ಕೇಳಿದರೇನೇ ಅವರು ಮೂವರಿಗೂ ಪ್ರಾಯ ಬರುತ್ತದೆ.

೧೨. ಸೂತನು ಹೇಳಿದನು–ಆ ಸನತ್ಕುಮಾರರು ಹೀಗೆಂದು ಹೇಳಿ ನಾರದನೊಡನೆ ಆ ಗಂಗಾದಡಕ್ಕೆ ಭಾಗವತ ಕಥೆಯನ್ನು ಕೇಳಲು ಶೀಘ್ರವಾಗಿ ಬಂದರು.

೧೩–೧೪. ಅವರು ಮೂರುಜನವೂ ಆ ಗಂಗಾನದಿಯ ದಡಕ್ಕೆ ಬರಲು ಆಗ ಬಹುವಾದ ಕೋಲಾಹಲವೆದ್ದಿತು. ರಸದಲ್ಲಿ ಆಸಕ್ತರಾದ ಭೂಲೋಕ

ಶ್ರೀಭಾಗವತಪೀಯೂಷಪಾನಾಯ ರಸಲಂಪಟಾಃ ।
ಧಾವಂತೋಽಪ್ಯಾಯಯುಃ ಸರ್ವೇ ಪ್ರಥಮಂ ಯೇ ಚ ವೈಷ್ಣವಾಃ ॥ ೧೪ ॥

ಭೃಗುರ್ವಸಿಷ್ಠಶ್ಚ್ಯವನಶ್ಚ ಗೌತಮೋ
ಮೇಧಾತಿಥಿರ್ದೇವಲದೇವರಾತೌ ।
ರಾಮಸ್ತಥಾ ಗಾಧಿಸುತಶ್ಚ ಶಾಕಲೋ
ಮೃಕಂಡುಪುತ್ರಾತ್ರಿಜಪಿಪ್ಪಲಾದಾಃ ॥ ೧೫ ॥

ಯೋಗೇಶ್ವರೌ ವ್ಯಾಸಪರಾಶರೌ ಚ
ಶ್ರೀವರ್ಯಾ ಶುಕೋ ಜಾಜಲಿಜಹ್ನುಮುಖ್ಯಾಃ ।
ಸರ್ವೇಽಪ್ಯಮೀ ಮುನಿಗಣಾಃ ಸಹ ಪುತ್ರಮಿತ್ರ
ಸ್ವಸ್ತ್ರೀಭಿರಾಯಯುರತಿಪ್ರಣಯೇನ ಯುಕ್ತಾಃ ॥ ೧೬ ॥

ವೇದಾಂತಾನಿ ಚ ವೇದಾಶ್ಚ ಮಂತ್ರಾಸ್ತಂತ್ರಾಸ್ಸಮೂರ್ತಯಃ ।
ದಶಾಷ್ಟ ಚ ಪುರಾಣಾನಿ ಷಟ್‌ಶಾಸ್ತ್ರಾಣಿ ತದಾ ಯಯುಃ ॥ ೧೭ ॥

ಗಂಗಾದ್ಯಾಸ್ಸರಿತಸ್ತತ್ರ ಪುಷ್ಕರಾದಿಸರಾಂಸಿ ಚ ।
ಕ್ಷೇತ್ರಾಣಿ ಚ ದಿಶಸ್ಸರ್ವಾ ದಂಡಕಾದಿವನಾನಿ ಚ ॥ ೧೮ ॥

---

ದೇವಲೋಕ ಬ್ರಹ್ಮಲೋಕದವರೂ ಮತ್ತು ವೈಷ್ಣವರಾದವರೂ ಕೂಡ ಆ ಭಾಗವತದ ಕಥಾಮೃತವನ್ನು ಪಾನಮಾಡಲು ಓಡುತ್ತಲೇ ಬಂದರು.

೧೫–೧೬. ಭೃಗು ವಸಿಷ್ಠ ಚ್ಯವನ ಗೌತಮ ಮೇಧಾತಿಥಿ ದೇವಲ ದೇವರಾತ ಪರಶುರಾಮ ವಿಶ್ವಾಮಿತ್ರ ಶಾಕಲ ಮಾರ್ಕಂಡೇಯ ದೂರ್ವಾಸ ಪಿಪ್ಪಲಾದ ವ್ಯಾಸ ಪರಾಶರ ಶುಕ ಜಾಜಲಿ ಜಹ್ನು, ಮುಂತಾದ, ಋಷಿಗಳು ಹೆಂಡತಿ ಮಕ್ಕಳೊಂದಿಗೆ ಬಹು ಸಂತೋಷದಿಂದ ಅಲ್ಲಿಗೆ ಬಂದರು.

೧೭. ವೇದಗಳು ವೇದಾಂತಗಳು ಮಂತ್ರಗಳು ತಂತ್ರಗಳು ಹದಿನೆಂಟು ಪುರಾಣಗಳು ಆರು ಶಾಸ್ತ್ರಗಳು ಇವೆಲ್ಲವೂ ಆಕಾರವನ್ನು ಹೊಂದಿ ಅಲ್ಲಿಗೆ ಹೋದುವು.

೧೮–೧೯. ಗಂಗೆಯೇ ಮುಂತಾದ ನದಿಗಳು ಪುಷ್ಕರವೇ ಮುಂತಾದ ಸರೋವರಗಳು, ಕ್ಷೇತ್ರಗಳು, ದಿಕ್ಕುಗಳು, ದಂಡಕಾವನವೇ ಮುಂತಾದ

ನಾಗಾದಯೋ ಯಯುಸ್ತತ್ರ ದೇವಗಂಧರ್ವಕಿನ್ನರಾಃ ।
ಗುರುತ್ವಾತ್ತತ್ರ ನಾಯಾತಾನ್ ಭೃಗುಃ ಸಂಬೋಧ್ಯ ಚಾನಯತ್ ॥ ೧೯ ॥

ದೀಕ್ಷಾಯಾಂ ನಾರದೇನಾಥ ದತ್ತಮಾಸನಮುತ್ತಮಂ ।
ಕುಮಾರಾ ವಂದಿತಾಸ್ಸರ್ವೈಃ ನಿಷೇದುಃ ಕೃಷ್ಣತತ್ಪರಾಃ ॥ ೨೦ ॥

ವೈಷ್ಣವಾಶ್ಚ ವಿರಕ್ತಾಶ್ಚ ನ್ಯಾಸಿನೋ ಬ್ರಹ್ಮಚಾರಿಣಃ ।
ಮುಖಭಾಗೇ ಸ್ಥಿತಾಸ್ತೇ ಚ ತದಗ್ರೇ ನಾರದಃ ಸ್ಥಿತಃ ॥ ೨೧ ॥

ಏಕಭಾಗೇ ಋಷಿಗಣಾಸ್ತಥಾನ್ಯತ್ರ ದಿವೌಕಸಃ ।
ವೇದೋಪನಿಷದೋನ್ಯತ್ರ ತೀರ್ಥಾನ್ಯತ್ರ ಸ್ತ್ರಿಯೋನ್ಯತಃ ॥ ೨೨ ॥

ಜಯಶಬ್ದೈರ್ನಮಶ್ಶಬ್ದೈಃ ಶಂಖಶಬ್ದೈಸ್ತಥೈವ ಚ ।
ಚೂರ್ಣಲಾಜಪ್ರಸೂನಾನಾಂ ನಿಕ್ಷೇಪಸ್ಸುಮಹಾನಭೂತ್ ॥ ೨೩ ॥

---

ವನಗಳೂ, ನಾಗರು, ದೇವತೆಗಳು, ಗಂಧರ್ವರು, ಕಿನ್ನರರು, ಇವರೆಲ್ಲರೂ ಅಲ್ಲಿಗೆ ಬಂದರು. ಗೌರವದಿಂದ ಅಲ್ಲಿಗೆ ಬಾರದವರಿಗೆ ಭೃಗುವು ಹೇಳಿಕಳುಹಿಸಿ ಕರೆಸಿದನು.

೨೦. ನಾರದನು ದೀಕ್ಷಿತನಾದನು. ದೀಕ್ಷಿತನಾದ ನಾರದನು ಆ ಸನತ್ಕುಮಾರರಿಗೆ ಉತ್ತಮವಾದ ಲಸನವನ್ನು ಕೊಟ್ಟನು. ಆ ಸನತ್ಕುಮಾರರನ್ನು ಎಲ್ಲರೂ ವಂದಿಸಿ ಕೃಷ್ಣ ಕಥೆಯನ್ನು ಕೇಳಲು ಅಲ್ಲಿ ಕುಳಿತರು.

೨೧. ವೈಷ್ಣವರು, ಸನ್ಯಾಸಿಗಳು, ಬ್ರಹ್ಮಚಾರಿಗಳು, ಆ ಸಭೆಯಲ್ಲಿ ಮುಂದುಗಡೆಯಲ್ಲಿ ಕುಳಿತರು. ಅವರ ಮುಂದೆ ನಾರದನು ಇದ್ದನು.

೨೨. ಋಷಿಗಳೂ, ದೇವತೆಗಳೂ, ವೇದಗಳೂ, ಉಪನಿಷತ್ತುಗಳೂ, ತೀರ್ಥಗಳೂ ಹೆಂಗಸರೂ ಬೇರೆ ಬೇರೆ ಕಡೆಗಳಲ್ಲಿ ಅವರವರದೇ ಒಂದೊಂದು ಗುಂಪಾಗಿ ಕುಳಿತುಕೊಂಡರು.

೨೩. ಜಯಶಬ್ದವನ್ನೂ ನಮಶ್ಶಬ್ದವನ್ನೂ ಹೇಳುತ್ತ, ಶಂಖವನ್ನು ಊದುತ್ತ ಬುಕ್ಕಿಹಿಟ್ಟು, ಅರಳು, ಹೂವುಗಳನ್ನು ಅಲ್ಲಿ ಬಹುವಾಗಿ ಚೆಲ್ಲಿದರು. ಅದರ ಶಬ್ದವೇ ಅಲ್ಲಿ ಬಹುವಾಗಿ ಕೇಳಬಂದಿತು.

ವಿಮಾನಾನಿ ಸಮಾರುಹ್ಯ ಕಿಯನ್ತೋ ದೇವನಾಯಕಾಃ ।
ಕಲ್ಪವೃಕ್ಷಪ್ರಸೂನೈಶ್ಚ ಸರ್ವೇ ತತ್ರ ಸಮಾಕಿರನ್ ॥ ೨೪ ॥

॥ ಸೂತ ಉವಾಚ ॥

ಏವಂ ತೇಷ್ವೇಕಚಿತ್ತೇಷು ಶ್ರೀಮದ್ಭಾಗವತಸ್ಯ ಚ ।
ಮಾಹಾತ್ಮ್ಯಮೂಚಿರೇ ಸ್ಪಷ್ಟಂ ನಾರದಾಯ ಮಹಾತ್ಮನೇ ॥ ೨೫ ॥

॥ ಕುಮಾರಾ ಊಚುಃ ॥

ಅಥ ತೇ ಸಂಪ್ರವಕ್ಷ್ಯಾಮೋ ಮಾಹಾತ್ಮ್ಯಂ ಶುಕಶಾಸ್ತ್ರಜಂ ।
ಯಸ್ಯ ಶ್ರವಣಮಾತ್ರೇಣ ಮುಕ್ತಿಃ ಕರತಲೇ ಸ್ಥಿತಾ ॥ ೨೬ ॥

ಸದಾ ಸೇವ್ಯಾ ಸದಾ ಸೇವ್ಯಾ ಶ್ರೀಮದ್ಭಾಗವತೀ ಕಥಾ ।
ಯಸ್ಯಾಶ್ರವಣಮಾತ್ರೇಣ ಮುಕ್ತಿರತ್ನಂ ಸಮಾಶ್ರಯೇತ್ ॥ ೨೭ ॥

ಗ್ರಂಥೋಷ್ಟಾದಶಸಾಹಸ್ರೋ ದ್ವಾದಶಸ್ಕಂಧಸಂಯುತಃ ।
ಪರೀಕ್ಷಿಚ್ಛುಕಸಂವಾದಂ ಶೃಣು ಭಾಗವತಂ ಚ ತತ್ ॥ ೨೮ ॥

---

೨೪. ಬಹುಜನ ದೇವತೆಗಳ ನಾಯಕರೂ, ಅಲ್ಲಿ ವಿಮಾನಗಳ ಮೇಲೆ ಕುಳಿತು ಕಲ್ಪವೃಕ್ಷದ ಹೂವುಗಳನ್ನು ಆ ಸಭೆಯ ಮೇಲೆ ಎರಚಿದರು.

೨೫. ಸೂತನು ಹೇಳಿದನು– ಅವರೆಲ್ಲರೂ ಗಲಭೆಯಿಲ್ಲದೆ ಒಂದೇ ಮನಸ್ಸಿನಿಂದ ಕುಳಿತು ಕೇಳುತ್ತಿರಲು ಆ ಸನತ್ಕುಮಾರರು ನಾರದನಿಗೆ ಭಾಗವತದ ಮಹಿಮೆಯನ್ನು ಹೇಳಿದರು.

೨೬. ಕುಮಾರರು ಹೇಳಿದರು- ಇನ್ನು ಮೇಲೆ ನಿಮಗೆ ಶುಕನ ಶಾಸ್ತ್ರವಾದ ಭಾಗವತದ ಮಹಿಮೆಯನ್ನು ಹೇಳುತ್ತೇವೆ. ಅದನ್ನು ಕೇಳುವುದರಿಂದ ಮುಕ್ತಿಯು ಅಂಗಯ್ಯಲ್ಲಿರುತ್ತದೆ.

೨೭. ಶ್ರೀಮದ್ಭಾಗವತದ ಕಥೆಯನ್ನು ಯಾವಾಗಲೂ ಕೇಳಬೇಕು. ಅದನ್ನು ಕೇಳುವುದರಿಂದ ಮುಕ್ತಿ ರತ್ನವನ್ನು ಹೊಂದಬೇಕು.

೨೮. ಆ ಭಾಗವತದ ಗ್ರಂಥವು ಹದಿನೆಂಟುಸಾವಿರ ಗ್ರಂಥಗಳಿವೆ. ಹನ್ನೆರಡು ಸ್ಕಂಧಗಳಿವೆ. ಅದು ಪರೀಕ್ಷಿತ್ತು ಮತ್ತು ಶುಕಋಷಿಗಳ ಸಂವಾದ ರೂಪವಾಗಿದೆ. ಅದನ್ನು ಕೇಳು.

ತಾವತ್ಸಂಸಾರಚಕ್ರೇಽಸ್ಮಿನ್ ಭ್ರಮತೇಽಜ್ಞಾನತಃ ಪುಮಾನ್ ।
ಯಾವತ್ಕರ್ಣಗತಾ ನಾಸ್ತಿ ಶುಕಶಾಸ್ತ್ರಕಥಾ ಕ್ಷಣಂ ॥ ೨೯ ॥

ಕಿಂ ಶ್ರುತೈರ್ಬಹುಭಿಶ್ಶಾಸ್ತ್ರೈಃ ಪುರಾಣೈಶ್ಚ ಭ್ರಮಾವಹೈಃ ।
ಏಕಂ ಭಾಗವತಂ ಶಾಸ್ತ್ರಂ ಮುಕ್ತಿದಾನೇನ ಗರ್ಜತಿ ॥ ೩೦ ॥

ಕಥಾ ಭಾಗವತಸ್ಯಾಪಿ ನಿತ್ಯಂ ಭವತಿ ಯದ್ಗೃಹೇ ।
ತದ್ಗೃಹಂ ತೀರ್ಥರೂಪಂ ಹಿ ವಸತಾಂ ಪಾಪನಾಶನಂ ॥ ೩೧ ॥

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ಶುಕಶಾಸ್ತ್ರಕಥಾಯಾಶ್ಚ ಕಲಾಂ ನಾರ್ಹಂತಿ ಷೋಡಶೀಂ ॥ ೩೨ ॥

ತಾವತ್ಪಾಪಾಸ ದೇಹೇಽಸ್ಮಿನ್ನಿವಸಂತಿ ತಪೋಧನಾಃ ।
ಯಾವನ್ನ ಶ್ರೂಯತೇ ಸಮ್ಯಕ್ ಶ್ರೀಮದ್ಭಾಗವತಂ ನರೈಃ ॥ ೩೩ ॥

---

೨೯. ಎಲ್ಲಿಯವರೆಗೂ ಶುಕನ ಶಾಸ್ತ್ರವಾದ ಭಾಗವತವು ಕ್ಷಣಕಾಲವಾದರೂ ಕಿವಿಯಲ್ಲಿ ಬೀಳುವುದಿಲ್ಲವೋ ಅಲ್ಲಿಯವರೆಗೂ ಅಜ್ಞಾನದಿಂದ ಮನುಷ್ಯನು ಈ ಸಂಸಾರ ಚಕ್ರದಲ್ಲಿ ಸುತ್ತುತ್ತಿರುತ್ತಾನೆ.

೩೦. ಬಹಳವಾದ ವೇದಗಳಿಂದಲಾಗಲೀ ಶಾಸ್ತ್ರಗಳಿಂದಲಾಗಲೀ ಪುರಾಣಗಳಿಂದಾಗಲೀ ಪ್ರಯೋಜನವಿಲ್ಲವು. ಅವೆಲ್ಲವೂ ಜ್ಞಾನದಲ್ಲಿ ನಿಶ್ಚಯವನ್ನು ಕೊಡದೆ ಭ್ರಮೆಯನ್ನುಂಟುಮಾಡುತ್ತವೆ. ಭಾಗವತಶಾಸ್ತ್ರ ಒಂದೇ ಒಂದು ಮುಕ್ತಿಯನ್ನು ಕೊಡುತ್ತ ಗರ್ಜಿಸುತ್ತದೆ.

೩೧. ಭಾಗವತದ ಕಥೆಯು ಯಾರ ಮನೆಯಲ್ಲಿ ನಿತ್ಯವೂ ನಡೆಯುತ್ತದೆಯೋ ಆ ಮನೆಯು ತೀರ್ಥರೂಪವಾದುದು. ಆ ಮನೆಯಲ್ಲಿ ವಾಸಮಾಡುವವರ ಪಾಪವೆಲ್ಲವೂ ನಾಶವಾಗುತ್ತದೆ.

೩೨. ಸಾವಿರ ಅಶ್ವಮೇಧಗಳಾಗಲೀ ನೂರು ವಾಜಪೇಯಗಳಾಗಲೀ ಈ ಶುಕಶಾಸ್ತ್ರವಾದ ಭಾಗವತದ ಹದಿನಾರನೆಯ ಒಂದು ಭಾಗವನ್ನೂ, ಹೋಲಲಾರವು.

೩೩. ಎಲೈ ಋಷಿಗಳಿರಾ! ಎಲ್ಲಿಯುವರೆಗೂ ಭಾಗವತದ ಕಥೆಯನ್ನು ಮನುಷ್ಯನು ಕೇಳುವುದಿಲ್ಲವೋ ಅಲ್ಲಿಯವರೆಗೂ ಈ ದೇಹದಲ್ಲಿ ಪಾಪಗಳು ಗರ್ಜಿಸುತ್ತಿರುತ್ತವೆ ಕೇಳಿದೊಡನೆಯೇ ಅವೆಲ್ಲವೂ ಹೋಗುತ್ತವೆ.

ನ ಗಂಗಾ ನ ಗಯಾ ಕಾಶೀ ಪುಷ್ಕರಂ ನ ಪ್ರಯಾಗಕಂ ।
ಶುಕಶಾಸ್ತ್ರ ಕಥಾಯಾಶ್ಚ ಫಲಂ ನ ಸಮತಾಂ ನಯೇತ್ || ೩೪ ||

ವೇದಾದಿರ್ವೇದಮಾತಾ ಚ ಪೌರುಷಂ ಸೂಕ್ತಮೇವ ಚ ।
ತ್ರಯೀ ಭಾಗವತಂ ಮಂತ್ರೋ ದ್ವಾದಶಾಕ್ಷರ ಏವ ಚ || ೩೫ ||

ದ್ವಾದಶಾತ್ಮಾ ಪ್ರಯಾಗಶ್ಚ ಕಾಲಸ್ಸಂವತ್ಸರಾತ್ಮಕಃ ।
ಬ್ರಾಹ್ಮಣಾಶ್ಚಾಗ್ನಿಹೋತ್ರಂ ಚ ಸುರಭಿರ್ದ್ವಾದಶೀ ತಿಥಿಃ || ೩೬ ||

ತುಲಸೀ ಚ ವಸಂತಶ್ಚ ಪುರುಷೋತ್ತಮ ಏವ ಚ ।
ಏತೇಷಾಂ ತತ್ವತಃ ಪ್ರಾಜ್ಞೈಃ ನ ಪೃಥಗ್ಭಾವ ಇಷ್ಯತೇ || ೩೭ ||

ಯಶ್ಚ ಭಾಗವತಂ ಶಾಸ್ತ್ರಂ ವಾಚಯೇದರ್ಥತೋಽನಿಶಂ ।
ಜನ್ಮಕೋಟಿಕೃತಂ ಪಾಪಂ ನಶ್ಯತೇ ನಾತ್ರ ಸಂಶಯಃ || ೩೮ ||

ಶ್ಲೋಕಾರ್ಧಂ ಶ್ಲೋಕಪಾದಂ ವಾ ಪಠೇದ್ಭಾಗವತಂ ಚ ಯಃ ।
ನಿತ್ಯಂ ಪುಣ್ಯಮವಾಪ್ನೋತಿ ರಾಜಸೂಯಾಶ್ವಮೇಧಯೋಃ || ೩೯ ||

---

೩೪. ಗಂಗೆ, ಕಾಶಿ, ಪುಷ್ಕರ, ಪ್ರಯಾಗ ಇವು ಒಂದೂ ಕೂಡ ಶುಕಶಾಸ್ತ್ರವಾದ ಭಾಗವತದ ಕಥೆಗೆ ಸಮವಾದ ಫಲವನ್ನು ಕೊಡಲಾರವು.

೩೫-೩೭. ವೇದದ ಆದಿಯಾದ ಓಂಕಾರ, ವೇದಮಾತೆಯಾದ ಗಾಯತ್ರೀ, ಪುರುಷಸೂಕ್ತ, ವೇದಗಳು, ಭಾಗವತ, ದ್ವಾದಶಾಕ್ಷರೀಮಂತ್ರ, ಸೂರ್ಯ, ಪ್ರಯಾಗ, ಸಂವತ್ಸರರೂಪವಾದ ಕಾಲ, ಬ್ರಾಹ್ಮಣ, ಅಗ್ನಿಹೋತ್ರ, ಕಾಮಧೇನು, ದ್ವಾದಶೀತಿಥಿ, ತುಳಸಿ, ವಸಂತಮಾಧವ, ಶ್ರೀವಿಷ್ಣು ಇವುಗಳು ತತ್ವಸ್ವರೂಪದಿಂದ ಒಂದೇ ಆಗಿವೆ. ತಿಳಿದವರು ಇವುಗಳಿಗೆ ಭೇದವನ್ನು ಕಲ್ಪಿಸುವುದಿಲ್ಲ.

೩೮. ಯಾವನು ಭಾಗವತಶಾಸ್ತ್ರವನ್ನು ನಿತ್ಯವೂ ಅರ್ಥವತ್ತಾಗಿ ಓದುವನೋ ಅವನ ಕೋಟಿಜನ್ಮಗಳ ಪಾಪವೂ ನಾಶವಾಗುತ್ತದೆ. ಸಂಶಯವಿಲ್ಲ.

೩೯. ಶ್ಲೋಕವನ್ನಾಗಲೀ, ಶ್ಲೋಕದ ಅರ್ಧವನ್ನಾಗಲೀ, ಕೊನೆಗೆ ಶ್ಲೋಕದ ಒಂದು ಪಾದವನ್ನಾಗಲೀ, ಯಾವನು ಓದುತ್ತಾನೆಯೋ ಅವನು ನಿತ್ಯವೂ ರಾಜಸೂಯ ಅಶ್ವಮೇಧಗಳ ಪುಣ್ಯವನ್ನು ಹೊಂದುತ್ತಾನೆ.

ಉಕ್ತಂ ಭಾಗವತಂ ನಿತ್ಯಂ ಕೃತಂ ಚ ಹರಿಚಿಂತನಂ ।
ತುಳಸೀ ಪೋಷಣಂ ಚೈವ ಧೇನೂನಾಂ ಸೇವನಂ ಸಮಂ ॥ ೪೦ ॥

ಅಂತಕಾಲೇ ತು ಯೇನೈವ ಶ್ರೂಯತೇ ಶುಕಶಾಸ್ತ್ರವಾಕ್ ।
ಪ್ರೀತ್ಯಾ ತಸ್ಯೈವ ವೈಕುಂಠಂ ಗೋವಿಂದೋಪಿ ಪ್ರಯಚ್ಛತಿ ॥ ೪೧ ॥

ಪ್ರೌಷ್ಠಪದ್ಯಾಂ ಚ ರಾಕಾಯಾಂ ಭಕ್ತಿಯುಕ್ತೇನ ಚೇತಸಾ ।
ಹೇಮಸಿಂಹಯುತಂ ಚೈತದ್ವೈಷ್ಣವಾಯ ದದಾತಿ ಚ ।
ಕೃಷ್ಣೇನ ಸಹ ಸಾಯುಜ್ಯಂ ಸ ಪುಮಾಂಲ್ಲಭತೇ ಧ್ರುವಂ ॥ ೪೨ ॥

ಆಜನ್ಮಮಾತ್ರಮಪಿ ಯೇನ ಶಠೇನ ಕಿಂಚಿತ್
ಚಿತ್ತೇ ವಿಧಾಯ ಶುಕಶಾಸ್ತ್ರಕಥಾ ನ ಪೀತಾ ।
ಚಾಂಡಾಲವಚ್ಚ ಖರವತ್ಖಲು ತೇನ ನೀತಂ
ಮಿಥ್ಯಾ ಸ್ವಜನ್ಮ ಜನನೀಜನದುಃಖಭಾಜಾ ॥ ೪೩ ॥

---

೪೦. ಭಾಗವತವನ್ನು ಓದುವುದು, ಹರಿಯನ್ನು ಸ್ಮರಿಸುವುದು, ತುಳಸಿಯನ್ನು ಬೆಳಸಿ ಕಾಪಾಡುವುದು, ಗೋಸೇವೆ ಮಾಡುವುದು, ಇವೆಲ್ಲವೂ ಸಮವು ಎಂದು ಹೇಳಿದೆ.

೪೧. ಪ್ರಾಣಹೋಗುವಾಗ ಭಾಗವತದ ವಾಣಿಯನ್ನು ಕೇಳಿದರೆ ಅವನಿಗೆ ಶ್ರೀಕೃಷ್ಣನು ಪ್ರೀತಿಯಿಂದ ವೈಕುಂಠವನ್ನು ಕೊಡುತ್ತಾನೆ.

೪೨. ಭಾದ್ರಪದ ಮಾಸದ ಹುಣ್ಣಿಮೆಯಲ್ಲಿ ಭಕ್ತಿಯಿಂದ ಕೂಡಿದ ಮನಸ್ಸಿನಿಂದ ಚಿನ್ನದ ಸಿಂಹವನ್ನು ಮಾಡಿಸಿ ಈ ಪುಸ್ತಕದ ಜೊತೆಯಲ್ಲಿ ವೈಷ್ಣವನಿಗೆ ಕೊಟ್ಟರೆ ಅವನು ಬಹು ಬೇಗನೆ ಕೃಷ್ಣನೊಡನೆ ಸಾಯುಜ್ಯವನ್ನು ಹೊಂದುತ್ತಾನೆ. ನಿಶ್ಚಯವು.

೪೩. ಹುಟ್ಟಿದಂದಿನಿಂದ ಸಾಯುವವರೆಗೂ ಮನಸ್ಸಿನಲ್ಲಿ ಏನನ್ನೋ ತಂದುಕೊಂಡು ಯಾವ ಅಯೋಗ್ಯನು ಶುಕಶಾಸ್ತ್ರವಾದ ಭಾಗವತವನ್ನು ಕೇಳದೆ ಕಾಲಕಳೆಯುವನೋ ಅವನು ಚಂಡಾಲನಂತೆಯೂ ಕತ್ತೆಯಂತೆಯೂ ತನ್ನ ಜನ್ಮವನ್ನು ವ್ಯರ್ಥವಾಗಿ ಕಳೆದು ತಾನು ಹುಟ್ಟಿದ ತಾಯಿಯ ಹೊಟ್ಟೆಗೆ ಮಾತ್ರ ದುಃಖವನ್ನುಂಟುಮಾಡುತ್ತಾನೆ. ಅಂತಹವನಿಂದ ತನ್ನ ಜನ್ಮ ಸಾರ್ಥಕ್ಯವೇನೂ ಹೊಂದಲ್ಪಡುವುದಿಲ್ಲ.

ಜೀವಚ್ಛವೋ ನಿಗದಿತಃ ಸ ತು ಪಾಪಕರ್ಮಾ
ಯೇನ ಶ್ರುತಂ ಶುಕಕಥಾವಚನಂ ನ ಕಿಂಚಿತ್ ।
ಧಿಕ್ತಂ ನರಂ ಪಶುಸಮಂ ಭುವಿ ಭಾರರೂಪಂ
ಏವಂ ವದಂತಿ ದಿವಿ ದೇವಗಣಾಶ್ಚ ಮುಖ್ಯಾಃ ॥ ೪೪ ॥

ದುರ್ಲಭೈವ ಕಥಾ ಲೋಕೇ ಶ್ರೀಮದ್ಭಾಗವತೋದ್ಭವಾ ।
ಕೋಟಿಜನ್ಮಸಮುತ್ಥೇನ ಪುಣ್ಯೇನೈವ ತು ಲಭ್ಯತೇ ॥ ೪೫ ॥

ತೇನ ಯೋಗನಿಧೇ ಧೀಮನ್ ಶ್ರೋತವ್ಯಾ ಸಾ ಪ್ರಯತ್ನತಃ ।
ದಿನಾನಾಂ ನಿಯಮೋ ನಾಸ್ತಿ ಸರ್ವದಾ ಶ್ರವಣಂ ಮತಂ ॥ ೪೬ ॥

ಸತ್ಯೇನ ಬ್ರಹ್ಮಚರ್ಯೇಣ ಸರ್ವದಾ ಶ್ರವಣಂ ಮತಂ ।
ಅಶಕ್ಯತ್ವಾತ್ಕಲೌ ಬೋಧ್ಯೋ ವಿಶೇಷೋತ್ರ ಶುಕಾಜ್ಞಯಾ ॥ ೪೭ ॥

---

೪೪. ಯಾವನು ಶುಕನ ಕಥೆಯಾದ ಭಾಗವತವನ್ನು ಸ್ವಲ್ಪವೂ ಕೇಳುವುದಿಲ್ಲವೋ ಅವನು ಜೀವಿಸಿರುವ ಹೆಣವು. ಮತ್ತು ಪಾಪಿಯು ಭೂಮಿಗೆ ಭಾರರೂಪನಾದ ಪಶುವಾದ ಆ ಮನುಷ್ಯನನ್ನು ನಿಂದಿಸು. ಎಂದಾಗಿ ದೇವಲೋಕದಲ್ಲಿ ದೇವತೆಗಳೆಲ್ಲರೂ ಹೇಳುತ್ತಾರೆ.

೪೫. ಶ್ರೀಮದ್ಭಾಗವತದ ಕಥೆಯು ಭೂಮಿಯಲ್ಲಿ ದುರ್ಲಭವು. ಅದು ಕೋಟಿ ಜನ್ಮಗಳಿಂದ ಮಾಡಿದ ಪುಣ್ಯದಿಂದ ಮಾತ್ರವೇ ಸಿಕ್ಕತಕ್ಕದ್ದು.

೪೬. ಯೋಗನಿಧಿಯಾದ ಬುದ್ಧಿವಂತನಾದ ಎಲೈ ನಾರದನೆ! ಆ ಕಥೆಯನ್ನು ಪ್ರಯತ್ನಪಟ್ಟು ಕೇಳು. ಅದಕ್ಕೆ ದಿನಗಳ ನಿಯಮವೇನೂ ಇಲ್ಲ. ಯಾವಾಗಲೂ ಕೇಳಬಹುದು.

೪೭. ಸತ್ಯದಿಂದಲೂ ಬ್ರಹ್ಮಚರ್ಯದಿಂದಲೂ ಯಾವಾಗಲೂ ಕೇಳಬಹುದು. ಈ ಕಲಿಯುಗದಲ್ಲಿ ಸಾಧ್ಯವಿಲ್ಲದಿರುವುದರಿಂದ ಶುಕನ ಅಪ್ಪಣೆಯಂತೆ ಮುಂದೆ ಹೇಳುವ ವಿಶೇಷವನ್ನು ಮನಸ್ಸಿನಲ್ಲಿಟ್ಟುಕೋ.

ಮನಸಶ್ಚಾ ಜಯಾದ್ರೋಗಾತ್ಪುಂಸೋ ಚೈವಾಯುಷಃ ಕ್ಷಯಾತ್ ।
ಕಲೇರ್ದೋಷಬಹುತ್ವಾಚ್ಚ ಸಪ್ತಾಹಶ್ರವಣಂ ಮತಂ ॥ ೪೮ ॥

ಮನೋವೃತ್ತಿಜಯಶ್ಚೈವ ನಿಯಮಾಚರಣಂ ತಥಾ ।
ದೀಕ್ಷಾಂ ಕರ್ತುಮಶಕ್ಯಂ ಸ್ಯಾತ್ಸಪ್ತಾಹಶ್ರವಣಂ ಯತಃ ॥ ೪೯ ॥

ಶ್ರದ್ಧಾತಃ ಶ್ರವಣೇ ನಿತ್ಯಮಾದ್ಯಂತಾವಧಿ ಯತ್ಫಲಂ ।
ತತ್ಫಲಂ ಶುಕದೇವೇನ ಸಪ್ತಾಹಶ್ರವಣೇ ಕೃತಂ ॥ ೫೦ ॥

ಯತ್ಫಲಂ ನಾಸ್ತಿ ತಪಸಾ ನ ಯೋಗೇನ ಸಮಾಧಿನಾ ।
ಅನಾಯಾಸೇನ ತತ್ಸರ್ವಂ ಸಪ್ತಾಹಶ್ರವಣೇ ಲಭೇತ್ ॥ ೫೧ ॥

ಯಜ್ಞಾದ್ಗರ್ಜತಿ ಸಪ್ತಾಹಃ ಸಪ್ತಾಹೋ ಗರ್ಜತಿ ವ್ರತಾತ್ ।
ತಪಸೋ ಗರ್ಜತಿ ಪ್ರೋಚ್ಚೈಸ್ತೀರ್ಥಾನ್ನಿತ್ಯಂ ಹಿ ಗರ್ಜತಿ ॥ ೫೨ ॥

---

೪೮. ಇಂದ್ರಿಯಗಳನ್ನು ಜಯಿಸಲಾಗದುದರಿಂದಲೂ ರೋಗಗಳ ತೊಂದರೆಯಿಂದಲೂ ಆಯಸ್ಸು ಬಹಳವಾಗಿಲ್ಲದೆ ಕ್ಷಯಿಸುತ್ತಿರುವುದರಿಂದಲೂ ಅಂತು ಕಲಿಯಲ್ಲಿ ದೋಷಗಳು ಬಹುವಾಗಿರುವುದರಿಂದ ಏಳು ದಿನಗಳಲ್ಲಿ ಕೇಳಬೇಕೆಂದು ನಿಯಮವನ್ನು ಮಾಡಿದ್ದಾನೆ.

೪೯. ಮನಸ್ಸನ್ನು ಜಯಿಸಲಾರದೆ ನಿಯಮಗಳನ್ನು ಆಚರಿಸಲಾರದೆ ದೀಕ್ಷೆಯನ್ನು ಬಹುಕಾಲ ಮಾಡಲಾರರಾದ್ದರಿಂದ ಏಳು ದಿನಗಳಲ್ಲಿ ಕೇಳುವ ನಿಯಮವನ್ನು ಮಾಡಿದ್ದಾನೆ.

೫೦. ಶ್ರದ್ಧೆಯಿಂದ ನಿತ್ಯವೂ ಮೊದಲಿನಿಂದ ಕೊನೆಯವರೆಗೂ ಕೇಳಿದರೆ ಯಾವ ಫಲವು ಬರುತ್ತದೆಯೊ ಆ ಫಲವು ಈ ಏಳು ದಿನಗಳು ಕೇಳಿದರೆ ಬರುತ್ತದೆಂದು ಶುಕದೇವನು ನಿಯಮಮಾಡಿದ್ದಾನೆ.

೫೧. ತಪಸ್ಸಿನಿಂದಲಾಗಲೀ ಯೋಗ ಸಮಾಧಿಯಿಂದಾಗಲೀ ಬರುವ ಫಲಕ್ಕಿಂತಲೂ ಹೆಚ್ಚು ಫಲವು ಶ್ರಮವಿಲ್ಲದೇನೇ ಈ ಏಳುದಿನಗಳು ಕೇಳುವುದರಿಂದ ಬರುತ್ತದೆ.

೫೨-೫೩ ಈ ಸಪ್ತಾಹ ಶ್ರವಣವು ತಾನು ಯಜ್ಞಕ್ಕಿಂತಲೂ ಶ್ರೇಷ್ಠವೆಂದು ಕೂಗುತ್ತದೆ. ವ್ರತಕ್ಕಿಂತಲೂ ಹೆಚ್ಚಿನದೆಂದು ಸಾರುತ್ತದೆ. ತಪಸ್ಸಿಗಿಂತಲೂ ನಾನೇ ಮೇಲೆಂದು ಕೂಗಿ ಹೇಳುತ್ತಿದೆ. ತೀರ್ಥಗಳಿಗಿಂತ ನಾನು ಉತ್ತಮವೆಂದು

ಯೋಗಾದ್ಗಜತಿ ಸಪ್ತಾಹೋ ಧ್ಯಾನಾತ್ ಜ್ಞಾನಾಚ್ಚ ಗರ್ಜತಿ ।
ಕಿಂ ಬ್ರೂಮೋ ಗರ್ಜನಂ ತಸ್ಯ ರೇ ರೇ ಗರ್ಜತಿ ಗರ್ಜತಿ ॥ ೩೩ ॥

॥ ಶೌನಕ ಉವಾಚ ॥

ಸಾಶ್ಚರ್ಯಮೇತತ್ಕಥಿತಂ ಕಥಾನಕಂ
ಜ್ಞಾನಾದಿಧರ್ಮಾನ್ವಿಗಣಯ್ಯ ಸಾಂಪ್ರತಂ ।
ನಿಶ್ರೇಯಸಂ ಭಾಗವತಂ ಪುರಾಣಂ
ತಾವತ್ಕುತೋಯೋಗವಿದಾದಿಸೂಚಕಂ ॥ ೩೪ ॥

॥ ಸೂತ ಉವಾಚ ॥

ಯದಾ ಕೃಷ್ಣೋ ಧರಾಂ ತ್ಯಕ್ತ್ವಾ ಸ್ವಪದಂ ಗಂತುಮುದ್ಯತಃ ।
ಏಕಾದಶೇ ಪರಿಶ್ರುತ್ಯಾಪ್ಯುದ್ಧವೋ ವಾಕ್ಯಮಬ್ರವೀತ್ ॥ ೩೫ ॥

॥ ಉದ್ಧವ ಉವಾಚ ॥

ತ್ವಂ ತು ಯಾಸ್ಯಸಿ ಗೋವಿಂದ ಭಕ್ತಕಾರ್ಯಂ ವಿಧಾಯ ಚ ।
ಮಚ್ಚಿತ್ತೇ ಮಹತೀ ಚಿಂತಾ ತಾಂ ಶ್ರುತ್ವಾ ಸುಖಮಾವಹ ॥ ೩೬ ॥

---

ಗರ್ಜಿಸುತ್ತದೆ. ಯೋಗ ಧ್ಯಾನ ಜ್ಞಾನಗಳಿಗಿಂತಲೂ ನಾನೇ ಮೇಲೆಂದು ಈ ಸಪ್ತಾಹವು ಎಲ್ಲಾ ಕಡೆಯಲ್ಲೂ ಹೇಳುತ್ತಿದೆ. ಅದರ ಕೂಗನ್ನು ಏನೆಂದು ಹೇಳೋಣ! ಅದು ಬಹಳವಾಗಿ ಕೂಗುತ್ತದೆ.

೩೪. ಶೌನಕನು ಹೇಳಿದನು–ಜ್ಞಾನಾದಿ ಧರ್ಮಗಳನ್ನು ಇದು ತಿರಸ್ಕರಿಸುತ್ತದೆ. ಎಂದು ನೀನು ವಿಮರ್ಶಿಸಿ ಹೇಳಿದ ಈ ಕಥೆಯು ಆಶ್ಚರ್ಯವಾಗಿದೆ. ಈ ಭಾಗವತ ಪುರಾಣವು ಮೋಕ್ಷಸಾಧಕವಾದುದು. ಯೋಗವನ್ನು ಬಲ್ಲವರೂ ಕೂಡ ಹೀಗೇನೆ ಹೇಳಿದ್ದಾರೆ.

೩೫. ಸೂತನು ಹೇಳಿದನು–ಕೃಷ್ಣನು ಈ ಭೂಮಿಯನ್ನು ಬಿಟ್ಟು ತನ್ನ ಸ್ಥಾನವಾದ ವೈಕುಂಠವನ್ನು ಹೊಂದುವುದಕ್ಕೆ ಏಕಾದಶಿಯದಿನ ಹೊರಟನು. ಅದನ್ನು ಕೇಳಿ ಉದ್ಧವನು ಇಂತೆಂದನು.

೩೬. ಉದ್ಧವನು ಹೇಳಿದನು–ಎಲೈ ಗೋವಿಂದನೆ! ನೀನು ಭಕ್ತರ ಕಾರ್ಯವನ್ನು ಆಗುಮಾಡಿ ಹೊರಡಲನುವಾಗಿದ್ದೀಯೆ! ನನ್ನ ಮನಸ್ಸಿನಲ್ಲಿ ಬಹಳ ದೊಡ್ಡದಾದ ಒಂದು ಚಿಂತೆಯು ಹುಟ್ಟಿದೆ. ಅದನ್ನು ಕೇಳಿ ನನಗೆ ಸುಖವುಂಟಾಗುವಂತೆ ಮಾಡು.

**ಆಗತೋಽಯಂ ಕಲಿರ್ಘೋರೋ ಭವಿಷ್ಯಂತಿ ಪುನಃ ಖಲಾಃ |**
**ತತ್ಸಂಗೇನೈವ ಸಂತೋಪಿ ಗಮಿಷ್ಯನ್ತ್ಯುಗ್ರಮಾಪದಂ ॥ ೫೭ ॥**

**ತದಾ ಭಾರವತೀ ಭೂಮಿಃ ಗೋರೂಪೇಯಂ ಕಮಾಶ್ರಯೇತ್ ।**
**ಅನ್ಯೋ ನ ದೃಶ್ಯತೇ ತ್ರಾತಾ ತ್ವತ್ತಃ ಕಮಲಲೋಚನ ॥ ೫೮ ॥**

**ಅತಸ್ತ್ವಂ ಸ್ವ ದಯಾಂ ಕೃತ್ವಾ ಭಕ್ತವತ್ಸಲ ಮಾ ವ್ರಜ |**
**ಭಕ್ತಾರ್ಥಂ ಸಗುಣೋ ಜಾತೋ ನಿರಾಕಾರೋಪಿ ಚಿನ್ಮಯಃ ॥ ೫೯ ॥**

**ತ್ವದ್ವಿಯೋಗೇನ ತೇ ಭಕ್ತಾಃ ಕಥಂ ಸ್ಥಾಸ್ಯಂತಿ ಭೂತಲೇ |**
**ನಿರ್ಗುಣೋಪಾಸನೇ ಕಷ್ಟಮತಃ ಕಿಂಚಿದ್ವಿಚಾರಯ ॥ ೬೦ ॥**

**॥ ಸೂತ ಉವಾಚ ॥**

**ಇತ್ಯುದ್ಧವವಚಶ್ಶ್ರುತ್ವಾ ಪ್ರಭಾಸೇ ಚಿಂತಯದ್ಧರಿಃ**
**ಭಕ್ತಾವಲಂಬನಾರ್ಥಾಯ ಕಿಂ ವಿಧೇಯಂ ಮಯೇತಿ ಚ ॥ ೬೧ ॥**

---

೫೭. ಈ ಘೋರವಾದ ಕಲಿಯು ಬಂದಿತು. ಮತ್ತೆ ದುಷ್ಟರು ಹುಟ್ಟುತ್ತಾರೆ. ಅವರ ಸಹವಾಸದಿಂದ ಸತ್ಪುರುಷರೂ ಕೂಡ ಕೆಟ್ಟವರಾಗುತ್ತಾರೆ.

೫೮. ಆಗ ಭಾರವನ್ನು ಹೊತ್ತು ಬೇಸರಹೊಂದಿದ ಈ ಭೂಮಿಯು ಗೋರೂಪವನ್ನು ಹೊಂದಿ ಮತ್ತೆ ಯಾರನ್ನು ಆಶ್ರಯಿಸೀತು? ಎಲೈ ಕಮಲಾಕ್ಷನೆ! ನಿನ್ನನ್ನು ಬಿಟ್ಟರೆ ಮತ್ತೊಬ್ಬನು ರಕ್ಷಕನು ಕಾಣುತ್ತಿಲ್ಲವಲ್ಲ!

೫೯. ಎಲೈ ಭಕ್ತವತ್ಸಲನೆ! ಆದುದರಿಂದ ಭಕ್ತರಲ್ಲಿ ದಯೆಯನ್ನಿಟ್ಟು ನೀನು ಹೋಗಬೇಡ. ನೀನು ಗುಣರಹಿತನೂ ಆಕಾರವಿಲ್ಲದವನೂ ಚಿನ್ಮಯನೂ ಆಗಿದ್ದರೂ ಭಕ್ತರ ಹಿತಕ್ಕೋಸ್ಕರ ಸಾಕಾರವಾಗಿ ಅವತರಿಸಿದ್ದೀಯೆ.

೬೦. ನಿನ್ನ ಭಕ್ತರು ನಿನ್ನನ್ನು ಬಿಟ್ಟು ಈ ಭೂಮಿಯಲ್ಲಿ ಹೇಗೆ ಇದ್ದಾರು? ನಿರ್ಗುಣನಾದ ನಿನ್ನನ್ನು ಭಕ್ತರು ಸೇವಿಸುವುದು ಕಷ್ಟವು ಆದುದರಿಂದ ಸ್ವಲ್ಪ ಯೋಚಿಸಿ ನೋಡು.

೬೧. ಸೂತನು ಹೇಳಿದನು–ಈ ರೀತಿಯಾದ ಉದ್ಧವನ ಮಾತನ್ನು ಕೇಳಿ ಹರಿಯು ಆಗ ಪ್ರಭಾಸದಲ್ಲಿ ಭಕ್ತರನ್ನು ಕಾಪಾಡಲು ನಾನು ಏನು ಮಾಡಬೇಕು? ಎಂದು ಯೋಚಿಸಿದನು.

ಸ್ವಕೀಯಂ ಯದ್ಭವೇತ್ತೇಜಸ್ತದ್ಭೈ ಭಾಗವತೇಽದಧಾತ್ ।
ತಿರೋಧಾಯ ಪ್ರವಿಷ್ಟೋಽಯಂ ಶ್ರೀಮದ್ಭಾಗವತಾರ್ಣವಂ ॥ ೬೨ ॥

ತೇನೇಯಂ ವಾಙ್ಮಯೀ ಮೂರ್ತಿಃ ಪ್ರತ್ಯಕ್ಷಾ ವರ್ತತೇ ಹರೇಃ ।
ಸೇವನಾಚ್ಛ್ರವಣಾತ್ಪಾಠಾದ್ದರ್ಶನಾತ್ಪಾಪನಾಶಿನೀ ॥ ೬೩ ॥

ಸಪ್ತಾಹಶ್ರವಣಂ ತೇನ ಸರ್ವೇಭ್ಯೋಽಪ್ಯಧಿಕಂ ಕೃತಂ ।
ಸಾಧನಾನಿ ತಿರಸ್ಕೃತ್ಯ ಕಲೌ ಧರ್ಮೋಽಯಮೀರಿತಃ ॥ ೬೪ ॥

ದುಃಖದಾರಿದ್ರ್ಯದೌರ್ಭಾಗ್ಯಪಾಪಪ್ರಕ್ಷಾಳನಾಯ ಚ ।
ಕಾಮಕ್ರೋಧಜಯಾರ್ಥಂ ಹಿ ಕಲೌ ಧರ್ಮೋಽಯಮೀರಿತಃ ॥ ೬೫ ॥

ಅನ್ಯಥಾ ವೈಷ್ಣವೀ ಮಾಯಾ ದೇವೈರಪಿ ಸುದುಸ್ತ್ಯಜಾ ।
ಕಥಂ ತ್ಯಾಜ್ಯಾ ಭವೇತ್ಪುಂಭಿಃ ಸಪ್ತಾಹೋಽತಃ ಪ್ರಕೀರ್ತಿತಃ ॥ ೬೬ ॥

---

೬೨. ಆಗ ತನ್ನ ತೇಜಸ್ಸನ್ನು ಹರಿಯು ಈ ಭಾಗವತದಲ್ಲಿಟ್ಟನು ಈ ರೀತಿಯಾಗಿ ಮರೆಯಾಗಿ ಹರಿಯು ಭಾಗವತವೆಂಬ ಸಮುದ್ರವನ್ನು ಹೊಕ್ಕನು.

೬೩. ಆದುದರಿಂದ ಈ ಭಾಗವತವು ವಾಗ್ರೂಪಿಯಾದ ಸ್ವಾಮಿಯ ಆಕಾರವು. ಇದು ಪ್ರತ್ಯಕ್ಷವಾಗಿಯೇ ಇರುವುದು. ಇದನ್ನು ಸೇವಿಸುವುದರಿಂದಲೂ ಕೇಳುವುದರಿಂದಲೂ ಹೇಳುವುದರಿಂದಲೂ ನೋಡುವುದರಿಂದಲೂ ಪಾಪಗಳು ಹೋಗುತ್ತವೆ.

೬೪. ಆಗ ಉದ್ಧವನು ಸಪ್ತಾಹ ಶ್ರವಣವನ್ನು ಎಲ್ಲರಿಗಿಂತಲೂ ಹೆಚ್ಚಾಗಿ ಮಾಡಿದನು. ಈ ಕಲಿಯುಗದಲ್ಲಿ ಇತರ ಮೋಕ್ಷಸಾಧನ ಧರ್ಮಗಳಿಗೆಲ್ಲಕ್ಕಿಂತಲೂ ಈ ಭಾಗವತದ ಶ್ರವಣವೇ ಧರ್ಮವೆಂದು ಹೇಳಲ್ಪಟ್ಟಿದೆ.

೬೫. ದುಃಖ ದಾರಿದ್ರ್ಯ ದೌರ್ಭಾಗ್ಯ ಪಾಪ ಇವುಗಳ ನಾಶನ, ಕಾಮ ಕ್ರೋಧಗಳ ಜಯ, ಇವುಗಳನ್ನು ಮಾಡುವುದಕ್ಕೆ ಕಲಿಯುಗದಲ್ಲಿ ಇದು ಒಂದು ಸಾಧನವು.

೬೬. ಅದನ್ನು ಕೇಳದಿದ್ದರೆ ವೈಷ್ಣವೀಮಾಯೆಯು ದೇವತೆಗಳನ್ನೇ ಬಿಡದಿರುವಾಗ್ಯೆ ಮನುಷ್ಯರು ಹೇಗೆ ಕಳೆದುಕೊಂಡಾರು ? ಆದುದರಿಂದಲೇ ಈ ಸಪ್ತಾಹವನ್ನು ಹೇಳಿದ್ದಾರೆ.

|| ಸೂತ ಉವಾಚ ||

ಏವಂ ನಗಾಹಶ್ರವಣೋರುಧರ್ಮೇ
ಪ್ರಕಾಶ್ಯಮಾನೇ ಋಷಿಭಿಸ್ಸಭಾಯಾ |
ಆಶ್ಚರ್ಯಮೇಕಂ ಸಮಭೂತ್ತದಾನೀಂ
ತದುಚ್ಯತೇ ಸಂಶೃಣು ಶೌನಕ ತ್ವಂ || ೬೭ ||

ಭಕ್ತಿಃ ಸುತೌ ತೌ ತರುಣೌ ಗೃಹೀತ್ವಾ
ಪ್ರೇಮೈಕರೂಪಾ ಸಹಸಾವಿರಾಸೀತ್ |
ಶ್ರೀಕೃಷ್ಣ ಗೋವಿಂದ ಹರೇ ಮುರಾರೇ
ನಾಥೇತಿ ನಾಮಾನಿ ಮುಹುರ್ವದಂತೀ || ೬೮ ||

ತಾಂ ಚಾಗತಾಂ ಭಾಗವತಾರ್ಥಭೂಷಾಂ |
ಸುಚಾರುವೇಷಾಂ ದದೃಶುಃ ಸದಸ್ಯಾಃ |
ಕಥಂ ಪ್ರವಿಷ್ಟಾ ಕಥಮಾಗತೇಯಂ
ಮಧ್ಯಂ ಮುನೀನಾಮಿತಿ ತರ್ಕಯನ್ತಃ || ೬೯ ||

---

೬೭. ಸೂತನು ಹೇಳಿದನು–ಎಲೈ ಶೌನಕನೆ! ಈ ರೀತಿಯಾಗಿ ಭಾಗವತ ಸಪ್ತಾಹ ಶ್ರವಣಧರ್ಮವನ್ನು ಆ ಸಭೆಯಲ್ಲಿ ಋಷಿಗಳು ಹೇಳುತ್ತಿರಲು ಅಲ್ಲಿ ಒಂದು ಆಶ್ಚರ್ಯವು ನಡೆಯಿತು. ಅದನ್ನು ಹೇಳುತ್ತೇನೆ. ಕೇಳು.

೬೮. ಆಗ ಭಕ್ತಿಯು ತರುಣರಾದ ಇಬ್ಬರು ಮಕ್ಕಳನ್ನು ಕರೆದುಕೊಂಡು ಶ್ರೀಕೃಷ್ಣ ಗೋವಿಂದ ಹರೆ ಮುರಾರೆ ನಾಥ ಎಂಬ ಹೆಸರುಗಳನ್ನು ಬಾರಿ ಬಾರಿಗೂ ಹೇಳುತ್ತ ಆ ಸಭೆಗೆ ಬಂದಳು.

೬೯. ಭಾಗವತಾರ್ಥಕ್ಕೆ ಭೂಷಣಳಾದ ಒಳ್ಳೆಯ ವೇಷವುಳ್ಳ ಆಕೆಯು ಆ ಸಭೆಗೆ ಬಂದದ್ದನ್ನು ನೋಡಿ ಆ ಸಭೆಯಲ್ಲಿದ್ದವರು ಇವಳು ಹೇಗೆ ಪ್ರವೇಶಿಸಿದಳು? ಇಲ್ಲಿಗೆ ಹೇಗೆ ತಾನೆ ಬಂದಳು? ಈ ಮುನಿಗಳ ಮಧ್ಯಕ್ಕೆ ಬರಲು ಕಾರಣವೇನು? ಎಂಬುದಾಗಿ ಯೋಚಿಸುತ್ತಿದ್ದರು.

ಊಚುಃ ಕುಮಾರಾ ವಚನಂ ತದಾನೀಂ
ಕಥಾರ್ಥತೋ ನಿಷ್ಪತಿತಾಽಧುನೇಯಂ ।
ಏವಂ ಗಿರಃ ಸಾ ಸಸುತಾ ನಿಶಮ್ಯ
ಸನತ್ಕುಮಾರಂ ನಿಜಗಾದ ನಾಮ್ರಾ ॥ ೭೦ ॥

॥ ಭಕ್ತಿರುವಾಚ ॥

ಭವದ್ಭಿರದ್ಯೈವ ಕೃತಾಸ್ಮಿ ಪುಷ್ಟಾ
ಕಲಿಪ್ರನಷ್ಟಾಪಿ ಕಥಾರಸೇನ ।
ಕ್ವಾಹಂ ತು ತಿಷ್ಠಾಮ್ಯಧುನಾ ಬ್ರುವಂತು
ಬ್ರಾಹ್ಮಾ ಇಮಾಂ ತಾಂ ಗಿರಿಮೂಚಿರೇ ತೇ ॥ ೭೧ ॥

॥ ಸನತ್ಕುಮಾರಾ ಊಚುಃ ॥

ಭಕ್ತಿಸ್ತು ಗೋವಿಂದಸುರೂಪಧಾತ್ರೀ
ಪ್ರೇಮೈಕಕರ್ತ್ರೀ ಭವರೋಗಹರ್ತ್ರೀ ।
ಸಾ ತ್ವಂ ಚ ತಿಷ್ಠಸ್ವ ಸುಧೈರ್ಯಸಂಶ್ರಯಾ
ನ್ನಿರಂತರಂವೈಷ್ಣವಮಾನಸಾಲಯೇ
ತತೋಽಪಿ ದೋಷಾಃ ಕಲಿಜಾ ಇಮೇ ತ್ವಾಂ
ದ್ರಷ್ಟುಂ ನ ಶಕ್ತಾಃ ಪ್ರಭವೋಽಪಿ ಲೋಕೇ ॥ ೭೨ ॥

---

೭೦. ಆಗ ಸನತ್ಕುಮಾರರು ಈ ಕಥೆಯ ಅರ್ಥದಿಂದ ಈಗ ಇವರು ಮೂವರು ಬಂದರೆಂದು ಹೇಳಿದರು. ಈ ಮಾತನ್ನು ಕೇಳಿ ಆ ಭಕ್ತಿಯು ಸನತ್ಕುಮಾರರನ್ನು ಕುರಿತು ಇಂತೆಂದಳು.

೭೧ ಭಕ್ತಿಯು ಹೇಳಿದಳು–ನಾನು ಕಲಿಯಿಂದ ನಾಶವಾದಾಗ್ಯೂ ನಿಮ್ಮಗಳ ಈ ಭಾಗವತದ ಕಥೆಯ ರಸದಿಂದ ಪುಷ್ಟಳಾಗಿದ್ದೇನೆ. ಎಲೈ ಬ್ರಾಹ್ಮಣರಿರಾ ! ಈಗ ನಾನು ಎಲ್ಲಿ ಇರಲಿ ? ಹೇಳಿರಿ. ಎನ್ನಲು ಆಗ ಸನತ್ಕುಮಾರರು ಇಂತೆಂದರು.

೭೨. ಸನತ್ಕುಮಾರರು ಹೇಳಿದರು-ಎಲೈ ಭಕ್ತಿಯೆ ! ನೀನಾದರೋ ಗೋವಿಂದನ ರೂಪವನ್ನೇ ಹೊಂದಿರುವವಳು. ಪ್ರೇಮವನ್ನು ಉಂಟುಮಾಡುವವಳು. ಸಂಸಾರವೆಂಬ ರೋಗವನ್ನು ನಾಶಮಾಡುವವಳು. ಅಂತಹ ನೀನು ಧೈರ್ಯವನ್ನು ತಂದುಕೊಂಡು ವೈಷ್ಣವರ ಮನಸ್ಸೆಂಬ ಮನೆಯಲ್ಲಿ ಯಾವಾಗಲೂ ಇರು ಆಗ ಕಲಿಯ ದೋಷಗಳು ಲೋಕದಲ್ಲಿದ್ದರೂ ನಿನ್ನನ್ನು ನೋಡಲಾರವು.

|| ಸೂತ ಉವಾಚ ||

ಏವಂ ತದಾಜ್ಞಾವಸರೇಪಿ ಭಕ್ತಿಸ್ತದಾ ನಿಷಣ್ಣಾ ಹರಿದಾಸಚಿತ್ತೇ || ೭೩ ||

ಸಕಲಭುವನಮಧ್ಯೇ ನಿರ್ಧನಾಸ್ತೇಪಿ ಧನ್ಯಾ
ನಿವಸತಿಹೃದಿ ಯೇಷಾಂ ಶ್ರೀಹರೇಭಕ್ತಿರೇಕಾಃ ।
ಹರಿರಪಿ ನಿಜಲೋಕಂ ಸರ್ವಥಾ ತಂ ವಿಹಾಯ
ಪ್ರವಿಶತಿ ಹೃದಿ ಯೇಷಾಂ ಭಕ್ತಿಸೂತ್ರೋಪನಿದ್ಧಃ || ೭೪ ||

ಬ್ರೂಮೋದ್ಯ ತೇ ಕಿಮಧಿಕಂ ಮಹಿಮಾನಮೇವ
ಬ್ರಹ್ಮಾತ್ಮಕಸ್ಯ ಭುವಿ ಭಾಗವತಾಭಿಧಸ್ಯ ।
ಯತ್ಸಂಶ್ರಯಾನ್ನಿಗದಿತೇ ಲಭತೇ ಸುವಕ್ತಾ
ಶ್ರೋತಾಪಿ ಕೃಷ್ಣಸಮತಾಮಲಮನ್ಯಧರ್ಮೈಃ || ೭೫ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಭಾಗವತ ಮಾಹಾತ್ಮ್ಯೇ ಭಕ್ತಿ ಕಷ್ಟ ನಿವರ್ತನಂ ನಾಮ ಏಕನವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೭೩. ಸೂತನು ಹೇಳಿದನು-ಈರೀತಿ ಹೇಳಲು ಭಕ್ತಿಯು ಅವರ ಮಾತಿನಂತೆ ಆ ಹರಿದಾಸರ ಚಿತ್ತದಲ್ಲಿ ನಿಂತಳು.

೭೪-೭೫. ಯಾರ ಹೃದಯದಲ್ಲಿ ಭಕ್ತಿಯೊಂದೇ ವಾಸಿಸುತ್ತದೆಯೋ ಬಡವರಾದರೂ ಈ ಪ್ರಪಂಚದಲ್ಲಿ ಅವರೇ ಧನ್ಯರು. ಆಗ ಹರಿಯೂ ಕೂಡ ತನ್ನ ಲೋಕವನ್ನು ಬಿಟ್ಟು ಭಕ್ತಿಯಲ್ಲಿರುವ ಸ್ನೇಹದಿಂದ ಅವಳು ವಾಸ ಮಾಡುವವರ ಮನಸ್ಸಿನಲ್ಲಿಯೇ ನುಗ್ಗಿ ವಾಸಮಾಡುತ್ತಾನೆ. ಭೂಮಿಯಲ್ಲಿ ಬ್ರಹ್ಮಾತ್ಮಕವಾದ ಭಾಗವತವೆಂಬುದರ ಮಹಿಮೆಯನ್ನು ಎಷ್ಟು ಹೆಚ್ಚೆಂದು ಹೇಳುವುದಕ್ಕೆ ಸಾಧ್ಯವು? ಈ ಭಾಗವತವನ್ನು ಹೇಳಿದವನೂ ಕೇಳಿದವನೂ ಕೂಡ ಕೃಷ್ಣನಿಗೆ ಸಮವಾಗಿರುವಿಕೆಯನ್ನು ಹೊಂದುತ್ತಾರೆ. ಎಂದಮೇಲೆ ಮಿಕ್ಕ ಧರ್ಮಗಳೊಂದೂ ಪ್ರಯೋಜನವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಭಾಗವತ ಮಹಿಮೆಯಲ್ಲಿ ಭಕ್ತಿ ಕಷ್ಟ ನಿವರ್ತನ ಎಂಬ ನೂರ ತೊಂಭತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ
## ॥ ದ್ವಿನವತ್ಯಧಿಕಶತತಮೋಽಧ್ಯಾಯಃ ॥



**॥ ಸೂತ ಉವಾಚ ॥**

**ಅಥ ವೈಷ್ಣವಚಿತ್ತೇಷು ದೃಷ್ಟ್ವಾ ಭಕ್ತಿಮಲೌಕಿಕೀಂ ।**
**ನಿಜಲೋಕಂ ಪರಿತ್ಯಜ್ಯ ಭಗವಾನ್ ಭಕ್ತವತ್ಸಲಃ ॥ ೧ ॥**

**ವನಮಾಲೀ ಘನಶ್ಯಾಮಃ ಪೀತವಾಸಾ ಮನೋಹರಃ ।**
**ಕಾಂಚೀಕಲಾಪರುಚಿರೋ ಲಸನ್ಮುಕುಟಮಂಡಲಃ ॥ ೨ ॥**

**ತ್ರಿಭಂಗಲಲಿತಶ್ಚಾರುಃ ಕೌಸ್ತುಭೇನವಿರಾಜಿತಃ ।**
**ಕೋಟಿಮನ್ಮಥಲಾವಣ್ಯೋ ಹರಿಚಂದನಚರ್ಚಿತಃ ॥ ೩ ॥**

---

### ನೂರ ತೊಂಭತ್ತೆರಡನೆಯ ಅಧ್ಯಾಯವು



೧-೪. ಸೂತನು ಹೇಳಿದನು–ಇದೆಲ್ಲವನ್ನೂ ನೋಡಿ ಭಕ್ತವತ್ಸಲನೂ ವನಮಾಲಿಯೂ ನೀಲಮೇಘಶ್ಯಾಮನೂ ಶುಕ್ಲಾಂಬರನೂ ಸುಂದರನೂ ಸೊಂಟಕ್ಕೆ ಕಿರುಗೆಜ್ಜೆಯನ್ನು ಕಟ್ಟಿಕೊಂಡಿರುವವನೂ ಮುಕುಟಧಾರಿಯೂ ಒಂದು ಕಾಲನ್ನು ಬಲವಾಗಿ ಊರಿಕೊಂಡು ಮತ್ತೊಂದು ಕಾಲಿನ ಹೆಬ್ಬೆರಳಿನಿಂದ ನೆಲವನ್ನೂರಿಕೊಂಡು ತ್ರಿಭಂಗವೆಂಬ ರೀತಿಯಿಂದ ನಿಂತಿರುವವನೂ, ಕೌಸ್ತುಭವನ್ನು ಧರಿಸಿರುವವನೂ, ಕೋಟಿ ಮನ್ಮಥರಂತೆ ಸುಂದರನಾದವನೂ, ಹರಿಚಂದನವನ್ನು ಪೂಸಿರುವವನೂ,

ಪರಮಾನಂದಚಿನ್ಮೂರ್ತಿರ್ಮಧುರೋ ಮುರಳೀಧರಃ ।
ಆವಿವೇಶ ಸ್ವಭಕ್ತಾನಾಂ ಹೃದಯಾನ್ಯಮಲಾನಿ ಚ ॥ ೪ ॥

ವೈಕುಂಠವಾಸಿನೋ ಯೇ ಚ ವೈಷ್ಣವಾ ಉದ್ಧವಾದಯಃ ।
ತತ್ಕಥಾಶ್ರವಣಾರ್ಥಂ ತೇ ಗೂಢರೂಪೇಣ ಸಂಸ್ಥಿತಾಃ ॥ ೫ ॥

ತದಾ ಜಯ ಜಯಾರಾವೋ ರಸಪುಷ್ಟಿರಲೌಕಿಕೀ ।
ಚೂರ್ಣಪ್ರಸೂನವೃಷ್ಟಿಶ್ಚ ಮುಹುಃ ಶಂಖರವೋಽಪ್ಯಭೂತ್ ॥ ೬ ॥

ತತ್ಸಭಾಸಂಸ್ಥಿತಾನಾಂ ಚ ದೇಹಗೇಹಾತ್ಮವಿಸ್ಮೃತಿಂ ।
ದೃಷ್ಟ್ವಾ ಚ ತನ್ಮಯಾವಸ್ಥಾಂ ನಾರದೋ ವಾಕ್ಯಮಬ್ರವೀತ್ ॥ ೭ ॥

---

ಆನಂದಮಯನಾದವನೂ ಚಿದ್ರೂಪನಾದವನೂ ಕೊಳಲನ್ನು ಹಿಡಿದು ಕೊಂಡಿರುವವನೂ ಆದ ಆ ಶ್ರೀಕೃಷ್ಣನು ಭಕ್ತರ ಮನಸ್ಸಿನಲ್ಲಿರುವ ಅಲೌಕಿಕವಾದ ಭಕ್ತಿಯನ್ನೂ ಅದು ಪವಿತ್ರವಾಗಿರುವುದನ್ನೂ ನೋಡಿ ಆ ಮನಸ್ಸನ್ನು ಹೊಕ್ಕನು.

೫. ವೈಕುಂಠವಾಸಿಗಳಾದವರೂ ವೈಷ್ಣವರಾದ ಉದ್ಧವಾದಿಗಳೂ ಆ ಕಥೆಯನ್ನು ಕೇಳಲು ಗುಟ್ಟಾಗಿ ಬಂದು ಕುಳಿತರು.

೬. ಆಗ ಎಲ್ಲರೂ ಜಯ ಜಯ ಎಂಬುದಾಗಿ ಕೂಗಿದರು. ಆ ಕಥೆಗೆ ಬಹುವಾದ ರಸಪುಷ್ಟಿಯೂ ಉಂಟಾಯಿತು. ಬುಕ್ಕಿಹಿಟ್ಟು ಹೂಗಳ ಮಳೆಯನ್ನು ಅಲ್ಲಿ ಸುರಿಸಿದರು. ಆಗಾಗ್ಯೆ ಶಂಖದ ಧ್ವನಿಯಾಗುತ್ತಿದ್ದಿತು.

೭. ಆ ಸಭೆಯಲ್ಲಿರುವವರು ದೇಹ ಮತ್ತು ಮನೆಗಳ ವಿಷಯದಲ್ಲಿಯೂ ಜ್ಞಾನವಿಲ್ಲದಂತೆ ಮರೆತುಬಿಟ್ಟರು. ಆ ಸಭೆಯವರೆಲ್ಲರೂ ಹೀಗಾಗಿರುವುದನ್ನು ನೋಡಿ ನಾರದನು ಇಂತೆಂದನು.

॥ ನಾರದ ಉವಾಚ ॥

ಅಲೌಕಿಕೋಽಯಂ ಮಹಿಮಾ ಮುನೀಶ್ವರಾಃ
ಸಪ್ತಾಹಜನ್ಯೋಽದ್ಯ ವಿಲೋಕಿತೋ ಮಯಾ ।
ಮೂಢಾಃ ಶಠಾ ಯೇ ಪಶುಪಕ್ಷಿಣೋಽತ್ರ
ಸರ್ವೇಽಪಿ ನಿಷ್ಪಾಪತಯಾ ವಿಭಾಂತಿ ॥ ೮ ॥

ಅಹೋ ನೃಲೋಕೇ ನನು ನಾಸ್ತಿ ಕಿಂಚಿತ್
ಚಿತ್ತಸ್ಯ ಶೋಧಾಯ ಕಲೌ ಪವಿತ್ರಂ ।
ಅಘೌಘವಿಧ್ವಂಸಕರೀ ಕಥೈವ
ಕಥಾಸಮಾನಂ ಭುವಿ ನಾಸ್ತಿ ಚಾನ್ಯತ್ ॥ ೯ ॥

ಕೇ ಕೇ ವಿಶುದ್ಧ್ಯಂತಿ ವಿದಂತು ಮಹ್ಯಂ
ಸಪ್ತಾಹಯಜ್ಞೇನ ಕಥಾಮಯೇನ ।
ಕೃಪಾಳುಭಿರ್ಲೋಕಹಿತಂ ವಿಚಾರ್ಯ
ಪ್ರಕಾಶಿತಃ ಕೋಽಪಿ ನವೀನಮಾರ್ಗಃ ॥ ೧೦ ॥

---

೮. ಇಲ್ಲಿರುವ ಮೂಢರು, ಶಠರು, ಪಶುಗಳು, ಪಕ್ಷಿಗಳು ಎಲ್ಲರೂ ಕೂಡ ಪಾಪರಹಿತರಾಗಿ ಕಾಣುತ್ತಿದ್ದಾರೆ. ಇದು ಅಲೌಕಿಕವಾದ ಮಹಿಮೆಯು. ಸಪ್ತಾಹದಿಂದ ಉಂಟಾದ ಈ ಮಹಿಮೆಯನ್ನು ನಾನು ನೋಡಿದೆನು.

೯. ಆದುದರಿಂದ ಕಲಿಯುಗದಲ್ಲಿ ಮನಸ್ಸಿನ ಶೋಧನೆಗೋಸ್ಕರ ಈ ಸಪ್ತಾಹವನ್ನು ಬಿಟ್ಟರೆ ಪವಿತ್ರವಾದುದು ಮತ್ತೊಂದಿಲ್ಲ. ಈ ಪಾಪಹಾರಕವಾದ ಕಥೆಗೆ ಸಮವಾದ ಕಥೆಯು ಲೋಕದಲ್ಲಿ ಬೇರೆ ಮತ್ತೊಂದಿಲ್ಲ.

೧೦. ಕಥಾರೂಪವಾದ ಈ ಸಪ್ತಾಹ ಯಜ್ಞದಿಂದ ಯಾರು ಯಾರು ಶುದ್ಧರಾಗಿದ್ದಾರೆಂಬುದು ನನಗೆ ತಿಳಿಯಿತು. ಕೃಪಾವಂತರು ಲೋಕಹಿತವನ್ನು ತಿಳಿದು ಆ ಲೋಕವನ್ನು ಉದ್ಧರಿಸಲು ಪ್ರಕಾಶಿಸಿರುವ ಹೊಸಮಾರ್ಗವು ಇದೊಂದಾಗಿದೆ.

॥ ಕುಮಾರಾ ಊಚುಃ ॥

ಯೇ ಮಾನವಾಃ ಪಾಪಕೃತಸ್ತು ಸರ್ವದಾ
ಸದಾ ದುರಾಚಾರರತಾ ವಿಮಾರ್ಗಾಃ ।
ಕ್ರೋಧಾಗ್ನಿದಗ್ಧಾಃ ಕುಟಿಲಾಶ್ಚ ಕಾಮಿನಃ
ಸಪ್ತಾಹಯಜ್ಞೇನ ಕಲೌ ಪುನಂತಿ ॥ ೧೧ ॥

ಸತ್ಯೇನ ಹೀನಾಃ ಪಿತೃಮಾತೃದೂಷಕಾಃ
ತೃಷ್ಣಾಕುಲಾಶ್ಚಾಶ್ರಮಧರ್ಮವರ್ಜಿತಾಃ ।
ಯೇ ದಾಂಭಿಕಾ ಮತ್ಸರಿಣೋಽಪಿ ಹಿಂಸಕಾಃ
ಸಪ್ತಾಹಯಜ್ಞೇನ ಕಲೌ ಪುನಂತಿ ॥ ೧೨ ॥

ಪಂಚೋಗ್ರಪಾಪಾಶ್ಛಲಛದ್ಮಕಾರಿಣಃ
ಕ್ರೂರಾಃ ಪಿಶಾಚಾ ಇವ ನಿರ್ದಯಾಶ್ಚ ಯೇ ।
ಬ್ರಹ್ಮಸ್ವಪುಷ್ಟಾ ವ್ಯಭಿಚಾರಕಾರಿಣಃ
ಸಪ್ತಾಹಯಜ್ಞೇನ ಕಲೌ ಪುನಂತಿ ॥ ೧೩ ॥

---

೧೧. ಸನತ್ಕುಮಾರರು ಹೇಳಿದರು– ಯಾವ ಮನುಷ್ಯರು ಯಾವಾಗಲೂ ಪಾಪಿಗಳೋ, ದುರಾಚಾರಿಗಳೋ, ಕೆಟ್ಟದಾರಿಯಲ್ಲಿ ಹೋಗುವರೋ, ಕೋಪಿಗಳೋ, ಕಪಟಿಗಳೋ, ಕಾಮಿಗಳೋ ಅವರೆಲ್ಲರೂ ಈ ಸಪ್ತಾಹ ಯಜ್ಞದ ಕಥೆಯಿಂದ ಈ ಕಲಿಯುಗದಲ್ಲಿ ಪವಿತ್ರರಾಗುತ್ತಾರೆ.

೧೨. ಸತ್ಯವನ್ನಾಡದವರೂ, ತಾಯಿತಂದೆಗಳನ್ನು ನಿಂದಿಸುವವರೂ, ಆಸೆಯುಳ್ಳವರೂ, ಆಶ್ರಮ ಧರ್ಮವನ್ನು ಅನುಸರಿಸದವರೂ, ಡಂಭಾಚಾರಿಗಳೂ, ಹೊಟ್ಟೆಕಿಚ್ಚುಪಡುವವರೂ, ಹಿಂಸಕರೂ, ಇವರೆಲ್ಲರೂ ಕೂಡ ಈ ಸಪ್ತಾಹ ಯಜ್ಞದಿಂದ ಕಲಿಯುಗದಲ್ಲಿ ಪವಿತ್ರರಾಗುತ್ತಾರೆ.

೧೩. ಪಂಚಮಹಾಪಾತಕಿಗಳೂ, ಕಪಟಿಗಳೂ, ಕ್ರೂರರಾಗಿ ಪಿಶಾಚಗಳಂತೆ ದಯಾಶೂನ್ಯರಾಗಿ ನಡೆದುಕೊಳ್ಳುವವರೂ, ಬ್ರಹ್ಮಸ್ವತ್ತಿನಿಂದ ಬೆಳೆದವರೂ, ವ್ಯಭಿಚಾರಿಗಳೂ ಈ ಸಪ್ತಾಹ ಯಜ್ಞದಿಂದ ಕಲಿಯುಗದಲ್ಲಿ ಪವಿತ್ರರಾಗುತ್ತಾರೆ.

ಕಾಯೇನ ವಾಚಾ ಮನಸಾಪಿ ಪಾತಕಂ
ನಿತ್ಯಂ ಪ್ರಕುರ್ವಂತಿ ಶಠಾ ಹಠೇನ ಯೇ ।
ಪರಸ್ವಪುಷ್ಟಾ ಮಲಿನಾ ದುರಾಶಯಾಃ
ಸಪ್ತಾಹಯಜ್ಞೇನ ಕಲೌ ಪುನಂತಿ ॥ ೧೪ ॥

॥ ಸೂತ ಉವಾಚ ॥

ಅಥೈವಂ ತುಷ್ಟಚಿತ್ತೇ ತು ನಾರದೇ ದೇವಪೂಜಿತೇ ।
ಪ್ರಸನ್ನಾಸ್ತೇ ಕುಮಾರಾಶ್ಚ ಪುನರೂಚುಶ್ಚ ನಾರದಂ ॥ ೧೫ ॥

॥ ಕುಮಾರಾ ಊಚುಃ ॥

ಅಥ ತೇ ಕೀರ್ತಯಿಷ್ಯಾಮಿ ಇತಿಹಾಸಂ ಪುರಾತನಂ ।
ಯಸ್ಯ ಶ್ರವಣಮಾತ್ರೇಣ ಪಾಪಹಾನಿಃ ಪ್ರಜಾಯತೇ ॥ ೧೬ ॥

ತುಂಗಭದ್ರಾತಟೇ ಪೂರ್ವಮಭೂತ್ಪತ್ತನಮುತ್ತಮಂ ।
ಯತ್ರ ವರ್ಣಾ ಸ್ಸ್ವಧರ್ಮೇಣ ಸತ್ಯೇ ಕರ್ಮಣಿ ತತ್ಪರಾಃ ॥ ೧೭ ॥

---

೧೪. ಯಾವ ದುಷ್ಟರು ಹಟದಿಂದಲಾದರೂ ಮನೋವಾಕ್ಕಾಯಗಳಿಂದ ನಿತ್ಯವೂ ಪಾಪವನ್ನು ಮಾಡುತ್ತಾರೆಯೋ ಯಾರು ಪರರ ಸ್ವತ್ತನ್ನು ತಿಂದು ಬೆಳೆದಿರುವರೋ ಯಾರು ದುಷ್ಟವಾದ ಅಭಿಪ್ರಾಯವುಳ್ಳವರೋ ಅವರೆಲ್ಲರನ್ನೂ ಈ ಕಲಿಯುಗದಲ್ಲಿ ಸಪ್ತಾಹ ಯಜ್ಞವು ಪವಿತ್ರರನ್ನಾಗಿ ಮಾಡುತ್ತದೆ.

೧೫. ಸೂತನು ಹೇಳಿದನು– ದೇವಪೂಜಿತನಾದ ನಾರದನು ಈ ರೀತಿಯಾಗಿ ಸಂತೋಷಗೊಳ್ಳಲು ಸನತ್ಕುಮಾರರು ಸಂತೋಷಗೊಂಡವರಾಗಿ ಮತ್ತೆ ನಾರದನನ್ನು ಕುರಿತು ಇಂತೆಂದರು.

೧೬. ಸನತ್ಕುಮಾರರು ಹೇಳಿದರು– ಇನ್ನು ಮೇಲೆ ನಿಮಗೆ ಒಂದು ಇತಿಹಾಸವನ್ನು ಹೇಳುತ್ತೇವೆ. ಇದನ್ನು ಕೇಳುವುದರಿಂದಲೇ ಎಲ್ಲಾ ಪಾಪಗಳೂ ಹೋಗುತ್ತವೆ.

೧೭. ತುಂಗಭದ್ರಾ ನದಿಯ ದಡದಲ್ಲಿ ಒಂದು ಉತ್ತಮವಾದ ಪಟ್ಟಣವಿದ್ದಿತು. ಅಲ್ಲಿರುವ ವರ್ಣದವರೆಲ್ಲರೂ ತಮ್ಮ ತಮ್ಮ ವರ್ಣಗಳನ್ನು ಪಾಲಿಸಿಕೊಂಡು ಸತ್ಯದಿಂದಿರುತ್ತಿದ್ದರು.

ಆತ್ಮದೇವಃ ಪುರೇ ತಸ್ಮಿನ್ ಸರ್ವವೇದವಿಶಾರದಃ ।
ಶ್ರೌತಸ್ಮಾರ್ತೇಷು ನಿಷ್ಣಾತೋ ದ್ವಿತೀಯ ಇವ ಭಾಸ್ಕರಃ ॥ ೧೮ ॥

ಭಿಕ್ಷುಕೋ ಹಿತವಾಂಲ್ಲೋಕೇ ತತ್ಪ್ರಿಯಾ ಧುಂಧುಳೀ ಸ್ಮೃತಾ ।
ಸ್ವವಾಕ್ಯಸ್ಥಾಪಿಕಾ ನಿತ್ಯಂ ಸುಂದರೀ ಸುಕುಲೋದ್ಭವಾ ॥ ೧೯ ॥

ಲೋಕವಾರ್ತಾರತಾ ಕ್ರೂರಾ ಪ್ರಾಯಶೋ ಬಹುಜಲ್ಪಿಕಾ ।
ಶೂರಾ ಚ ಗೃಹಕೃತ್ಯೇಷು ಕೃಪಣಾ ಕಲಹಪ್ರಿಯಾ ॥ ೨೦ ॥

ಏವಂ ನಿವಸತೋಃ ಪ್ರೇಮ್ಣಾ ದಂಪತ್ಯೋರನಪತ್ಯಯೋಃ ।
ಅರ್ಥಾಃ ಕಾಮಾಸ್ತಯೋರಾಸನ್ನ ಸುಖಾಯ ಗೃಹಾದಿಕಂ ॥ ೨೧ ॥

ಪಶ್ಚಾದ್ಧರ್ಮಾಸ್ಸಮಾರಬ್ಧಾಸ್ತಾಭ್ಯಾಂ ಸಂತಾನಹೇತವೇ ।
ಗೋಭೂಹಿರಣ್ಯವಾಸಾಂಸಿ ದೀನೇಭ್ಯೋ ಯಚ್ಛತಃ ಸದಾ ॥ ೨೨ ॥

---

೧೮–೧೯. ಆ ಊರಿನಲ್ಲಿ ಆತ್ಮದೇವನೆಂಬುವನೊಬ್ಬನು ಇದ್ದನು. ಅವನು ಎಲ್ಲಾ ವೇದಗಳನ್ನೂ ಓದಿದ್ದನು. ಶ್ರೌತಸ್ಮಾರ್ತ ಕ್ರಿಯೆಗಳಲ್ಲಿಯೂ ಪಂಡಿತನು. ಎರಡನೆಯ ಸೂರ್ಯನಂತೆ ತೇಜಸ್ವಿಯಾಗಿದ್ದನು. ಭಿಕ್ಷೆಮಾಡುತ್ತಿದ್ದನು. ಎಲ್ಲರಿಗೂ ಹಿತವನ್ನೇ ಬಯಸುತ್ತಿದ್ದನು. ಅವನಿಗೆ ದುಂಧುಳಿ ಎಂಬ ಹೆಂಡತಿಯಿದ್ದಳು. ಯಾವಾಗಲೂ ತನ್ನ ಮಾತನ್ನೇ ಸಾಧಿಸುತ್ತಿದ್ದಳು. ಸುಂದರಿಯೂ, ಕುಲೀನಳೂ. ಆಗಿದ್ದಳು.

೨೦. ಯಾವಾಗಲೂ ಜನಗಳ ಮಾತನ್ನೂ ಇತರರ ಸಮಾಚಾರಗಳನ್ನೂ ಕೇಳುವುದರಲ್ಲಿ ಇಷ್ಟವುಳ್ಳವಳು. ಕ್ರೂರಳು, ಬಹಳ ಮಾತಾಡುವವಳು. ಮನೆ ಗೆಲಸದಲ್ಲಿ ಶೂರಳು. ಜಗಳವಾಡುವುದರಲ್ಲಿ ಪ್ರಿಯಳು. ಲೋಭಿಯು

೨೧. ಆದರೆ ಈ ದಂಪತಿಗಳು ಸುಖವಾಗಿ ವಾಸಮಾಡಿಕೊಂಡಿದ್ದರು. ಇವರಿಗೆ ಮಕ್ಕಳಾಗಲಿಲ್ಲ. ಅವರಿಗೆ ಹಣವೂ ಇದ್ದಿತು. ಅದನ್ನು ಬೇಕಾದ ರೀತಿಯಲ್ಲಿ ಅನುಭವಿಸುತ್ತಲೂ ಇದ್ದರು. ಆದರೆ ಮಕ್ಕಳಿಲ್ಲದುದರಿಂದ ಆ ಹಣ, ಆ ಮನೆ, ಆ ಭೋಗಗಳು ಅವರಿಗೆ ರುಚಿಸುತ್ತಿರಲಿಲ್ಲ.

೨೨–೨೩. ಆಮೇಲೆ ಅವರುಗಳು ತಮಗೆ ಮಕ್ಕಳಾಗಬೇಕೆಂಬ ಆಸೆ ಯಿಂದ ಅದಕ್ಕೆ ಬೇಕಾದ ರೀತಿಯಲ್ಲಿ ಆ ಹಣವನ್ನು ಧರ್ಮಕ್ಕೆ ಉಪಯೋಗಿಸುತ್ತ ಬಂದರು. ದಿನ ದಿನವೂ ಗೋವು, ಚಿನ್ನ, ಭೂಮಿ, ಬಟ್ಟೆ ಮುಂತಾದುವನ್ನು

**ಧನಾರ್ಥಂ ಧರ್ಮಮಾರ್ಗೇಣ ತಾಭ್ಯಾಂ ನೀತಂ ತಥಾಪಿ ಚ ।**
**ನ ಪುತ್ರೋ ನಾಪಿ ವಾ ಪುತ್ರೀ ತತಶ್ಚಿಂತಾತುರೋ ಭೃಶಂ ॥ ೨೩ ॥**

**ಏಕದಾ ಸ ದ್ವಿಜೋ ದುಃಖಾದ್ಗೃಹಂ ತ್ಯಕ್ತ್ವಾ ವನಂ ಗತಃ ।**
**ಮಧ್ಯಾಹ್ನೇ ತೃಷಿತೋ ಜಾತಸ್ತಟಾಗಂ ಸಮುಪೇಯಿವಾನ್ ॥ ೨೪ ॥**

**ಪೀತ್ವಾ ಜಲಂ ನಿಷಣ್ಣಸ್ತು ಪ್ರಜಾದುಃಖೇನ ಕರ್ಶಿತಃ ।**
**ಮುಹೂರ್ತಾದಪಿ ತತ್ರೈವ ಸನ್ಯಾಸೀ ಕಶ್ಚಿದಾಗತಃ ॥ ೨೫ ॥**

**ದೃಷ್ಟ್ವಾ ಪೀತಜಲಂ ತಂ ತು ವಿಪ್ರೋ ಯಾತಸ್ತದಂತಿಕಂ ।**
**ನತ್ವಾ ಚ ಪದಯೋಸ್ತಸ್ಯ ನಿಶ್ವಸನ್ ಸಂಸ್ಥಿತಃ ಪುರಃ ॥ ೨೬ ॥**

**॥ ಯತಿರುವಾಚ ॥**

**ಕಥಂ ರೋದಿಷಿ ವಿಪ್ರ ತ್ವಂ ಕಾ ತೇ ಚಿಂತಾ ಬಲೀಯಸೀ ।**
**ವದ ತ್ವಂ ಸತ್ವರಂ ಮಹ್ಯಂ ಸ್ವಸ್ಯ ದುಃಖಸ್ಯ ಕಾರಣಂ ॥ ೨೭ ॥**

---

ಬಡಬಗ್ಗರಿಗೆ ಕೊಡುತ್ತ ಬಂದರು. ಅವರಿಗಿದ್ದ ಅರ್ಥ ಹಣವನ್ನೆಲ್ಲಾ ಈ ರೀತಿಯಾಗಿ ಧರ್ಮಕ್ಕೆ ವ್ಯಯಮಾಡಿದರು. ಆದರೂ ಕೂಡ ಗಂಡಾಗಲೀ, ಹೆಣ್ಣಾಗಲೀ ಯಾವುದೂ ಆಗಲೇ ಇಲ್ಲ. ಆಗ ಅವರಿಬ್ಬರಿಗೂ ಯೋಚನೆಯು ಉಂಟಾಯಿತು.

೨೪. ಒಂದು ಸಾರಿ ಅವನು ದುಃಖದಿಂದ ಬೇಸರಪಟ್ಟುಕೊಂಡು ಮನೆಯನ್ನು ಬಿಟ್ಟು ಕಾಡಿಗೆ ಹೋದನು. ಮಧ್ಯಾಹ್ನವಾಗಲು ಬಾಯಾರಿಕೆಯಾಗಿ ನೀರಿಗೋಸ್ಕರ ಕೆರೆಗೆ ಹೋದನು.

೨೫. ನೀರನ್ನು ಕುಡಿದು ಮಕ್ಕಳಾಗಲಿಲ್ಲವಲ್ಲ! ಎಂದು ಯೋಚಿಸುತ್ತಾ ಕುಳಿತನು. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿಗೊಬ್ಬ ಸನ್ಯಾಸಿಯು ಬಂದನು.

೨೬. ಆ ಸನ್ಯಾಸಿಯು ಅಲ್ಲಿ ನೀರನ್ನು ಕುಡಿದ ಮೇಲೆ ಇವನು ಅವನ ಬಳಿಗೆ ಹೋದನು. ಅವನ ಕಾಲುಗಳಿಗೆ ನಮಸ್ಕರಿಸಿ ನಿಟ್ಟುಸಿರುಬಿಡುತ್ತಾ ಕುಳಿತುಕೊಂಡನು

೨೭. ಯತಿಯು ಹೇಳಿದನು- ಎಲೈ ವಿಪ್ರನೇ! ನೀನೇಕೆ ದುಃಖಿಸುತ್ತ ಇದ್ದೀಯೆ. ನಿನಗೆ ಅಂತಹ ಬಲವಾದ ಯೋಚನೆ ಯಾವುದು? ಆ ನಿನ್ನ ದುಃಖದ ಕಾರಣವನ್ನು ನನಗೆ ಜಾಗ್ರತೆಯಾಗಿ ತಿಳಿಸು.

|| ಬ್ರಾಹ್ಮಣ ಉವಾಚ ||

ಕಿಂ ಬ್ರವೀಮಿ ಋಷೇ ದುಃಖಂ ಪೂರ್ವಪಾಪೇನ ಸಂಚಿತಂ ।
ಮದೀಯಾಃ ಪೂರ್ವಜಾಸ್ತ್ವೇಯಂ ಕವ್ಯೋಷ್ಣಮುಪಭುಂಜತೇ || ೨೮ ||

ಮದ್ದತ್ತಂ ನೈವ ಗೃಹ್ಣಂತಿ ಪ್ರೀತ್ಯಾ ದೇವಾ ದ್ವಿಜಾತಯಃ ।
ಪ್ರಜಾದುಃಖೇನ ಶೂನ್ಯೋಽಹಂ ಪ್ರಾಣಾಂಸ್ತ್ಯಕ್ತುಮಿಹಾಗತಃ || ೨೯ ||

ಧಿಗ್ಜೀವಿತಂ ಪ್ರಜಾಹೀನಂ ಧಿಗ್ಗೃಹಂ ಚ ಪ್ರಜಾಂ ವಿನಾ ।
ಧಿಗ್ಧನಂ ಚಾನಪತ್ಯಸ್ಯ ಧಿಕ್ಕುಲಂ ಸಂತತಿಂ ವಿನಾ || ೩೦ ||

ಪಾಲ್ಯತೇ ಯಾ ಮಯಾ ಧೇನುಃ ಸಾ ವಂಧ್ಯಾ ಸರ್ವಥಾ ಭವೇತ್ ।
ಯೋ ಮಯಾ ರೋಪಿತೋ ವೃಕ್ಷಃ ಸೋಽಪಿ ವಂಧ್ಯತ್ವಮಾಶ್ರಯೇತ್||೩೧||

ಯತ್ಫಲಂ ಮದ್ಗೃಹಾಯಾತಂ ಶೀಘ್ರಂ ತಚ್ಚ ವಿಶುಷ್ಯತಿ ।
ನಿರ್ಭಾಗ್ಯಸ್ಯಾನಪತ್ಯಸ್ಯ ಕಿಮತೋ ಜೀವಿತೇನ ಮೇ || ೩೨ ||

---

೨೮. ಬ್ರಾಹ್ಮಣನು ಹೇಳಿದನು– ಎಲೈ ಋಷಿಯೇ ! ನನ್ನ ದುಃಖವನ್ನು ಏನೆಂದು ಹೇಳಲಿ ಅದು ಹಿಂದಿನ ಜನ್ಮದಲ್ಲಿ ಮಾಡಿದ ಪಾಪವು. ನನ್ನ ಪೂರ್ವಿಕರು ನಾನು ಕೊಟ್ಟ ತರ್ಪಣದ ನೀರನ್ನು ಕಣ್ಣೀರನ್ನು ಸುರಿಸುತ್ತ ಕುಡಿಯುತ್ತಾರೆ.

೨೯. ನಾನು ಕೊಟ್ಟುದನ್ನು ದೇವತೆಗಳಾಗಲೀ, ಬ್ರಾಹ್ಮಣರಾಗಲಿ ಪ್ರೀತಿಯಿಂದ ತೆಗೆದುಕೊಳ್ಳುತ್ತಿಲ್ಲ. ಆ ಮಕ್ಕಳಿಲ್ಲದ ದುಃಖದಿಂದ ನನಗೆ ಏನೂ ಬೇಡವಾಗಿದೆ. ಪ್ರಾಣಬಿಡಲು ಇಲ್ಲಿಗೆ ಬಂದೆನು.

೩೦. ಮಕ್ಕಳಿಲ್ಲದವನ ಜೀವನವು ನಿಂದ್ಯವಾದುದು. ಮಕ್ಕಳಿಲ್ಲದವನ ಮನೆಯು ನಿಂದ್ಯವಾದುದು. ಮಕ್ಕಳಿಲ್ಲದವನ ಹಣವು ನಿಂದ್ಯವಾದುದು. ಸಂತತಿಯಿಲ್ಲದಿದ್ದರೆ ಕುಲವು ನಿಂದ್ಯವಾದುದು

೩೧. ನಾನು ಸಾಕುವ ಹಸುಗಳೆಲ್ಲವೂ ಗೊಡ್ಡಾಗುತ್ತವೆ. ನಾನು ಬೆಳೆಸುವ ಮರಗಳೂ ಹೂವು ಹಣ್ಣುಗಳನ್ನು ಬಿಡದೆ ಗೊಡ್ಡಾಗುತ್ತವೆ.

೩೨. ನನ್ನ ಮನೆಗೆ ತಂದ ಹಣ್ಣುಗಳೆಲ್ಲವೂ ಬೇಗ ಒಣಗಿ ಹೋಗುತ್ತವೆ. ನಾನು ಅಂತಹ ನಿರ್ಭಾಗ್ಯನು. ಇಂತಹ ನಾನು ಜೀವಿಸಿ ಪ್ರಯೋಜನವೇನು ?

॥ ಸನತ್ಕುಮಾರಾ ಊಚುಃ ॥

ಇತ್ಯುಕ್ತ್ವಾ ಸ ರುರೋದೋಚ್ಚೈಃ ತತ್ಪಾರ್ಶ್ವೇ ದುಃಖಪೀಡಿತಃ ।
ತದಾ ತಸ್ಯ ಯತೇಶ್ಚಿತ್ತೇ ಕರುಣಾಭೂದ್ಗರೀಯಸೀ ॥ ೩೩ ॥

ತದ್ಭಾಲಾಕ್ಷರಮಾಲಾಂ ಚ ವಾಚಯಾಮಾಸ ಯೋಗವಿತ್ ।
ಸರ್ವಂ ಜ್ಞಾತ್ವಾ ಯತಿಃ ಪಶ್ಚಾದ್ವಿಪ್ರಮೂಚೇ ಸವಿಸ್ತರಂ ॥ ೩೪ ॥

॥ ಯತಿರುವಾಚ ॥

ಶೃಣು ವಿಪ್ರ ಮಯಾ ತೇದ್ಯ ಪ್ರಾರಬ್ಧಂ ತು ವಿಲೋಕಿತಂ ।
ಸಪ್ತಜನ್ಮಾವಧಿಸ್ತೇ ವೈ ಪುತ್ರೋ ನೈವ ಚ ನೈವ ಚ ॥ ೩೫ ॥

ಮುಂಚಾಜ್ಞಾನಂ ಪ್ರಜಾರೂಪಂ ಬಲಿಷ್ಠಾ ಕರ್ಮಣೋ ಗತಿಃ ।
ವಿವೇಕಂ ತು ಸಮಾಸಾದ್ಯ ತ್ಯಜ ಸಂಸಾರವಾಸನಾಂ ॥ ೩೬ ॥

---

೩೩. ಸನತ್ಕುಮಾರರು ಹೇಳಿದರು- ಹೀಗೆಂದು ಹೇಳುತ್ತ ಆತನು ಆ ಯತಿಯ ಬಳಿಯಲ್ಲಿ ಗಟ್ಟಿಯಾಗಿ ಅಳುವುದಕ್ಕೆ ಮೊದಲುಮಾಡಿದನು. ಆಗ ಆ ಯತಿಗೆ ಬಹುವಾದ ಕರುಣೆಯುಂಟಾಯಿತು.

೩೪. ಯೋಗವನ್ನು ಹೊಂದಿ ಆ ಬ್ರಾಹ್ಮಣನ ಹಣೆಯಲ್ಲಿ ಬರೆದಿರುವುದನ್ನು ಓದಿಕೊಂಡು ಎಲ್ಲವನ್ನೂ ತಿಳಿದುಕೊಂಡು ಆಗ ಆ ಬ್ರಾಹ್ಮಣವನ್ನು ಕುರಿತು ಇಂತೆಂದನು.

೩೫. ಯತಿಯು ಹೇಳಿದನು– ಎಲೈ ಬ್ರಾಹ್ಮಣನೇ ! ನಾನು ನಿನ್ನ ಪ್ರಾರಬ್ಧವನ್ನು ನೋಡಿದೆನು. ನಿನಗೆ ಇನ್ನು ಏಳು ಜನ್ಮಗಳವರೆಗೆ, ಮಕ್ಕಳು ಖಂಡಿತವಾಗಿ ಆಗುವುದೇ ಇಲ್ಲ.

೩೬. ಪ್ರಜಾರೂಪವಾದ ಅಜ್ಞಾನವನ್ನು ಬಿಟ್ಟುಬಿಡು. ಕರ್ಮವು ಬಲವಾಗಿದೆ ವಿವೇಕವನ್ನು ಹೊಂದು. ಈ ಸಂಸಾರ ವಾಸನೆಯನ್ನು ಬಿಡು.

ಸಂತತೇಸ್ಸಗರೋ ದುಃಖಮವಾಪಾಂಗಃ ಪುರಾತಥಾ ।
ರೇ ಮುಂಚಾದ್ಯ ಕುಟುಂಬಾಶಾಂ ಸನ್ಯಾಸೇ ಸರ್ವಥಾ ಸುಖಂ ॥ ೩೭ ॥

॥ ಬ್ರಾಹ್ಮಣ ಉವಾಚ ॥

ವಿವೇಕೇನ ಭವೇತ್ಕಿಂ ಮೇ ಪುತ್ರಂ ದೇಹಿ ಬಲಾದಪಿ ।
ನೋ ಚೇತ್ತ್ಯಜಾಮ್ಯಹಂ ಪ್ರಾಣಾಂಸ್ತ್ವದಗ್ರೇ ಶೋಕಮೂರ್ಛಿತಃ ॥೩೮॥

ಪುತ್ರಾದಿಸುಖಹೀನೋಽಯಂ ಸನ್ಯಾಸಃ ಶುಷ್ಕ ಏವ ಹಿ ।
ಗೃಹಸ್ಥಸ್ಸರಸೋ ಲೋಕೇ ಪುತ್ರಪೌತ್ರಸಮಾವೃತಃ ॥ ೩೯ ॥

॥ ಸನತ್ಕುಮಾರಾ ಊಚುಃ ॥

ಇತಿ ವಿಪ್ರಾಗ್ರಹಂ ದೃಷ್ಟ್ವಾ ಪ್ರಾಬ್ರವೀತ್ಸ ತಪೋಧನಃ ॥ ೪೦ ॥

---

೩೭. ಮಕ್ಕಳಿಂದ ಪೂರ್ವದಲ್ಲಿ ಸಗರಚಕ್ರವರ್ತಿಯೂ ಅಂಗದೇಶದ ರಾಜನೂ ದುಃಖವನ್ನು ಅನುಭವಿಸಿದರು. ಆದುದರಿಂದ ನೀನು ಈ ಸಂಸಾರದ ಆಶೆಯನ್ನು ಬಿಟ್ಟುಬಿಡು. ಸನ್ಯಾಸದಲ್ಲಿ ಬಹಳ ಸುಖವಿರುತ್ತದೆ.

೩೮. ಬ್ರಾಹ್ಮಣನು ಹೇಳಿದನು– ನನಗೆ ಆ ವಿವೇಕರೂಪವಾದ ಜ್ಞಾನವು ಬೇಕಿಲ್ಲ. ಬಲಾತ್ಕಾರದಿಂದಲಾದೂ ನನಗೆ ಮಕ್ಕಳನ್ನು ಕೊಡು. ಹಾಗಿಲ್ಲದಿದ್ದರೆ ನಾನು ನಿನ್ನೆದುರಿಗೆ ದುಃಖಿಸುತ್ತ ಪ್ರಾಣಗಳನ್ನು ಕಳೆದುಕೊಳ್ಳುತ್ತೇನೆ.

೩೯. ಮಕ್ಕಳು ಮರಿಗಳಿಲ್ಲದ ಈ ಸನ್ಯಾಸವೂ ಕೂಡ ಉಪಯೋಗವಿಲ್ಲದ್ದು. ಮಕ್ಕಳು ಮೊಮ್ಮಕ್ಕಳಿಂದ ಕೂಡಿದ ಗೃಹಸ್ಥ ಆಶ್ರಮವೇ ಲೋಕದಲ್ಲಿ ಉತ್ತಮವಾದುದು.

೪೦. ಸನತ್ಕುಮಾರರು ಹೇಳಿದರು– ಈ ರೀತಿಯಾಗಿ ಆ ಬ್ರಾಹ್ಮಣನು ಬಾಲಾತ್ಕರಿಸುತ್ತಿರುವುದನ್ನು ನೋಡಿ ಆ ತಪಸ್ವಿಯು ಇಂತೆಂದನು.

|| ಯತಿರುವಾಚ ||

ಚಿತ್ರಕೇತುರ್ಗತಃ ಕಷ್ಟಂ ವಿಧಿಲೇಖವಿಮಾರ್ಜನಾತ್ ।
ನ ಯಾಸ್ಯಸಿ ಸುಖಂ ಪುತ್ರಾದ್ಯಥಾ ದೈವಹತೋದ್ಯಮಃ ।
ಅತೋ ಹಠೇನ ಯುಕ್ತೋಽಸಿ ಹ್ಯರ್ಥಿನೇ ಕಿಂ ವದಾಮ್ಯಹಂ || ೪೧ ||

|| ಸನತ್ಕುಮಾರಾ ಊಚುಃ ||

ತಸ್ಯಾಗ್ರಹಂ ಸಮಾಲೋಕ್ಯ ಫಲಮೇಕಂ ಸ ದತ್ತವಾನ್ || ೪೨ ||

|| ಯತಿರುವಾಚ ||

ಇದಂ ಭಕ್ಷಯ ಪತ್ನ್ಯಾ ತ್ವಂ ತತಃ ಪುತ್ರೋ ಭವಿಷ್ಯತಿ ।
ಸತ್ಯಂ ಶೌಚಂ ದಯಾ ದಾನಮೇಕಭಕ್ತಂ ತು ಭೋಜನಂ ।
ವರ್ಷಾವಧಿ ಸ್ತ್ರಿಯಾ ಕಾರ್ಯಂ ತೇನ ಪುತ್ರೋಽತಿನಿರ್ಮಲಃ || ೪೩ ||

---

೪೧. ಯತಿಯು ಹೇಳಿದನು-ಬ್ರಹ್ಮನ ಬರವಣಿಗೆಯನ್ನು ಮೀರಿ ನಡೆದುದರಿಂದ ಚಿತ್ರ ಕೇತುವು ಕಷ್ಟಪಟ್ಟನು. ದೇವರ ಸಹಾಯವಿಲ್ಲದೆ ಕೆಲಸವನ್ನು ಮಾಡುವವನು ನಾಶವಾಗುವಂತೆ ಮಗನಿಂದ ನಿನಗೆ ಸುಖವುಂಟಾಗುವುದಿಲ್ಲ. ಆದರೂ ನೀನು ಹಠಮಾಡುತ್ತಿದ್ದೀಯೆ. ಇಂತಹ ನಿನಗೆ ನಾನೇನು ಹೇಳಲಿ ?

೪೨. ಸನತ್ಕುಮಾರರು ಹೇಳಿದರು-ಆಗ ಯತಿಯು ಆ ಬ್ರಾಹ್ಮಣನ ಬಲಾತ್ಕಾರವನ್ನು ತಡೆಯಲಾರದೆ ಅವನಿಗೆ ಒಂದು ಹಣ್ಣನ್ನು ಕೊಟ್ಟನು.

೪೩. ಯತಿಯು ಹೇಳಿದನು-ಈ ಹಣ್ಣನ್ನು ನೀನೂ ನಿನ್ನ ಹೆಂಡತಿಯೂ ತಿನ್ನಿರಿ. ಇದರಿಂದ ಮಕ್ಕಳಾಗುತ್ತದೆ. ಒಂದು ವರ್ಷದವರೆಗೂ ನಿನ್ನ ಹೆಂಡತಿಯು ಸತ್ಯವನ್ನು ಬಿಡಕೂಡದು ಶುಚಿಯಾಗಿರಬೇಕು ದಯೆಯನ್ನು ತೋರಿಸುತ್ತ ದಾನಮಾಡುತ್ತಿರಬೇಕು. ಒಂದೇ ಹೊತ್ತು ಊಟಮಾಡಬೇಕು. ಹೀಗೆ ಮಾಡಿದರೆ ಹುಟ್ಟುವ ಮಗನು ಯೋಗ್ಯನಾಗಿ ಹುಟ್ಟುತ್ತಾನೆ.

|| ಸನತ್ಕುಮಾರಾ ಊಚತುಃ ||

ಏವಮುಕ್ತ್ವಾ ಯಯೌ ಯೋಗೀ ವಿಪ್ರಸ್ತು ಗೃಹಮಾಗತಃ ।
ಪತ್ನ್ಯಾಃ ಪಾಣೌ ಫಲಂ ದತ್ವಾ ಸ್ವಯಂ ಯಾತಸ್ತು ಕುತ್ರಚಿತ್ ।
ತರುಣೀ ಕುಟಿಲಾ ತಸ್ಯಾಃ ಸಖ್ಯಗ್ರೇ ಚ ರುರೋದ ಹ || ೪೪ ||

|| ಬ್ರಾಹ್ಮಣಪತ್ನ್ಯುವಾಚ ||

ಅಹೋ ಚಿಂತಾ ಮಮೋತ್ಪನ್ನಾ ಫಲಂ ಚಾಹಂ ನ ಭಕ್ಷಯೇ ।
ಫಲಭಕ್ಷಣೇನ ಗರ್ಭಃ ಸ್ಯಾದ್ಗರ್ಭೇಣೋದರವೃದ್ಧತಾ || ೪೫ ||

ಸ್ವಲ್ಪಭಕ್ಷಂ ತತೋಽಶಕ್ತಿಃ ಗೃಹಕಾರ್ಯಂ ಕಥಂ ಭವೇತ್ ।
ದೈವಾದ್ಧಾಟೀಂ ವ್ರಜೇದ್ಗ್ರಾಮೋ ಪಲಾಯೇದ್ಗರ್ಭಿಣೀ ಕಥಂ || ೪೬ ||

ಶೂಕವನ್ನಿವಸೇದ್ಗರ್ಭಸ್ತಂ ಕುಕ್ಷೇಃ ಕಥಮುತ್ಸೃಜೇತ್ ।
ತಿರ್ಯಕ್ ಚೇದಾಗತೋ ಗರ್ಭಃ ತದಾ ಮೇ ಮರಣಂ ಭವೇತ್ || ೪೭ ||

---

೪೪. ಸನತ್ಕುಮಾರರು ಹೇಳಿದರು- ಆ ಯೋಗಿಯು ಹೀಗೆ ಹೇಳಿ ಹಣ್ಣನ್ನು ಕೊಟ್ಟು ಹೊರಟು ಹೋದನು. ಬ್ರಾಹ್ಮಣನು ಮನೆಗೆ ಬಂದನು. ಹೆಂಡತಿಯ ಕೈಯ್ಯಲ್ಲಿ ಹಣ್ಣನ್ನು ಕೊಟ್ಟು ತಾನೆಲ್ಲಿಗೋ ಹೊರಟುಹೋದನು. ಗಂಡನ ಮಾತನ್ನು ಕೇಳದ ಆ ಅಯೋಗ್ಯಳು ತನ್ನ ಸ್ನೇಹಿತೆಯೊಡನೆ ಹೇಳಿಕೊಂಡು ಅಳಲು ಮೊದಲು ಮಾಡಿದಳು.

೪೫. ಬ್ರಾಹ್ಮಣನ ಹೆಂಡತಿಯು ಹೇಳಿದಳು-ಅಯ್ಯೋ ! ನನಗೆ ಒಳ್ಳೆಯ ಕಷ್ಟಕ್ಕೆ ಬಂದಿತಲ್ಲಾ ! ಈ ಹಣ್ಣನ್ನು ತಿಂದರೆ ಗರ್ಭವುಂಟಾಗುತ್ತದೆ. ಗರ್ಭವುಂಟಾದರೆ ಹೊಟ್ಟೆಯು ದಪ್ಪವಾಗುತ್ತದೆ.

೪೬. ಗರ್ಭಿಣಿಯಾದರೆ ಸ್ವಲ್ಪವನ್ನು ತಿನ್ನಬೇಕು. ಅದರಿಂದ ಶಕ್ತಿಯು ಕಡಮೆಯಾಗುತ್ತದೆ. ಮನೆಯ ಕೆಲಸಗಳೆಲ್ಲವೂ ಆಗ ನಡೆಯುವುದು ಕಷ್ಟವಾಗುತ್ತದೆ. ಊರಿನವರು ಅಕಸ್ಮಾತ್ತಾಗಿ ಮನೆಯ ಬಳಿಗೆ ಬಂದರೆ ಗರ್ಭಿಣಿಯಾದವಳು ಒಳಕ್ಕೆ ಓಡಿಹೋಗುವುದು ಹೇಗೆ ?

೪೭. ಗರ್ಭವಾದರೆ ಹೊಟ್ಟೆಯಲ್ಲಿ ಮುಳ್ಳಿನಂತಿರುತ್ತದೆ. ಅದನ್ನು ಹೊಟ್ಟೆಯಿಂದ ಹೊರಗೆ ತೆಗೆಯುವುದು ಹೇಗೆ ? ಒಂದುವೇಳೆ ಹೊರಕ್ಕೆ ಬರುವಾಗ ಅಡ್ಡಲಾಗಿ ಬಂದರೆ ಆಗ ಪ್ರಾಣವೇ ಹೋಗುವುದು.

ಪ್ರಸೂತೌ ದಾರುಣಂ ದುಃಖಂ ಸುಕುಮಾರೀ ಕಥಂ ಸಹೇ ।
ಮಂದಾಯಾಂ ಮಯಿ ಸರ್ವಸ್ವಂ ನನಾಂದಾ ಸಂಹರೇತ್ತದಾ ॥ ೪೮ ॥

ಸತ್ಯಶೌಚಾದಿನಿಯಮೋ ದುರಾರಾಧ್ಯಸ್ಸ ದೃಶ್ಯತೇ ।
ಲಾಲನೇ ಪಾಲನೇ ದುಃಖಂ ಪ್ರಸೂತಾಯಾಶ್ಚ ವರ್ತತೇ ।
ವಂಧ್ಯಾ ವಾ ವಿಧವಾ ನಾರೀ ಸುಖಿನೀ ಚೇತಿ ಮೇ ಮತಿಃ ॥ ೪೯ ॥

॥ ಸನತ್ಕುಮಾರಾ ಊಚುಃ ॥

ಏವಂ ಕುತರ್ಕಯೋಗೇಣ ತತ್ಫಲಂ ನೈವ ಭಕ್ಷಿತಂ ।
ಪತ್ಯಾ ಪೃಷ್ಟಂ ಫಲಂ ಭುಕ್ತಂ ಭುಕ್ತಂ ಚೇತಿ ತಯೇರಿತಂ ॥ ೫೦ ॥

ಏಕದಾ ಭಗಿನೀ ತಸ್ಯಾಸ್ತದ್ಗೃಹಂ ಸ್ವೇಚ್ಛಯಾ ಗತಾ ।
ತದಗ್ರೇ ಕಥಿತಂ ಸರ್ವಂ ಚಿನ್ತೇಯಂ ಮಹತೀ ಹಿ ಮೇ ॥ ೫೧ ॥

---

೪೮. ಹೆರುವಾಗಲಂತೂ ಬಹು ದುಃಖವುಂಟಾಗುತ್ತದೆ. ಅದನ್ನು ಸುಕುಮಾರಿಯಾದ ನಾನು ಹೇಗೆ ಸಹಿಸಲಿ ? ನಾನು ಮನೆಯನ್ನು ನೋಡಿಕೊಳ್ಳದೆ ಹೆತ್ತು ಒಳಗೆ ಬಾಣಂತಿಯಾಗಿ ಕುಳಿತುಕೊಂಡರೆ ನನ್ನ ನಾದನಿಯು ಎಲ್ಲವನೂ ಕದ್ದುಕೊಂಡು ಹೋಗುತ್ತಾಳೆ.

೪೯. ಆಗ ಈ ಸತ್ಯ ಶೌಚಾದಿಗಳನ್ನು ಅನುಸರಿಸಲು ಕಷ್ಟವಾಗಿ ಕಾಣುತ್ತದೆ. ಹೆತ್ತಮೇಲೆ ಆ ಮಗುವನ್ನು ಲಾಲಿಸುವುದು ಪಾಲಿಸುವುದು ಬಹು ಕಷ್ಟವೆಂಬುದಾಗಿ ಕಾಣುತ್ತದೆ. ಹೆಂಗಸಾದವಳು ಬಂಜೆಯಾಗಲೀ ವಿಧವೆಯಾಗಲೀ ಆದರೆ ಸುಖವಾಗಿರುವಳೆಂದು ನನಗೆ ತೋರುತ್ತದೆ.

೫೦. ಸನತ್ಕುಮಾರರು ಹೇಳಿದರು-ಈ ರೀತಿಯಾಗಿ ಉಪಯೋಗವಿಲ್ಲದ ಕಾರಣಗಳನ್ನು ಯೋಚಿಸುತ್ತ ಆಕೆಯು ಆ ಹಣ್ಣನ್ನು ತಿನ್ನಲೇ ಇಲ್ಲ. ಗಂಡನು ತಿಂದೆಯಾ ? ಎಂದು ಕೇಳಲು ತಿಂದೆನೆಂದು ಸುಳ್ಳನ್ನು ಹೇಳಿದಳು.

೫೧. ಒಂದು ದಿನ ಆಕೆಯ ತಂಗಿಯು ಅವಳ ಮನೆಗೆ ಅಕಸ್ಮಾತ್ತಾಗಿ ಬಂದಳು. ಆಗ ಆಕೆಯು ಅವಳೆದುರಿಗೆ ಎಲ್ಲವನ್ನೂ ಹೇಳಿ ಈ ಯೋಚನೆಯು ನನಗೆ ಬಹಳವಾಗಿಬಿಟ್ಟಿದೆ. ಅದರಿಂದ ನನ್ನ ಬಲವೇ ಕುಗ್ಗಿ ಕೃಶಳಾಗಿಬಿಟ್ಟಿದ್ದೇನೆ. ತಂಗಿ, ! ನಾನೇನು ಮಾಡಲಿ ? ಎಂದಳು.

ದುರ್ಬಲಾ ತೇನ ದುಃಖೇನ ಹ್ಯನುಜೇ ಕರವಾಣಿ ಕಿಂ ।
ಸಾಬ್ರವೀನ್ಮಮ ಗರ್ಭೋಽಸ್ತಿ ತಂ ದಾಸ್ಯಾಮಿ ಪ್ರಸೂತಿತಃ ॥ ೫೨ ॥

ತಾವತ್ಕಾಲಂ ಸಗರ್ಭೇವ ಗುಪ್ತಾ ತಿಷ್ಠ ಗೃಹೇ ಸುಖಂ ।
ವಿತ್ತಂ ತ್ವಂ ಮತ್ಪತೇರ್ಯಚ್ಛ ಸ ತೇ ದಾಸ್ಯತಿ ಬಾಲಕಂ ॥ ೫೩ ॥

ಷಾಣ್ಮಾಸಿಕೋ ಮೃತೋ ಬಾಲ ಇತಿ ಲೋಕೇ ವದಿಷ್ಯತಿ ।
ತಂ ಬಾಲಂ ಪೋಷಯಿಷ್ಯಾಮಿ ನಿತ್ಯಮಾಗತ್ಯ ತೇ ಗೃಹಂ ॥ ೫೪ ॥

ಫಲಮರ್ಪಯ ಧೇನ್ವೈ ತ್ವಂ ಪರೀಕ್ಷಾರ್ಥಂ ತು ಸಾಂಪ್ರತಂ ।
ತತ್ತದಾರಚಿತಂ ಸರ್ವಂ ತಥೈವ ಸ್ತ್ರೀಸ್ವಭಾವತಃ ॥ ೫೫ ॥

ಅಥ ಕಾಲೇನ ಸಾ ನಾರೀ ಪ್ರಸೂತಾ ಬಾಲಕಂ ತದಾ ।
ಆನೀಯ ಜನಕೋ ಬಾಲಂ ರಹಸ್ಯೇ ಧುಂಧುಳೀಂ ದದೌ ॥ ೫೬ ॥

---

೫೨–೫೩. ಆಗ ಆಕೆಯು ನಾನು ಗರ್ಭಿಣಿಯಾಗಿದ್ದೇನೆ. ಹೆತ್ತಮೇಲೆ ಈ ಮಗುವನ್ನು ಕೊಡುತ್ತೇನೆ. ಅಲ್ಲಿಯವರೆಗೂ ನೀನು ಗರ್ಭಿಣಿಯಂತೆ ಗುಟ್ಟಾಗಿ ಮನೆಯಲ್ಲಿಯೇ ಸುಖವಾಗಿರು. ನೀನು ಹಣವನ್ನು ನನ್ನ ಗಂಡನಿಗೆ ಕೊಟ್ಟರೆ ಅವನು ಆ ಮಗುವನ್ನು ನಿನಗೆ ಕೊಡುತ್ತಾನೆ.

೫೪. ಆರು ತಿಂಗಳಾದಮೇಲೆ ಮಗುವು ಸತ್ತುಹೋಯಿತೆಂದು ಎಲ್ಲರೂ ತಿಳಿಯುವಂತೆ ಹೇಳಿ ಆ ಮೇಲೆ ನಿತ್ಯವೂ ನಿನ್ನ ಮನೆಗೆ ಬಂದು ಆ ಮಗುವನ್ನು ಪೋಷಿಸುತ್ತೇನೆ.

೫೫. ಆ ಹಣ್ಣನ್ನು ಒಂದು ಹಸುವಿಗೆ ಕೊಟ್ಟುಬಿಡು. ಅದನ್ನು ನೀನು ಪರೀಕ್ಷಿಸು. ಎಂದಳು. ಆ ರೀತಿಯಾಗಿಯೇ ಹೆಂಗಸಿನ ಬುದ್ಧಿಗನುಗುಣವಾಗಿ ಆಕೆಯು ಮಾಡಿದಳು.

೫೬. ದಿನ ತುಂಬುತ್ತಲೂ ತಂಗಿಯು ಹೆತ್ತಳು. ಅದು ಗಂಡು ಮಗುವಾಗಿದ್ದಿತು. ಆ ಮಗುವನ್ನು ತಂದು ಆ ಧುಂಧುಗಳಿಗೆ ಗುಟ್ಟಾಗಿ ಅವಳ ಮೈದುನನು ಕೊಟ್ಟನು.

**ತಯಾ ಚ ಕಥಿತಂ ಭರ್ತ್ರೇ ಪ್ರಸೂತಂ ಸುಖಮರ್ಭಕಃ ।**
**ಲೋಕಸ್ಯ ಸುಖಮುತ್ಪನ್ನಮಾತ್ಮದೇವಪ್ರಜೋದಯಾತ್ ॥ ೫೭ ॥**

**ದದೌ ದಾನಂ ದ್ವಿಜಾತಿಭ್ಯೋ ಜಾತಕರ್ಮ ವಿಧಾಯ ಚ ।**
**ಗೀತವಾದಿತ್ರಘೋಷೋಭೂತ್ತದ್ದ್ವಾರೇ ಮಂಗಳಂ ಬಹು ॥ ೫೮ ॥**

**ಭರ್ತುರಗ್ರೇ ಸಾಬ್ರವೀದ್ವಾಕ್ಯಂ ಸ್ತನ್ಯಂ ನಾಸ್ತಿ ಕುಚೇ ಮಮ ।**
**ಅನ್ಯಸ್ತನ್ಯೇನ ನಿರ್ದುಗ್ಧಾ ಕಥಂ ಪುಷ್ಣಾಮಿ ಬಾಲಕಂ ॥ ೫೯ ॥**

**ಮತ್ಸ್ವಸಾಯಾಃ ಪ್ರಸೂತಾಯಾ ಮೃತೋ ಬಾಲಸ್ತು ವರ್ತತೇ ।**
**ತಾಮಾಕಾರ್ಯ ಗೃಹೇ ರಕ್ಷ ಸಾ ತೇಽರ್ಭಕಂ ಪೋಷಯಿಷ್ಯತಿ ॥ ೬೦ ॥**

**ಪತಿನಾ ತತ್ಕೃತಂ ಸರ್ವಂ ಪುತ್ರರಕ್ಷಣಹೇತವೇ ।**
**ಪುತ್ರಸ್ಯ ಧುಂಧುಕಾರೀತಿ ನಾಮ ಮಾತ್ರಾ ಪ್ರತಿಷ್ಠಿತಂ ॥ ೬೧ ॥**

---

೫೭. ಆಗ ಧುಂಧುಳಿಯು ಸುಖವಾಗಿ ಗಂಡುಮಗುವನ್ನು ಹೆತ್ತೆನೆಂದು ಗಂಡನಿಗೆ ಹೇಳಿದಳು. ಆತ್ಮದೇವನಿಗೆ ಮಗುವಾದುದರಿಂದ ಲೋಕಕ್ಕೇ ಸಂತೋಷವಾಯಿತು.

೫೮. ಬ್ರಾಹ್ಮಣರಿಗೆ ದಾನವನ್ನು ಬಹುವಾಗಿ ಕೊಟ್ಟನು. ಜಾತಕರ್ಮ ಮುಂತಾದುವನ್ನು ಮಾಡಿದನು. ಆಗ ಅವನ ಮನೆಯ ಬಾಗಿಲಿನಲ್ಲಿ ಮಂಗಳವಾದ್ಯಗಳು ಮೊಳಗಿದುವು.

೫೯-೬೦. ಆಗ ಆಕೆಯು ಗಂಡನನ್ನು ಕುರಿತು ನನ್ನ ಸ್ತನಗಳಲ್ಲಿ ಹಾಲಿಲ್ಲ. ಹಾಲಿಲ್ಲದಿರುವ ನಾನು ಇತರರ ಹಾಲಿನಿಂದ ಮಗುವನ್ನು ಹೇಗೆ ಬೆಳಸಲಿ ? ನನ್ನ ತಂಗಿಯು ಹೆತ್ತ ಮಗು ಸತ್ತುಹೋಗಿದೆ. ಅವಳನ್ನು ಮನೆಗೆ ಕರೆಸಿದರೆ ಆಕೆಯು ಈ ಮಗುವನ್ನು ಸಾಕುತ್ತಾಳೆ.

೬೧. ಮಗುವಿನ ಕಾಪಾಡುವಿಕೆಗೋಸ್ಕರವಾಗಿ ಆ ಆತ್ಮದೇವನು ಎಲ್ಲವನ್ನೂ ಮಾಡಿದನು. ತಾಯಿಯು ಆ ಮಗುವಿಗೆ ಧುಂಧುಕಾರೀ ಎಂದು ಹೆಸರಿಟ್ಟಳು.

ತ್ರಿಮಾಸೇ ನಿರ್ಗತೇ ಚಾಥ ಸಾ ಧೇನುಃ ಸುಷುವೇಽರ್ಭಕಂ ।
ಸರ್ವಾಂಗಸುಂದರಂ ದಿವ್ಯಂ ನಿರ್ಮಲಂ ಕನಕಪ್ರಭಂ ॥ ೬೨ ॥

ದೃಷ್ಟ್ವಾ ಪ್ರಸನ್ನೋ ವಿಪ್ರಸ್ತು ಸಂಸ್ಕಾರಾನ್ ಸ್ವಯಮಾದಧೇ ।
ಮತ್ವಾಶ್ಚರ್ಯಂ ಜನಾಸ್ಸರ್ವೇ ದಿದೃಕ್ಷಾರ್ಥಂ ಸಮಾಗತಾಃ ॥ ೬೩ ॥

ಭಾಗ್ಯೋದಯೋಽಧುನಾ ಜಾತ ಆತ್ಮದೇವಸ್ಯ ಪಶ್ಯತ ।
ಧೇನ್ವಾ ಬಾಲಃ ಪ್ರಸೂತಸ್ತು ದೇವರೂಪೀತಿ ಕೌತುಕಂ ॥ ೬೪ ॥

ನ ಜ್ಞಾತಂ ತದ್ರಹಸ್ಯಂ ತು ಕೇನಾಪಿ ವಿಧಿಯೋಗತಃ ।
ಗೋಕರ್ಣಂ ಚ ಸುತಂ ದೃಷ್ಟ್ವಾ ಗೋಕರ್ಣಂ ನಾಮ ಚಾಕರೋತ್ ॥೬೫॥

ಕಿಯತ್ಕಾಲೇನ ತೌ ಜಾತೌ ತರುಣೌ ತನಯಾವುಭೌ ।
ಗೋಕರ್ಣಃ ಪಂಡಿತೋ ಜ್ಞಾನೀ ಧುಂಧುಕಾರೀ ಮಹಾಖಲಃ ॥ ೬೬ ॥

---

೬೨. ಮೂರು ತಿಂಗಳಾದಮೇಲೆ ಆ ಹಸುವು ಒಂದು ಮಗುವನ್ನೇ ಕರು ಹಾಕಿತು. ಅದು ಸರ್ವಾಂಗ ಸುಂದರವಾಗಿಯೂ ದಿವ್ಯವಾಗಿಯೂ ನಿರ್ಮಲವಾಗಿಯೂ ಚಿನ್ನದ ಬಣ್ಣವುಳ್ಳದ್ದಾಗಿಯೂ ಇದ್ದಿತು.

೬೩. ಅದನ್ನು ನೋಡಿ ಆ ಬ್ರಾಹ್ಮಣನು ಸಂತೋಷಪಟ್ಟು ತಾನಾಗಿಯೇ ಅದಕ್ಕೆ ಸಂಸ್ಕಾರಗಳನ್ನು ಮಾಡಿದನು. ಅದನ್ನು ನೋಡಿ ಜನಗಳೆಲ್ಲರೂ ಅಲ್ಲಿಗೆ ಬಂದರು.

೬೪. ಆತ್ಮದೇವನಿಗೆ ಭಾಗ್ಯೋದಯವಾಗಿದೆ. ಅದನ್ನು ನೋಡಿರಿ. ಹಸುವು ಗಂಡು ಮಗುವನ್ನು ಹಡೆದಿದೆ. ಅವನು ದೇವರೂಪನು. ಇದು ಆಶ್ಚರ್ಯವು. ಎನ್ನುತ್ತಿದ್ದರು.

೬೫. ವಿಧಿಯೋಗದಿಂದ ಅದರ ಗುಟ್ಟು ಯಾರಿಗೂ ಗೊತ್ತಾಗಲೇ ಇಲ್ಲ. ಆ ಮಗುವಿಗೆ ಹಸುವಿನ ಕಿವಿಯಂತೆ ಕಿವಿಗಳಿದ್ದುದರಿಂದ ಅದಕ್ಕೂ ಗೋಕರ್ಣನೆಂದು ಹೆಸರಿಟ್ಟನು.

೬೬. ಹೀಗೆಯೇ ಕೆಲವು ಕಾಲ ಕಳೆಯಲು ಅವರಿಬ್ಬರಿಗೂ ತಾರುಣ್ಯವು ಬಂದಿತು. ಅವರಲ್ಲಿ ಗೋಕರ್ಣನು ಪಂಡಿತನೂ ಜ್ಞಾನಿಯೂ ಆದನು. ಧುಂಧುಕಾರಿಯು ಬಹುವಾದ ದುಷ್ಟನಾದನು.

ಸ್ನಾನಶೌಚಕ್ರಿಯಾಹೀನೋ ದುರ್ಭಕ್ಷೀ ಕ್ರೋಧಸಂಯುತಃ ।
ದುಷ್ಪರಿಗ್ರಹಕರ್ತಾ ಚ ಸರ್ವಹಸ್ತೇನ ಭೋಜನಃ ॥ ೬೭ ॥

ಚೌರಸ್ಸರ್ವಜನದ್ವೇಷೀ ಪರವೇಶ್ಮಪ್ರದೀಪಕಃ ।
ಲಾಲನಾಯಾರ್ಭಕಾನ್ ಧೃತ್ವಾ ಸದ್ಯಃ ಕೂಪೇ ನ್ಯಪಾತಯತ್ ॥ ೬೮ ॥

ಹಿಂಸಕಃ ಶಸ್ತ್ರಧಾರೀ ಚ ದೀನಾಂಧಾನಾಂ ಪ್ರಪೀಡಕಃ ।
ಚಂಡಾಲಾಭಿರತೋ ನಿತ್ಯಂ ಪಾಶಹಸ್ತಃ ಶ್ವಸಂಗತಃ ॥ ೬೯ ॥

ತೇನ ವೇಶ್ಯಾಕುಸಂಗೇನ ಪೈತ್ರಂ ವಿತ್ತಂ ತು ನಾಶಿತಂ ।
ಏಕದಾ ಪಿತರೌ ತಾಡ್ಯ ಪಾತ್ರಾಣಿ ಸ್ವಯಮಾಹರತ್ ।
ತತ್ಪಿತಾ ಕೃಪಣಃ ಪ್ರೋಚ್ಚೈಃ ಧನಹೀನೋ ರುರೋದ ಹ ॥ ೭೦ ॥

---

೬೭-೬೮. ಮತ್ತು ಸ್ನಾನ ಶೌಚಾದಿ ಕ್ರಿಯಾಹೀನನೂ ಕೆಟ್ಟದ್ದನ್ನು ತಿನ್ನುವವನೂ ಕೋಪಿಯೂ ದುರ್ದಾನಗಳನ್ನು ತೆಗೆದುಕೊಳ್ಳುವವನೂ ಕಳ್ಳನೂ ಎಲ್ಲರೊಡನೆಯೂ ದ್ವೇಷವುಳ್ಳವನೂ ಮತ್ತೊಬ್ಬರ ಮನೆಗೆ ಒಳ್ಳಿಯವನ್ನು ಮಾಡುವವನೂ ಆಡಿಸುವುದಕ್ಕೋಸ್ಕರ ಮಕ್ಕಳನ್ನು ಕರೆದುಕೊಂಡು ಹೋಗಿ ಬಾವಿಯಲ್ಲಿ ಹಾಕುವವನೂ ಆಗಿದ್ದನು.

೬೯. ಹಿಂಸಕನೂ ಶಸ್ತ್ರವನ್ನು ಹಿಡಿವವನೂ ಬಡವರನ್ನೂ ಕುರುಡರನ್ನೂ ಹಿಂಸಿಸುವವನೂ ಚಂಡಾಲರಲ್ಲಿ ಸ್ನೇಹವುಳ್ಳವನೂ ಆಗಿ ಕೈಯ್ಯಲ್ಲಿ ಬಲೆಯನ್ನು ಹಿಡಿದುಕೊಂಡು ಜೊತೆಯಲ್ಲಿ ನಾಯನ್ನು ಇಟ್ಟುಕೊಂಡೂ ಇರುತ್ತಿದ್ದನು.

೭೦. ಅವನು ಸೂಳೆಯರ ಕೆಟ್ಟ ಸಹವಾಸವನ್ನು ಮಾಡಿ ತಂದೆಯ ಹಣವನ್ನೆಲ್ಲಾ ನಾಶಮಾಡಿದನು. ಒಂದುಸಾರಿ ತಂದೆತಾಯಿಗಳನ್ನು ಹೊಡೆದು ಪಾತ್ರೆಗಳೆಲ್ಲವನ್ನೂ ಹೊತ್ತುಕೊಂಡು ಹೋದನು. ಆಗ ತಂದೆಯು ಬಹಳವಾಗಿ ಕಷ್ಟದಿಂದ ಗಟ್ಟಿಯಾಗಿ ಅಳುತ್ತಿದ್ದನು.

॥ ಬ್ರಾಹ್ಮಣ ಉವಾಚ ॥

ವಂಧ್ಯತ್ವಂ ತು ಸಮೀಚೀನಂ ಕುಪುತ್ರೋ ದುಃಖದಾಯಕಃ ।
ಕ್ವ ತಿಷ್ಠಾಮಿ ಕ್ವ ಗಚ್ಛಾಮಿ ಕೋ ಮೇ ದುಃಖಂ ವ್ಯಪೋಹಯೇತ್ ।
ಪ್ರಾಣಾಂಸ್ತ್ಯಜಾಮಿ ದುಃಖೇನ ಹಾ ಕಷ್ಟಂ ಮಮ ಸಂಸ್ಥಿತಂ ॥ ೭೦ ॥

॥ ಕುಮಾರಾ ಊಚುಃ ॥

ತದಾನೀಂ ತು ಸಮಾಗತ್ಯ ಗೋಕರ್ಣೋ ಜ್ಞಾನಸಂಯುತಃ ।
ಬೋಧಯಾಮಾಸ ಜನಕಂ ವೈರಾಗ್ಯಂ ಪರಿದರ್ಶಯನ್ ॥ ೭೧ ॥

॥ ಗೋಕರ್ಣ ಉವಾಚ ॥

ಅಸಾರಃ ಖಲು ಸಂಸಾರೋ ದುಃಖರೂಪೀ ವಿಮೋಹಕಃ ।
ಕಃ ಸುತಃ ಕಸ್ಯ ಚ ಧನಂ ಸ್ನೇಹವಾನ್ ಜ್ವಲತೇಽನಿಶಂ ॥ ೭೩ ॥

ನ ಚೇಂದ್ರಸ್ಯ ಸುಖಂ ಕಿಂಚಿನ್ನ ಸುಖಂ ಚಕ್ರವರ್ತಿನಾಂ ।
ಸುಖಮಸ್ತಿ ವಿರಕ್ತಸ್ಯ ಮುನೇರೇಕಾಂತಜೀವಿನಃ ॥ ೭೪ ॥

---

೭೦. ಬ್ರಾಹ್ಮಣನು ಹೇಳಿದನು–ಮಕ್ಕಳಿಲ್ಲದೆ ಬಂಜೆಯಾಗಿರುವುದೇ ಮೇಲು. ಕೆಟ್ಟ ಪುತ್ರನು ಹುಟ್ಟಬಾರದು. ಅವನು ದುಃಖವನ್ನುಂಟುಮಾಡುತ್ತಾನೆ. ಎಲ್ಲಿ ಇರಲಿ ? ಎಲ್ಲಿಗೆ ಹೋಗಲಿ ? ನನ್ನ ದುಃಖವನ್ನು ಯಾರು ತಾನೆ ನಾಶಮಾಡಿಯಾರು ? ದುಃಖದಿಂದ ಸತ್ತುಹೋಗುತ್ತೇನೆ. ಅಯ್ಯೋ ! ನನಗೆ ಕಷ್ಟವು ಬಂದಿತಲ್ಲ !

೭೧. ಸನತ್ಕುಮಾರರು ಹೇಳಿದರು– ಆಗ ಜ್ಞಾನಿಯಾದ ಗೋಕರ್ಣನು ಬಂದು ವೈರಾಗ್ಯವನ್ನು ತೋರಿಸುತ್ತ ಅವನಿಗೆ ಜ್ಞಾನಬರುವಂತೆ ಮಾಡಿ ಸಮಾಧಾನಪಡಿಸಿದನು.

೭೩. ಗೋಕರ್ಣನು ಹೇಳಿದನು- ಈ ಸಂಸಾರವು ಸಾರವಿಲ್ಲದ್ದು. ದುಃಖರೂಪವಾದುದು. ಅಜ್ಞಾನವನ್ನುಂಟುಮಾಡುತ್ತದೆ. ಮಗನಾರು ? ಹಣವು ಯಾರದು ? ಸ್ನೇಹವಿರುವ ಹೊತ್ತಿಗೆ ಇದೆಲ್ಲವೂ ಕಾಣುತ್ತದೆ.

೭೪. ಇಂದ್ರನಿಗೂ ಕೂಡ ಕೊಂಚವೂ ಸುಖವಿಲ್ಲ. ಚಕ್ರವರ್ತಿಗಳಿಗೂ ಸ್ವಲ್ಪವೂ ಸುಖವಿಲ್ಲ. ಗುಟ್ಟಾಗಿದ್ದುಕೊಂಡು ವಿರಕ್ತನಾಗಿರುವ ಮುನಿಗೆ ಮಾತ್ರ ಸುಖವೆಂಬುದಿದೆ.

ಮುಂಚಾಽಜ್ಞಾನಂ ಪ್ರಜಾರೂಪಂ ಮೋಹತೋ ನರಕೇ ಗತಿಃ ।
ನಿಪತಿಷ್ಯತಿ ದೇಹೋಽಯಂ ಸರ್ವಂ ತ್ಯಕ್ತ್ವಾ ವನಂ ವ್ರಜ ॥ ೭೫ ॥

॥ ಸನತ್ಕುಮಾರಾ ಊಚುಃ ॥

ತದ್ವಾಕ್ಯಂ ತು ಸಮಾಕರ್ಣ್ಯ ಗಂತುಕಾಮಃ ಪಿತಾಬ್ರವೀತ್ ॥ ೭೬ ॥

॥ ಬ್ರಾಹ್ಮಣ ಉವಾಚ ॥

ಕಿಂ ಕರ್ತವ್ಯಂ ವನೇ ತಾತ ತತ್ತ್ವಂ ವದ ಸವಿಸ್ತರಂ ।
ಅಂಧಕೂಪೇ ಸ್ನೇಹಪಾಶೈರ್ಬದ್ಧಃ ಪಂಗುರಹಂ ಶಠಃ ।
ಕರ್ಮಣಾ ಪತಿತೋ ನೂನಂ ಮಾಮುದ್ಧರ ದಯಾನಿಧೇ ॥ ೭೭ ॥

॥ ಗೋಕರ್ಣ ಉವಾಚ ॥

ದೇಹೇಸ್ಥಿಮಾಂಸರುಧಿರೇಽಭಿಮತಿಂ ತ್ಯಜ ತ್ವಂ
ಜಾಯಾಸುತಾದಿಷು ಸದಾ ಮಮತಾಂ ವಿಮುಂಚ ।
ಪಶ್ಯಾನಿಶಂ ಜಗದಿದಂ ಕ್ಷಣಭಂಗನಿಷ್ಠಂ
ವೈರಾಗ್ಯರಾಗರಸಿಕೋ ಭವ ಭಕ್ತಿನಿಷ್ಠಃ ॥ ೭೮ ॥

---

೭೫. ಈ ಮಕ್ಕಳ ರೂಪವಾದ ಅಜ್ಞಾನವನ್ನು ಬಿಡು. ನೀನು ಅವರಲ್ಲಿ ಮೋಹವಿಟ್ಟರೆ ನರಕವು ಬರುತ್ತದೆ. ಈ ದೇಹವು ಎಲ್ಲವನ್ನೂ ಬಿಟ್ಟು ನಾಶವಾಗುತ್ತದೆ. ಆದುದರಿಂದ ನೀನು ಸರ್ವತ್ಯಾಗವನ್ನೂ ಮಾಡಿ ಕಾಡಿಗೆ ಹೋಗು.

೭೬. ಸನತ್ಕುಮಾರರು ಹೇಳಿದರು- ಆ ಗೋಕರ್ಣನ ಮಾತನ್ನು ಕೇಳಿ ಕಾಡಿಗೆ ಹೋಗಲಿಚ್ಛೆಯುಳ್ಳವನಾಗಿ ತಂದೆಯು ಇಂತೆಂದನು.

೭೭. ಬ್ರಾಹ್ಮಣನು ಹೇಳಿದನು- ಅಪ್ಪ ! ಕಾಡಿನಲ್ಲೇನು ಮಾಡಬೇಕು? ಅದೆಲ್ಲವನ್ನೂ ಸರಿಯಾಗಿ ಹೇಳು. ಸ್ನೇಹವೆಂಬ ಹಗ್ಗದಿಂದ ಕಟ್ಟಲ್ಪಟ್ಟು ಕುಂಟನಾಗಿ ಅಯೋಗ್ಯನಾಗಿ ಕತ್ತಲೆಯ ಬಾವಿಯಲ್ಲಿ ಬಿದ್ದಿದ್ದೇನೆ. ಹಿಂದಿನ ಕೆಟ್ಟ ಕರ್ಮದಿಂದ ನಾನು ಬಿದ್ದಿರುವೆನು. ಇದು ನಿಶ್ಚಯವು. ಎಲೈ ದಯಾವಂತನೇ ! ನನ್ನನ್ನು ಮೇಲಕ್ಕೆ ಎತ್ತು.

೭೮. ಗೋಕರ್ಣನು ಹೇಳಿದನು- ಮೂಳೆ ಮಾಂಸಗಳಿಂದ ಕೂಡಿದ ಈ ದೇಹದಲ್ಲಿ ಅಭಿಮಾನವನ್ನು ಬಿಡು ಕ್ಷಣಭಂಗುರವಾದ ಈ ಜಗತ್ತನ್ನು ನೀನು ನೋಡು. ವೈರಾಗ್ಯದಲ್ಲಿ ಆಸೆಯುಳ್ಳವನಾಗು. ದೇವರಲ್ಲಿ ಭಕ್ತಿಯನ್ನು ಹೊಂದು.

ಧರ್ಮಂ ಭಜಸ್ವ ಸತತಂ ತ್ಯಜ ಲೋಕಧರ್ಮಾನ್
ಸೇವಸ್ವ ಸಾಧುಪುರುಷಾನ್ ಜಹಿ ಕಾಮತೃಷ್ಣಾಂ ।
ಅನ್ಯಸ್ಯ ದೋಷಗುಣಚಿಂತನಮಾಶುಮುಕ್ತ್ವಾ
ಸೇವಾಕಥಾರಸಮಹೋ ನಿತರಾಂ ಪಿಬ ತ್ವಂ ॥ ೭೯ ॥

॥ ಕುಮಾರಾ ಊಚುಃ ॥

ಏವಂ ಸುತೋಕ್ತಿವಶತೋಽಪಿ ಗೃಹಂ ವಿಹಾಯ
ಯಾತೋ ವನಂ ಸ್ಥಿರಮತಿರ್ಗತಷಷ್ಠಿವರ್ಷಃ ।
ಯುಕ್ತೋ ಹರೇರನುದಿನಂ ಪರಿಚರ್ಯಯಾಸೌ
ಶ್ರೀಕೃಷ್ಣಮಾಪ ನಿಯತಂ ದಶಮಸ್ಯ ಪಾಠಾತ್ ॥ ೮೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಭಾಗವತ ಮಾಹಾತ್ಮ್ಯೇ ವಿಪ್ರ ಮೋಕ್ಷ ಕಥನಂ
ನಾಮ ದ್ವಿನವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೭೯. ಧರ್ಮವನ್ನು ಅನುಸರಿಸು. ಈ ಲೋಕದ ನಡತೆಗಳನ್ನು ಬಿಡು. ಸಾಧುಪುರುಷರನ್ನು ಸೇವಿಸು. ಕಾಮದ ಆಸೆಯನ್ನು ಬಿಡು. ಮತ್ತೊಬ್ಬನ ದೋಷಗುಣಗಳ ಯೋಚನೆಯನ್ನು ಬಿಟ್ಟು ಸ್ವಾಮಿಯಲ್ಲಿಯೇ ಯಾವಾಗಲೂ ಆಸಕ್ತನಾಗಿರು.

೮೦. ಸನತ್ಕುಮಾರರು ಹೇಳಿದರುಈ ರೀತಿಯಾಗಿ ಆ ಮಗನ ಮಾತಿನಂತೆ ಆತನು ಅರವತ್ತು ವರ್ಷ ಕಳೆದಿದ್ದರೂ ಮನಸ್ಸನ್ನು ಗಟ್ಟಿಮಾಡಿಕೊಂಡು ಕಾಡಿಗೆ ಹೋದನು. ಮತ್ತು ಯಾವಾಗಲೂ ಹರಿಯನ್ನೇ ಧ್ಯಾನಿಸುತ್ತ ಅವನನ್ನೇ ಸೇವಿಸುತ್ತ ಭಾಗವತದ ದಶಮಸ್ಕಂಧವನ್ನು ಪಠಿಸುತ್ತ ಶ್ರೀ ಕೃಷ್ಣನನ್ನೇ ಹೊಂದಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಭಾಗವತ ಮಹಿಮೆಯಲ್ಲಿ ವಿಪ್ರ ಮೋಕ್ಷ ಕಥನ
ಎಂಬ ನೂರ ತೊಂಭತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ತ್ರಿನವತ್ಯಧಿಕಶತತಮೋಽಧ್ಯಾಯಃ ||



|| ಸೂತ ಉವಾಚ ||

ಪಿತರ್ಯುಪರತೇ ತೇನ ಜನನೀ ತಾಡಿತಾ ಭೃಶಂ ।
ಕ್ವಂ ವಿತ್ತಂ ತಿಷ್ಠತಿ ಬ್ರೂಹಿ ಹನಿಷ್ಯೇ ಲತ್ತಯಾ ನ ಚೇತ್ || ೧ ||

ಇತಿ ತದ್ವಾಕ್ಯ ಸಂತ್ರಾಸಾಜ್ಜನನ್ಯಾ ಪುತ್ರದುಃಖತಃ ।
ಕೂಪೇ ಪಾತಃ ಕೃತೋ ರಾತ್ರೌ ತೇನ ಸಾ ನಿಧನಂ ಗತಾ || ೨ ||

ಗೋಕರ್ಣಸ್ತೀರ್ಥಯಾತ್ರಾರ್ಥಂ ನಿರ್ಗತೋ ಯೋಗಸಂಸ್ಥಿತಃ ।
ನ ದುಃಖಂ ನ ಸುಖಂ ತಸ್ಯ ನ ವೈರೀ ನಾಪಿ ಬಾಂಧವಃ || ೩ ||

---

## ನೂರ ತೊಂಭತ್ತಮೂರನೆಯ ಅಧ್ಯಾಯವು



೧. ಸೂತನು ಹೇಳಿದನು-ತಂದೆಯು ಸತ್ತುಹೋಗಲು ಧುಂಧುಕಾರಿಯು ಬಹುವಾಗಿ ತಾಯಿಯನ್ನು ಹೊಡೆದನು. ಮತ್ತು ಹಣವೆಲ್ಲಿದೆ? ಹೇಳು. ಇಲ್ಲದಿದ್ದರೆ ನಾನು ಜೂಜಾಡಲು ಹಿಡಿದಿರುವ ಈ ದಾಳದಿಂದಲೇ ಹೊಡೆಯುತ್ತೇನೆ. ಎಂದನು.

೨. ಈ ರೀತಿಯಾಗಿ ಅವನ ಹೆದರಿಕೆಯಿಂದ ದುಃಖಗೊಂಡು ಆಕೆಯು ರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಬಾವಿಗೆ ಬಿದ್ದು ಸತ್ತುಹೋದಳು.

೩. ಯೋಗವನ್ನು ಮಾಡುತ್ತಿದ್ದ ಈ ಗೋಕರ್ಣನು ತೀರ್ಥಯಾತ್ರೆ ಗೋಸ್ಕರ ಹೊರಟು ಹೋದನು. ಅವನಿಗೆ ದುಃಖವೂ ಇಲ್ಲ. ಸುಖವೂ ಇಲ್ಲ. ಶತ್ರು ಮಿತ್ರ ಬಂಧುವೆಂಬ ಭೇದವೇ ಅವನಿಗಿಲ್ಲ.

ಧುಂಧುಕಾರೀ ಗೃಹೇಽತಿಷ್ಠತ್ಪಂಚಪಣ್ಯವಧೂವೃತಃ ।
ಅತ್ಯುಗ್ರಕರ್ಮಕರ್ತಾ ಚ ತತ್ಪೋಷಣ ವಿಮೂಢಧೀಃ ॥ ೪ ॥

ಏಕದಾ ಕುಲಟಾಸ್ತಾಸ್ತು ಭೂಷಣಾನ್ಯಭಿಲಿಪ್ಸವಃ ।
ತದರ್ಥಂ ನಿರ್ಗತೋ ಗೇಹಾತ್ಕಾಮಾಂಧೋ ಮೃತ್ಯುಮಸ್ಮರನ್ ॥ ೫ ॥

ಯತಸ್ತತಶ್ಚ ಸಂಹೃತ್ಯ ವಿತ್ತಂ ವೇಶ್ಮ ಪುನರ್ಗತಃ ।
ತಾಭ್ಯೋಽಯಚ್ಛತ್ಸುವಸ್ತ್ರಾಣಿ ಭೂಷಣಾನಿ ಕಿಯಂತಿ ಚ ॥ ೬ ॥

ಬಹುವಿತ್ತಚಯಂ ದೃಷ್ಟ್ವಾ ರಾತ್ರೌ ನಾರ್ಯೋ ವ್ಯಚಾರಯನ್ ।
ಚೌರ್ಯಂ ಕರೋತ್ಯಸೌ ನಿತ್ಯಮತೋ ರಾಜಾ ಗ್ರಹೀಷ್ಯತಿ ॥ ೭ ॥

ವಿತ್ತಂ ಹೃತ್ವಾ ಪುನಶ್ಚೈನಂ ಮಾರಯಿಷ್ಯತಿ ನಿಶ್ಚಿತಂ ।
ಅತೋಽರ್ಥಗುಪ್ತಯೇ ಗೂಢಮಸ್ಮಾಭಿಃ ಕಿಂ ನ ಹನ್ಯತೇ ॥ ೮ ॥

---

೪. ಈ ಧುಂಧುಕಾರಿಯು ಮನೆಯಲ್ಲಿ ಐದು ಜನ ಸೂಳೆಯರನ್ನು ಇಟ್ಟುಕೊಂಡು ಅವರನ್ನು ಪೋಷಿಸುತ್ತಾ ಬಹು ಕೆಟ್ಟ ಕೆಲಸಗಳನ್ನು ಮಾಡುತ್ತ ಅವರ ಶುಶ್ರೂಷೆಯಲ್ಲಿಯೇ ಬುದ್ಧಿಯುಳ್ಳವನಾಗಿ ಇದ್ದನು.

೫. ಆ ಹಾದರಗಿತ್ತಿಯರು ಒಂದು ಸಾರಿ ಒಡವೆಗಳನ್ನು ಕೇಳಿದರು ಅದಕ್ಕೋಸ್ಕರವಾಗಿ ಮನೆಯಿಂದ ಹೊರಟನು. ಕಾಮಾಂಧನಾಗಿದ್ದುದರಿಂದ ಸಾವನ್ನೂ ಕೂಡ ಯೋಚಿಸಲೇ ಇಲ್ಲ.

೬. ಅವನು ಎಲ್ಲಿ ಎಲ್ಲಿಯೋ ಹಣ ಬಟ್ಟೆಗಳನ್ನು ಕದ್ದುಕೊಂಡು ಮನೆಗೆ ಮತ್ತೆ ಬಂದನು. ಮತ್ತು ಅಲ್ಲಿಂದ ತಂದ ಒಡವೆಗಳನ್ನೂ ಸೀರೆಗಳನ್ನೂ ಅವರಿಗೆ ಬಹುವಾಗಿ ಕೊಟ್ಟನು.

೭-೮. ಇವನು ತಂದ ಬಹುವಾದ ಹಣವನ್ನೂ ಒಡವೆಯನ್ನೂ ಬಟ್ಟೆಯನ್ನೂ ಆ ಹೆಂಗಸರು ನೋಡಿ ರಾತ್ರಿಯಲ್ಲಿ ಇಂತೆಂದು ಯೋಚಿಸಿದರು. ಇವನು ನಿತ್ಯವೂ ಕಳ್ಳತನಮಾಡುತ್ತಾನೆ. ಆದುದರಿಂದ ರಾಜನು ಇವನನ್ನು ಹಿಡಿದು ಬಿಡುತ್ತಾನೆ. ಹಣವನ್ನೆಲ್ಲಾ ಕಿತ್ತುಕೊಂಡು ಇವನನ್ನು ಕೊಂದುಹಾಕುತ್ತಾನೆ. ಇದು ಖಂಡಿತ. ಇವನಲ್ಲಿರುವ ಹಣವೆಲ್ಲವೂ ಹೋದಮೇಲೆ ನಮಗೆ ಕಷ್ಟವುಂಟಾಗುತ್ತದೆ ಆದುದರಿಂದ ನಾವೇ ಈ ಹಣವನ್ನೆಲ್ಲಾ ಗುಟ್ಟಾಗಿ ತೆಗೆದು ಕೂಡಿಟ್ಟುಕೊಳ್ಳಬೇಕು. ಇವನನ್ನು ಯಾರಿಗೂ ತಿಳಿಯದಂತೆ ಕೊಂದುಹಾಕೋಣ. ಹಾಗಾದರೆ ಹಣವೆಲ್ಲವೂ ಉಳಿದುಕೊಳ್ಳುತ್ತದೆ.

ನಿಹತ್ಯೈನಂ ಗೃಹೀತ್ವಾರ್ಥಂ ಯಾಸ್ಯಾಮೋ ಯತ್ರ ಕುತ್ರ ಚಿತ್ ।
ಇತಿ ತಾ ನಿಶ್ಚಯಂ ಕೃತ್ವಾ ಗುಪ್ತಂ ಸಂಬಧ್ಯ ರಶ್ಮಿಭಿಃ ॥ ೯ ॥

ಪಾಶಂ ಕಂಠೇ ನಿಧಾಯಾಸ್ಯ ತನ್ಮೃತ್ಯುಮುಪಚಕ್ರಮುಃ ।
ತ್ವರಿತಂ ನ ಮಮಾರಾಸೌ ಚಿಂತಾಯುಕ್ತಾಸ್ತದಾಭವನ್ ॥ ೧೦ ॥

ತಪ್ತಾಂಗಾರಸಮೂಹಾಂಶ್ಚ ತಸ್ಮುಖೇ ಹಿ ವಿಚಿಕ್ಷಿಪುಃ ।
ಅಗ್ನಿಜ್ವಾಲಾತಿದುಃಖೇನ ವ್ಯಾಕುಲೋ ನಿಧನಂ ಗತಃ ॥ ೧೧ ॥

ತದ್ದೇಹಂ ಮುಮುಚುರ್ಗರ್ತೇ ಪ್ರಾಯಃ ಸಾಹಸಿಕಾಃ ಸ್ತ್ರಿಯಃ ।
ನ ಜ್ಞಾತಂ ತದ್ರಹಸ್ಯಂ ತು ಕೇನಾಪೀದಂ ತಥೈವ ಚ ॥ ೧೨ ॥

ಲೋಕೈಃ ಪೃಷ್ಟಾ ವದಂತಿ ಸ್ಮ ದೂರಂ ಯಾತಃ ಪ್ರಿಯೋ ಹಿ ನಃ ।
ಆಗಮಿಷ್ಯತಿ ವರ್ಷೇಽಸ್ಮಿನ್ವಿತ್ತಲೋಭವಿಕರ್ಷಿತಃ ॥ ೧೩ ॥

---

೯-೧೦. ಇವನನ್ನು ಕೊಂದು ಹಣವನ್ನು ತೆಗೆದುಕೊಂಡು ಎಲ್ಲಿಗಾದರೂ ಹೋಗೋಣ! ಎಂಬುದಾಗಿ ಆ ಸೂಳೆಯರು ನಿಶ್ಚಯಿಸಿಕೊಂಡು ಅವನು ನಿದ್ರಿಸುತ್ತಿರುವಾಗ ಎಲ್ಲರೂ ಸೇರಿ ಅವನನ್ನು ಹಗ್ಗದಿಂದ ಕಟ್ಟಿದರು. ಮತ್ತು ಕತ್ತಿಗೆ ಹಗ್ಗವನ್ನು ಹಾಕಿ ಬಿಗಿಯುತ್ತಾ ಕೊಲ್ಲವುದಕ್ಕೆ ಮೊದಲು ಮಾಡಿದರು. ಆದರೂ ಅವನು ಬೇಗ ಸಾಯದಿರಲು ಆಗ ಅವರಿಗೆ ಯೋಚನೆಯುಂಟಾಯಿತು

೧೧. ಆಗ ತನಿಗೆಂಡವನ್ನು ತಂದು ಅವನ ಬಾಯಿಗೂ ಮುಖದ ಮೇಲೂ ಹಾಕಿದರು. ಆ ಬೆಂಕಿಯ ಬಿಸಿಯನ್ನು ತಡೆಯಲಾರದೆ ದುಃಖಪಡುತ್ತಾ ಸತ್ತುಹೋದನು.

೧೨. ಆ ಹೆಣವನ್ನು ತೆಗೆದುಕೊಂಡು ಹೋಗಿ ಒಂದು ಹಳ್ಳದಲ್ಲಿ ಹಾಕಿದರು. ಹೆಂಗಸರು ಸಾಧಾರಣವಾಗಿ ಸಾಹಸಿಕರಾಗಿಯೇ ಇರುವರು ಅದು ಯಾರಿಗೂ ತಿಳಿಯಲೇ ಇಲ್ಲ.

೧೩. ಜನಗಳು ಕೇಳಿದರೆ ನಮ್ಮ ಗಂಡನು ದೂರದೇಶಕ್ಕೆ ಹೋಗಿರುವನು. ಅವನಿಗೆ ಹಣವೆಂದರೆ ಬಹಳ ಆಸೆಯು. ಬರಲು ಇನ್ನೂ ಒಂದು ವರ್ಷ ಬೇಕು. ಎನ್ನುತ್ತಿದ್ದರು.

ಸ್ತ್ರೀಣಾಂ ನೈವ ತು ವಿಶ್ವಾಸೋಽನೃತಾನಾಂ ಕಾರಯೇದ್ಬುಧಃ ।
ವಿಶ್ವಾಸೇ ಯಃ ಸ್ಥಿತೋ ಮೂಢಃ ಸ ದುಃಖೈಃ ಪರಿಭೂಯತೇ ॥ ೧೪ ॥

ಸುಧಾಮಯಂ ವಚೋ ಯಾಸಾಂ ಕಾಮಿನಾಂ ರಸವರ್ಧನಂ ।
ಹೃದಯಂ ಕ್ಷುರಧಾರಾಭಂ ಪ್ರಿಯಃ ಕೋ ನಾಮ ಯೋಷಿತಾಂ ॥ ೧೫ ॥

ಸಂಹೃತ್ಯ ವಿತ್ತಂ ತಾ ಯಾತಾಃ ಕುಲಟಾ ಬಹುಭರ್ತೃಕಾಃ ।
ಧುಂಧುಕಾರೀ ಬಭೂವಾಥ ಮಹಾನ್ಪ್ರೇತಃ ಕುಕರ್ಮತಃ ॥ ೧೬ ॥

ವಾತ್ಯಾರೂಪಧರೋ ನಿತ್ಯಂ ಧಾವನ್ ದಶದಿಶಾಂತರಂ ।
ಶೀತಾತಪಪರಿಕ್ಲಿಷ್ಟೋ ನಿರಾಹಾರಃ ಪಿಪಾಸಿತಃ ॥ ೧೭ ॥

ನ ಲೇಭೇ ಶರಣಂ ಕುತ್ರ ಹಾ ದೈವೇತಿ ಮುಹುರ್ವದನ್ ।
ಕಿಯತ್ಕಾಲೇನ ಗೋಕರ್ಣೋ ಮೃತಂ ಲೋಕಾದಬುಧ್ಯತ ॥ ೧೮ ॥

---

೧೪. ಸುಳ್ಳನ್ನೇ ಪ್ರಧಾನವಾಗಿಟ್ಟುಕೊಂಡಿರುವ ಹೆಂಗಸರಲ್ಲಿ ತಿಳಿವಳಿಕೆ ಯುಳ್ಳವನು ವಿಶ್ವಾಸವಿಡಕೂಡದು ಅವರಲ್ಲಿ ವಿಶ್ವಾಸವಿಡುವ ದಡ್ಡನು ಬಹು ವಾದ ದುಃಖವನ್ನು ಹೊಂದಿ ಕಷ್ಟಪಡುತ್ತಾನೆ.

೧೫. ಅವರ ಮಾತು ಅಮೃತದಂತಿರುತ್ತದೆ. ಕಾಮಿಗಳಿಗೆ ಕಾಮರಸ ವನ್ನು ಹೆಚ್ಚಿಸುತ್ತದೆ. ಹೃದಯವು ಕತ್ತಿಯ ಅಲಗಿನಂತಿರುವುದು. ಲೋಕದಲ್ಲಿ ಹೆಂಗಸರಿಗೆ ಪ್ರೀತಿಪಾತ್ರರೊಬ್ಬರೂ ಇಲ್ಲ.

೧೬. ಬಹಳ ಮಿಂಡಂದಿರುಳ್ಳ ಆ ಹಾದರಗಿತ್ತಿಯರು ಆ ಹಣವನ್ನೆಲ್ಲಾ ಸಂಗ್ರಹಿಸಿಕೊಂಡು ಹೊರಟುಹೋದರು. ಈ ಧುಂಧುಕಾರಿಯು ತನ್ನ ಕೆಟ್ಟ ಪಾಪದ ಸ್ಥಿತಿಯಿಂದ ದೊಡ್ಡ ಪ್ರೇತವಾಗಿ ಆದನು.

೧೭-೧೮. ಮತ್ತು ಸುಂಟರಗಾಳಿಯ ರೂಪವನ್ನು ಹೊಂದಿ ಎಲ್ಲಾ ಕಡೆ ಯಲ್ಲಿಯೂ ಓಡಾಡುತ್ತ ಅಲೆಯುತ್ತಿದ್ದನು. ಶೀತ ಉಷ್ಣಗಳಿಂದ ತೊಂದರೆ ಪಡುತ್ತಾ ಹಸಿವು ಬಾಯಾರಿಕೆಗಳನ್ನು ಹೊಂದಿ ಅಯ್ಯೋ ದೇವರೆ! ಎಂದು ಹೇಳಿ ಅಳುತ್ತಿದ್ದನು. ಇಷ್ಟಾದರೂ ಯಾರೂ ರಕ್ಷಕರು ಸಿಕ್ಕಲಿಲ್ಲ. ಹೀಗಿರಲು ಎಷ್ಟೋ ದಿವಸಗಳ ಮೇಲೆ ಆ ಗೋಕರ್ಣನು ಧುಂಧುಮಾರನು ಸತ್ತನೆಂದು ಜನಗಳು ಹೇಳಿದುದನ್ನು ಕೇಳಿದನು.

ಅನಾಥಂ ತಂ ವಿದಿತ್ವೈವ ಗಯಾಶ್ರಾದ್ಧಮಚೀಕರತ್ ।
ಯಸ್ಮಿಂಸ್ತೀರ್ಥೇ ತು ಸಂಯಾತಿ ತತ್ರ ಶ್ರಾದ್ಧಂ ಪ್ರವರ್ತಯೇ || ೧೯ ||

ಏವಂ ಭ್ರಮನ್ಸ ಗೋಕರ್ಣಃ ಸ್ವಪುರಂ ಸಮುಪೇಯಿವಾನ್ ।
ರಾತ್ರೌ ಗೃಹಾಂಗಣೇ ಸ್ವಪ್ತುಮಾಗತೋಽಲಕ್ಷಿತಃ ಪರೈಃ || ೨೦ ||

ತತ್ರ ಸುಪ್ತಂ ತು ವಿಜ್ಞಾಯ ಧುಂಧುಕಾರೀ ಸ್ವಬಾಂಧವಂ ।
ನಿಶೀಥೇ ದರ್ಶಯಾಮಾಸ ಮಹಾರೌದ್ರತರಂ ವಪುಃ || ೨೧ ||

ಸಕೃನ್ಮೇಷಃ ಸಕೃದ್ಧಸ್ತೀ ಸಕೃಚ್ಚ ಮಹಿಷೋಽಭವತ್ ।
ಸಕೃದಿಂದ್ರಃ ಸಕೃಚ್ಚಾಗ್ನಿಃ ಪುನಶ್ಚ ಪುರುಷೋಽಭವತ್ || ೨೨ ||

---

೧೯. ಆ ಧುಂಧುಕಾರಿಯು ಅನಾಥನೆಂದು ತಿಳಿದು ಅವನಿಗೆ ಗಯಾ ಶ್ರಾದ್ಧವನ್ನು ಮಾಡಿದನು. ಮತ್ತು ತಾನು ಯಾವ ಯಾವ ತೀರ್ಥಕ್ಕೆ ಹೋದರೂ ಅಲ್ಲಲ್ಲಿಯೂ ಅವನಿಗೆ ಶ್ರಾದ್ಧವನ್ನು ಮಾಡುತ್ತಿದ್ದನು. ಹೀಗೆಯೇ ಸುತ್ತುತ್ತಲಿದ್ದು ಕೊನೆಗೆ ತನ್ನ ಊರಿಗೆ ಬಂದು ಸೇರಿದನು.

೨೦-೨೧. ಹೀಗೆ ಬಂದ ಗೋಕರ್ಣನು ತನ್ನ ಮನೆಯಲ್ಲಿ ಮಲಗಲು ಬಂದನು. ಆಗ ಇನ್ನೊಬ್ಬರೂ ಅವನನ್ನು ನೋಡಲೇ ಇಲ್ಲ. ಅಲ್ಲಿ ಆ ಬಂಧುವಾದ ಗೋಕರ್ಣನು ಮಲಗಿರಲು ಈ ಧುಂಧುಕಾರಿಯು ರಾತ್ರಿಯಲ್ಲಿ ತನ್ನ ಅ ಉಗ್ರವಾದ ಪ್ರೇತಭಾವವನ್ನು ತೋರಿಸಿದನು.

೨೨ ಅವನು ತನ್ನ ಪ್ರೇತತ್ವಬಲದಿಂದ ಒಂದು ಸಾರಿ ಆಡಾಗಿಯೂ, ಮತ್ತೊಂದು ಬಾರಿ ಆನೆಯಾಗಿಯೂ, ಇನ್ನೊಂದು ಬಾರಿ ಎಮ್ಮೆಯಾಗಿಯೂ ಆದನು. ಅಲ್ಲದೆ ಇಂದ್ರ ಅಗ್ನಿಯರ ಆಕಾರದಿಂದ ಕಾಣಿಸಿಕೊಂಡು ಮತ್ತೆ ಮನುಷ್ಯರ ಆಕಾರದಿಂದಲೂ ಕಾಣಿಸಿಕೊಂಡನು.

ನೈಪರೀತ್ಯಮಿದಂ ದೃಷ್ಟ್ವಾ ಗೋಕರ್ಣೋ ಧೈರ್ಯಸಂಯುತಃ ।
ಅಯಂ ದುರ್ಗತಿಕಃ ಕೋಽಪಿ ನಿಶ್ಚಿತ್ಯಾಥ ತಮಬ್ರವೀತ್ ॥ ೨೩ ॥

॥ ಗೋಕರ್ಣ ಉವಾಚ ॥

ಕಸ್ತ್ವಮುಗ್ರತರೋ ರಾತ್ರೌ ಕುತೋ ಯಾತೋ ದಶಾಮಿಮಾಂ ।
ಕಿಂ ವಾ ಪ್ರೇತಃ ಪಿಶಾಚೋ ವಾ ರಾಕ್ಷಸೋಽಸೀತಿ ಶಂಸ ನಃ ॥ ೨೪ ॥

॥ ಸೂತ ಉವಾಚ ॥

ಏವಂ ಪೃಷ್ಟಸ್ತದಾ ತೇನ ರುರೋದೋಚ್ಚೈಃ ಪುನಃ ಪುನಃ ।
ಅಶಕ್ತೋ ವಚನೋಚ್ಚಾರೇ ಸಂಜ್ಞಾಮಾತ್ರಂ ಚಕಾರ ಹ ॥ ೨೫ ॥

ತತೋಂಜಲೌ ಜಲೇ ಕೃತ್ವಾ ಗೋಕರ್ಣಸ್ತಮುದೀರಯಶ್ ।
ತತ್ಸೇಕಾದ್ಗತಪಾಪೋಸೌ ಪ್ರವಕ್ತುಮುಪಚಕ್ರಮೇ ॥ ೨೬ ॥

---

೨೩. ಗೋಕರ್ಣನು ಈ ಆಕಾರಗಳೆಲ್ಲವನ್ನೂ ನೋಡಿ ಧೈರ್ಯಗೊಂಡು ಇವನಾವನೋ ಒಬ್ಬ ಕೆಟ್ಟ ಸ್ಥಿತಿಯನ್ನು ಹೊಂದಿದವನು. ಎಂದು ನಿಶ್ಚಯಿಸಿ ಕೊಂಡು ಇಂತೆಂದನು.

೨೪. ಗೋಕರ್ಣನು ಹೇಳಿದನು–ನೀನಾರು? ರಾತ್ರಿಯಲ್ಲಿ ಈ ಉಗ್ರವಾದ ರೂಪವನ್ನು ತೋರಿಸುತ್ತಿರುವೆಯಲ್ಲಾ! ಈ ಸ್ಥಿತಿಯು ನಿನಗೆ ಬರಲು ಕಾರಣ ವೇನು? ನೀನೇನು ಪ್ರೇತವೇ? ಇಲ್ಲ ಪಿಶಾಚಿಯೇ? ಅದೂ ಅಲ್ಲದಿದ್ದರೆ ರಾಕ್ಷಸನೇ? ನೀನಾರಾಗಿದ್ದೀಯೆ? ಅದನ್ನು ನನಗೆ ಹೇಳು.

೨೫. ಸೂತನು ಹೇಳಿದನು–ಅವನು ಹೀಗೆಂದು ಕೇಳುತ್ತಲೂ ಆಗ ಅವನು ಮತ್ತೆ ಮತ್ತೆ ಗಟ್ಟಿಯಾಗಿ ಅತ್ತನು. ಮಾತನಾಡುವುದಕ್ಕೆ ಆಗದೆ ಸನ್ನೆಯನ್ನು ಮಾತ್ರ ಮಾಡಿದನು.

೨೬. ಆಗ ಗೋಕರ್ಣನು ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು ಏನನ್ನೋ ಹೇಳುತ್ತಾ ಆ ಪ್ರೇತದ ಮೇಲೆ ಚೆಲ್ಲಿದನು. ಅದರಿಂದ ಅವನ ಪಾಪ ವೆಲ್ಲವೂ ಹೋಗಲು ಅವನು ಮಾತನಾಡಲು ಮೊದಲಿಟ್ಟನು.

॥ ಪ್ರೇತ ಉವಾಚ ॥

ಅಹಂ ಭ್ರಾತಾ ತ್ವದೀಯೋಽಸ್ಮಿ ಧುಂಧುಕಾರೀತಿ ನಾಮತಃ ।
ಸ್ವಕೀಯೇನೈವ ದೋಷೇಣ ಬ್ರಹ್ಮತ್ವಂ ನಾಶಿತಂ ಮಯಾ ॥ ೨೭ ॥

ಕರ್ಮಣಾಂ ನಾಸ್ತಿ ಸಂಖ್ಯಾ ಮೇ ಮಹಾಽಜ್ಞಾನೇ ವಿವರ್ತಿನಃ ।
ಲೋಕಾನಾಂ ಹಿಂಸಕಃ ಸೋಽಹಂ ಸ್ತ್ರೀಭಿರ್ದುಃಖೇನ ಮಾರಿತಃ ॥ ೨೮ ॥

ಅತಃ ಪ್ರೇತತ್ವಮಾಪನ್ನೋ ದುರ್ದಶಾಂ ಚ ವಹಾಮ್ಯಹಂ ।
ವಾತಾಹಾರೇಣ ಜೀವಾಮಿ ದೈವಾಧೀನಫಲೋದಯಃ ।
ಅಹೋ ಬಂಧೋ ಕೃಪಾಸಿಂಧೋ ಭ್ರಾತರ್ಮಾಮಾಶು ಮೋಚಯ ॥ ೨೯ ॥

॥ ಸೂತ ಉವಾಚ ॥

ಗೋಕರ್ಣೋ ವಚನಂ ಶ್ರುತ್ವಾ ತಸ್ಮೈ ವಾಕ್ಯಮಥಾಬ್ರವೀತ್ ॥ ೩೦ ॥

---

೨೭. ಪ್ರೇತವು ಹೇಳಿತು–ನಾನು ನಿನ್ನ ಸಹೋದರನಾದ ಧುಂದುಕಾರೀ ಎಂಬುವನು. ನಾನು ನನ್ನ ತಪ್ಪುಗಳಿಂದಲೇ ನನ್ನ ಬ್ರಾಹ್ಮಣ್ಯವನ್ನು ಹಾಳು ಮಾಡಿಕೊಂಡೆನು.

೨೮. ಬಹುವಾದ ಅಜ್ಞಾನದಿಂದ ಕೂಡಿ ನಾನು ಮಾಡಿದ ಪಾಪಗಳಿಗೆ ಲೆಕ್ಕವೇ ಇಲ್ಲ. ಜನಗಳಿಗೆ ಹಿಂಸಕನಾದ ನನ್ನನ್ನು ಹೆಂಗಸರು ಬಹು ಕಷ್ಟದಿಂದ ಕೊಂದರು.

೨೯. ಆದುದರಿಂದ ಪ್ರೇತನಾಗಿ ಆಗಿದ್ದೇನೆ. ಬಹು ಕಷ್ಟದ ಸ್ಥಿತಿಯನ್ನು ಹೊಂದಿದ್ದೇನೆ. ಬರೀಗಾಳಿಯನ್ನು ಕುಡಿದುಕೊಂಡು ಬದುಕಿದ್ದೇನೆ. ನನಗೆ ಒಳ್ಳೆಯದಾಗಬೇಕಾದರೆ ದೇವರ ಅನುಗ್ರಹವನ್ನು ಕಾಯಬೇಕೇ ಹೊರತು ನನ್ನ ದೇನೂ ಇಲ್ಲ. ಕೃಪಾವಂತನಾದ ಎಲೈ ಬಂಧುವೇ ! ಸಹೋದರನೇ ! ನನ್ನ ಈ ಸ್ಥಿತಿಯನ್ನು ಬೇಗನೆ ಹೋಗಲಾಡಿಸು.

೩೦. ಸೂತನು ಹೇಳಿದನು– ಗೋಕರ್ಣನು ಈ ಮಾತನ್ನು ಕೇಳಿ ಅವ ನನ್ನು ಕುರಿತು ಇಂತೆಂದನು.

|| ಗೋಕರ್ಣ ಉವಾಚ ||

ತ್ವದರ್ಥಂ ತು ಗಯಾಪಿಂಡೋ ಮಯಾ ದತ್ತೋ ವಿಧಾನತಃ ।
ತತ್ಕಥಂ ನೈವ ಮುಕ್ತೋಽಸಿ ಮಮಾಶ್ಚರ್ಯಮಿದಂ ಮಹತ್ || ೩೧ ||

ಗಯಾಶ್ರಾದ್ಧಾನ್ನ ಮುಕ್ತಿಶ್ಚೇದುಪಾಯೋ ನಾಪರಸ್ತ್ವಿಹ ।
ಕಿಂ ವಿಧೇಯಂ ಮಯಾ ಪ್ರೇತ ತತ್ತ್ವಂ ವದ ಸವಿಸ್ತರಂ || ೩೨ ||

|| ಪ್ರೇತ ಉವಾಚ ||

ಗಯಾಶ್ರಾದ್ಧಶತೇನಾಪಿ ಮುಕ್ತಿರ್ಮೇ ನ ಭವಿಷ್ಯತಿ ।
ಉಪಾಯಮಪರಂ ಕಂಚಿತ್ತದ್ವಿಚಾರಯ ಸಾಂಪ್ರತಂ || ೩೩ ||

|| ಸೂತ ಉವಾಚ ||

ಇತಿ ತದ್ವಾಕ್ಯಮಾಕರ್ಣ್ಯ ಗೋಕರ್ಣೋ ವಿಸ್ಮಯಂ ಗತಃ || ೩೪ ||

---

೩೧. ಗೋಕರ್ಣನು ಹೇಳಿದನು- ನಿನಗೆ ನಾನು ಗಯೆಯಲ್ಲಿ ವಿಧಿವತ್ತಾಗಿ ಪಿಂಡವನ್ನು ಹಾಕಿದ್ದೇನೆ. ಆದರೂ ನಿನಗೆ ಈ ಪ್ರೇತಸ್ವರೂಪವು ಹೋಗದಿರಲು ಕಾರಣವೇನು ? ನನಗೆ ಬಹು ಆಶ್ಚರ್ಯವುಂಟಾಗಿದೆ.

೩೨. ಗಯಾ ಶ್ರಾದ್ಧದಿಂದ ನಿನಗೆ ಮುಕ್ತಿ ಬಾರದ ಮೇಲೆ ನಿನ್ನ ಪ್ರೇತತ್ವ ನಾಶಕ್ಕೆ ಬೇರೆಯಾದ ಉಪಾಯವೇ ಇಲ್ಲವಲ್ಲ ! ಹಾಗಾದರೆ ನಾನು ಬೇರೆ ಏನನ್ನು ಮಾಡಲಿ ? ಅದನ್ನು ವಿಸ್ತಾರವಾಗಿ ಹೇಳು.

೩೩. ಪ್ರೇತವು ಹೇಳಿತು- ಇಂತಹ ಗಯಾ ಶ್ರಾದ್ಧವನ್ನು ನೂರುಬಾರಿ ಮಾಡಿದರೂ ನನಗೆ ಮುಕ್ತಿಯುಂಟಾಗುವುದಿಲ್ಲ. ಆದುದರಿಂದ ಬೇರೆ ಯಾವುದಾದರೂ ಉಪಾಯವನ್ನು ಹುಡುಕು.

೩೪. ಸೂತನು ಹೇಳಿದನು- ಹೀಗೆ ಆ ಪ್ರೇತವು ಹೇಳಿದುದನ್ನು ಕೇಳಿ ಆ ಗೋಕರ್ಣನಿಗೆ ಆಶ್ಚರ್ಯವುಂಟಾಯಿತು.

|| ಗೋಕರ್ಣ ಉವಾಚ ||

ಶತಶ್ರಾದ್ಧೈರ್ನ ಮುಕ್ತಿಶ್ಚೇದಸಾಧ್ಯಂ ಮೋಚನಂ ತವ ।
ಇದಾನೀಂ ತು ನಿಜಂ ಸ್ಥಾನಮಾತಿಷ್ಠ ಪ್ರೇತ ನಿರ್ಭಯಃ ।
ತ್ವನ್ಮುಕ್ತಿಸಾಧನಂ ಕಿಂಚಿದಾಚರಿಷ್ಯೇ ವಿಚಾರ್ಯ ಚ || ೩೫ ||

|| ಸೂತ ಉವಾಚ ||

ಧುಂಧುಕಾರೀ ನಿಜಸ್ಥಾನಂ ತೇನಾದಿಷ್ಟಸ್ತತೋ ಗತಃ ।
ಗೋಕರ್ಣಶ್ಚಿಂತಯನ್ ರಾತ್ರೌ ನ ಚ ತಸ್ಯಾಂ ತದಧ್ಯಗಾತ್ || ೩೬ ||

ಪ್ರಾತಸ್ತಮಾಗತಂ ದೃಷ್ಟ್ವಾ ಲೋಕಾಃ ಪ್ರೀತ್ಯಾ ಸಮಾಗತಾಃ ।
ತತ್ಸರ್ವಂ ಕಥಿತಂ ತೇನ ಯಜ್ಜಾತಂ ಚ ತಥಾ ನಿಶಿ || ೩೭ ||

ವಿದ್ವಾಂಸೋ ಯೋಗನಿಷ್ಠಾಂಶ್ಚ ಜ್ಞಾನಿನೋ ಬ್ರಹ್ಮವಾದಿನಃ ।
ತನ್ಮುಕ್ತಿಂ ನೈವ ಪಶ್ಯಂತಿ ಪಶ್ಯಂತಶ್ಶಾಸ್ತ್ರಸಂಚಯಾನ್ || ೩೮ ||

---

೩೫ ಗೋಕರ್ಣನು ಹೇಳಿದನು– ಗಯೆಯಲ್ಲಿ ನೂರು ಶ್ರಾದ್ಧಗಳನ್ನು ಮಾಡಿದರೂ ನಿನಗೆ ಮುಕ್ತಿ ಬಾರದಪಕ್ಷದಲ್ಲಿ ನಿನ್ನ ಪ್ರೇತಭಾವವು ಹೋಗುವುದು ಕಷ್ಟವೇನೆ! ಈಗ ನೀನು ನಿನ್ನ ಜಾಗಕ್ಕೆ ಸಂತೋಷವಾಗಿ ಹೋಗು. ನಿನಗೆ ಮುಕ್ತಿಯು ಬರಲು ಏನು ಮಾಡಬೇಕು? ಎಂಬುದನ್ನು ಯೋಚಿಸಿ ಹಾಗೆ ಮಾಡುತ್ತೇನೆ.

೩೬. ಸೂತನು ಹೇಳಿದನು– ಧುಂಧುಕಾರಿಯು ಗೋಕರ್ಣನ ಮಾತಿನ ಮೇರೆ ತನ್ನ ಜಾಗಕ್ಕೆ ಹೊರಟುಹೋದನು. ಗೋಕರ್ಣನು ರಾತ್ರಿಯೆಲ್ಲವೂ ಯೋಚಿಸುತ್ತಲಿದ್ದರೂ ಅವನ ಮೋಕ್ಷದ ದಾರಿಯು ಗೊತ್ತಾಗಲಿಲ್ಲ.

೩೭. ಗೋಕರ್ಣನು ಬಂದುದನ್ನು ಕೇಳಿ ಅಲ್ಲಿನ ಜನರೆಲ್ಲರೂ ಪ್ರೀತಿಯಿಂದ ಅವನನ್ನು ನೋಡಲು ಅಲ್ಲಿಗೆ ಬಂದರು. ಆಗ ಅವನು ರಾತ್ರಿಯಲ್ಲಿ ನಡೆದ ವಿಷಯವೆಲ್ಲವನ್ನೂ ತಿಳಿಸಿದನು.

೩೮. ವಿದ್ವಾಂಸರೂ, ಯೋಗಿಗಳೂ, ಜ್ಞಾನಿಗಳೂ, ಬ್ರಹ್ಮವಾದಿಗಳೂ ಎಲ್ಲರೂ ಶಾಸ್ತ್ರಗಳನ್ನು ಹುಡುಕಿದರೂ ಆ ಪ್ರೇತಕ್ಕೆ ಮುಕ್ತಿಬರುವಿಕೆಯನ್ನು ಒಬ್ಬರೂ ಕಂಡುಹಿಡಿಯಲಿಲ್ಲ.

ತತಸ್ಸರ್ವೈಃ ಸೂರ್ಯವಾಕ್ಯಂ ತಸ್ಮಾತ್ಕಾರ್ಯ ಸ್ಥಾಪಿತಂ ಪರಂ ।
ಗೋಕರ್ಣಃ ಸ್ತಂಭನಂ ಚಕ್ರೇ ಸೂರ್ಯವೇಗಸ್ಯ ವೈ ತದಾ ॥ ೩೯ ॥

॥ ಗೋಕರ್ಣ ಉವಾಚ ॥

ತುಭ್ಯಂ ನಮೋ ಜಗತ್ಸಾಕ್ಷಿನ್ ಬ್ರೂಹಿ ಮೇ ಮುಕ್ತಿಹೇತುಕಂ । ॥ ೪೦ ॥

॥ ಸೂತ ಉವಾಚ ॥

ತಚ್ಛ್ರುತ್ವಾ ದೂರತಸ್ಸೂರ್ಯಃ ಸ್ಫುಟಮಿತ್ಯಭ್ಯಭಾಷತ ॥ ೪೧ ॥

॥ ಸೂರ್ಯ ಉವಾಚ ॥

ಶ್ರೀಮದ್ಭಾಗವತಾನ್ಮುಕ್ತಿಃ ಸಪ್ತಾಹೇ ವಾಚನಂ ಕುರು । ॥ ೪೨ ॥

॥ ಸೂತ ಉವಾಚ ॥

ಇತಿಸೂರ್ಯವಚಃ ಸರ್ವೈರ್ಧರ್ಮ್ಯನಿರೂಪಂ ತು ವಿಶ್ರುತಂ ।
ಸರ್ವೇಽಬ್ರುವನ್ಪ್ರಯತ್ನೇನ ಕರ್ತವ್ಯಂ ಸುಕರಂ ತ್ವಿದಂ ॥ ೪೩ ॥

---

೩೯. ಅನಂತರ ಅವರೆಲ್ಲರೂ ಆ ಪ್ರೇತಕ್ಕೆ ಮುಕ್ತಿಯುಂಟಾಗಬೇಕಾದರೆ ಸೂರ್ಯನನ್ನು ಕೇಳಬೇಕೆಂದರು. ಗೋಕರ್ಣನು ಯೋಗವನ್ನು ಹೊಂದಿ ಸೂರ್ಯನಿಗೆ ಕಟ್ಟುಮಾಡಿ ನಿಲ್ಲಿಸಿದನು.

೪೦. ಗೋಕರ್ಣನು ಹೇಳಿದನು– ಎಲೈ ಜಗತ್ಸಾಕ್ಷಿಯಾದ ಸೂರ್ಯನೇ ! ನಿನಗೆ ನಮಸ್ಕಾರವು. ನನಗೆ ಆ ಪ್ರೇತದ ಮುಕ್ತಿಯಾಗುವುದಕ್ಕೆ ಕಾರಣವನ್ನು ಹೇಳು.

೪೧. ಸೂತನು ಹೇಳಿದನು– ಸೂರ್ಯನು ಅದನ್ನು ಕೇಳಿ ದೂರದಿಂದಲೇ ತಿಳಿಯುವಂತೆಯೂ ಕೇಳಿಸುವಂತೆಯೂ ಇಂತೆಂದನು.

೪೨. ಸೂರ್ಯನು ಹೇಳಿದನು– ಶ್ರೀಮದ್ಭಾಗವತವನ್ನು ಓದಿದರೆ ಮುಕ್ತಿಯು ಬರುತ್ತದೆ. ಅದನ್ನು ಏಳು ದಿನಗಳಲ್ಲಿ ಓದಿ ಮುಗಿಸು.

೪೩. ಸೂತನು ಹೇಳಿದನು– ಸೂರ್ಯನು ಈ ರೀತಿ ಹೇಳಿದುದು ಧ್ವನಿಯ ರೂಪದಲ್ಲಿ ಎಲ್ಲರಿಗೂ ಕೇಳಿಸಿತು. ಆಗ ಎಲ್ಲರೂ ಇದು ಸುಲಭವಾದ ಮಾರ್ಗವು. ಪ್ರಯತ್ನಪಟ್ಟು ಮಾಡಬೇಕೆಂದು ಹೇಳಿದರು.

**ಗೋಕರ್ಣೋ ನಿಶ್ಚಯಂ ಕೃತ್ವಾ ವಾಚನಾರ್ಥಂ ಪ್ರವರ್ತಿತಃ ।**
**ತತ್ರ ಸಂಶ್ರವಣಾರ್ಥಾಯ ದೇಶಾದ್ಗ್ರಾಮಾಜ್ಜನಾ ಯಯುಃ ॥ ೪೪ ॥**

**ಪಂಗ್ವಂಧವೃದ್ಧಮಂದಾಶ್ಚ ತೇಪಿ ಪಾಪಕ್ಷಯಾಯ ವೈ ।**
**ಸಮಾಜಸ್ತು ಮಹಾನ್ ಜಾತೋ ದೇವವಿಸ್ಮಯಕಾರಕಃ ॥ ೪೫ ॥**

**ಯದೈವಾಸನಮಾಸ್ಥಾಯ ಗೋಕರ್ಣೋಽಕಥಯತ್ಕಥಾಂ ।**
**ಸಪ್ರೇತೋಪಿ ತದಾಯಾತಃ ಸ್ಥಾನಂ ಪಶ್ಯನ್ನಿತಸ್ತತಃ ॥ ೪೬ ॥**

**ಸಪ್ತಗ್ರಂಥಿಯುತಂ ತತ್ರ ಪಶ್ಯತ್ಕೀಚಕಮುಚ್ಛ್ರಿತಂ ।**
**ತನ್ಮೂಲಚ್ಛಿದ್ರಮಾವಿಶ್ಯ ಶ್ರವಣಾರ್ಥಂ ಸ್ಥಿತೋಹ್ಯಸೌ ॥ ೪೭ ॥**

**ವಾತರೂಪೀ ಸ್ಥಿತಿಂ ಕರ್ತುಮಶಕ್ತೋ ವಂಶಮಾವಿಶತ್ ।**
**ವೈಷ್ಣವಂ ಬ್ರಾಹ್ಮಣಂ ಮುಖ್ಯಂ ಶ್ರೋತಾರಂ ಪರಿಕಲ್ಪ್ಯ ಸಃ ॥ ೪೮ ॥**

---

೪೪. ಗೋಕರ್ಣನು ಓದಲು ನಿಶ್ಚಯಿಸಿಕೊಂಡು ಆ ಭಾಗವತವನ್ನು ಓದಲು ಮೊದಲುಮಾಡಿದನು. ಅದನ್ನು ಕೇಳಲು ದೇಶಗಳಿಂದಲೂ ಹಳ್ಳಿಗಳಿಂದಲೂ ಜನಗಳು ಬಂದು ಸೇರಿದರು.

೪೫. ಕುರುಡರು, ಕುಂಟರು, ಮುದುಕರು, ಮೂಢರು. ಎಲ್ಲರೂ ಭಾಗವತವನ್ನು ಕೇಳಿ ತಮ್ಮ ತಮ್ಮ ಪಾಪವನ್ನು ಕಳೆದುಕೊಳ್ಳುವುದಕ್ಕೆ ಬಂದು ಸೇರಿದರು. ಈ ರೀತಿಯಲ್ಲಿ ಅಲ್ಲಿ ಸೇರಿದ ಗುಂಪು ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡಿತು.

೪೬–೪೭. ಆ ಗೋಕರ್ಣನು ಪೀಠದ ಮೇಲೆ ಕುಳಿತು ಭಾಗವತದ ಕಥೆಯನ್ನು ಹೇಳಲು ಮೊದಲುಮಾಡಲು ಆ ಪ್ರೇತವೂ ಅಲ್ಲಿಗೆ ಬಂದು ಅಲ್ಲಿ ಇಲ್ಲಿ ಜಾಗವನ್ನು ಹುಡುಕಿತು. ಎಲ್ಲಿಯೂ ಸಾಧ್ಯವಾಗದಿರಲು ಅಲ್ಲೊಂದು ಏಳು ಗಿಣ್ಣುಗಳುಳ್ಳ ಒಂದು ಬಿದಿರು ಇದ್ದುದನ್ನು ನೋಡಿ ಅದರ ಬುಡದಲ್ಲಿದ್ದ ರಂಧ್ರದಲ್ಲಿ ಕುಳಿತು ಆ ಕಥೆಯನ್ನು ತಾನೂ ಕೇಳಿತು.

೪೮. ಆ ಪ್ರೇತವು ತಾನು ಗಾಳಿಯ ಸ್ವರೂಪದಲ್ಲಿದ್ದುದರಿಂದ ಬೇರೆ ಜಾಗಗಳಲ್ಲಿರುವುದಕ್ಕೆ ಸಾಧ್ಯವಿಲ್ಲದೆ ಆ ಬಿದಿರಿನ ಒಳಕ್ಕೆ ಹೋಯಿತು. ಈ ಗೋಕರ್ಣನು ಒಬ್ಬ ವೈಷ್ಣವಬ್ರಾಹ್ಮಣನನ್ನು ಕಥೆಯನ್ನು ಶ್ರವಣ ಮಾಡುವುದಕ್ಕೆ ಮುಖ್ಯನನ್ನಾಗಿ ಇಟ್ಟುಕೊಂಡನು.

ಪ್ರಥಮಸ್ಕಂಧತಃ ಸ್ಪಷ್ಟಂ ವ್ಯಾಖ್ಯಾನಂ ಧೇನುಜೋಽಕರೋತ್ ।
ದಿನಾಂತೇ ರಕ್ಷಿತಾ ಗಾಥಾ ತದಾಚಿತ್ರಂ ಬಭೂವ ಹ ॥ ೪೯ ॥

ವಂಶೈಕಗ್ರಂಥಿಭೇದೋಽಭೂತ್ ಸಶಬ್ದಂ ಪಶ್ಯತಾಂ ಸತಾಂ ।
ದ್ವಿತೀಯೇಽಹ್ನಿ ತಥಾ ಸಾಯಂ ದ್ವಿತೀಯಗ್ರಂಥಿಭೇದನಂ ॥ ೫೦ ॥

ತೃತೀಯೇಽಹ್ನಿ ತಥಾ ಸಾಯಂ ತೃತೀಯಗ್ರಂಥಿಭೇದನಂ ।
ಏವಂ ಸಪ್ತದಿನೈರ್ವಂಶಸಪ್ತಗ್ರಂಥಿವಿಭೇದನಂ ॥ ೫೧ ॥

ಕೃತ್ವಾಪಿ ದ್ವಾದಶಸ್ಕಂಧಶ್ರವಣಾತ್ಪ್ರೇತತಾಂ ಜಹೌ ।
ದಿವ್ಯರೂಪಧರೋ ಜಾತಸ್ತುಲಸೀದಾಮಮಂಡಿತಃ ॥ ೫೨ ॥

ಪೀತವಾಸಾ ಘನಶ್ಯಾಮೋ ಮುಕುಟೀ ಕುಂಡಲಾನ್ವಿತಃ ।
ನನಾಮ ಭ್ರಾತರಂ ಸದ್ಯೋ ಗೋಕರ್ಣಮಿತಿ ಚಾಬ್ರವೀತ್ ॥ ೫೩ ॥

---

೪೯. ಆ ಗೋಕರ್ಣನು ಸಾಯಂಕಾಲದವರೆಗೂ ಮೊದಲನೆ ಸ್ಕಂಧವನ್ನು ಅರ್ಥರೂಪವಾಗಿ ಹೇಳಿದನು. ಸಾಯಂಕಾಲದವರೆಗೂ ಆ ಬಿದಿರಿನ ಕೊಳವೆಯು ಏನೂ ಆಗದೆ ಇದ್ದಿತು. ಆಮೇಲೆ ಒಂದು ವಿಚಿತ್ರವು ನಡೆಯಿತು.

೫೦-೫೨. ಸಾಯಂಕಾಲದ ಸಮಯದಲ್ಲಿ ಆ ಬಿದಿರಿನ ಆ ಪ್ರೇತವು ಕುಳಿತಿದ್ದ ಕಡೆಯ ಗಿಣ್ಣು ಒಡೆಯಿತು. ಆಗ ಶಬ್ದವೂ ಆಯಿತು. ಅದನ್ನು ಎಲ್ಲರೂ ಕೇಳಿದರು. ಎರಡನೆಯ ದಿನ ಸಾಯಂಕಾಲದಲ್ಲಿ ಎರಡನೆಯ ಗಿಣ್ಣೂ, ಮೂರನೆಯ ದಿನ ಸಾಯಂಕಾಲದಲ್ಲಿ ಮೂರನೆಯ ಗಿಣ್ಣೂ ಈ ರೀತಿಯಾಗಿ ಗಿಣ್ಣುಗಳೆಲ್ಲವೂ ಒಡೆಯುತ್ತಾ ಏಳನೆಯ ದಿನ ಏಳನೆಯ ಗಿಣ್ಣೂ ಒಡೆಯಿತು. ಹಾಗೆ ಒಡೆದಾಗಲೆಲ್ಲಾ ಶಬ್ದವಾಗುತ್ತಿದ್ದುದನ್ನು ಎಲ್ಲರೂ ಕೇಳುತ್ತಿದ್ದರು ಹೀಗೆ ಒಡೆದುಕೊಂಡು ಆ ಪ್ರೇತವು ಅಲ್ಲಿಯೇ ಇದ್ದಿತು. ಕಡೆಗೆ ಹನ್ನೆರಡನೆಯ ಸ್ಕಂಧವನ್ನು ಕೇಳಿದ ಮೇಲೆ ಅದಕ್ಕೆ ಆ ಪ್ರೇತ ರೂಪವು ಹೋಯಿತು ಆಗ ದಿವ್ಯವಾದ ಶರೀರವನ್ನು ಹೊಂದಿ, ತುಳಸೀಮಾಲೆಯನ್ನು ಹಾಕಿಕೊಂಡು ಶೋಭಿಸಿತು.

೫೩. ಮತ್ತು ಅರಿಶಿನ ಬಣ್ಣದ ಬಟ್ಟೆಯನ್ನು ಹೊದ್ದುಕೊಂಡು ನೀಲಮೇಘದಂತೆ ಬಣ್ಣವುಳ್ಳದ್ದಾಗಿ ಕಿರೀಟ ಕುಂಡಲಗಳನ್ನು ತೊಟ್ಟು, ಗೋಕರ್ಣನಿಗೆ ನಮಸ್ಕಾರ ಮಾಡುತ್ತ ಇಂತೆಂದಿತು.

|| ಧುಂಧುಕಾರ್ಯುವಾಚ ||

ತ್ವಯಾಹಂ ಮೋಚಿತೋ ಬಂಧೋ ಕೃಪಯಾ ಪ್ರೇತಕಶ್ಮಲಾತ್ |
ಧನ್ಯಾ ಭಾಗವತೀ ವಾರ್ತಾ ಪ್ರೇತಪೀಡಾವಿನಾಶಿನೀ || ೫೪ ||

ಸಪ್ತಾಹೋಪಿ ಕಥಾ ಧನ್ಯಃ ಕೃಷ್ಣಲೋಕಫಲಪ್ರದಃ |
ಕಂಪಂತೇ ಸರ್ವಪಾಪಾನಿ ಸಪ್ತಾಹಶ್ರವಣೇ ಸ್ಥಿತೇ || ೫೫ ||

ಅಸ್ಮಾಕಂ ಪ್ರಲಯಂ ಸದ್ಯಃ ಕಥಾಚೇಯಂ ಕರಿಷ್ಯತಿ |
ಆರ್ದ್ರಂ ಶುಷ್ಕಂ ಲಘು ಸ್ಥೂಲಂ ವಾಙ್ಮನಃ ಕರ್ಮಭಿಃ ಕೃತಂ || ೫೬ ||

ಶ್ರವಣಂ ವಿದಹೇತ್ಪಾಪಂ ಪಾವಕಃ ಸಮಿಧೋ ಯಥಾ |
ಅಸ್ಮಿನ್ವೈ ಭಾರತೇ ವರ್ಷೇ ಸೂರಿಭಿರ್ದೇವಸಂಸದಿ || ೫೭ ||

---

೫೪. ಧುಂಧುಕಾರಿಯು ಹೇಳಿದನು– ಎಲೈ ಬಂಧುವೇ! ನಿನ್ನಿಂದ ನಾನು ಮುಕ್ತಿಯನ್ನು ಹೊಂದಿದೆನು. ನಿನ್ನ ಕೃಪೆಯಿಂದ ನನ್ನ ಪ್ರೇತರೂಪವಾದ ಪಾಪವು ಹೋಯಿತು. ಈ ಭಾಗವತದ ಕಥೆಯು ಉತ್ತಮವಾದುದು. ನನ್ನ ಪ್ರೇತರೂಪವನ್ನು ಹಾಳುಮಾಡಿತು.

೫೫. ಈ ಸಪ್ತಾಹವು ಬಹು ಧನ್ಯವಾದುದು. ಕೃಷ್ಣನ ಲೋಕವನ್ನು ಕೊಡುತ್ತದೆ. ಈ ಸಪ್ತಾಹದ ಸ್ಥಳದಲ್ಲಿ ಕುಳಿತು ಕೇಳುತ್ತಿದ್ದರೆ ಪಾಪಗಳೆಲ್ಲವೂ ನಡುಗುತ್ತವೆ.

೫೬. ಈ ಕಥೆಯು ನಮ್ಮ ಹಸಿಯಾದ ಒಣಗಿದ ಚಿಕ್ಕ ದೊಡ್ಡ ಮತ್ತು ಮನೋವಾಕ್ಕಾಯಗಳಿಂದ ಮಾಡಿದ ಎಲ್ಲಾ ವಿಧವಾದ ಪಾಪಗಳನ್ನೂ ನಾಶ ಮಾಡುತ್ತದೆ. ಮತ್ತು ಮಾಡಿತು.

೫೭. ಆ ಸಪ್ತಾಹ ಶ್ರವಣವು ಬೆಂಕಿಯು ಸೌದೆಯನ್ನು ಸುಡುವಂತೆ ಪಾಪವನ್ನು ಸುಟ್ಟುಬಿಡುತ್ತದೆ. ಈ ಭಾರತ ವರ್ಷದಲ್ಲಿ ಸಪ್ತಾಹ ನಡೆಯುವ ಸಭೆಗಳಲ್ಲಿ ಅದನ್ನು ಕೇಳದಿರುವವರ ಜನ್ಮವು ನಿರರ್ಥಕವಾಗುತ್ತದೆ.

ಅಕಥಾಶ್ರಾವಿಣಾಂ ಪುಂಸಾಂ ನಿಷ್ಫಲಂ ಜನ್ಮಕೀರ್ತಿತಂ ।
ತಂ ಮೋಹಹತೋ ರಕ್ಷಿತೇನ ಸುಪುಷ್ಟೇನ ಬಲೀಯಸಾ । ॥ ೫೮ ॥

ಅಧ್ರುವೇಣ ಶರೀರೇಣ ಶುಕಶಾಸ್ತ್ರಕಥಾಂ ವಿನಾ ।
ಅಸ್ಥಿ ಸ್ತಂಭಂ ಸ್ನಾಯುಬದ್ಧಂ ಮಾಂಸಶೋಣಿತಲೇಪಿತಂ ॥ ೫೯ ॥

ಚರ್ಮಾಬದ್ಧಂ ತು ದುರ್ಗಂಧಂ ಪಾತ್ರಂ ಮೂತ್ರಪುರೀಷಯೋಃ ।
ಜರಾಶೋಕವಿಪಾಕಾರ್ತಂ ರೋಗಮಂದಿರಮಾತುರಂ ॥ ೬೦ ॥

ದುಷ್ಪೂರಂ ದುರ್ಧರಂ ದುಷ್ಟಂ ಸದೋಷಂ ಕ್ಷಣಭಂಗುರಂ ।
ಕ್ರಿಮಿತಿವಿಡ್ಭಸ್ಮಸಂಜಾತಂ ಶರೀರಮಿತಿ ವರ್ಣಿತಂ ॥ ೬೧ ॥

ಅಸ್ಥಿರೇಣ ಸ್ಥಿರಂ ಕರ್ಮ ಕುತೋಽಯಂ ಸಾಧಯೇನ್ನ ಹಿ ।
ಯತ್ಪ್ರಾತಸ್ಸಂಸ್ಕೃತಂ ಚಾನ್ನಂ ಸಾಯಂ ತಚ್ಚ ವಿನಶ್ಯತಿ ॥ ೬೨ ॥

---

೫೮ ಶುಕನ ಶಾಸ್ತ್ರವಾದ ಭಾಗವತವನ್ನು ಕೇಳದಿದ್ದರೆ ಮೋಹದಿಂದ ಕಾಪಾಡಿ ಚೆನ್ನಾಗಿ ಬೆಳೆಸಿಕೊಂಡಿರುವ ಬಲವಾದ ಮತ್ತು ನಶ್ವರವಾದ ಈ ಶರೀರದಿಂದ ಉಪಯೋಗವೇನು ?

೫೯-೬೧. ಈ ದೇಹವು ಮೂಳೆಗಳ ಕಂಭವುಳ್ಳದ್ದು. ನರಗಳ ಕಟ್ಟುಗಳುಳ್ಳದ್ದು. ಮಾಂಸವನ್ನೂ ರಕ್ತವನ್ನೂ ಸೇರಿಸಿ ಬಳಿಯಲ್ಪಟ್ಟಿದೆ. ಚರ್ಮದಿಂದ ಹೊದ್ದಿಸಲ್ಪಟ್ಟಿದೆ. ದುರ್ವಾಸನೆಯುಳ್ಳದ್ದು. ಮಲಮೂತ್ರಗಳಿಗೆ ಜಾಗವಾದುದು. ಮುಪ್ಪು ದುಃಖಗಳಿಂದ ತೊಂದರೆಯನ್ನು ಹೊಂದತಕ್ಕದ್ದು. ರೋಗವನ್ನು ಯಾವಾಗಲೂ ಹೊಂದಿರತಕ್ಕದ್ದು. ಕೆಟ್ಟವುಗಳಿಂದಲೇ ತುಂಬಿರತಕ್ಕದ್ದು. ಕಾಪಾಡಲು ಅಸಾಧ್ಯವಾದುದು ದುಷ್ಟವಾದುದು. ಪಿತ್ತ, ವಾಯು, ಕಫಗಳಿಂದ ಕೂಡಿರತಕ್ಕದ್ದು. ಕ್ಷಣಕಾಲದಲ್ಲಿ ನಾಶವಾಗತಕ್ಕದ್ದು. ಹುಳು, ಅಮೇಧ್ಯ ಬೂದಿಗಳಿಂದ ಕೂಡಿದುದು. ಇಂತಹದನ್ನು ಶರೀರವೆಂದು ಹೇಳುತ್ತಾರೆ.

೬೨-೬೩. ಆದುದರಿಂದ ಶಾಶ್ವತವಲ್ಲದ ಈ ಶರೀರದಿಂದ ಶಾಶ್ವತವಾದ ಕೆಲಸವನ್ನೇಕೆ ಮಾಡಿಕೊಳ್ಳಬಾರದು? ಬೆಳಗ್ಗೆ ಮಾಡಿದ ಅನ್ನವು ಸಾಯಂಕಾಲದ

ತದೀಯರಸಸಂಪುಷ್ಟೇ ಕಾಯೇ ಕಾ ನಾಮ ನಿತ್ಯತಾ ।
ಸಪ್ತಾಹಶ್ರವಣಾಲ್ಲೋಕೇ ಪ್ರಾಪ್ಯತೇ ನಿಕಟೇ ಹರಿಃ ॥ ೬೩ ॥

ಅತೋ ದೋಷನಿವೃತ್ತ್ಯರ್ಥಮೇತದೇವ ಹಿ ಸಾಧನಂ ।
ಜಡಸ್ಯ ಶುಷ್ಕವಂಶಸ್ಯ ಯತ್ರ ಗ್ರಂಥಿವಿಭೇದನಂ ॥ ೬೪ ॥

ಚಿತ್ರಂ ಕಿಮು ತದಾ ಚಿತ್ತಗ್ರಂಥಿಭೇದಃ ಕಥಾಶ್ರವಾತ್ ।
ಬುದ್ಬುದಾ ಇವ ತೋಯೇಷು ಮಶಕಾ ಇವ ಜಂತುಷು ॥ ೬೫ ॥

ಜಾಯಂತೇ ಮರಣಾಯೈವ ಕಥಾಶ್ರವಣವರ್ಜಿತಾಃ ।
ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ॥ ೬೬ ॥

ಕ್ಷೀಯಂತೇ ಚಾಸ್ಯ ಕರ್ಮಾಣಿ ಸಪ್ತಾಹಶ್ರವಣೇ ಕೃತೇ ।
ಸಂಸಾರಕರ್ದಮಾಲೇಪಪ್ರಕ್ಷಾಲನಪಟೀಯಸಿ ।
ಕಥಾತೀರ್ಥೇ ಸ್ಥಿತೇ ಚಿತ್ತೇ ಮುಕ್ತಿರೈವ ಬುಧೈರ್ಮತಾ ॥ ೬೭ ॥

---

ವೇಳೆಗೆ ಕೆಟ್ಟುಹೋಗುತ್ತದೆ. ಅಂತಹ ಅನ್ನದಿಂದ ಬೆಳೆದ ಈ ದೇಹದಲ್ಲಿ ಶಾಶ್ವತವಾಗಿರುವಿಕೆಯು ಎಲ್ಲಿಂದ ಬಂದೀತು ? ಏಳು ದಿನಗಳು ಭಾಗವತವನ್ನು ಕೇಳುವುದರಿಂದ ಹರಿಯಾದರೋ ಹತ್ತಿರದಲ್ಲಿಯೇ ಬಂದಿರುವನು.

೬೪. ಆದುದರಿಂದ ಪ್ರಾಣಿಗಳಿಗೆ ಈ ಪಾಪಗಳ ನಾಶಕ್ಕೆ ಈ ಕಥಾಶ್ರವಣ ಒಂದೇ ಸಾಧನವು. ಜಡವಾದ ಒಣಗಿರುವ ಆ ಬಿದಿರು ಈ ಭಾಗವತ ಕಥಾಶ್ರವಣದಿಂದ ಒಡೆದು ಹೋಯಿತು ಎಂದಮೇಲೆ ಈ ಕಥೆಯನ್ನು ಕೇಳುವುದರಿಂದ ಹಸಿಯಾದ ಚಿತ್ತದ ಗಂಟು ಒಡೆಯುವುದರಲ್ಲಿ ಆಶ್ಚರ್ಯವೇನಿದೆ !

೬೫. ಈ ಭಾಗವತದ ಕಥೆಯನ್ನು ಕೇಳದವರು ನೀರಿನಲ್ಲಿನ ಗುಳ್ಳೆಗಳಂತೆಯೂ ಪ್ರಾಣಿಗಳಲ್ಲಿ ಸೊಳ್ಳೆಗಳಂತೆಯೂ ಸಾಯುವುದಕ್ಕೇ ಹುಟ್ಟಿದವರೆಂದು ತಿಳಿಯಬೇಕು.

೬೬. ಆ ಸಪ್ತಾಹ ಶ್ರವಣವನ್ನು ಮಾಡಿದರೆ ಹೃದಯದ ಅಜ್ಞಾನವು ಹೋಗುತ್ತದೆ. ಸಂಶಯಗಳೆಲ್ಲವೂ ನಾಶವಾಗುತ್ತವೆ. ಇವನ ಕರ್ಮಗಳೆಲ್ಲವೂ ನಾಶವಾಗುತ್ತವೆ.

೬೭. ಸಂಸಾರವೆಂಬ ಕೆಸರಿನ ಲೇಪವನ್ನು ತೊಳೆಯುವುದರಲ್ಲಿ ಶಕ್ತವಾದ ಈ ಕಥೆಯೆಂಬ ತೀರ್ಥದಲ್ಲಿ ಮನಸ್ಸು ಸ್ಥಿರವಾಗಿರಲು ಅವರಿಗೆ ಮುಕ್ತಿಯು ಬಂದೇ ಬರುತ್ತದೆಂದು ತಿಳಿದವರು ಹೇಳುತ್ತಾರೆ.

|| ಸೂತ ಉವಾಚ ||

ಏವಂ ಬ್ರುವತಿ ವೈ ತಸ್ಮಿನ್ವಿಮಾನಮುಪತತ್ತದಾ ।
ವೈಕುಂಠವಾಸಿಭಿರ್ಯುಕ್ತಂ ಪ್ರಸ್ಫುರದ್ದೀಪ್ತಿಮಂಡಲಂ || ೬೮ ||

ಸರ್ವೇಷಾಂ ಪಶ್ಯತಾಂ ಭೇಜೇ ವಿಮಾನಂ ಧುಂಧುಳೀಸುತಃ ।
ವಿಮಾನೇ ವೈಷ್ಣವಾರ್ ವೀಕ್ಷ್ಯ ಗೋಕರ್ಣೋ ವಾಕ್ಯಮಬ್ರವೀತ್ || ೬೯ ||

|| ಗೋಕರ್ಣ ಉವಾಚ ||

ಅತ್ರೈವ ಬಹವಸ್ಸಂತಿ ಶ್ರೋತಾರೋ ಮಮ ನಿರ್ಮಲಾಃ ।
ಆನೀತಾನಿ ವಿಮಾನಾನಿ ತೇಷಾಂ ನ ಯುಗಪತ್ಕುತಃ || ೭೦ ||

ಶ್ರವಣಂ ಸಮಭಾಗೇನ ಸರ್ವೇಷಾಮಿಹ ದೃಶ್ಯತೇ ।
ಫಲಭೇದಃ ಕುತೋ ಜಾತಃ ಪ್ರಬ್ರುವಂತು ಹರಿಪ್ರಿಯಾಃ || ೭೧ ||

---

೬೮-೬೯. ಸೂತನು ಹೇಳಿದನು-ಆ ಧುಂಧುಕಾರಿಯು ಹೀಗೆ ಹೇಳುತ್ತಿರಲು ಒಂದು ಉತ್ತಮವಾದ ವಿಮಾನವು ಅಲ್ಲಿಗೆ ಬಂದಿತು. ಅದರಲ್ಲಿ ವೈಕುಂಠದವರು ಕುಳಿತಿದ್ದರು. ಒಳ್ಳೆಯ ರಮ್ಯವೂ ಆಗಿದ್ದಿತು. ಎಲ್ಲರೂ ನೋಡುತ್ತಿದ್ದಂತೆಯೇ ಧುಂಧುಳಿಕಾರಿಯು ವಿಮಾನವನ್ನು ಹತ್ತಿ ಕುಳಿತನು. ಆ ವಿಮಾನದಲ್ಲಿ ಕುಳಿತಿರುವ ವೈಷ್ಣವರನ್ನು ನೋಡಿ ಗೋಕರ್ಣನು ಇಂತೆಂದನು.

೭೦. ಗೋಕರ್ಣನು ಹೇಳಿದನು-ಎಲೈ ಹರಿದಾಸರಿರಾ ! ಆ ಭಾಗವತದ ಸಪ್ತಾಹವನ್ನು ಕೇಳಿದವರು ಇಲ್ಲಿ ಬಹು ಮಂದಿಯಿದ್ದಾರೆ. ಅವರೆಲ್ಲರೂ ಪಾಪರಹಿತರು. ಈ ವಿಮಾನದ ಜೊತೆಯಲ್ಲಿಯೇ ಅವರಿಗೂ ವಿಮಾನವು ಏಕೆ ಬರಲಿಲ್ಲ ?

೭೧. ಎಲೈ ಹರಿ ಪ್ರಿಯರಿರಾ ! ಈ ಸಪ್ತಾಹ ಶ್ರವಣವನ್ನು ಎಲ್ಲರೂ ಒಂದೇ ಕಾಲದಲ್ಲಿ ತಾನೇ ಮಾಡಿದರು. ವಿಮಾನವು ಒಬ್ಬರಿಗೆ ಬಂದಿತು. ಮತ್ತೊಬ್ಬರಿಗೆ ಬರಲಿಲ್ಲ. ಈ ಫಲಭೇದವು ಉಂಟಾಗಲು ಕಾರಣವೇನು ?

॥ ಹರಿದಾಸಾ ಊಚುಃ ॥

ಶ್ರವಣಸ್ಯ ವಿಭೇದೇನ ಫಲಭೇದೋಽಪಿ ಸಂಸ್ಥಿತಃ ।
ಶ್ರವಣಂ ತು ಕೃತಂ ಸರ್ವೈರ್ನ ತಥಾ ಮನನಂ ಕೃತಂ ॥ ೭೨ ॥

ಫಲಭೇದಸ್ತತೋ ಜಾತಃ ಪುನಶ್ಶ್ರಾವಾದ್ಗಮಿಷ್ಯತಿ ।
ಸಪ್ತರಾತ್ರಮುಪೋಷ್ಯೈವ ಪ್ರೇತೇನ ಶ್ರವಣಂ ಕೃತಂ ॥ ೭೩ ॥

ಮನನಾದಿ ಕಥಾ ತೇನ ಸ್ಥಿರಚಿತ್ತಂ ಕೃತಂ ಭೃಶಂ ।
ಅದೃಢಂ ಚ ಹತಂ ಜ್ಞಾನಂ ಪ್ರಮಾದೇನ ಹತಂ ಶ್ರುತಂ ॥ ೭೪ ॥

ಸಂದಿಗ್ಧೋ ಹಿ ಹತೋ ಮಂತ್ರೋ ವ್ಯಗ್ರಚಿತ್ತೋ ಹತೋ ಜಪಃ ।
ಅವೈಷ್ಣವೋ ಹತೋ ದೇಶೋ ಹತಂ ಶ್ರಾದ್ಧಮಪಾತ್ರಕಂ ॥ ೭೫ ॥

---

೭೨. ಹರಿದಾಸರು ಹೇಳಿದರು-ಕೇಳುವವರ ಆದರ ಅನಾದರಗಳಿಂದ ಫಲದ ಭೇದವೂ ಉಂಟಾಗುತ್ತದೆ. ಎಲ್ಲರೂ ಸಪ್ತಾಹ ಶ್ರವಣವನ್ನು ಮಾಡಿದರು. ಆದರೆ ಮನನವನ್ನು ಮಾತ್ರ ಸರಿಯಾಗಿ ಮಾಡಲಿಲ್ಲ.

೭೩. ಆದುದರಿಂದಲೇ ಅವರಿಗೆ ಈ ಫಲದಲ್ಲಿ ವ್ಯತ್ಯಾಸವಾಯಿತು. ಮತ್ತೆ ಕೇಳಿದರೆ ಆ ಭೇದವು ಹೋಗುತ್ತದೆ. ಈ ಪ್ರೇತವು ಏಳು ರಾತ್ರಿಯೂ ಉಪವಾಸವಿದ್ದು ಕೇಳಿತು.

೭೪. ಈ ಕಥೆಯನ್ನು ಕೇಳುವುದು ಮನನ ಮಾಡುವುದು ಇವೇ ಮೊದಲಾದುವುಗಳನ್ನು ಆ ಪ್ರೇತವು ಸ್ಥಿರವಾದ ಮನಸ್ಸಿನಿಂದ ಮಾಡಿತು. ಜ್ಞಾನವು ಸರಿಯಾಗಿ ಮನಸ್ಸಿಗೆ ಅಂಟದಿದ್ದರೆ ಆ ಜ್ಞಾನವು ನಿಲ್ಲುವುದಿಲ್ಲ. ವೇದ ಶಾಸ್ತ್ರಗಳನ್ನು ಸರಿಯಾದ ರೀತಿಯಿಂದ ನೋಡದೆ ಭ್ರಮದಿಂದ ನೋಡಿದರೆ ಅದು ನಾಶವಾಗುತ್ತದೆ. ಉಪಯೋಗವಿಲ್ಲ.

೭೫. ಮಂತ್ರವು ಸಂದೇಹವಾಗಿದ್ದರೆ ಅದು ನಿರರ್ಥಕವಾದುದು. ಜಪವನ್ನು ಮನಸ್ಸನ್ನು ಚಲಿಸುತ್ತ ಮಾಡಿದರೆ ಸಾರ್ಥಕವಾಗುವುದಿಲ್ಲ. ವೈಷ್ಣವರಿಲ್ಲದ ದೇಶವು ಸಾರ್ಥಕವಿಲ್ಲ. ಅಯೋಗ್ಯನನ್ನು ಕುಳ್ಳಿರಿಸಿ ಮಾಡಿದ ಶ್ರಾದ್ಧವು ನಾಶವಾಗುವುದು.

**ಹತಮಶ್ರೋತ್ರಿಯೇ ದಾನಂ ಅನಾಚಾರಹತಂ ಕುಲಂ |**
**ವಿಶ್ವಾಸೋ ಗುರುವಾಕ್ಯೇಷು ಸ್ವಸ್ಮಿನ್ದೀನತ್ವಭಾವನಾ || ೭೬ ||**

**ಮನೋದೋಷಜಯಶ್ಚೈವ ಕಥಾಯಾಂ ನಿಶ್ಚಲಾ ಮತಿಃ |**
**ಏವಮಾದಿಕೃತಂ ಚೇತ್ಸ್ಯಾತ್ತದಾ ವೈ ಶ್ರವಣೇ ಫಲಂ || ೭೭ ||**

**ಪುನಶ್ಶ್ರವಾಂತೇ ಸರ್ವೇಷಾಂ ವೈಕುಂಠೇ ವಸತಿರ್ಧ್ರುವಂ |**
**ಗೋಕರ್ಣ ತವ ಗೋವಿಂದೋ ಗೋಲೋಕಂ ದಾಸ್ಯತಿ ಧ್ರುವಂ || ೭೮ ||**

**|| ಸನತ್ಕುಮಾರಾ ಊಚುಃ ||**

**ಏವಮುಕ್ತ್ವಾ ಯಯುಸ್ಸರ್ವೇ ವೈಕುಂಠಂ ಹರಿಕೀರ್ತನಾಃ |**
**ಶ್ರಾವಣೇ ಮಾಸಿ ಗೋಕರ್ಣಃ ಕಥಾಮೂಚೇ ತಥಾ ಪುನಃ || ೭೯ ||**

**ಸಪ್ತರಾತ್ರಂ ವ್ರತೀಭೂಯ ಶ್ರವಣಂ ತೈಃ ಕೃತಂ ಪುನಃ |**
**ಕಥಾಸಮಾಪ್ತೌ ಯಜ್ಜಾತಂ ಶ್ರೂಯತಾಂ ತಚ್ಚ ನಾರದ || ೮೦ ||**

---

೭೬. ವೇದ ಓದದವನಿಗೆ ಕೊಟ್ಟ ದಾನವು ಫಲವಿಲ್ಲವು. ಕೆಟ್ಟ ಆಚಾರವನ್ನು ಮಾಡುವುದರಿಂದ ಕುಲವು ನಾಶವಾಗುತ್ತದೆ. ಗುರುವಿನಲ್ಲಿಯೂ ಅವನ ಮಾತಿನಲ್ಲಿಯೂ ವಿಶ್ವಾಸವನ್ನಿಡಬೇಕು. ತಾನು ನಿಕೃಷ್ಟನೆಂಬ ಭಾವನೆಯೂ ದುಃಖಿಯೆಂಬ ಭಾವನೆಯೂ ಇರಬೇಕು.

೭೭. ಮನಸ್ಸಿನ ದೋಷಗಳನ್ನು ಜಯಿಸಿ ಕಥೆಯಲ್ಲಿಯೇ ನಿಶ್ಚಲವಾದ ಬುದ್ಧಿಯಿನ್ನಿಡಬೇಕು. ಇದೆಲ್ಲವನ್ನೂ ಮಾಡಿದರೆ ಆಗ ಕೇಳಿದುದರ ಫಲವು ಬರುತ್ತದೆ.

೭೮. ಮತ್ತೆ ಸಪ್ತಾಹ ಶ್ರವಣವನ್ನು ಮಾಡಿದರೆ ಎಲ್ಲರಿಗೂ ವೈಕುಂಠವು ಸಿಕ್ಕುತ್ತದೆ ನಿಶ್ಚಯವು. ಎಲೈ ಗೋಕರ್ಣನೆ ! ಗೋವಿಂದನು ನಿನಗೆ ಗೋಲೋಕವನ್ನು ಕೊಡುತ್ತಾನೆ.

೭೯. ಸನತ್ಕುಮಾರರು ಹೇಳಿದರು-ಹೀಗೆಂದು ಹೇಳಿ ಅವರೆಲ್ಲರೂ ವೈಕುಂಠಕ್ಕೆ ಹೊರಟು ಹೋದರು. ಇತ್ತ ಶ್ರಾವಣ ಮಾಸದಲ್ಲಿ ಗೋಕರ್ಣನು ಮತ್ತೆ ಸಪ್ತಾಹ ಕಥೆಯನ್ನು ಹೇಳಿದನು.

೮೦. ಏಳು ರಾತ್ರಿಗಳು ವ್ರತವನ್ನು ಹೊಂದಿ ಕಥೆಯನ್ನು ಶ್ರೋತೃಗಳೂ ಕೇಳಿದರು. ಕಥೆಯ ಕೊನೆಯಲ್ಲಿ ನಡೆದ ಆಶ್ಚರ್ಯವನ್ನು ಕೇಳು.

ವಿಮಾನೈಸ್ಸಹಭಕ್ತೈಶ್ಚ ಹರಿರಾವಿರ್ಬಭೂವ ಹ ।
ಜಯಶಬ್ದಾ ನಮಶ್ಶಬ್ದಾಸ್ತತ್ರಾಸನ್ ಬಹವಸ್ತದಾ ॥ ೮೧ ॥

ಪಾಂಚಜನ್ಯಧ್ವನಿಂ ಚಕ್ರೇ ಹರ್ಷಾತ್ತತ್ರ ಸ್ವಯಂ ಹರಿಃ ।
ಗೋಕರ್ಣಂ ತು ಸಮಾಲಿಂಗ್ಯಾಕರೋತ್ಸ್ವಸದೃಶಂ ಹರಿಃ ॥ ೮೨ ॥

ಶ್ರೋತೄನನ್ಯಾನ್ ಘನಶ್ಯಾಮಾನ್ ಪೀತಕೌಶೇಯವಾಸಸಃ ।
ಕಿರೀಟಿನಃ ಕುಂಡಲಿನಸ್ತಥಾ ಚಕ್ರೇ ಹರಿಃ ಕ್ಷಣಾತ್ ॥ ೮೩ ॥

ತದ್ಗ್ರಾಮೇ ಯೇ ಸ್ಥಿತಾ ಜೀವಾ ಆಶ್ವಚಾಂಡಾಲಜಾತಯಃ ।
ವಿಮಾನೇ ಸ್ಥಾಪಿತಾಸ್ತೇಽಪಿ ಗೋಕರ್ಣಕೃಪಯಾ ತದಾ ॥ ೮೪ ॥

ಪ್ರೇಷಿತಾ ಹರಿಲೋಕೇ ತೇ ಯತ್ರ ಗಚ್ಛಂತಿ ಯೋಗಿನಃ ।
ಗೋಕರ್ಣೇನ ಸ ಗೋಪಾಲೋ ಗೋಲೋಕಂ ಗೋಪವಲ್ಲಭಂ ॥ ೮೫ ॥

---

೮೧. ಆಗ ಹರಿಯು ತನ್ನ ಭಕ್ತರೊಡನೆ ವಿಮಾನಗಳನ್ನು ಕರೆದುಕೊಂಡು ಬಂದನು. ಜಯ ಜಯ ಶಬ್ದಗಳೂ ನಮ ನಮಶ್ಶಬ್ದಗಳೂ ಬಹುವಾಗಿ ಹೊರ ಹೊರಟುವು.

೮೨. ಅಲ್ಲಿ ಹರಿಯು ಹರ್ಷದಿಂದ ತಾನಾಗಿಯೇ ಶಂಖಧ್ವನಿಯನ್ನು ಮಾಡಿದನು. ಗೋಕರ್ಣನನ್ನು ಆಲಂಗಿಸಿಕೊಂಡು ತನ್ನ ಸಮನನ್ನಾಗಿಯೇ ಮಾಡಿಕೊಂಡನು.

೮೩. ಆ ಕಥೆಯನ್ನು ಕೇಳಿದ ಮಿಕ್ಕವರನ್ನೂ ನೀಲಮೇಘದ ವರ್ಣವುಳ್ಳವರನ್ನಾಗಿಯೂ ಶುಕ್ಲಾಂಬರವುಳ್ಳವರನ್ನಾಗಿಯೂ ಕಿರೀಟ ಕುಂಡಲಗಳುಳ್ಳವರನ್ನಾಗಿಯೂ ಆ ಕ್ಷಣದಲ್ಲಿಯೇ ಮಾಡಿದನು.

೮೪. ಆ ಗೋಕರ್ಣನಲ್ಲಿದ್ದ ದಯೆಯಿಂದ ಹರಿಯು ಆ ಊರಿನಲ್ಲಿದ್ದ ನಾಯಿ ಚಾಂಡಾಲರೇ ಮುಂತಾದವರನ್ನೆಲ್ಲಾ ವಿಮಾನದಲ್ಲಿ ಕೂರಿಸಿಕೊಂಡನು.

೮೫. ಅವರೆಲ್ಲರನ್ನೂ ಹರಿಯು ಯೋಗಿಗಳಿರುವ ಲೋಕಕ್ಕೆ ಕಳುಹಿಸಿದನು. ತಾನು ಆ ಗೋಕರ್ಣನನ್ನು ಕರೆದುಕೊಂಡು ಗೋಪವಲ್ಲಭರಿರುವ ಗೋಲೋಕಕ್ಕೆ ಹೋದನು.

ಕಥಾ ಶ್ರವಣತಃ ಪ್ರೀತೋ ನಿರ್ಯಯೌ ಭಕ್ತವತ್ಸಲಃ ।
ಅಯೋಧ್ಯಾವಾಸಿನಃ ಪೂರ್ವಂ ಯಥಾ ರಾಮೇಣ ಸಂಗತಾಃ ॥ ೮೬ ॥

ತಥಾ ಕೃಷ್ಣೇನ ತೇ ನೀತಾ ಗೋಲೋಕಂ ಯೋಗಿದುರ್ಲಭಂ ।
ಯತ್ರ ಸೂರ್ಯಸ್ಯ ಸೋಮಸ್ಯ ಸಿದ್ಧಾನಾಂ ನ ಗತಿಃ ಕದಾ ।
ತಂ ಲೋಕಂ ಹಿ ಗತಾಸ್ತೇ ತು ಶ್ರೀಮದ್ಭಾಗವತಶ್ರವಾತ್ ॥ ೮೭ ॥

ಬ್ರೂಮೋದ್ಯ ತೇ ಕಿಂ ಫಲವೃಂದಮುಜ್ವಲಂ
ಸಪ್ತಾಹಯಜ್ಞೇನ ಕಥಾಸು ಸಂಚಿತಂ ।
ಕರ್ಣೇನ ಗೋಕರ್ಣಕಥಾಕ್ಷರೋ ಯೈಃ
ಪೀತಶ್ಚ ತೇ ಗರ್ಭಗತಾ ನ ಭೂಯಃ ॥ ೮೮ ॥

ವಾತಾಂಬುಪರ್ಣಾಶನದೇಹಶೋಷಣೈಃ
ತಪೋಭಿರುಗ್ರೈಶ್ಚಿರಕಾಲಸಂಚಿತೈಃ ।
ಯೋಗೈಶ್ಚ ಸಂಯಾನ್ತಿ ನರಾ ನ ತಾಂ ಗತಿಂ
ಸಪ್ತಾಹಗಾಥಾಶ್ರವಣೇನ ಯಾನ್ತಿ ॥ ೮೯ ॥

---

೮೬. ಕಥೆಯ ಶ್ರವಣದಿಂದ ಭಕ್ತವತ್ಸಲನಾದ ಶ್ರೀ ಹರಿಯು ಪ್ರೀತನಾದನು. ಹಿಂದೆ ಅಯೋಧ್ಯೆಯಲ್ಲಿದ್ದವರನ್ನು ರಾಮನು ಹೇಗೆ ವೈಕುಂಠಕ್ಕೆ ಕರೆದುಕೊಂಡು ಹೋದನೋ ಹಾಗೆ ಕೃಷ್ಣನು ಇವರೆಲ್ಲರನ್ನೂ ಯೋಗಿ ದುರ್ಲಭವಾದ ಗೋಲೋಕಕ್ಕೆ ಕರೆದುಕೊಂಡು ಹೋದನು.

೮೭. ಚಂದ್ರ ಸೂರ್ಯರಿಗೂ ಸಿದ್ಧರಿಗೂ ಯಾವ ಜಾಗದಲ್ಲಿ ಪ್ರವೇಶವಿಲ್ಲವೋ ಅಂತಹ ಲೋಕವನ್ನು ಇವರು ಭಾಗವತದ ಶ್ರವಣದಿಂದ ಹೊಂದಿದರು.

೮೮. ಈ ಸಪ್ತಾಹ ಶ್ರವಣ ರೂಪವಾದ ಯಜ್ಞದಿಂದ ಅವರಿಗೆ ಯಾವ ರೀತಿಯಾದ ಫಲವು ಬಂದಿತೆಂಬುದನ್ನು ಹೇಳಬೇಕಾದುದೇ ಇಲ್ಲ. ಈ ಗೋಕರ್ಣನು ಹೇಳಿದ ಕಥಾಕ್ಷರವನ್ನು ಕಿವಿಯಿಂದ ಕೇಳಿದವರು ಮತ್ತೆ ಗರ್ಭವಾಸವನ್ನು ಹೊಂದದ ಮೋಕ್ಷವನ್ನು ಹೊಂದಿದರು.

೮೯. ಗಾಳಿ ನೀರು ಎಲೆಗಳನ್ನು ತಿಂದುಕೊಂಡು ದೇಹಶೋಷಣೆ ಮಾಡುತ್ತ ಉಗ್ರವಾದ ತಪಸ್ಸುಗಳಿಂದ ಬಹುಕಾಲ ಸಂಪಾದಿಸಿದ ಯಾವ ಗತಿಯನ್ನು ಯೋಗಿಗಳು ಹೊಂದುತ್ತಾರೆಯೋ ಅದಕ್ಕಿಂತಲೂ ಉತ್ತಮವಾದ ಗತಿಯನ್ನು ಈ ಸಪ್ತಾಹ ಶ್ರವಣ ಮಾಡಿದವರು ಹೊಂದುತ್ತಾರೆ.

**ಇತಿಹಾಸಮಿಮಂ ಪುಣ್ಯಂ ಶಾಂಡಿಲ್ಯೋಽಪಿ ಮುನೀಶ್ವರಃ ।**
**ಪಠತೇ ಚಿತ್ರಕೂಟಸ್ಥೋ ಬ್ರಹ್ಮಾನಂದಪರಿಪ್ಲುತಃ ॥ ೯೦ ॥**

**ಆಖ್ಯಾನಮೇತತ್ಪರಮಂ ಪವಿತ್ರಂ**
**ಶ್ರುತಂ ಸಕೃದ್ವೈ ವಿದಹೇದಘೌಘಂ ।**
**ಶ್ರಾದ್ಧೇಪ್ರಯುಕ್ತಂ ಪಿತೃತೃಪ್ತಿಮಾವಹೇತ್**
**ನಿತ್ಯಂ ಸುಪಾಠಾದಪುನರ್ಭವಂ ಚ ॥ ೯೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀಮದ್ಭಾಗವತ ಮಾಹಾತ್ಮ್ಯೇ ಗೋಕರ್ಣ ಕೃತ ಸಪ್ತಾಹ ಶ್ರವಣಂ ನಾಮ ತ್ರಿನವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೯೦. ಶಾಂಡಿಲ್ಯನೆಂಬ ಮುನೀಶ್ವರನು ಚಿತ್ರಕೂಟದಲ್ಲಿದ್ದುಕೊಂಡು ಈ ಇತಿಹಾಸವನ್ನು ಓದುತ್ತ ಬ್ರಹ್ಮಾನಂದದಿಂದ ಮೈಮರೆಯುತ್ತಾನೆ.

೯೧. ಈ ಕಥೆಯು ಪವಿತ್ರವಾದುದು. ಒಂದು ಬಾರಿ ಕೇಳಿದರೂ ಕೂಡ ಪಾಪದ ಸಮೂಹವನ್ನೇ ನಾಶಮಾಡುತ್ತದೆ. ಶ್ರಾದ್ಧದ ಸಂದರ್ಭದಲ್ಲಿ ಹೇಳಿದರೆ ಪಿತೃಗಳಿಗೆ ತೃಪ್ತಿಯುಂಟಾಗುತ್ತದೆ. ನಿತ್ಯವೂ ಓದಿದರೆ ಮತ್ತೆ ಜನ್ಮವೆತ್ತದಂತಹ ಸ್ವರ್ಗವು ಸಿಕ್ಕುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಶ್ರೀಮದ್ಭಾಗವತ ಮಹಿಮೆಯಲ್ಲಿ ಗೋಕರ್ಣನು ಮಾಡಿದ ಸಪ್ತಾಹ ಶ್ರವಣ ಎಂಬ ನೂರ ತೊಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರ್ನವತ್ಯಧಿಕಶತತಮೋಽಧ್ಯಾಯಃ ॥



॥ ಕುಮಾರಾ ಊಚುಃ ॥

**ಅಥ ತೇ ಸಂಪ್ರವಕ್ಷ್ಯಾಮಃ ಸಪ್ತಾಹಶ್ರವಣೇ ವಿಧಿಂ ।**
**ಸಹಾಯೈರ್ವಸುಭಿಶ್ಚೈವ ಪ್ರಾಯಃ ಸಾಧ್ಯೋ ಹರಿಃ ಸ್ಮೃತಃ ॥ ೧ ॥**

**ದೈವಜ್ಞಂ ತು ಸಮಾಹೂಯ ಮುಹೂರ್ತಂ ಪೃಚ್ಛ್ಯ ಯತ್ನತಃ ।**
**ವಿವಾಹೇ ಯಾದೃಶಂ ವಿತ್ತಂ ತಾದೃಶಂ ಪರಿಕಲ್ಪಯೇತ್ ॥ ೨ ॥**

**ನಭಸ್ಯ ಆಶ್ವಿನೋರ್ಜೌ ಚ ಮಾರ್ಗಶೀರ್ಷಃ ಶುಚಿರ್ನಭಃ ।**
**ಏತೇ ಮಾಸಾಃ ಕಥಾರಂಭೇ ಶ್ರೋತೄಣಾಂ ಮೋಕ್ಷಸೂಚಕಾಃ ॥ ೩ ॥**

---

## ನೂರ ತೊಂಭತ್ತನಾಲ್ಕನೆಯ ಅಧ್ಯಾಯವು



೧. ಸನತ್ಕುಮಾರರು ಹೇಳಿದರು-ಇನ್ನು ಮೇಲೆ ಭಾಗವತ ಸಪ್ತಾಹ ಶ್ರವಣ ನಿಯಮವನ್ನು ಹೇಳುತ್ತೇನೆ. ಆ ಸಪ್ತಾಹ ಶ್ರವಣ ವಿಧಿಯು ಸಾಧಾರಣ ವಾಗಿ ಬಹುವಾದ ಸಹಾಯದಿಂದಲೂ ಹಣದಿಂದಲೂ ಸಾಧ್ಯವಾಗತಕ್ಕದ್ದು.

೨. ಜೋಯಿಸನನ್ನು ಕರೆದು ಪ್ರಯತ್ನಪಟ್ಟು ಸರಿಯಾದ ಲಗ್ನವನ್ನು ನೋಡಿಸಿ ಮದುವೆಗೆ ಬೇಕಾಗುವಂತೆ ಹಣ ಮುಂತಾದುವುಗಳನ್ನೆಲ್ಲಾ ಸಿದ್ಧ ಮಾಡಬೇಕು.

೩. ಭಾದ್ರಪದ ಆಶ್ವಯುಜ ಕಾರ್ತೀಕ ಮಾರ್ಗಶೀರ್ಷ ಆಷಾಢ ಶ್ರಾವಣ ಈ ತಿಂಗಳುಗಳಲ್ಲಿ ಕಥೆಯನ್ನು ಆರಂಭಿಸಿದರೆ ಕೇಳತಕ್ಕವರಿಗೆ ಮೋಕ್ಷವು ಸಿಕ್ಕುತ್ತದೆ.

ಮಾಸಾನಾಂ ವಿಗ್ರಹೇ ಯಾನಿ ತಾನಿ ತ್ಯಾಜ್ಯಾನಿ ಸರ್ವಥಾ ।
ಭೌಮಾರ್ಕೀ ವರ್ಜಿತೌ ವಾರೌ ಭಾನಿ ಧ್ರುವಮೃದೂನಿ ಚ　　　॥ ೪ ॥

ನಿತ್ಯಾಯಾಂ ಚ ಕಥಾಯಾಂ ಚ ಪುರಾಣಾನಾಂ ಮುನೀಶ್ವರ ।
ದ್ವಾದಶೀಂ ವರ್ಜಯೇತ್ಪ್ರಾಜ್ಞಃ ಸೂತಸೂತಕಸಂಭವಾತ್　　　॥ ೫ ॥

ಶ್ರೀಮದ್ಭಾಗವತಸ್ಯಾಪಿ ಸಪ್ತಾಹೇ ನೈತ್ಯಕೇಽಪಿ ಚ ।
ನ ನಿಷೇಧೋಽಸ್ತಿ ದೇವರ್ಷೇ ಪ್ರಾಹುರೇವಂ ಪುರಾವಿದಃ　　　॥ ೬ ॥

ಸಹಾಯಾಶ್ಚೇತರೇ ಚಾತ್ರ ಕರ್ತವ್ಯಾಃ ಸೋದ್ಯಮಾಶ್ಚ ಯೇ ।
ದೇಶೇ ದೇಶೇ ತಥಾ ಸೇಯಂ ವಾರ್ತಾ ಪ್ರೇಷ್ಯಾ ಪ್ರಯತ್ನತಃ　　　॥ ೭ ॥

ಭವಿಷ್ಯತಿ ಕಥಾ ಚಾತ್ರ ಆಗನ್ತವ್ಯಂ ಕುಟುಂಬಿಭಿಃ ।
ದೂರೇ ಹರಿಕಥಾಃ ಕೇಚಿದ್ದೂರೇ ಚಾಚ್ಯುತಕೀರ್ತನಾಃ　　　॥ ೮ ॥

---

೪-೫. ಮಾಸಗಳಲ್ಲಿ ಬರುವ ಸಂಕ್ರಮಣಗಳನ್ನೂ ಅಮಾವಾಸ್ಯೆಗಳನ್ನೂ ಸಂಧಿದಿವಸಗಳನ್ನೂ ಬಿಡಬೇಕು. ಮಂಗಳ ಶನಿವಾರಗಳನ್ನು ಬಿಡಬೇಕು. ಧ್ರುವ ಮೃದು ಸಂಜ್ಞೆಯುಳ್ಳ ನಕ್ಷತ್ರಗಳಲ್ಲಿ ಕೂಡದು. ಇವೆಲ್ಲವನ್ನೂ ಮೊದಲು ಮಾಡುವಾಗ ನೋಡಿ ಅವಿಲ್ಲದ ದಿವಸಗಳಲ್ಲಿ ಶುದ್ಧ ದಿನದಲ್ಲಿ ಮೊದಲು ಮಾಡಬೇಕು. ಯಾವ ಪುರಾಣದ ಕಥೆಯನ್ನಾಗಲಿ ಮೊದಲು ಮಾಡಿದ ಮೇಲೆ ದ್ವಾದಶಿಯನ್ನು ಬಿಡಬೇಕು. ಆ ದಿನ ಸೂತನ ಸೂತಕವು ಬಂದಿರುತ್ತದೆ.

೬. ಆದರೆ ಶ್ರೀಮದ್ಭಾಗವತದ ಪುರಾಣವು ನಿತ್ಯದ್ದಾಗಿರಲಿ, ಸಪ್ತಾಹದ್ದಾಗಿರಲಿ ಈ ನಿಷೇಧಗಳೊಂದೂ ಇರುವುದಿಲ್ಲವೆಂದು ತಿಳಿದವರು ಹೇಳುತ್ತಾರೆ.

೭. ಯಾರು ಈ ವಿಷಯದಲ್ಲಿ ಅಕ್ಕರೆಯುಳ್ಳವರೋ ಅವರ ಸಹಾಯವನ್ನು ತೆಗೆದುಕೊಳ್ಳಬೇಕು. ಎಲ್ಲಾ ಜಾಗಗಳಿಗೂ ಈ ಸಪ್ತಾಹದ ವಿಷಯವನ್ನು ಪ್ರಯತ್ನಪಟ್ಟು ತಿಳಿಸಬೇಕು.

೮. ಇಂಥ ಸ್ಥಳದಲ್ಲಿ ಕಥೆಯು ಆಗುತ್ತದೆ. ನೀವು ಕುಟುಂಬೊಡನೆ ಬರಬೇಕು. ಎಂದು ಕರೆಯಿಸಬೇಕು. ಹರಿಕಥೆಯನ್ನು ಮಾಡತಕ್ಕವರನ್ನು ದೂರದಲ್ಲಿ ಒಂದೆಡೆಯಲ್ಲಿಯೂ ಅಚ್ಯುತನ ಕೀರ್ತನೆಗಳನ್ನು ಹೇಳುವವರನ್ನು ಬೇರೆ ಕಡೆಯಲ್ಲಿ ದೂರದಲ್ಲಿಯೂ ಇಡಬೇಕು.

ಸ್ತ್ರಿಯಶ್ಶೂದ್ರಾದಯೋ ಯೇ ಚ ತೇಷಾಂ ಬೋಧೋ ಯತೋ ಭವೇತ್ ।
ದೇಶೇ ದೇಶೇ ವಿರಕ್ತಾ ಯೇ ವೈಷ್ಣವಾಃ ಕೀರ್ತನೋತ್ಸುಕಾಃ ॥ ೯ ॥

ತೇಷ್ವೇವ ಪತ್ರಂ ಪ್ರೇಷ್ಯಂ ಚ ತಲ್ಲೇಖನಮಿತೀರಿತಂ ।
ಸತಾಂ ಸಮಾಜೋ ಭವಿತಾ ಸಪ್ತರಾತ್ರಂ ಸುದುರ್ಲಭಃ ॥ ೧೦ ॥

ಅಪೂರ್ವರಸರೂಪೈವ ಕಥಾಚಾತ್ರ ಭವಿಷ್ಯತಿ ।
ಶ್ರೀಭಾಗವತಪೀಯೂಷಪಾನಾಯ ರಸಲಂಪಟಾಃ ॥ ೧೧ ॥

ಭವಂತಶ್ಚ ತದಾ ಶೀಘ್ರಮಾಯಾಂತು ಪ್ರೇಮತತ್ಪರಾಃ ।
ನಾವಕಾಶಃ ಕದಾಚಿಚ್ಚೇದ್ದಿನಮಾತ್ರಂ ತಥಾಪಿ ತು ॥ ೧೨ ॥

ಸರ್ವಥಾಗಮನಂ ಕಾರ್ಯಂ ಕ್ಷಣೋತ್ರೈವ ಸುದುರ್ಲಭಂ ।
ಏವಮಾಕಾರಣಂ ತೇಷಾಂ ಕರ್ತವ್ಯಂ ವಿನಯೇನ ಚ ॥ ೧೩ ॥

---

೯-೧೩. ಹೆಂಗಸರಿಗೂ ಶೂದ್ರರಿಗೂ ತಿಳಿಯುವಂತೆ ಬಿಡಿಸಿ ವಿಸ್ತಾರವಾಗಿ ಹೇಳಬೇಕು. ಎಲ್ಲೆಲ್ಲಿ ವಿರಕ್ತರಾದ ವೈಷ್ಣವರು ಈ ಕೀರ್ತನೆಯಲ್ಲಿ ಆಸಕ್ತರಾಗಿರುವರೋ ಅಲ್ಲಿಗೆಲ್ಲವೂ ಅವರ ಹೆಸರಿಗೆ ಕಾಗದವನ್ನು ಕಳುಹಿಸಬೇಕು. ಅವರಿಗೆ ಕಾಗದವನ್ನು ಈರೀತಿಯ ಒಕ್ಕಣೆಯಿಂದ ಬರೆಯಬೇಕು. ಇಲ್ಲಿ "ಸತ್ಪುರುಷರ ಗುಂಪು ಏಳು ರಾತ್ರಿ (ಏಳು ದಿನಗಳ) ಕಾಲ ಸೇರಿರುತ್ತದೆ. ಅದು ದುರ್ಲಭವು. ಅಪೂರ್ವವಾದ ರಸವುಳ್ಳ ಕಥೆಯು ಇಲ್ಲಿ ನಡೆಯತಕ್ಕದ್ದಾಗಿದೆ. ಶ್ರೀ ಭಾಗವತವೆಂಬ ಅಮೃತ ರಸವನ್ನು ಕುಡಿಯಲು ರಸಲೋಲುಪರಾದ ನೀವುಗಳು ಪ್ರೀತಿಯಿಂದ ಬೇಗ ಬರಬೇಕು. ತಮಗೆ ಅವಕಾಶವು ಒಂದುವೇಳೆ ಆಗದಿದ್ದರೆ ಒಂದು ದಿನದ ಮಟ್ಟಿಗಾದರೂ ಬರಬೇಕು. ಈ ಉತ್ಸವಕಾಲದಲ್ಲಿ ಒಂದು ಕ್ಷಣಕಾಲವೂ ಸಿಕ್ಕುವುದು ಕಷ್ಟವು." ಹೀಗೆಂದು ಅವರನ್ನು ವಿನಯದಿಂದ ಕರೆಯಬೇಕು.

**ಆಗನ್ತುಕಾನಾಂ ಸರ್ವೇಷಾಂ ವಾಸಸ್ಥಾನಾನಿ ಕಲ್ಪಯೇತ್ ।**
**ತೀರ್ಥೇ ವಾಪಿ ವನೇ ವಾಪಿ ಗೃಹೇ ವಾ ಶ್ರವಣಂ ಮತಂ ॥ ೧೪ ॥**

**ವಿಶಾಲಾ ವಸುಧಾ ಯತ್ರ ಕರ್ತವ್ಯಂ ತತ್ಕಥಾಸ್ಥಳಂ ।**
**ಶೋಧನಂ ಮಾರ್ಜನಂ ಭೂಮೇಃ ಲೇಪನಂ ಧಾತುಮಂಡನಂ ॥ ೧೫ ॥**

**ಗೃಹೋಪಸ್ಕರಮುದ್ಧೃತ್ಯ ಗೃಹಕೋಣೇ ನಿವೇಶಯೇತ್ ।**
**ಅರ್ವಾಕ್ ಪಂಚಾಹತೋ ಯತ್ನಾದಾಸ್ತಣಾನಿ ಪ್ರಮೇಲಯೇತ್ ॥ ೧೬ ॥**

**ಕರ್ತವ್ಯೋ ಮಂಡಪಃ ಪ್ರೋಚ್ಚೈಃ ಕದಳೀಖಂಡಮಂಡಿತಃ ।**
**ಫಲಪುಷ್ಪದಳೈರ್ವಿಷ್ವಗ್ವಿತಾನೇನ ವಿರಾಜಿತಃ ॥ ೧೭ ॥**

---

೧೪. ಬರತಕ್ಕವರೆಲ್ಲರಿಗೂ ಇರಲು ಜಾಗವನ್ನು ಸಿದ್ಧಮಾಡಿಕೊಡಬೇಕು. ತೀರ್ಥದಲ್ಲಿಯಾಗಲೀ ಕೈದೋಟಗಳಲ್ಲಿಯಾಗಲೀ ಇಲ್ಲವೇ ವಿಶಾಲವಾಗಿರುವ ಮನೆಗಳಲ್ಲಿಯಾಗಲೀ ಕಥೆಯನ್ನು ಹೇಳುವುದಕ್ಕೋಸ್ಕರ ಏರ್ಪಡಿಸಬೇಕು.

೧೫. ಸ್ಥಳವು ವಿಶಾಲವಾಗಿರುವ ಬೈಲು ಪ್ರದೇಶಗಳಲ್ಲಿಯಾದರೂ ಕಥಾಮಂಟಪವನ್ನು ಸಿದ್ಧಪಡಿಸಬೇಕು. ಭೂಮಿಯನ್ನು ಶೋಧಿಸಬೇಕು. ಸಾರಿಸಬೇಕು. ಬಗೆಬಗೆಯಾದ ಬಣ್ಣಗಳನ್ನು ಬಳಿಯುಬೇಕು.

೧೬. ಮನೆಯ ಪದಾರ್ಥಗಳೆಲ್ಲವನ್ನೂ ತೆಗೆದುಕೊಂಡು ಒಂದು ಕೋಣೆಯಲ್ಲಿ ಹಾಕಿಡಬೇಕು. ಐದು ದಿನ ಮೊದಲೇನೇ ನೆಲಕ್ಕೆ ಹಾಸುವ ಚಾಪೆ ಕಂಬಳಿ ಮುಂತಾದುವನ್ನು ಸೇರಿಸಿಕೊಂಡಿರಬೇಕು.

೧೭–೧೯. ಮಂಡಪವನ್ನು ದೊಡ್ಡದಾಗಿ ಮಾಡಿರಬೇಕು. ಅದಕ್ಕೆ ಬಾಳೆ ಕಂಬಗಳನ್ನು ಕಟ್ಟಿರಬೇಕು. ಹಣ್ಣು, ಹೂವು, ಮಾವಿನ ಎಲೆ ಮುಂತಾದುವನ್ನು ಎಲ್ಲಾ ಕಡೆಗೂ ಕಟ್ಟಿ ಶೋಭಾಯಮಾನವಾಗುವಂತೆ ಮಾಡಿರಬೇಕು.

ಚತುರ್ದಿಕ್ಷು ಧ್ವಜಾರೋಪೋ ಬಹುಸಂಪದ್ವಿರಾಜಿತಃ ।
ಊರ್ಧ್ವಂ ಸಪ್ತೈವ ಲೋಕಾಶ್ಚ ಕಲ್ಪನೀಯಾಸ್ಸವಿಸ್ತರಂ ॥ ೧೮ ॥

ತೇಷು ವಿಪ್ರಾ ವಿರಕ್ತಾಶ್ಚ ಸ್ಥಾಪನೀಯಾಃ ಪ್ರಬೋಧ್ಯ ಚ ।
ಪೂರ್ವಂ ತೇಷಾಮಾಸನಾನಿ ಕರ್ತವ್ಯಾನಿ ಯಥೋತ್ತರಂ ॥ ೧೯ ॥

ವಕ್ತುಶ್ಚಾಪಿ ತಥಾ ದಿವ್ಯಮಾಸನಂ ಪರಿಕಲ್ಪಯೇತ್ ।
ಉದಙ್ಮುಖೋ ಭವೇದ್ವಕ್ತಾ ಶ್ರೋತಾ ವೈ ಪ್ರಾಙ್ಮುಖಸ್ತಥಾ ॥ ೨೦ ॥

ಪ್ರಾಙ್ಮುಖಶ್ಚೇದ್ಭವೇದ್ವಕ್ತಾ ಶ್ರೋತಾ ಚೋದಙ್ಮುಖಸ್ತದಾ ।
ಅಥವಾ ಪೂರ್ವದಿಕ್ ಜ್ಞೇಯಾ ಪೂಜ್ಯಪೂಜಕಮಧ್ಯತಃ ॥ ೨೧ ॥

---

ನಾಲ್ಕು ಕಡೆಯಲ್ಲಿಯೂ ಪತಾಕೆಗಳನ್ನು ಕಟ್ಟಿರಬೇಕು ಇನ್ನೂ ಅನೇಕ ವಾದ ಪದಾರ್ಥಗಳಿಂದ ಅಲಂಕರಿಸಬೇಕು. ಅಲ್ಲಿಗೆ ಬೇಕಾಗುವ ಪದಾರ್ಥ ಗಳೆಲ್ಲವನ್ನೂ ತಂದು ಸೇರಿಸಿರಬೇಕು. ಆ ಮುಂಭಾಗದ ಮಂಟಪವಲ್ಲಿ ಏಳು ಜನರಿಗೆ ಆಸನಗಳನ್ನು ಮಾಡಬೇಕು. ಅವು ವಿಸ್ತಾರವಾಗಿರಬೇಕು. ಅಲ್ಲಿ ಬ್ರಾಹ್ಮಣರನ್ನೂ ವಿರಕ್ತರನ್ನೂ (ಯತಿಗಳನ್ನು) ಕೂರಿಸಬೇಕು. ಅವರಿಗೆ ಹಿತ ವಾದ ಒಳ್ಳೆಯ ಮಾತನ್ನು ಹೇಳಿ ಗೌರವಿಸಬೇಕು. ಮೊದಲು ಅವರಿಗೆ ಆಸನ ಗಳನ್ನು ಕಲ್ಪಿಸಬೇಕು. ಜನರು ವರ್ಣಗಳ ಪ್ರಕಾರ ಒಬ್ಬರ ಹಿಂದೊಬ್ಬರು ಕುಳಿತು ಕೊಳ್ಳುವಂತೆ ಮಾಡಬೇಕು. (ಮಂಟಪದ ಮುಂದೆ ಜಾಗಗಳನ್ನು ಏಳು ಭಾಗವಾಗಿ ವಿಂಗಡಿಸಿರಬೇಕು. ಮೊದಲನೆಯ ಸ್ಥಳದಲ್ಲಿ ಯತಿಗಳನ್ನೂ ಎರಡನೆಯ ಸ್ಥಳದಲ್ಲಿ ವೈದಿಕ ಬ್ರಾಹ್ಮಣರೂ ವಿರಕ್ತರೂ ಆದವರನ್ನು ಕೂರಿಸಬೇಕು. ಇಂತಿಂತಹವರು ಇಲ್ಲಿಲ್ಲಿ ಕುಳಿತುಕೊಳ್ಳಬೇಕೆಂದು ಸೂಚನಾಪತ್ರಗಳನ್ನು ಅಂಟಿಸಿರಬೇಕು. ಅಥವಾ ಅವರಿಗೆ ಹೇಳುವಂತೆ ಆಳುಗಳನ್ನು ಇಟ್ಟಿರಬೇಕು.)

೨೦–೨೧. ಕಥೆ ಹೇಳುವವನಿಗೆ ಒಳ್ಳೆಯ ಆಸನವನ್ನು ಮಾಡಿಕೊಡ ಬೇಕು. ಆ ಕಥೆ ಹೇಳುವವನು ಉತ್ತರದಿಕ್ಕಿಗೆ ಮುಖಮಾಡಿಕೊಂಡು ಕುಳಿತು ಕೊಳ್ಳಬೇಕು. ಕೇಳತಕ್ಕವನು ಪೂರ್ವಮುಖವಾಗಿ ಕುಳಿತುಕೊಳ್ಳಬೇಕು. ಕಥೆಗಾರನು ಪೂರ್ವ ಮುಖಕ್ಕೂ ಕುಳಿತುಕೊಳ್ಳಬಹುದು. ಹಾಗೆ ಮಾಡಿದರೆ ಕೇಳತಕ್ಕವನು ಉತ್ತರದಿಕ್ಕಿಗೆ ಮುಖಮಾಡಿಕೊಂಡು ಕುಳಿತುಕೊಳ್ಳಬೇಕು. ಅಥವಾ ಇಬ್ಬರೂ ಪೂರ್ವದಿಕ್ಕಿಗೆ ಮುಖಮಾಡಿಕೊಂಡಿರಬಹುದು.

ಶ್ರೋತೄಣಾಮಾಗಮೋ ಪ್ರೋಕ್ತಾ ದೇಶಕಾಲಾದಿಕೋವಿದೈಃ ।
ವಿರಕ್ತೋ ವೈಷ್ಣವೋ ವಿಪ್ರೋ ವೇದಶಾಸ್ತ್ರವಿಶುದ್ಧಿಕೃತ್ ॥ ೨೨ ॥

ದೃಷ್ಟಾಂತಕುಶಲೋ ಧೀರೋ ವಕ್ತಾ ಕಾರ್ಯೋತಿನಿಸ್ಪೃಹಃ ।
ಅನೇಕಧರ್ಮವಿಭ್ರಾಂತಾಃ ಸ್ತ್ರೈಣಾಃ ಪಾಷಂಡವಾದಿನಃ ॥ ೨೩ ॥

ಶುಕಶಾಸ್ತ್ರಕಥೋಚ್ಚಾರೇ ತ್ಯಾಜ್ಯಾಸ್ತೇ ಯದಿ ಪಂಡಿತಾಃ ।
ವಕ್ತುಃ ಪಾರ್ಶ್ವೇ ಸಹಾಯಾರ್ಥಮನ್ಯಃ ಸ್ಥಾಪ್ಯಸ್ತಥಾವಿಧಃ ॥ ೨೪ ॥

ಪಂಡಿತಸ್ಸಂಶಯಚ್ಛೇತ್ತಾ ಲೋಕಬೋಧನತತ್ಪರಃ ।
ವಕ್ತೃಕ್ಷೌರಂ ಪ್ರಕರ್ತವ್ಯಂ ದಿನಾದರ್ವಾಗ್ವ್ರತಾಪ್ತಯೇ ॥ ೨೫ ॥

---

೨೨–೨೩. ಆ ಕಾಲ ದೇಶ ಸಂಧರ್ಭಗಳಿಗನುಗುಣವಾಗಿ ಕೇಳುವವರಿಗೆ ಸ್ಥಳವಸತಿಗಳನ್ನು ಕಲ್ಪಿಸಿಕೊಡಬೇಕು. ಎಂದು ಅದರ ವಿಷಯವನ್ನು ತಿಳಿದವರು ಹೇಳುತ್ತಾರೆ. ಕಥೆ ಹೇಳುವವನು ವಿರಕ್ತನಾಗಿರಬೇಕು. ವಿಷ್ಣುಭಕ್ತನಾಗಿರಬೇಕು. ವೇದಶಾಸ್ತ್ರಗಳನ್ನು ತಿಳಿದಿರಬೇಕು. ಶುದ್ಧನಾಗಿರಬೇಕು. ದೃಷ್ಟಾಂತಗಳನ್ನು ಹೇಳುವುದರಲ್ಲಿ ಬುದ್ಧಿವಂತನಾಗಿರಬೇಕು. ಧೈರ್ಯಶಾಲಿಯಾಗಿರಬೇಕು ಒಳ್ಳೆಯ ಮಾತುಗಾರನಾಗಿರಬೇಕು. ಆಸೆಯಿಲ್ಲದವನಾಗಿರಬೇಕು. ಇಂತಹವನನ್ನು ಕಥೆಯನ್ನು ಹೇಳಲು ನಿಯಮಿಸಬೇಕು. ಅನೇಕ ಧರ್ಮಗಳನ್ನು ತಿಳಿದುಕೊಂಡು ಇದನ್ನು ಮಾಡಬಹುದು. ಇದನ್ನು ಮಾಡಬಾರದೆಂಬುವರಲ್ಲಿ ಸಂಶಯವನ್ನು ಹೊಂದಿರುವವರನ್ನಾಗಲೀ ಹೆಂಗಸರಿಗೆ ಅಧೀನರಾಗಿರುವವರನ್ನಾಗಲೀ ನಾಸ್ತಿಕರನ್ನಾಗಲೀ ಈ ಭಾಗವತದ ಕಥೆಯನ್ನು ಹೇಳಲು ಅವರು ಪಂಡಿತರಾಗಿದ್ದರೂ ನಿಯಮಿಸಬಾರದು. ಖಂಡಿತವಾಗಿಯೂ ಬಿಟ್ಟು ಬಿಡಬೇಕು.

೨೪–೨೬. ಕಥೆ ಹೇಳುವವನ ಪಕ್ಕದಲ್ಲಿ ಅವನ ಸಹಾಯಕ್ಕೋಸ್ಕರವಾಗಿ ಮತ್ತೊಬ್ಬನನ್ನು ಇಟ್ಟಿರಬೇಕು. ಅವನೂ ಕೂಡ ಕಥೆ ಹೇಳತಕ್ಕವನಿಗೆ ಹೇಳುವ ಗುಣಗಳನ್ನು ಹೊಂದಿರಬೇಕು. ಪಂಡಿತನಾಗಿರಬೇಕು. ಸಂಶಯವನ್ನು ನಾಶಮಾಡತಕ್ಕವನಾಗಿರಬೇಕು ಜನಗಳಿಗೆ ತಿಳಿಸುವುದರಲ್ಲಿ ಗಟ್ಟಿಗನಾಗಿರಬೇಕು. ಈ ವ್ರತವನ್ನು ಹಿಡಿಯುವುದಕ್ಕೆ ಒಂದು ದಿವಸ ಮುಂಚೆ

ಅರುಣೋದಯೇಸೌ ನಿರ್ವರ್ತ್ಯ ಶೌಚಸ್ನಾನಂ ಸಮಾಚರೇತ್ ।
ನಿತ್ಯಂ ಸಂಕ್ಷೇಪತಃ ಕೃತ್ವಾ ಸಂಧ್ಯಾದ್ಯಂ ಸಂಪ್ರಯತ್ನತಃ ॥ ೨೬ ॥

ಕಥಾವಿಘ್ನವಿಘಾತಾಯ ಗಣನಾಥಂ ಪ್ರಪೂಜಯೇತ್ ।
ಪಿತ್ರ್ನ್ ಸಂತರ್ಪ್ಯ ಶುದ್ಧ್ಯರ್ಥಂ ಪ್ರಾಯಶ್ಚಿತ್ತಂ ಸಮಾಚರೇತ್ ॥ ೨೭ ॥

ಮಂಡಲಂ ಚ ಪ್ರಕರ್ತವ್ಯಂ ತತ್ರ ಸ್ಥಾಪ್ಯೋ ಹರಿಸ್ತಥಾ ।
ಕೃಷ್ಣಮುದ್ದಿಶ್ಯ ಮಂತ್ರೇಣ ಚರೇತ್ಪೂಜಾವಿಧಿಂ ಕ್ರಮಾತ್ ॥ ೨೮ ॥

ಪ್ರದಕ್ಷಿಣನಮಸ್ಕಾರಾನ್ ಪೂಜಾಂತೇ ಸ್ತುತಿಮಾಚರೇತ್ ।
ಸಂಸಾರಸಾಗರೇ ಮಗ್ನಂ ದೀನಂ ಮಾಂ ಕರುಣಾನಿಧೇ ॥ ೨೯ ॥

ಕರ್ಮಗ್ರಾಹಗೃಹೀತಾಂಗಂ ಮಾಮುದ್ಧರ ಭವಾರ್ಣವಾತ್ ।
ಶ್ರೀಮದ್ಭಾಗವತಸ್ಯಾಪಿ ತತಃ ಪೂಜಾ ಪ್ರಯತ್ನತಃ ॥ ೩೦ ॥

---

ವ್ರತಸಿದ್ಧಿಗೋಸ್ಕರ ಕ್ಷೌರವನ್ನು ಮಾಡಿಸಿಕೊಳ್ಳಬೇಕು. ಅರುಣೋದಯಕ್ಕೆ ಎದ್ದು ಶೌಚಸ್ನಾನಗಳನ್ನು ಮಾಡಿಕೊಂಡು ನಿತ್ಯವಾದ ಕೆಲಸಗಳನ್ನು ಸಂಕ್ಷೇಪವಾಗಿ ಮಾಡಿಕೊಂಡು ಸಂಧ್ಯಾವಂದನೆಯನ್ನು ಪ್ರಯತ್ನಪಟ್ಟು ಬೇಗನೆ ಮುಗಿಸಿಕೊಳ್ಳಬೇಕು.

೨೭. ಕಥೆಯನ್ನು ಹೇಳುವಾಗ ವಿಘ್ನಗಳು ಬಾರದಂತಿರಲು ಗಣಪತಿಯನ್ನು ಪೂಜಿಸಬೇಕು. ಅನಂತರ ಪಿತೃಗಳಿಗೆ ತರ್ಪಣವನ್ನು ಕೊಟ್ಟು ಶುದ್ಧಿಗೋಸ್ಕರ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

೨೮. ಆ ಮಂಟಪದಲ್ಲಿ ಒಂದು ಮಂಡಲವನ್ನು ಮಾಡಿ ಅದರೊಳಗೆ ಹರಿಯ ಪ್ರತಿಮೆಯನ್ನು ಇಡಬೇಕು. ಕೃಷ್ಣನನ್ನು ಉದ್ದೇಶಿಸಿಕೊಂಡು ಮಂತ್ರ ಪೂರ್ವಕವಾಗಿ ಪೂಜೆಯನ್ನು ಕ್ರಮವಾಗಿ ಮಾಡಬೇಕು.

೨೯–೩೦. ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಪೂಜೆಯನ್ನು ಕೊನೆಗಾಣಿಸಿ ಸ್ತೋತ್ರಮಾಡಬೇಕು. ಎಲೈ ಕರುಣಾನಿಧಿಯೆ ! ಸಂಸಾರವೆಂಬ ಸಾಗರದಲ್ಲಿ ಮುಳುಗಿರುವ ದೀನನಾದ ನನ್ನನ್ನು ಉದ್ಧಾರಮಾಡು. ಕರ್ಮವೆಂಬ ಮೊಸಳೆಯಿಂದ ಹಿಡಿಯಲ್ಪಟ್ಟಿದ್ದೇನೆ ಇಂತಹ ನನ್ನನ್ನು ಸಂಸಾರ ಸಾಗರದಿಂದ ಉದ್ಧರಿಸು. ಆಮೇಲೆ ಶ್ರೀ ಭಾಗವತದ ಪುಸ್ತಕಕ್ಕೆ ಪೂಜೆಮಾಡಬೇಕು.

ಕರ್ತವ್ಯಾ ವಿಧಿನಾ ಪ್ರೀತ್ಯಾ ಧೂಪದೀಪಸಮನ್ವಿತಾ ।
ತತಸ್ತು ಶ್ರೀಫಲಂ ಧೃತ್ವಾ ನಮಸ್ಕಾರಂ ಸಮಾಚರೇತ್ ॥ ೩೦ ॥

ಸ್ತುತಿಃ ಪ್ರಸನ್ನಚಿತ್ತೇನ ಕರ್ತವ್ಯಾ ಕೇವಲಂ ತದಾ ।
ಶ್ರೀಮದ್ಭಾಗವತಾಖ್ಯ ತ್ವಂ ಪ್ರತ್ಯಕ್ಷಃ ಕೃಷ್ಣ ಏವ ಹಿ ॥ ೩೨ ॥

ಸ್ವೀಕೃತೋಽಸಿ ಮಯಾ ನಾಥ ಮುಕ್ತ್ಯರ್ಥಂ ಭವಸಾಗರೇ ।
ಮನೋರಥೋ ಮದೀಯೋಽಯಂ ಸಫಲಸ್ಸರ್ವಥಾ ತ್ವಯಾ ॥ ೩೩ ॥

ನಿರ್ವಿಘ್ನೇನೈವ ಕರ್ತವ್ಯೋ ದಾಸೋಽಹಂ ತವ ಕೇಶವ ।
ಏವಂ ದೀನಂ ವಚಃ ಪ್ರೋಚ್ಯ ವಕ್ತಾರಂ ಚಾಥ ಪೂಜಯೇತ್ ॥ ೩೪ ॥

ಸಂಭೂಷ್ಯ ವಸ್ತ್ರಭೂಷಾಭಿಃ ಪೂಜಾಂತೇ ತಂ ಚ ಸಂಸ್ತುಯಾತ್ ।
ಶುಕರೂಪ ಪ್ರಬೋಧಜ್ಞ ಸರ್ವಶಾಸ್ತ್ರವಿಶಾರದ ॥ ೩೫ ॥

---

ಧೂಪ ದೀಪ ಮೊದಲಾದುವುಗಳನ್ನು ಪ್ರೀತಿಯಿಂದ ಕೊಡಬೇಕು. ಆಮೇಲೆ ಬಿಲ್ವಪತ್ರೆಯ ಹಣ್ಣನ್ನು ಹಿಡಿದುಕೊಂಡು ನಮಸ್ಕಾರವನ್ನು ಮಾಡಬೇಕು.

೩೨. ಸಂತೋಷಗೊಂಡ ಮನಸ್ಸಿನಿಂದ ಅದನ್ನು ಸ್ತುತಿಮಾಡಬೇಕು. ಎಲೈ ಶ್ರೀಮದ್ಭಾಗವತವೆ ! ನೀನು ಪ್ರತ್ಯಕ್ಷನಾದ ಕೃಷ್ಣನೇನೆ !

೩೩–೩೪. ಎಲೈ ಸ್ವಾಮಿಯೆ ! ಈ ಸಂಸಾರ ಸಾಗರದಲ್ಲಿ ಬಿದ್ದ ನಾನು ಮೋಕ್ಷಕ್ಕೋಸ್ಕರ ನಿನ್ನನ್ನು ಸ್ವೀಕರಿಸಿದ್ದೇನೆ. ನನ್ನ ಇಷ್ಟಾರ್ಥವು ನಿನ್ನಿಂದ ನಿಶ್ಚಯವಾಗಿಯೂ ಸಫಲವಾಗುತ್ತದೆ. ಅದನ್ನು ನಿರ್ವಿಘ್ನವಾಗಿ ಪೂರ್ತಿಮಾಡಿ ಕೊಡು. ನಾನು ನಿನಗೆ ದಾಸನು ಈ ರೀತಿಯಾಗಿ ಭಾಗವತದ ವಿಷಯದಲ್ಲಿ ದೀನವಾದ ಮಾತನ್ನಾಡಿ ಆಮೇಲೆ ಕಥೆ ಹೇಳುವವನನ್ನು ಪೂಜಿಸಬೇಕು. ಬಟ್ಟೆ ಒಡವೆಗಳಿಂದ ಅಲಂಕರಿಸಿ ಪೂಜಿಸಿ ಪೂಜೆಯ ಕೊನೆಯಲ್ಲಿ ಅವನನ್ನು ಸ್ತುತಿಸಬೇಕು.

೩೫–೩೬. ಶುಕಋಷಿಯ ಸ್ವರೂಪನಾದ ಜ್ಞಾನಿಯಾದ ಸರ್ವಶಾಸ್ತ್ರಗಳನ್ನೂ ಬಲ್ಲ ಎಲೈ ಸ್ವಾಮಿಯೆ ! ಈ ಕಥೆಯನ್ನು ಪ್ರಕಾಶಪಡಿಸುವುದರಿಂದ ನನ್ನ

ಏತತ್ಕಥಾಪ್ರಕಾಶೇನ ಮದಜ್ಞಾನಂ ವಿನಾಶಯ |
ತದಗ್ರೇ ನಿಯಮಃ ಪಶ್ಚಾತ್ ಕರ್ತವ್ಯಃ ಶ್ರೇಯಸೇ ಮುದಾ ॥ ೩೬ ॥

ಸಪ್ತರಾತ್ರಂ ಯಥಾ ಶಕ್ತಿ ಧಾರಣೀಯಸ್ಸ ಏವ ಹಿ |
ವರಣಂ ಪಂಚವಿಪ್ರಾಣಾಂ ಕಥಾ ಭಂಗನಿವೃತ್ತಯೇ ॥ ೩೭ ॥

ಕರ್ತವ್ಯಂ ತೈರ್ಹರಿರ್ಜಪ್ಯೋ ದ್ವಾದಶಾಕ್ಷರವಿದ್ಯಯಾ |
ಬ್ರಾಹ್ಮಣಾನ್ ವೈಷ್ಣವಾಂಶ್ಚಾನ್ಯಾನ್ ತಥಾ ಕೀರ್ತನಕಾರಿಣಃ ॥ ೩೮ ॥

ನತ್ವಾ ಸಂಪೂಜ್ಯ ದತ್ತಾಜ್ಞಃ ಸ್ವಯಮಾಸನಮಾವಿಶೇತ್ |
ಲೋಕಚಿತ್ತಧನಾಗಾರಪುತ್ರಚಿಂತಾಂ ವ್ಯುದಸ್ಯ ಚ ॥ ೩೯ ॥

ಕಥಾಚಿತ್ತಃ ಶುದ್ಧಮತಿಃ ಸ ಲಭೇತ್ಫಲಮುತ್ತಮಂ |
ಆಸೂರ್ಯೋದಯಮಾರಭ್ಯ ಸಾರ್ಧಂ ತ್ರಿಪ್ರಹರಾನ್ತಕಂ ॥ ೪೦ ॥

---

ಅಜ್ಞಾನವನ್ನು ನಾಶಮಾಡು. ಎಂದು ಹೇಳಿ ಆಮೇಲೆ ಆ ಬ್ರಾಹ್ಮಣ ದೇವರುಗಳ ಎದುರಿನಲ್ಲಿ ನಿಯಮವನ್ನು ಕೈಗೊಳ್ಳಬೇಕು. ಆ ನಿಯಮವನ್ನು ಏಳು ದಿನಗಳ ವರೆಗೂ ಕೈಲಾದಷ್ಟು ಮಟ್ಟಿಗೂ ಕಾಪಾಡಿಕೊಂಡು ಬರಬೇಕು.

೩೭–೩೮. ಆ ಕಥೆಯು ಮಧ್ಯದಲ್ಲಿ ಭಂಗವಾಗದಿರುವುದಕ್ಕೆ ಐದುಜನ ಬ್ರಾಹ್ಮಣರನ್ನು ವರಿಸಿ ಅವರನ್ನು ದ್ವಾದಶಾಕ್ಷರೀ ಮಂತ್ರವನ್ನು ಜಪಿಸುವಂತೆ ಹೇಳಿ ಹರಿಯನ್ನು ಧ್ಯಾನಿಸುತ್ತಿರಬೇಕು. ಬ್ರಾಹ್ಮಣರನ್ನೂ ವೈಷ್ಣವರನ್ನೂ ಕೀರ್ತನಕಾರರನ್ನೂ ನಮಸ್ಕರಿಸಿ ಅವರಿಂದ ಅಪ್ಪಣೆಯನ್ನು ಹೊಂದಿ ಆಮೇಲೆ ತಾನು ಆಸನದಲ್ಲಿ ಕುಳಿತುಕೊಳ್ಳಬೇಕು.

೩೯–೪೧ ಜನಗಳು ಹಣ ಪದಾರ್ಥಗಳು ಮನೆ ಹೆಂಡತಿ ಮಕ್ಕಳು ಇವುಗಳ ಚಿಂತೆಯನ್ನು ದೂರವಾಗಿ ಬಿಟ್ಟು ಶುದ್ಧವಾದ ಬುದ್ಧಿಯುಳ್ಳವನಾಗಿ ಕಥೆಯಲ್ಲಿಯೇ ಮನಸ್ಸನ್ನಿಟ್ಟು ಕೇಳಿದರೆ ಅವನಿಗೆ ಉತ್ತಮವಾದ ಫಲವು ಬರುತ್ತದೆ. ಸೂರ್ಯೋದಯವನ್ನು ಮೊದಲು ಮಾಡಿಕೊಂಡು

ವಾಚನೀಯಾ ಕಥಾ ಸಮ್ಯಗ್ಧೀರಕಂಠಂ ಸುಧೀಮತಾ ।
ಕಥಾವಿರಾಮಃ ಕರ್ತವ್ಯೋ ಮಧ್ಯಾಹ್ನೇ ಘಟಿಕಾದ್ವಯಂ ॥ ೪೧ ॥

ತತ್ಕಥಾಮನು ಕಾರ್ಯಂ ವೈ ಕೀರ್ತನಂ ವೈಷ್ಣವೈಸ್ತದಾ ।
ಮಲಮೂತ್ರಜಯಾರ್ಥಂ ಹಿ ಲಘ್ವಾಹಾರಃ ಸುಖಾವಹಃ ॥ ೪೨ ॥

ಹವಿಷ್ಯಾನ್ನೇನ ಕರ್ತವ್ಯೋ ಹ್ಯೇಕವಾರಂ ಕಥಾರ್ಥಿನಾ ।
ಉಪೋಷ್ಯ ಸಪ್ತರಾತ್ರಂ ವೈ ಶಕ್ತಿಶ್ಚೇಚ್ಛೃಣುಯಾತ್ತದಾ ॥ ೪೩ ॥

ಘೃತಪಾನಂ ಪಯಃಪಾನಂ ಕೃತ್ವಾ ಚ ಶೃಣುಯಾತ್ಸುಖಂ ।
ಫಲಾಹಾರೇಣ ವಾ ಶ್ರಾವ್ಯಮೇಕಭುಕ್ತೇನ ವಾ ಪುನಃ ॥ ೪೪ ॥

ಸುಖಸಾಧ್ಯಂ ಭವೇದ್ಯತ್ತು ಕರ್ತವ್ಯಂ ಶ್ರವಣಾಯ ತತ್ ।
ಭೋಜನಂ ತು ವರಂ ಮನ್ಯೇ ಕಥಾಶ್ರವಣಕಾರಕಂ ॥ ೪೫ ॥

---

ಮೂರೂವರೆ ಘಂಟೆಗಳ ಕಾಲ ಕಥೆಯನ್ನು ಸುಶ್ರಾವ್ಯವಾಗಿಯೂ ಗಟ್ಟಿಯಾಗಿಯೂ ಓದಬೇಕು. ಅನಂತರ ಮಧ್ಯಾಹ್ನದಲ್ಲಿ ಎರಡುಗಂಟೆಗಳ ಕಾಲ ಕಥೆಯನ್ನು ನಿಲ್ಲಿಸಬೇಕು.

೪೨. ಆ ಕಥೆಯನ್ನು ಅನುಸರಿಸಿಕೊಂಡು ಕೀರ್ತನಕಾರರು ಕೀರ್ತನೆಗಳನ್ನು ಹಾಡಬೇಕು. ಮಲಮೂತ್ರಗಳು ಬಹಳ ಶೀಘ್ರವಾಗಿ ಬಾರದಿರುವುದಕ್ಕೋಸ್ಕರ ಲಘುವಾದ ಆಹಾರವನ್ನು ತೆಗೆದುಕೊಳ್ಳುವುದು ಮೇಲು.

೪೩. ಕಥೆಯನ್ನು ಕೇಳುವವರು ಹವಿಷ್ಯಾನ್ನವನ್ನು ಒಂದುಹೊತ್ತು ಊಟಮಾಡಿ ಕೊಂಡಿರಬೇಕು. ಶಕ್ತಿಯಿದ್ದರೆ ಆ ಏಳುದಿನಗಳೂ ಉಪವಾಸ ವಿದ್ದು ಕಥೆಯನ್ನು ಕೇಳಬೇಕು.

೪೪. ಅದಾಗದಿದ್ದರೆ ತುಪ್ಪ ಹಾಲುಗಳನ್ನು ಕುಡಿದುಕೊಂಡು ಕಥೆಯನ್ನು ಕೇಳಬೇಕು. ಅದೂ ಆಗದಿದ್ದರೆ ಹಣ್ಣುಗಳನ್ನು ತಿಂದುಕೊಂಡಿದ್ದು ಕೇಳಬೇಕು. ಅದಕ್ಕೂ ಸಾಧ್ಯವಿಲ್ಲದಿದ್ದರೆ ಒಂದುಹೊತ್ತು ಊಟಮಾಡಿಕೊಂಡು ಇದ್ದು ಕೇಳಬೇಕು.

೪೫. ಯಾವ ರೀತಿಯಾಗಿ ಆಹಾರವನ್ನು ತೆಗೆದುಕೊಂಡರೆ ಕಥೆಯನ್ನು ಕೇಳಲು ಅನುಕೂಲವಾಗುವುದೋ ಆ ರೀತಿಯಾಗಿ ಮಾಡಿಕೊಳ್ಳಬೇಕು. ಇವುಗಳಲ್ಲಿ ಊಟಮಾಡಿದರೇನೆ ಕಥೆಯನ್ನು ಕೇಳಲು ಅನುಕೂಲವಾಗುವುದೆಂದು ನನಗೆ ತೋರುತ್ತದೆ.

**ನೋಪವಾಸೋ ವರಃ ಪ್ರೋಕ್ತಃ ಕಥಾವಿಘ್ನಕರೋ ಯದಿ ।**
**ಸಪ್ತಾಹವ್ರತಿನಾಂ ಪುಂಸಾಂ ನಿಯಮರ್ಾ ಶೃಣು ನಾರದ ॥ ೪೬ ॥**

**ವಿಷ್ಣುದೀಕ್ಷಾವಿಹೀನಾನಾಂ ನಾಧಿಕಾರಃ ಕಥಾಶ್ರವೇ ।**
**ಬ್ರಹ್ಮಚರ್ಯಮಧಸ್ಸುಪ್ತಿಃ ಪತ್ರಾವಳ್ಯಾಂ ಚ ಭೋಜನಂ ॥ ೪೭ ॥**

**ಕಥಾಸಮಾಪ್ತೌ ಭುಕ್ತಿಂ ಚ ಕುರ್ಯಾನ್ನಿತ್ಯಂ ಕಥಾವ್ರತೀ ।**
**ದ್ವಿದಳಂ ಮಧು ತೈಲಂ ಚ ಗರಿಷ್ಠಾನ್ನಂ ತಥೈವ ಚ ॥ ೪೮ ॥**

**ಭಾವದುಷ್ಟಂ ಪರ್ಯುಷಿತಂ ಜಹ್ಯಾನ್ನಿತ್ಯಂ ಕಥಾವ್ರತೀ ।**
**ಕಾಮಕ್ರೋಧಂ ಮದಂ ಮಾನಂ ಮತ್ಸರಂ ಲೋಭಮೇವ ಚ ॥ ೪೯ ॥**

**ದಂಭಂ ಮೋಹಂ ತಥಾ ದ್ವೇಷಂ ದೂಷಯೇಚ್ಚ ಕಥಾವ್ರತೀ ।**
**ವೇದವೈಷ್ಣವವಿಪ್ರಾಣಾಂ ಗುರುಗೋವ್ರತಿನಾಂ ತಥಾ ॥ ೫೦ ॥**

**ಸ್ತ್ರೀರಾಜಮಹತಾಂ ನಿಂದಾಂ ವರ್ಜಯೇದ್ಯಃ ಕಥಾವ್ರತೀ ।**
**ರಜಸ್ವಲಾಂತ್ಯಜಮ್ಲೇಚ್ಛಪತಿತವ್ರಾತಕೈಸ್ತಥಾ ॥ ೫೧ ॥**

---

೪೬. ಕಥೆಗೆ ವಿಘ್ನವುಂಟಾಗುವ ಪಕ್ಷದಲ್ಲಿ ಉಪವಾಸವು ಒಳ್ಳೆಯದಲ್ಲ. ಈ ಸಪ್ತಾಹದಲ್ಲಿ ವ್ರತವನ್ನು ಧರಿಸಿರುವವರು ಮಾಡಬೇಕಾದ ನಿಯಮಗಳನ್ನು ಕೇಳು.

೪೭-೪೯. ವೈಷ್ಣವರಲ್ಲದವರು ಈ ಕಥೆಯನ್ನು ಕೇಳಲು ಅಧಿಕಾರ ವಿರುವುದಿಲ್ಲ. ಕಥೆಯಲ್ಲಿ ನಿಯಮವನ್ನು ಮಾಡಬೇಕಾದವರು ಬ್ರಹ್ಮಚರ್ಯವನ್ನು ಪಾಲಿಸಬೇಕು. ನೆಲದಮೇಲೆ ಮಲಗಬೇಕು. ಎಲೆಯಲ್ಲಿ ಊಟಮಾಡಬೇಕು. ಕಥೆಯು ಮುಗಿದಮೇಲೆ ಊಟಮಾಡಬೇಕು. ವ್ರತಮಾಡುವವನು ದ್ವಿದಳ ಧಾನ್ಯಗಳನ್ನೂ ಜೇನು ಎಣ್ಣೆ ಗುರುತರವಾದ ಆಹಾರ ಸ್ವಭಾವದಿಂದ ಕೆಡಕು ಮಾಡುವ ಆಹಾರ ಹಳಸಿದ ಆಹಾರಗಳನ್ನೂ ಬಿಡಬೇಕು. ಕಾಮ ಕ್ರೋಧ ಮದ ಮಾತ್ಸರ್ಯ ಹೆಮ್ಮೆ ಲೋಭ ದಂಭ ಮೋಹ ದ್ವೇಷ ಇವನ್ನು ಬಿಡಬೇಕು.

೫೦-೫೫. ವೇದ ವೈಷ್ಣವರು ಬ್ರಾಹ್ಮಣರು ಗುರುಗಳು ಗೋವುಗಳು ವ್ರತಮಾಡತಕ್ಕವರು ಹೆಂಗಸರು ರಾಜರು ಮಹಾತ್ಮರು ಇವರನ್ನೂ ವ್ರತದಲ್ಲಿರುವವರನ್ನೂ ನಿಂದಿಸಬಾರದು. ಮುಟ್ಟಾದವಳು ಹೊಲೆಯರು ಮ್ಲೇಚ್ಛರು ನಿಷಿದ್ಧವಾದ ಕೆಲಸವನ್ನು ಆಚರಿಸಿ ಪತಿತರೆನಿಸಿ ಕೊಂಡಿರುವವರು ಜಾತಿಗನುಗುಣವಾದ

ದ್ವಿಜದ್ವಿಡ್ವೇದಬಾಹ್ಯೈಶ್ಚ ನ ವದೇದ್ಯಃ ಕಥಾವ್ರತೀ ।
ಸತ್ಯಂ ಶೌಚಂ ದಯಾಂ ಮೌನಮಾರ್ಜವಂ ವಿನಯಂ ತಥಾ ॥ ೫೨ ॥

ಉದಾರಂ ಮಾನಸಂ ತದ್ವದೇವಂ ಕುರ್ಯಾತ್ಕಥಾವ್ರತೀ ।
ದರಿದ್ರಶ್ಚ ಕ್ಷಯೀ ರೋಗೀ ನಿರ್ಭಾಗ್ಯಃ ಪಾಪಕರ್ಮವಾನ್ ॥ ೫೩ ॥

ಅನಪತ್ಯೋ ಮೋಕ್ಷಕಾಮಃ ಶೃಣುಯಾತ್ಸ ಕಥಾಮಿಮಾಂ ।
ಅಪುಷ್ಪಾ ಕಾಕವಂಧ್ಯಾ ಚ ವಂಧ್ಯಾ ಯಾ ಚ ಮೃತಾರ್ಭಕಾ ॥ ೫೪ ॥

ಸ್ರವದ್ಗರ್ಭಾ ಚ ಯಾ ನಾರೀ ತಯಾ ಶ್ರಾವ್ಯಾ ಪ್ರಯತ್ನತಃ ।
ಏತೇಷು ವಿಧಿನಾ ದತ್ತಂ ತದಕ್ಷಯ್ಯತರಂ ಭವೇತ್ ॥ ೫೫ ॥

ಅತ್ಯುತ್ತಮಾ ದಿನಾಸ್ಸಪ್ತ ಕೋಟಿಯಜ್ಞಫಲಪ್ರದಾಃ ।
ಏವಂ ಕೃತ್ವಾ ವ್ರತವಿಧಿಮುದ್ಯಾಪನಮಥಾಚರೇತ್ ॥ ೫೬ ॥

---

ಉಪನಯನಾದಿ ಸಂಸ್ಕಾರಕರ್ಮಗಳನ್ನು ಹೊಂದಿರದ ವ್ರಾತ್ಯರೆಂಬುವರು ಬ್ರಹ್ಮದ್ವೇಷಿಗಳು ವೇದಬಾಹ್ಯರು ಇವರೊಡನೆ ವ್ರತಮಾಡತಕ್ಕವನು ಮಾತ ನಾಡಬಾರದು. ಸತ್ಯ ಶೌಚ ದಯೆ ಮೌನ ಋಜುಸ್ವಭಾವ ವಿನಯ ಉದಾರ ಬುದ್ಧಿ ಇವೆಲ್ಲವನ್ನೂ ವ್ರತಮಾಡುವವನು ಆಚರಿಸಬೇಕು ದರಿದ್ರ, ಕ್ಷಯರೋಗ ವುಳ್ಳವನು, ಭಾಗ್ಯಹೀನ, ಪಾಪಿ, ಮಕ್ಕಳಿಲ್ಲದವನು, ಮೋಕ್ಷವನ್ನು ಅಪೇಕ್ಷಿಸು ವವನು, ಇವರು ಈ ಕಥೆಯನ್ನು ಕೇಳಬೇಕು. ಮುಟ್ಟಾಗಬೇಕಾದವಳಿಗೆ ಮುಟ್ಟು ನಿಂತುಹೋಗಿರುವಿಕೆ ಇಂತಹವಳು ಒಂದುಬಾರಿ ಮಕ್ಕಳಾಗಿ ಮತ್ತೆ ಮಕ್ಕಳುನಿಂತು ಹೋಗಿರುವವಳು, ಮಕ್ಕಳೇ ಆಗದ ಬಂಜೆ, ಮಕ್ಕಳು ಸಾಯುತ್ತಿರುವವಳು, ಗರ್ಭಗಳು ಪ್ರಸವಿಸಿ ಅವು ಹೋಗುತ್ತಿರುವವಳು, ಇಂತಹವರು ಈ ಕಥೆಯನ್ನು ಆಗತ್ಯವಾಗಿ ಕೇಳಬೇಕು. ಇವರಿಗೆ ಕೊಟ್ಟುದೆಲ್ಲವೂ ಅಕ್ಷಯಕರವಾಗಿ ಆಗುತ್ತದೆ.

೫೬. ಈ ಏಳುದಿನಗಳೂ ಬಹು ಉತ್ತಮವಾದುದು. ಕೋಟಿಯ ಜ್ಞಗಳ ಫಲವನ್ನು ಕೊಡುತ್ತದೆ. ಈ ರೀತಿಯಲ್ಲಿ ವ್ರತದ ವಿಧಿಗಳನ್ನು ಪಾಲಿಸುತ್ತ ಅನಂತರ ಉದ್ಯಾಪನೆಯನ್ನು ಮಾಡಬೇಕು.

ಜನ್ಮಾಷ್ಟಮೀವ್ರತಮಿವ ಕರ್ತವ್ಯಂ ಫಲಕಾಂಕ್ಷಿಭಿಃ ।
ಅಕಿಂಚನೇಷು ಭಕ್ತೇಷು ಪ್ರಾಯೋ ನೋದ್ಯಾಪನಾಗ್ರಹಃ ॥ ೫೭ ॥

ಶ್ರವಣೇನೈವ ಪೂತಾಸ್ತೇ ನಿಷ್ಕಾಮಾ ವೈಷ್ಣವಾ ಯತಃ ।
ಏವಂ ನಗಾಹಯಜ್ಞೇಸ್ಮಿನ್ ಸಮಾಪ್ತೇ ಶ್ರೋತೃಭಿಸ್ತದಾ ॥ ೫೮ ॥

ಪುಸ್ತಕಸ್ಯ ಚ ವಕ್ತುಶ್ಚ ಪೂಜಾ ಕಾರ್ಯಾತಿಭಕ್ತಿತಃ ।
ಪ್ರಸಾದಸ್ತುಲಸೀಮಾಲಾಃ ಶ್ರೋತೃಭ್ಯಶ್ಚಾಥ ದೀಯತಾಂ ॥ ೫೯ ॥

ಮೃದಂಗತಾಲಲಸಿತಂ ಕೀರ್ತನಂ ಕೀರ್ತ್ಯತಾಂ ತತಃ ।
ಜಯಶಬ್ದೋ ನಮಶ್ಶಬ್ದಃ ಶಂಖಶಬ್ದಶ್ಚ ಗೀಯತಾಂ ॥ ೬೦ ॥

ವಿಪ್ರೇಭ್ಯೋ ಯಾಚಕೇಭ್ಯಶ್ಚ ವಿತ್ತಮನ್ನಂ ಚ ದೀಯತಾಂ ।
ವಿರಕ್ತಶ್ಚೇದ್ಭವೇಚ್ಛ್ರೋತಾ ಗೀತಾ ವಾಚ್ಯಾ ಪರೇಹನಿ ॥ ೬೧ ॥

---

೫೭-೫೮. ಈ ಉದ್ಯಾಪನೆಯನ್ನು ಜನ್ಮಾಷ್ಟಮಿಯ ವ್ರತದಂತೆ ಆಚರಿಸಿದರೆ ಫಲವುಬರುತ್ತದೆ. ಬಡವರಾದವರು ಸಪ್ತಾಹವನ್ನು ಮಾಡಿದರೆ ಉದ್ಯಾಪನೆಯನ್ನು ಮಾಡಬೇಕೆಂಬ ನಿಯಮವಿರುವುದಿಲ್ಲ. ಶ್ರವಣದಿಂದಲೇ ಅವರು ಪವಿತ್ರರಾಗಿರುತ್ತಾರೆ. ವೈಷ್ಣವರಾದವರು ಆಸೆಯನ್ನು ಪಡುವುದಿಲ್ಲ. ಈ ರೀತಿಯಾಗಿ ಸಪ್ತಾಹ ಯಜ್ಞವು ಮುಗಿದಮೇಲೆ ಕಥೆಯನ್ನು ಕೇಳಿದವರು ಪುಸ್ತಕಕ್ಕೂ ಕಥೆಹೇಳಿದವನಿಗೂ ಭಕ್ತಿಯಿಂದ ಪೂಜೆಮಾಡಬೇಕು.

೫೯–೬೦. ಪ್ರಸಾದವಾದ ತುಳಸೀ ಮಾಲೆಗಳನ್ನು ಕೇಳುವವರಿಗೆಲ್ಲಾ ಕೊಡಬೇಕು. ಮೃದಂಗ ತಾಳಗಳನ್ನು ಶಬ್ದಮಾಡುತ್ತ ಕೀರ್ತನೆಗಳನ್ನು ಹಾಡಬೇಕು. ಬ್ರಾಹ್ಮಣರಿಗೂ ಯಾಚಕರಿಗೂ ದುಡ್ಡನ್ನು ಕೊಟ್ಟು ಅನ್ನವನ್ನು ಹಾಕಬೇಕು. ಜಯ ಜಯ ಎಂತಲೂ ನಮಃ ನಮಃ ಎಂತಲೂ ಹೇಳುತ್ತ ಶಂಖವನ್ನು ಊದುತ್ತಿರಬೇಕು.

೬೧-೬೨ ಕಥೆಯನ್ನು ಕೇಳುವವನು ಸನ್ಯಾಸಿಯಾಗಿದ್ದರೆ ಕಥೆಮುಗಿದ ಮೂರನೆಯದಿನದಲ್ಲಿ ಗೀತೆಯನ್ನು ಓದಬೇಕು. ಆ ಶ್ರೋತೃವು ಗೃಹಸ್ಥನಾಗಿದ್ದರೆ

**ಗೃಹಸ್ಥಶ್ಚೇತ್ತದಾ ಹೋಮಃ ಕರ್ತವ್ಯಃ ಕರ್ಮಶಾನ್ತಯೇ ।**
**ಪ್ರತಿಶ್ಲೋಕಂ ಚ ಜುಹುಯಾದ್ವಿಧಿನಾ ದಶಮಸ್ಯ ಚ ॥ ೬೨ ॥**

**ಪಾಯಸಂ ಮಧುಸರ್ಪಿಶ್ಚ ತಿಲಾನ್ನಾದಿಕಸಂಯುತಂ ।**
**ಅಥವಾ ಹವನಂ ಕುರ್ಯಾದ್ಗಾಯತ್ರ್ಯಾ ಸುಸಮಾಹಿತಃ ॥ ೬೩ ॥**

**ತನ್ಮಯತ್ವಾತ್ಪುರಾಣಸ್ಯ ಪರಮಸ್ಯಾಸ್ಯ ತತ್ವತಃ ।**
**ಹೋಮಾಶಕ್ತೌ ಬುಧಃ ಹೋಮ್ಯಂ ದದ್ಯಾತ್ತತ್ಫಲಸಿದ್ಧಯೇ ॥ ೬೪ ॥**

**ನಾನಾಛಿದ್ರನಿರೋದಾರ್ಥಂ ನ್ಯೂನತಾಧಿಕತಾಖ್ಯಯೋಃ ।**
**ದೋಷಯೋಃ ಪ್ರಶಮಾರ್ಥಂ ಚ ಪಠೇನ್ನಾಮ ಸಹಸ್ರಕಂ ॥ ೬೫ ॥**

---

ಆ ಕರ್ಮಶಾನ್ತಿಗೋಸ್ಕರ ಹೋಮವನ್ನು ಮಾಡಬೇಕು. ಹತ್ತನೇ ಅಧ್ಯಾಯ ವಲ್ಲಿರುವ ಶ್ಲೋಕಗಳನ್ನು ಹೇಳುತ್ತ ಒಂದೊಂದು ಶ್ಲೋಕಕ್ಕೂ ಹೋಮವನ್ನು ಮಾಡುತ್ತಿರಬೇಕು.

೬೩. ಆ ಹೋಮಗಳನ್ನು ಪಾಯಸದಿಂದಲೂ ಜೇನಿನಿಂದಲೂ ತುಪ್ಪದಿಂದಲೂ ಎಳ್ಳಿನಿಂದಲೂ ಅನ್ನದಿಂದಲೂ ಒಬ್ಬೊಬ್ಬರು ಒಂದೊಂದನ್ನು ತೆಗೆದುಕೊಂಡು ಪ್ರತಿಶ್ಲೋಕವನ್ನೂ ಹೇಳುತ್ತಾ ಹೋಮಮಾಡುತ್ತಿರಬೇಕು. ಅದಾಗದಿದ್ದರೆ ಗಾಯತ್ರಿಯನ್ನು ಹೇಳಿಕೊಂಡು ಮೇಲೆ ಹೇಳಿದವುಗಳಿಂದ ಹೋಮಮಾಡಬೇಕು.

೬೪. ಪುರಾಣವೆಲ್ಲವೂ ಗಾಯತ್ರಿಯ ಮಯವಾಗಿರುವುದರಿಂದ ಆ ಉತ್ತಮವಾದ ಗಾಯತ್ರಿಯಿಂದ ಹೋಮಮಾಡಬಹುದು. ಹೋಮವನ್ನು ಮಾಡಲು ಶಕ್ತಿಯಿಲ್ಲದಿದ್ದರೆ ಹೋಮಮಾಡುವ ಪದಾರ್ಥಗಳನ್ನು ದಾನಮಾಡಿದರೆ ಆ ಹೋಮಮಾಡಿದ ಫಲವು ಬರುತ್ತದೆ.

೬೫. ಅನೇಕ ಬಗೆಯಾದ ವಿಘ್ನಗಳು ಹೋಗುವುದಕ್ಕೂ ಹೆಚ್ಚು ಕಡಿಮೆಗಳಾದುದರಿಂದ ಉಂಟಾದ ದೋಷಗಳು ಹೋಗುವುದಕ್ಕೂ ವಿಷ್ಣುಸಹಸ್ರ ನಾಮವನ್ನು ಪಾರಾಯಣ ಮಾಡಬೇಕು.

ತೇನ ಸ್ಯಾತ್ಸಫಲಂ ಸರ್ವಂ ನಾಸ್ತ್ಯಸ್ಮಾದಧಿಕಂ ಯತಃ ।
ದ್ವಾದಶಬ್ರಾಹ್ಮಣಾನ್ ಪಶ್ಚಾತ್ ಭೋಜಯೇನ್ಮಧುಪಾಯಸೈಃ ॥ ೬೬ ॥

ದದ್ಯಾತ್ಸುವರ್ಣಂ ಧೇನುಂ ಚ ವ್ರತಪೂರ್ಣತ್ವಹೇತವೇ ।
ಶಕ್ತೌ ಪಲತ್ರಯಮಿತಂ ಸ್ವರ್ಣಸಿಂಹಂ ವಿಧಾಯ ಚ ॥ ೬೭ ॥

ತತ್ರಾಸ್ಯ ಪುಸ್ತಕಂ ಸ್ಥಾಪ್ಯ ಲಿಖಿತಂ ಲಲಿತಾಕ್ಷರಂ ।
ಸಂಪೂಜ್ಯಾವಾಹನಾದ್ಯೈಸ್ತದುಪಚಾರೈಃ ಸದಕ್ಷಿಣಂ ॥ ೬೮ ॥

ವಸ್ತ್ರಭೂಷಣಗಂಧಾದ್ಯೈಃ ಪೂಜಿತಾಯ ಯತಾತ್ಮನೇ ।
ಆಚಾರ್ಯಾಯ ಸುಧೀರ್ದತ್ವಾ ಮುಕ್ತಸ್ಸ್ಯಾದ್ಭವಬಂಧನೈಃ ॥ ೬೯ ॥

ಏವಂ ಕೃತೇ ವಿಧಾನೇ ಚ ಸರ್ವಪಾಪನಿವಾರಣೇ ।
ಫಲದಂ ಸ್ಯಾತ್ಪುರಾಣಂ ತು ಶ್ರೀಮದ್ಭಾಗವತಂ ಶುಭಂ ।
ಧರ್ಮಕಾಮಾರ್ಥಮೋಕ್ಷಾಣಾಂ ಸಾಧನಂ ಸ್ಯಾನ್ನ ಸಂಶಯಃ ॥ ೭೦ ॥

---

೬೬. ಅದರಿಂದಲೇ ಎಲ್ಲವೂ ಸಫಲವಾಗುತ್ತವೆ. ಯಾತಕ್ಕೆಂದರೆ ಮೋಷಗಳನ್ನು ಪರಿಹಾರಮಾಡಲು ಈ ಸಹಸ್ರ ನಾಮಕ್ಕಿಂತಲೂ ಮತ್ತೆ ಹೆಚ್ಚಿನದು ಬೇರೊಂದಿಲ್ಲ. ಅನಂತರ ಹನ್ನೆರಡು ಜನ ಬ್ರಾಹ್ಮಣರನ್ನು ಒಳ್ಳೆಯ ಮೃಷ್ಟಾನ್ನದಿಂದ ಭೋಜನಮಾಡಿಸಬೇಕು.

೬೭. ಆಗ ಹೇಮದಾನವನ್ನೂ ಗೋದಾನವನ್ನೂ ಮಾಡಬೇಕು. ಶಕ್ತಿಯಿದ್ದರೆ ಮೂರು ಪಲಂಗಳಷ್ಟು ಚಿನ್ನದಲ್ಲಿ ಸಿಂಹವನ್ನೂ ಮಾಡಿಸಿ ದಾನ ಮಾಡಬೇಕು. ಆಗ ವ್ರತವು ಸಾಂಗವಾಗುತ್ತದೆ.

೬೮-೬೯. ಆ ಜಾಗದಲ್ಲಿ ಈ ಪುಸ್ತಕವನ್ನು ಇಟ್ಟು ಪೂಜಿಸಬೇಕು. ಆ ಪುಸ್ತಕವು ಬರೆದುದಾಗಿಯೂ ಒಳ್ಳೆಯ ಅಕ್ಷರವುಳ್ಳದ್ದಾಗಿಯೂ ಇರಬೇಕು. ಆ ವಾಹನಾದಿಗಳನ್ನು ಮಾಡಿ ಉಪಚಾರಗಳಿಂದಲೂ ದಕ್ಷಿಣೆಗಳಿಂದಲೂ ಪುಸ್ತಕ ವನ್ನು ಪೂಜಿಸಬೇಕು. ಯೋಗ್ಯನೂ ಯತಾತ್ಮನೂ ಆದ ಆ ಆಚಾರ್ಯನನ್ನು ವಸ್ತ್ರ ಒಡವೆಗಳಿಂದ ಪೂಜಿಸಿ ದಾನಮಾಡಬೇಕು.

೭೦. ಈ ರೀತಿಯಾಗಿ ಮಾಡಿದರೆ ಎಲ್ಲ ಪಾಪಗಳೂ ಹೋಗಿ ಆ ಭಾಗವತ ಪುರಾಣವು ಫಲವನ್ನು ಕೊಡುತ್ತದೆ. ಧರ್ಮ ಕಾಮ ಅರ್ಥ ಮೋಕ್ಷಗಳಿಗೆ ಸಾಧ ನವಾಗಿ ಆಗುತ್ತದೆ. ಸಂಶಯವಿಲ್ಲ.

॥ ಕುಮಾರಾ ಊಚುಃ ॥

ಇತಿ ತೇ ಕಥಿತಂ ಸರ್ವಂ ಕಿಂ ಭೂಯಶ್ಶ್ರೋತುಮಿಚ್ಛಸಿ ।
ಶ್ರೀಮದ್ಭಾಗವತೇನೈವ ಭುಕ್ತಿಮುಕ್ತೀ ಕರೇ ಸ್ಥಿತೇ ॥ ೭೧ ॥

ಶ್ರೀಮದ್ಭಾಗವತಾಭಿದಸ್ಸುರತರುಸ್ತಾರಾಂಕುರಃ ಸಜ್ಜನಿಃ ।
ಸ್ಕಂಧೈರ್ದ್ವಾದಶಭಿಸ್ತತಃ ಪ್ರವಿಲಸದ್ಭಕ್ತ್ಯಾಲವಾಲೋದಯಃ ॥
ದ್ವಾತ್ರಿಂಶತ್ತ್ರಿಶತಂ ಚ ಯಸ್ಯ ವಿಲಸಚ್ಛಾಖಾಃ ಸಹಸ್ರಾಣ್ಯಲಂ ।
ಪರ್ಣಾನ್ಯಷ್ಟ ದಶೇಷ್ಟದೋತಿಸುಲಭೋ ವರ್ವರ್ತಿ ಸರ್ವೋಪರಿ ॥ ೭೨ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ತೇ ಮಹಾತ್ಮನಃ ಪ್ರೋಚುರ್ಭಾಗವತೀಂ ಕಥಾಂ ।
ಸರ್ವಪಾಪಹರಾಂ ಪುಣ್ಯಾಂ ಭುಕ್ತಿಮುಕ್ತಿಪ್ರದಾಯಿನೀಂ ॥ ೭೩ ॥

---

೭೧. ಸನತ್ಕುಮಾರರು ಹೇಳಿದರು–ಇದೆಲ್ಲವನ್ನೂ ನಿನಗೆ ಹೇಳಿದ್ದೇವೆ. ಇನ್ನೂ ಹೆಚ್ಚಾಗಿ ಏನನ್ನು ಕೇಳಬೇಕೆಂದಿದ್ದಿಯೆ ? ಶ್ರೀಮದ್ಭಾಗವತದ ಶ್ರವಣ ದಿಂದಲೇ ಭುಕ್ತಿ ಮುಕ್ತಿಗಳೆರಡೂ ಕೈಯ್ಯಲ್ಲಿವೆ ಎಂದು ತಿಳಿ.

೭೨ ಶ್ರೀಮದ್ಭಾಗವತವೆಂಬುದೇ ಒಂದು ಕಲ್ಪ ವೃಕ್ಷವು ತಾರಾಮಂತ್ರವೇ ಮೊಳಕೆಯಾಗಿ ಉಳ್ಳದ್ದು. ಒಳ್ಳೆಯ ಜಾಗದಲ್ಲಿ ಹುಟ್ಟಿದೆ. ಹನ್ನೆರಡು ಸ್ಕಂಧಗಳೇ ಹನ್ನೆರಡು ಮಧ್ಯಮರಗಳು. ಇವುಗಳಿಂದ ವಿಸ್ತಾರಗೊಂಡಿದೆ. ಪ್ರಕಾಶಮಾನವಾದ ಭಕ್ತಿಯೇ ಪಾತಿಯಾಗಿ ಉಳ್ಳದ್ದು. ಮುನ್ನೂರಮೂವತ್ತೆರಡು ಸಣ್ಣ ಕೊಂಬೆಗಳಿವೆ. ಎಂಟು ಸಾವಿರದ ಹದಿನೆಂಟು ಎಲೆಗಳಿವೆ. ಇಷ್ಟವನ್ನು ಕೊಡತಕ್ಕದ್ದು. ಮತ್ತು ಬಹು ಸುಲಭವಾದುದು. ಇಂತಹ ಮರವು ಎಲ್ಲಕ್ಕಿಂತಲೂ ಹೆಚ್ಚಾಗಿ ಪ್ರಕಾಶಿ ಸುತ್ತಿರುವುದು.

೭೩. ಸೂತನು ಹೇಳಿದನು–ಆ ಮಹಿಮರು ಹೀಗೆಂದು ಹೇಳಿ ಪಾಪಹಾರ ಕವೂ ಪುಣ್ಯಪ್ರದವೂ ಭುಕ್ತಿ ಮುಕ್ತಿಗಳನ್ನು ಕೊಡುವುದಾಗಿಯೂ ಇರುವ ಭಾಗ ವತದ ಕಥೆಯನ್ನು ಹೇಳಿದರು.

ಶೃಣ್ವತಾಂ ಸರ್ವಭೂತಾನಾಂ ಸಪ್ತಾಹಂ ನಿಯತಾತ್ಮನಾಂ ।
ಯಥಾವಿಧಿ ತತೋ ದೇವಂ ತುಷ್ಟುವುಃ ಪುರುಷೋತ್ತಮಂ ॥ ೭೪ ॥

ತದಂತೇ ಜ್ಞಾನವೈರಾಗ್ಯಭಕ್ತೀನಾಂ ಪುಷ್ಟತಾ ಪರಾ ।
ತಾರುಣ್ಯಂ ಪರಮಂ ಚಾಭೂತ್ ಸರ್ವಭೂತಮನೋಹರಂ ॥ ೭೫ ॥

ನಾರದಶ್ಚ ಕೃತಾರ್ಥೋಽಭೂತ್ಸಿದ್ಧೇ ಸ್ವೀಯೇ ಮನೋರಥೇ ।
ಪುಲಕೀಕೃತಸರ್ವಾಂಗಃ ಪರಮಾನಂದಸಂಭೃತಃ ॥ ೭೬ ॥

ಏವಂ ಕಥಾಂ ಸಮಾಕರ್ಣ್ಯ ನಾರದೋ ಭಗವತ್ಪ್ರಿಯಃ ।
ಪ್ರೇಮಗದ್ಗದಯಾ ವಾಚಾ ತಾನುವಾಚ ಕೃತಾಂಜಲಿಃ ॥ ೭೭ ॥

॥ ನಾರದ ಉವಾಚ ॥

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಭವದ್ಭಿಃ ಕರುಣಾಪರೈಃ ।
ಅದ್ಯ ಭಾಗವತಾಲ್ಲಬ್ಧಃ ಸಪ್ತಾಹೇ ನಿಕಟೇ ಹರಿಃ ॥ ೭೮ ॥

---

೭೪. ಏಳು ದಿನಗಳವರೆಗೂ ನಿಯಮದಿಂದ ಕೇಳುತ್ತಿರುವ ಎಲ್ಲಾ ಪ್ರಾಣಿಗಳಿಗೂ ಹೇಳಿ ಆ ಮೇಲೆ ಕ್ರಮವಾಗಿ ಆ ಪುರುಷೋತ್ತಮನಾದ ಸ್ವಾಮಿಯನ್ನು ಸ್ತುತಿಸಿದರು.

೭೫ ಇದನ್ನು ಹೇಳಿದ ಮೇಲೆ ಜ್ಞಾನ ವೈರಾಗ್ಯ ಭಕ್ತಿಗಳಿಗೆ ಮೈ ಬಂದು ಹೆಚ್ಚಿದವು. ಉತ್ತಮವಾದ ತಾರುಣ್ಯವೂ ಬಂದಿತು. ಅದು ಸರ್ವ ಪ್ರಾಣಿಗಳಿಗೂ ಮನೋಹರವಾಗಿದ್ದಿತು.

೭೬. ನಾರದನಿಗೆ ತನ್ನ ಇಷ್ಟಾರ್ಥವು ನೆರವೇರಲು ಕೃತಾರ್ಥನಾದನು. ಅದರಿಂದ ಮೈಯ್ಯೆಲ್ಲವೂ ರೋಮಾಂಚವೆದ್ದು ಬಹುವಾದ ಆನಂದದಿಂದ ಕೂಡಿಕೊಂಡನು.

೭೭. ಭಗವತ್ಪ್ರಿಯನಾದ ನಾರದನು ಈ ರೀತಿಯಾದ ಕಥೆಯನ್ನು ಕೇಳಿ ಪ್ರೀತಿಯಿಂದ ತೊದಳು ನುಡಿಯನ್ನು ಹೊಂದಿ ಕೈ ಮುಗಿದುಕೊಂಡು ಅವರನ್ನು ಕುರಿತು ಇಂತೆಂದನು.

೭೮. ನಾರದನು ಹೇಳಿದನು-ಎಲೈ ಸನತ್ಕುಮಾರರಿರಾ ! ಧನ್ಯನಾದೆನು. ಕರುಣಾಶಾಲಿಗಳಾದ ನೀವು ಅನುಗ್ರಹಿಸಿದಿರಿ. ಈ ಭಾಗವತದ ಸಪ್ತಾಹದಿಂದ ಹರಿಯು ಸಮೀಪದಲ್ಲಿಯೇ ಸಿಕ್ಕಿದನು.

ಶ್ರವಣಂ ಸರ್ವಧರ್ಮೇಭ್ಯೋ ವರಂ ಮನ್ಯೇ ತಪೋಧನಾಃ ।
ವೈಕುಂಠಸ್ಥೋ ಯತಃ ಕೃಷ್ಣಃ ಶ್ರವಣಾದ್ಯಸ್ಯ ಲಭ್ಯತೇ　　॥ ೭೯ ॥

॥ ಸೂತ ಉವಾಚ ॥

ಏವಂ ಬ್ರುವತಿ ವೈ ತತ್ರ ನಾರದೇ ವೈಷ್ಣವೋತ್ತಮೇ ।
ಪರಿಭ್ರಮನ್ ಸಮಾಯಾತಃ ಶುಕೋ ಯೋಗೇಶ್ವರಸ್ತದಾ　　॥ ೮೦ ॥

ತತ್ರಾಯಯೌ ಷೋಡಶವಾರ್ಷಿಕಸ್ಸದಾ
ವ್ಯಾಸಾತ್ಮಜೋ ಜ್ಞಾನಮಹಾಬ್ಧಿಚಂದ್ರಮಾಃ ।
ಕಥಾವಸಾನೇ ನಿಜಲಾಭಪೂರ್ಣಃ
ಪ್ರೇಮ್ಣಾ ಪಠನ್ ಭಾಗವತಂ ಶನೈಃ ಶನೈಃ　　॥ ೮೧ ॥

ದೃಷ್ಟ್ವಾ ಸದಸ್ಯಾಃ ಪರಮೋರುತೇಜಸಸಂ
ಸದ್ಯಸ್ಸಮುತ್ಥಾಯ ದದುರ್ಮಹಾಸಂ ।
ಪ್ರೀತ್ಯಾ ಸುರರ್ಷಿಸ್ತಮಪೂಜಯತ್ಸುಖಂ
ಸ್ಥಿತೋಽವದತ್ಸಂಶೃಣುತಾಮಲಾಂ ಗಿರಂ　　॥ ೮೨ ॥

---

೭೯. ಯಾವ ಭಾಗವತವನ್ನು ಶ್ರವಣ ಮಾಡಿದುದರಿಂದ ವೈಕುಂಠದಲ್ಲಿ ಇರುವ ಶ್ರೀ ಕೃಷ್ಣನು ನಮಗೆ ಸಿಕ್ಕಿದನೋ ಅದರಿಂದ ಭಾಗವತದ ಶ್ರವಣವು ಎಲ್ಲಾ ಧರ್ಮಗಳಿಗಿಂತಲೂ ಉತ್ತಮವಾದುದೆಂದು ಹೇಳಿದ್ದೇನೆ.

೮೦, ಸೂತನು ಹೇಳಿದನು-ವೈಷ್ಣವೋತ್ತಮನಾದ ನಾರದನು ಅಲ್ಲಿ ಹೀಗೆಂದು ಹೇಳುತ್ತಿರಲು ಆಗ ಯೋಗೀಶ್ವರನಾದ ಶುಕನು ಎಲ್ಲ ಕಡೆಯಲ್ಲಿಯೂ ಸುತ್ತಿಕೊಂಡಿರುತ್ತ ಅಲ್ಲಿಗೆ ಬಂದನು.

೮೧. ಜ್ಞಾನವೆಂಬ ಮಹಾ ಸಮುದ್ರಕ್ಕೆ ಚಂದ್ರನಂತಿರುವ ವ್ಯಾಸನ ಮಗನಾದ ಯಾವಾಗಲೂ ಹದಿನಾರು ವರುಷ ವಯಸ್ಸುಳ್ಳವನಂತಿರುವ ಆ ಶುಕ ಮಹರ್ಷಿಯು ತನ್ನ ಇಷ್ಟಾರ್ಥವನ್ನು ಪೂರೈಸಿಕೊಂಡು ಪ್ರೇಮದಿಂದ ಮೆಲ್ಲಮೆಲ್ಲಗೆ ಭಾಗವತವನ್ನು ಹೇಳುತ್ತಾ ಕಥೆಯು ಮುಗಿಯುವ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದನು.

೮೨. ಆಗ ಅಲ್ಲಿದ್ದ ಸಭಿಕರೆಲ್ಲರೂ ಉತ್ತಮವಾದ ಕಾಂತಿಯುಳ್ಳ ಆ ಶುಕನನ್ನು ನೋಡಿ ಒಡನೆಯೇ ಎದ್ದು ಆಸನವನ್ನು ಕೊಟ್ಟರು. ನಾರದನು ಆ ಶುಕನನ್ನು ಪ್ರೀತಿಯಿಂದ ಪೂಜಿಸಿದನು. ಅನಂತರ ಆ ಶುಕನು ಸುಖವಾಗಿ ಕುಳಿತುಕೊಂಡು ಎಲ್ಲರನ್ನೂ ಕುರಿತು ಇಂತೆಂದನು.

॥ ಶ್ರೀ ಶುಕ ಉವಾಚ ॥

ನಿಗಮಕಲ್ಪತರೋರ್ಗಲಿತಂ ಫಲಂ
ಶುಕಮುಖಾದಮೃತದ್ರವಸಂಯುತಂ ।
ಪಿಬತ ಭಾಗವತಂ ರಸಮಾಲಯಂ
ಮುಹುರಹೋ ರಸಿಕಾ ಭುವಿ ಭಾವುಕಾಃ ॥ ೮೩ ॥

ಧರ್ಮಃ ಪ್ರೋಜ್ಝಿತಕೈತವೋತ್ರ ಪರಮೋ ನಿರ್ಮತ್ಸರಾಣಾಂ ಸತಾಂ ।
ವೇದ್ಯಂ ವಾಸ್ತವಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಂ ॥
ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾ ಪರೈರೀಶ್ವರಃ ।
ಸದ್ಯೋ ಹೃದ್ಯವರುಧ್ಯತೇತ್ರ ಕೃತಿಭಿಃ ಶುಶ್ರೂಷುಭಿಸ್ತತ್ ಕ್ಷಣಾತ್ ॥ ೮೪ ॥

ಶ್ರೀಮದ್ಭಾಗವತಂ ಪುರಾಣತಿಲಕಂ ಯದ್ವೈಷ್ಣವಾನಾಂ ಪ್ರಿಯಂ ।
ಯಸ್ಮಿನ್ಪಾರಮಹಂಸ್ಯಮೇಕಮಮಲಂ ಜ್ಞಾನಂ ಪರಂ ಗೀಯತೇ ॥
ಯತ್ರ ಜ್ಞಾನವಿರಾಗಭಕ್ತಿಸಹಿತಂ ನೈಷ್ಕರ್ಮ್ಯಮಾವಿಷ್ಕೃತಂ ।
ತಚ್ಛೃಣ್ವನ್ ಪ್ರಪಠನ್ ವಿಚಾರಣಪರೋ ಭಕ್ತ್ಯಾ ವಿಮುಚ್ಯೇನ್ನರಃ ॥ ೮೫ ॥

---

೮೩. ಶ್ರೀ ಶುಕನು ಹೇಳಿದನು–ಎಲೈ ಕೇಳತಕ್ಕ ರಸಿಕರಿರಾ ! ಈ ಭಾಗವತ ರಸವನ್ನು ಬಾರಿ ಬಾರಿಗೂ ಕುಡಿಯಿರಿ ! ತೃಪ್ತಿಯಾಗುವಂತೆ ಕುಡಿಯಿರಿ. ಅದು ವೇದವೆಂಬ ಕಲ್ಪವೃಕ್ಷದಿಂದ ಬಂದ ಹಣ್ಣು. ಶುಕನ ಮುಖದಿಂದ ಬಂದ ಅಮೃತದಿಂದ ತುಂಬಿದೆ. ಉತ್ತಮವಾದುದು.

೮೪. ಈ ಭಾಗವತದಲ್ಲಿರುವ ಧರ್ಮವು ಸ್ವಲ್ಪವೂ ಕಪಟದಿಂದ ಕೂಡಿಕೊಂಡಿಲ್ಲ. ಪಕ್ಷಪಾತವಿಲ್ಲದ ಸತ್ಪುರುಷರಿಗೆ ಇದು ಉತ್ತಮವಾದುದು. ಇದರಲ್ಲಿ ಸರಿಯಾದ ಪರಮಾತ್ಮ ರೂಪವಾದ ವಾಸ್ತವವಾದ ವಸ್ತುವನ್ನು ತಿಳಿಯಬಹುದು. ಇದರಲ್ಲಿರುವ ಪರಮಾತ್ಮ ರೂಪವಾದ ವಸ್ತುವು ಮಂಗಳಪ್ರದವು. ತಾಪತ್ರಯಗಳನ್ನು ನಾಶಮಾಡುತ್ತದೆ. ಕೇಳತಕ್ಕವರು ಒಡನೆಯೇ ತಮ್ಮ ಕೃತಿಗಳಿಂದ ಆ ವಸ್ತುವನ್ನು ಮನಸ್ಸಿನಲ್ಲಿರುವಂತೆ ಇಟ್ಟುಕೊಳ್ಳಲು ಸಾಧ್ಯವಾಗುತ್ತದೆ.

೮೫. ಈ ಭಾಗವತ ಪುರಾಣವು ಪುರಾಣಗಳಿಗೆಲ್ಲಾ ಶ್ರೇಷ್ಠವಾದುದು. ಇದರಲ್ಲಿ ಪರಮಹಂಸ ರೂಪವಾದ ಶುದ್ಧವಾದ ಉತ್ತಮ ಬ್ರಹ್ಮಜ್ಞಾನವು ಹೇಳಲ್ಪಡುತ್ತದೆ ಇದರಲ್ಲಿ ಜ್ಞಾನ ವೈರಾಗ್ಯ ಭಕ್ತಿಗಳಿಂದ ಕೂಡಿದ ನೈಷ್ಕರ್ಮ್ಯವು ಹೇಳಲ್ಪಟ್ಟಿದೆ. ಭಕ್ತಿಯಿಂದ ಇದನ್ನು ಓದುತ್ತ ವಿಚಾರ ಮಾಡುವ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ.

ಸ್ವರ್ಗೇ ಸತ್ಯೇಥ ಕೈಲಾಸೇ ವೈಕುಂಠೇ ನಾಸ್ತ್ಯಯಂ ರಸಃ ।
ಅತಃ ಪಿಬಂತು ಸದ್ಭಾಗ್ಯಾ ಮಾ ಮಾ ಮುಂಚಂತು ಕರ್ಹಿಚಿತ್ ॥ ೮೬ ॥

॥ ಸೂತ ಉವಾಚ ॥

ಇತಿ ಬ್ರುವಾಣೇ ಸತಿ ಬಾದರಾಯಣೇ
ಮಧ್ಯೇ ಸಭಾಯಾಂ ಹರಿರಾವಿರಾಸೀತ್ ।
ಪ್ರಹ್ಲಾದಬಲ್ಯುದ್ಧವಫಾಲ್ಗುಣಾದಿಭಿಃ
ವೃತಃ ಸುರರ್ಷಿಸ್ತಮಪೂಜಯಚ್ಚ ತಾನ್ ॥ ೮೭ ॥

ದೃಷ್ಟ್ವಾ ಪ್ರಸನ್ನಂ ಮಹದಾಸನೇ ಹರಿಂ
ತೇ ಚಕ್ರಿರೇ ಕೀರ್ತನಮಗ್ರತಸ್ತದಾ ।
ಭವೋ ಭವಾನ್ಯಾ ಕಮಲಾಸನಸ್ತು
ತತ್ರಾಗಮತ್ ಕೀರ್ತನದರ್ಶನಾಯ ॥ ೮೮ ॥

---

೮೬. ಸ್ವರ್ಗ ಸತ್ಯಲೋಕ ಕೈಲಾಸ ವೈಕುಂಠ ಇವುಗಳಲ್ಲಿ ಈ ರಸವಿಲ್ಲವೇ ಇಲ್ಲ. ಆದುದರಿಂದ ಭಾಗ್ಯವಂತರು ಇದನ್ನು ಕುಡಿಯಿರಿ ಸ್ವಲ್ಪವೂ ಬಿಡಬೇಡಿ.

೮೭. ಸೂತನು ಹೇಳಿದನು-ಸಭೆಯ ಮಧ್ಯದಲ್ಲಿ ಶುಕನು ಹೀಗೆ ಹೇಳುತ್ತಿರಲು ಪ್ರಹ್ಲಾದ ಬಲಿ ಉದ್ಧವ ಅರ್ಜುನರೊಡನೆ ಹರಿಯು ಬಂದನು. ಆಗ ನಾರದನು ಆ ಸ್ವಾಮಿಯನ್ನೂ ಅವನ ಜೊತೆಯಲ್ಲಿ ಬಂದವರನ್ನೂ ಪೂಜಿಸಿದನು.

೮೮. ಆ ಕೃಷ್ಣನು ಪ್ರಸನ್ನನಾಗಿ ದೊಡ್ಡ ಪೀಠದಲ್ಲಿ ಕುಳಿತಿರುವುದನ್ನು ನೋಡಿ ಆ ಸಭೆಯ ಕೀರ್ತನಕಾರರು ಆ ಸ್ವಾಮಿಯ ಮುಂದೆ ಕೀರ್ತನ ಮಾಡಿದರು. ಇದನ್ನು ನೋಡಲು ಈಶ್ವರನು ಪಾರ್ವತಿಯೊಡನೆ ಬಂದನು. ಬ್ರಹ್ಮನೂ ಕೂಡ ತಾನೂ ಬಂದನು.

ಪ್ರಹ್ಲಾದಸ್ತಾಲಧಾರೀ ತರಲಗತಿತಯಾ ಚೋದ್ಧವಃ ಕಾಂಸ್ಯಧಾರೀ ।
ವೀಣಾಧಾರೀ ಸುರರ್ಷಿಃ ಸ್ವರಕುಶಲತಯಾ ರಾಗಕರ್ತಾರ್ಜುನೋಽಭೂತ್ ॥
ಇಂದ್ರೋಽವಾದೀನ್ಮೃದಂಗಂ ಜಯ ಜಯ ಸುಕರಾಃ ಕೀರ್ತನೇ ತೇ ಕುಮಾರಾಃ ।
ಯತ್ರಾಗ್ರೇ ಭಾವವಕ್ತಾ ರಸವಿರಚನಯಾ ವ್ಯಾಸಪುತ್ರೋ ಬಭೂವ ॥ ೮೯ ॥

ನನರ್ತ ಮಧ್ಯೇ ತ್ರಿಕಮೇವ ತತ್ರ
ಭಕ್ತ್ಯಾದಿಕಾನಾಂ ನಟವತ್ಸುತೇಜಸಾಂ ।
ಅಲೌಕಿಕಂ ಕೀರ್ತನಮೇತದೀಕ್ಷ್ಯ
ಹರಿಃ ಪ್ರಸನ್ನೋಽಪಿ ವಚೋಽಬ್ರವೀತ್ತತ್ ॥ ೯೦ ॥

ಮತ್ತೋ ವರಂ ಭಾಗವತಾ ವೃಣುಧ್ವಂ
ಪ್ರೀತಃ ಕಥಾ ಕೀರ್ತನತೋಽಸ್ಮಿ ಸಾಂಪ್ರತಂ ।
ಶ್ರುತ್ವೇತಿ ತದ್ವಾಕ್ಯಮತಿಪ್ರಸನ್ನಾಃ
ಪ್ರೇಮಾರ್ದ್ರಚಿತ್ತಾ ಹರಿಮೂಚಿರೇ ತೇ ॥ ೯೧ ॥

---

೮೯. ಪ್ರಹ್ಲಾದನು ತಾಳವನ್ನು ಹಿಡಿದುಕೊಂಡು ಕುಣಿಯಲು ಮೊದಲಿಟ್ಟನು. ಉದ್ಧವನೂ ಕೂಡ ಅಂತೆಯೇ ತಾಳಗಳನ್ನು ಹಿಡಿದು ಕುಣಿಯಲು ಮೊದಲಿಟ್ಟನು. ನಾರದನು ವೀಣೆಯನ್ನು ಹಿಡಿದು ಬಾರಿಸತೊಡಗಿದನು. ಸ್ವರಗಳನ್ನು ಹಾಕುವುದರಲ್ಲಿ ಕುಶಲನಾದ ಅರ್ಜುನನು ರಾಗಗಳನ್ನು ಹಾಡಲು ಮೊದಲು ಮಾಡಿದನು. ಇಂದ್ರನು ಮೃದಂಗವನ್ನು ಬಾರಿಸಲು ಮೊದಲು ಮಾಡಿದನು. ಆ ಸನತ್ಕುಮಾರರು ಜಯ ಜಯ ಎಂದು ಹೇಳುತ್ತ ಕೀರ್ತನೆಗಳನ್ನು ಹೇಳಲು ಮೊದಲಿಟ್ಟರು. ವ್ಯಾಸಪುತ್ರನಾದ ಶುಕಮಹರ್ಷಿಯು ರಸಿಕಭಾಗದಿಂದ ಭಾವಗಳನ್ನು ಹೇಳಲು ಮೊದಲು ಮಾಡಿದನು. ಇಂತು ಇವರೆಲ್ಲರೂ ಸೇರಿ ಆ ಹರಿಯ ಮುಂದೆ ಕೀರ್ತನೆ ಮಾಡಲು ಮೊದಲು ಮಾಡಿದರು.

೯೦. ಭಕ್ತಿಯೂ ವೈರಾಗ್ಯವೂ ಜ್ಞಾನವೂ ಇರುವ ನಟರಂತೆ ನೃತ್ಯ ಗೀತ ವಾದ್ಯಗಳಿಂದ ಕೂಡಿ ಕುಣಿಯುತ್ತ ಭಜನೆ ಮಾಡಿದರು. ಹರಿಯು ಈ ಉತ್ತಮವಾದ ಕೀರ್ತನೆಯನ್ನು ನೋಡಿ ಪ್ರಸನ್ನನಾಗಿ ಈ ಮಾತುಗಳನ್ನು ಹೇಳಿದನು.

೯೧. ಎಲೈ ಭಾಗವತರಿರಾ ! ನಿಮ್ಮ ಕಥಾಕೀರ್ತನದಿಂದ ಪ್ರಸನ್ನನಾಗಿದ್ದೇನೆ. ಪ್ರೀತಿಯುಂಟಾಗಿದೆ. ನನ್ನಿಂದ ವರವನ್ನು ಕೇಳಿರಿ. ಕೊಡುತ್ತೇನೆ. ಎಂದನು. ಈ ಮಾತನ್ನು ಕೇಳಿ ಅವರೆಲ್ಲರೂ ಬಹು ಸಂತೋಷವುಳ್ಳವರಾಗಿ ಪ್ರೀತಿಯಿಂದ ಹರಿಯನ್ನು ಕುರಿತು ಇಂತೆಂದರು.

ನಗಾಹಗಾಥಾಸು ಚ ಸರ್ವಭಕ್ತ್ಯೈಃ
ಏಭಿಸ್ತ್ವಯಾ ಭಾವ್ಯಮಿತಿ ಪ್ರಯತ್ನಾತ್ ।
ಮನೋರಥೋಯಂ ಪರಿಪೂರಣೀಯಃ
ತಥೇತಿ ಚೋಕ್ತ್ವಾಂತರಧೀಯತಾಚ್ಯುತಃ ॥ ೯೨ ॥

ತತೋನಮತ್ತಚ್ಚರಣೇಷು ನಾರದಃ
ತಥಾ ಶುಕಾದೀನಪಿ ತಾಪಸಾಂಶ್ಚ ।
ಅಥಃಪ್ರಹೃಷ್ಟಾಃ ಪರಿನಷ್ಟಮೋಹಾಃ
ಸರ್ವೇ ಯಯುಃ ಪೀತಕಥಾಮೃತಾಸ್ತೇ ॥ ೯೩ ॥

ಭಕ್ತಿಸ್ಸುತಾಭ್ಯಾಂ ಸಹ ರಕ್ಷಿತಾ ಸಾ
ಶಾಸ್ತ್ರೇಸ್ವಕೀಯೇಪಿ ತದಾ ಶುಕೇನ ।
ಅತೋ ಹರಿರ್ಭಾಗವತಸ್ಯ ಸೇವನಾತ್
ಚಿತ್ತಂ ಸಮಾಯಾತಿ ಹಿ ವೈಷ್ಣವಾನಾಂ ॥ ೯೪ ॥

---

೯೨. ಈ ಸಪ್ತಾಹದ ಕಥೆಯಲ್ಲಿ ನೀನೂ ಈ ಭಕ್ತರೂ ಬರಬೇಕೆಂದು ಇವರೆಲ್ಲರೂ ಪ್ರಯತ್ನಿಸಿ ಕಥೆಯ ಶ್ರವಣವನ್ನು ಮಾಡಿದರು. ಇವರ ಮನೋರಥದಂತೆ ಸಪ್ತಾಹವಾಗುವ ಕಡೆಗಳಲ್ಲೆಲ್ಲಾ ನೀನೂ ನಿನ್ನ ಭಕ್ತರೂ ಇರಬೇಕು ಎನ್ನಲು ಆ ಹರಿಯು ಹಾಗೆಯೇ ಆಗಲೆಂದು ಹೇಳಿ ಹೊರಟು ಹೋದನು.

೯೩. ಆಗ ನಾರದನು ಆ ಸ್ವಾಮಿಗೂ ಶುಕನೇ ಮುಂತಾದ ತಾಪಸರಿಗೂ ನಮಸ್ಕರಿಸಿದನು. ಅನಂತರ ಸಭಿಕರೆಲ್ಲರೂ ಸಂತೋಷಗೊಂಡು ಅಜ್ಞಾನವನ್ನು ತೊರೆದು ಕಥೆಯನ್ನು ಕೇಳಿದಮೇಲೆ ಹೊರಟು ಹೋದರು.

೯೪. ಹೀಗೆ ಶುಕನು ತನ್ನ ಭಾಗವತ ಶಾಸ್ತ್ರದಲ್ಲಿ ವೈರಾಗ್ಯ ಜ್ಞಾನಗಳೊಡನೆ ಭಕ್ತಿಯನ್ನು ಪೋಷಿಸಿರುವನು ಆದುದರಿಂದ ಭಾಗವತವನ್ನು ಕೇಳುವುದರಿಂದ ವೈಷ್ಣವರಿಗೆ ಹರಿಯಲ್ಲಿ ಭಕ್ತಿಯು ಬರುತ್ತದೆ.

ದಾರಿದ್ರ್ಯ ದುಃಖಜ್ವರದಾಹಿತಾನಾಂ
ಮಾಯಾಪಿಶಾಚೀಪರಿಮರ್ದಿತಾನಾಂ ।
ಸಂಸಾರಸಿಂಧೌ ಪರಿಪಾತಿತಾನಾಂ
ಕ್ಷೇಮಾಯ ವೈ ಭಾಗವತಂ ಪ್ರಗರ್ಜತಿ ॥ ೯೫ ॥

॥ ಶೌನಕ ಉವಾಚ ॥

ಶುಕೇನೋಕ್ತಂ ಕದಾ ರಾಜ್ಞೇ ಗೋಕರ್ಣೇನ ಕದಾ ಪುನಃ ।
ಸುರರ್ಷಯೇ ಕದಾ ಬ್ರಾಹ್ಮೈಃ ಛಿಂಧಿ ಮೇ ಸಂಶಯಂ ತ್ವಿಮಂ ॥ ೯೬ ॥

॥ ಸೂತ ಉವಾಚ ॥

ಆಕೃಷ್ಣನಿರ್ಗಮಾತ್ತ್ರಿಂಶದ್ವರ್ಷಾವಧಿ ಗತೇ ಕಲೌ ।
ನವಮೀತೋ ನಭಸ್ಯೇ ಚ ಕಥಾರಂಭಂ ಶುಕೋಽಕರೋತ್ ॥ ೯೭ ॥

ಪರೀಕ್ಷಿಚ್ಛ್ರವಣಾಂತೇ ಚ ಕಲೌ ವರ್ಷಶತದ್ವಯೇ ।
ಶುದ್ಧೇ ಶುಚೌ ನವಮ್ಯಾಂ ಚ ಧೇನುಜೋಽಕಥಯತ್ಕಥಾಂ ॥ ೯೮ ॥

---

೯೫. ದಾರಿದ್ರ್ಯದ ದುಃಖದಿಂದ ನೊಂದವರಿಗೂ ಮಾಯಾ ಪಿಶಾಚಿಯಿಂದ ಕೂಡಿದವರಿಗೂ ಸಂಸಾರವೆಂಬ ಸಾಗರದಲ್ಲಿ ಕಷ್ಟಪಡುತ್ತಿರುವವರಿಗೂ ಕ್ಷೇಮವನ್ನುಂಟುಮಾಡಲು ಈ ಭಾಗವತವು ಗರ್ಜಿಸುತ್ತಿರುವುದು.

೯೬. ಶೌನಕನು ಹೇಳಿದನು-ಎಲೈ ಸೂತನೆ! ಶುಕನು ಈ ಕಥೆಯನ್ನು ಮಾಡಿದುದು ಯಾವಾಗ? ಅವನು ಪರೀಕ್ಷಿದ್ರಾಜನಿಗೆ ಹೇಳಿದುದು ಯಾವಾಗ? ಗೋಕರ್ಣನು ಸಪ್ತಾಹ ಮಾಡಿದುದು ಯಾವಾಗ? ಸನತ್ಕುಮಾರರು ನಾರದನಿಗೆ ಹೇಳಿದುದು ಯಾವಾಗ? ಈ ನನ್ನ ಸಂಶಯವನ್ನು ನಿವರ್ತನೆಮಾಡು.

೯೭. ಸೂತನು ಹೇಳಿದನು-ಶ್ರೀ ಕೃಷ್ಣನು ಅವತರಿಸಿ ಸ್ವರ್ಗಸ್ಥನಾದಮೇಲೆ ಕಲಿಯುಗದಲ್ಲಿ ಮೂವತ್ತು ವರ್ಷಗಳಾದಮೇಲೆ ಭಾದ್ರಪದ ಮಾಸದ ನವಮಿಯ ದಿನ ಶುಕನು ಈ ಕಥೆಯನ್ನು ಬರೆದನು. ಮತ್ತು ಪರೀಕ್ಷಿದ್ರಾಜನಿಗೆ ಹೇಳಿದನು.

೯೮. ಈ ಕಥೆಯನ್ನು ಪರೀಕ್ಷಿದ್ರಾಜನು ಕೇಳಿದ ಇನ್ನೂರು ವರ್ಷಗಳ ಮೇಲೆ ವೈಶಾಖದ ಶುದ್ಧ ನವಮಿಯಲ್ಲಿ ಗೋಕರ್ಣನು ಈ ಕಥೆಯನ್ನು ಹೇಳಿದನು.

ತಸ್ಮಾದಪಿ ಕಲೌ ಯಾತೇ ತ್ರಿಶತೇ ಸಷಡಬ್ದಕೇ ।
ಊಚುರೂರ್ಜೇ ಸಿತೇ ಪಕ್ಷೇ ನವಮ್ಯಾಂ ಬ್ರಹ್ಮಣಃ ಸುತಾಃ　　॥ ೯೯ ॥

ಇತ್ಯೇತತ್ತೇ ಸಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾನಘ ।
ಕಲೌ ಭಾಗವತೀ ವಾರ್ತಾ ಭವರೋಗವಿನಾಶಿನೀ　　॥ ೧೦೦ ॥

ಕೃಷ್ಣಪ್ರಿಯಂ ಸಕಲಕಲ್ಮಲನಾಶನಂ ಚ
ಮುಕ್ತ್ಯೇಕಹೇತುಮಿಹ ಭಕ್ತಿವಿಲಾಸಕಾರೀ ।
ಸಂತಃ ಕಥಾನಕಮಿದಂ ಪಿಬತಾದರೇಣ
ಲೋಕೇ ಹಿತಾರ್ಥಪರಿಶೀಲನಸೇವಯಾ ಕಿಂ　　॥ ೧೦೧ ॥

ಸ್ವಪುರುಷಮಭಿವೀಕ್ಷ್ಯ ಪಾಶಹಸ್ತಂ
ವದತಿ ಯಮಃ ಕಿಲ ತಸ್ಯ ಕರ್ಣಮೂಲೇ ।
ಪರಿಹರ ಭಗವತ್ಕಥಾಸು ಮತ್ತಾನ್
ಪ್ರಭುರಹಮನ್ಯನೃಣಾಂ ನ ವೈಷ್ಣವಾನಾಂ　　॥ ೧೦೨ ॥

---

೯೯. ಆ ಗೋಕರ್ಣನು ಹೇಳಿದ ಮುನ್ನೂರು ಆರು ವರ್ಷಗಳ ನಂತರ ಆಶ್ವಯುಜ ಮಾಸದ ಶುದ್ಧ ನವಮಿಯಲ್ಲಿ ಸನತ್ಕುಮಾರರು ಈ ಕಥೆಯನ್ನು ಹೇಳಿದರು.

೧೦೦. ನೀನು ಕೇಳಿದುದನ್ನು ಈ ರೀತಿಯಾಗಿ ಹೇಳಿದ್ದೇನೆ. ಕಲಿಯುಗದಲ್ಲಿ ಭಾಗವತದ ಮಾತೆತ್ತಿದರೇನೇ ಸಂಸಾರವೆಂಬ ಕಷ್ಟವು ಪರಿಹಾರವಾಗುತ್ತದೆ.

೧೦೧. ಲೋಕದಲ್ಲಿ ಈ ಭಾಗವತ ಕಥೆಯು ಕೃಷ್ಣನಿಗೆ ಪ್ರಿಯವಾದುದು. ಪಾಪಗಳನ್ನೆಲ್ಲಾ ನಾಶಮಾಡುತ್ತದೆ. ಮುಕ್ತಿಗೆ ಮುಖ್ಯಕಾರಣವು. ಭಕ್ತಿಯು ಅದರಲ್ಲಿ ಕುಣಿಯುತ್ತಿದೆ. ಎಲೈ ಸತ್ಪುರುಷರಿರಾ! ಇಂತಹ ಕಥೆಯೆಂಬ ಅಮೃತವನ್ನು ಪಾನಮಾಡಿರಿ. ಈ ಲೋಕದಲ್ಲಿ ದೇಹಕ್ಕೆ ಹಿತವಾದುವನ್ನೇ ನೋಡಿಕೊಂಡಿರುವುದರಿಂದ ಪ್ರಯೋಜನವೇನು?

೧೦೨. ಯಮನು ಪಾಶವನ್ನು ಕೈಯ್ಯಲ್ಲಿ ಹಿಡಿದಿರುವ ತನ್ನ ಆಳುಗಳನ್ನು ಕುರಿತು ಕಿವಿಯಲ್ಲಿ ಇಂತೆಂದು ಹೇಳುತ್ತಾನೆ. ಭಗವಂತನ ಕಥೆಯಲ್ಲಿ ಆಸಕ್ತರಾದವರನ್ನು ಬಿಟ್ಟುಬಿಡಿರಿ. ಅಂತಹ ವೈಷ್ಣವರಮೇಲೆ ನಾನು ಅಧಿಕಾರ ಮಾಡುವುದಿಲ್ಲ. ಮಿಕ್ಕವರಮೇಲೆಯೇ ನನ್ನ ಅಧಿಕಾರವಿರುವುದು.

ಅಸಾರೇ ಸಂಸಾರೇ ವಿಷಯವಿಷಸಂಗಾಕುಲಧಿಯಃ ।
ಕ್ಷಣಾರ್ಧಂ ಕ್ಷೇಮಾರ್ಥಂ ಪಿಬತ ಶುಕಗಾಥಾತುಲಸುಧಾಂ ।
ಕಿಮರ್ಥಂ ವ್ಯರ್ಥಂ ಭೋ ವ್ರಜತ ಕುಪಥೇ ಕುತ್ಸಿತಪಥೇ ।
ಪರೀಕ್ಷಿತ್ಸಾಕ್ಷೀ ಯಚ್ಛ್ರವಣಗತಮುಕ್ತ್ಯುಕ್ತಿಕಥನೇ ॥ ೧೦೩ ॥

ರಸಪ್ರವಾಹಸಂಸ್ಥೇನ ಶ್ರೀಶುಕೇನೇರಿತಾ ಕಥಾ ।
ಕಂಠೇ ಸಂಬಧ್ಯತೇ ಯೇನ ಸ ವೈಕುಂಠಪ್ರಭುರ್ಭವೇತ್ ॥ ೧೦೪ ॥

ಇತಿ ಚ ಪರಮಗುಹ್ಯಂ ಸರ್ವಸಿದ್ಧಾಂತಸಿದ್ಧಂ ।
ಸಪದಿ ನಿಗದಿತಂ ತೇ ಶಾಸ್ತ್ರಪುಂಜಂ ವಿಲೋಕ್ಯ ।
ಜಗತಿ ಶುಕಕಥಾತೋ ನಿರ್ಮಲಂ ನಾಸ್ತಿ ಕಿಂಚಿತ್ ।
ಪಿಬ ಪರಸುಖಹೇತೋರ್ದ್ವಾದಶಸ್ಕಂಧಸಾರಂ ॥ ೧೦೫ ॥

---

೧೦೩. ಸಾರವಿಲ್ಲದ ಈ ಸಂಸಾರದಲ್ಲಿ ವಿಷಯಗಳೆಂಬ ವಿಷದಲ್ಲಿ ನೆಟ್ಟಿರುವ ಮನಸ್ಸುಳ್ಳವರಿರಾ! ನಿಮ್ಮ ಕ್ಷೇಮಕ್ಕೋಸ್ಕರ ಒಂದು ಕ್ಷಣಕಾಲವಾದರೂ ಈ ಭಾಗವತ ಕಥಾಮೃತವನ್ನು ಪಾನಮಾಡಿರಿ. ಕೆಟ್ಟ ದಾರಿಯಲ್ಲಿ ವ್ಯರ್ಥವಾಗಿ ಏತಕ್ಕೆ ಹೋಗುತ್ತೀರಿ? ಕೆಟ್ಟದಾರಿಯಲ್ಲಿ ಹೋಗಿ ಕೆಟ್ಟು ಈ ಭಾಗವತವನ್ನು ಕೇಳುವುದರಿಂದ ಮುಕ್ತಿಯನ್ನು ಹೊಂದಿದ ಪರೀಕ್ಷಿದ್ರಾಜನೇ ಇದು ಮುಕ್ತಿಯನ್ನು ಕೊಡುತ್ತದೆ ಎಂಬುದಕ್ಕೆ ಸಾಕ್ಷಿಯಾಗಿದ್ದಾನೆ.

೧೦೪. ಭಕ್ತಿರಸದ ಪ್ರವಾಹದಲ್ಲಿ ಈಜಾಡುತ್ತ ಶ್ರೀ ಶುಕಮಹರ್ಷಿಯಿಂದ ಹೇಳಲ್ಪಟ್ಟ ಈ ಭಾಗವತದ ಕಥೆಯು ಯಾವನ ಕತ್ತಿನಲ್ಲಿ ಸಂಬಂಧಿಸಿಕೊಂಡಿರುವುದೋ ಅವನು ವೈಕುಂಠಕ್ಕೆ ಒಡೆಯನಾಗುವನು.

೧೦೫ ಈ ಭಾಗವತದ ಕಥೆಯು ಪರಮಗುಹ್ಯವಾದುದು. ಎಲ್ಲಾ ಸಿದ್ಧಾಂತಗಳಿಗೂ ಅವಿರುದ್ಧವಾದುದು. ಶಾಸ್ತ್ರಗಳನ್ನೆಲ್ಲಾ ಪರಿಶೋಧಿಸಿ ನಿನಗೆ ಹೇಳಿದ್ದೇನೆ. ಶುಕ ಕಥೆಯಾದ ಈ ಭಾಗವತಕ್ಕಿಂತಲೂ, ನಿರ್ಮಲವಾದುದು ಲೋಕದಲ್ಲಿ ಮತ್ತೊಂದಿಲ್ಲ. ಆದುದರಿಂದ ಈ ಹನ್ನೆರಡು ಸ್ಕಂಧ ರೂಪವಾದ ಭಾಗವತಸಾರವನ್ನು ಆಸ್ವಾದಿಸಿರಿ.

ಏನಾಂ ಯೋ ನಿಯತತಯಾ ಶೃಣೋತಿ ಭಕ್ತ್ಯಾ
ಯಶ್ಚೈನಂ ಕಥಯತಿ ಶುದ್ಧವೈಷ್ಣವಾಗ್ರೇ ।
ತೌ ಸಮ್ಯಗ್ವಿಧಿಕರಣಾತ್ಫಲಂ ಲಭೇತೇ
ಯಾಥಾರ್ಥ್ಯಾನ್ನ ಹಿ ಭುವನೇ ಕಿಮಪ್ಯಸಾಧ್ಯಂ　　॥ ೧೦೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀಮದ್ಭಾಗವತ ಮಾಹಾತ್ಮ್ಯೇ ಶ್ರವಣ ವಿಧಿ ಕಥನಂ ನಾಮ ಚತುರ್ನವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

॥ ಇತಿ ಶ್ರೀ ಭಾಗವತ ಮಾಹಾತ್ಮ್ಯಂ ಸಮಾಪ್ತಂ ॥

---

೧೦೬. ಈ ಕಥೆಯನ್ನು ಯಾವನು ಭಕ್ತಿಯಿಂದ ಕೇಳುತ್ತಾನೆಯೋ ಯಾವನು ಶುದ್ಧರಾದ ವೈಷ್ಣವರ ಎದುರಿಗೆ ಹೇಳುತ್ತಾನೆಯೋ ಅವರಿಬ್ಬರೂ ತಮ್ಮ ಕೆಲಸಗಳನ್ನು ಸರಿಯಾಗಿ ನೆರವೇರಿಸುವುದರಿಂದ ಸರಿಯಾದ ಫಲವನ್ನು ಹೊಂದುತ್ತಾರೆ. ಸರಿಯಾದ ವಿಷಯದಲ್ಲಿ ನಡೆದರೆ ಲೋಕದಲ್ಲಿ ಯಾವುದು ತಾನೆ ಅಸಾಧ್ಯವು !

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಶ್ರೀಮದ್ಭಾಗವತ ಮಹಿಮೆಯಲ್ಲಿ ಶ್ರವಣ ವಿಧಿ ಕಥನ ಎಂಬ ನೂರ ತೊಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಇಂತು ಶ್ರೀ ಭಾಗವತ ಮಹಿಮೆಯು ಮುಗಿದುದು ॥



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚನವತ್ಯಧಿಕಶತತಮೋಽಧ್ಯಾಯಃ ॥



॥ ಋಷಯ ಊಚುಃ ॥

**ಕಾಲಿಂದ್ಯಾಶ್ಚೈವ ಮಾಹಾತ್ಮ್ಯಂ ವದ ಸೂತ ಸವಿಸ್ತರಂ ।**
**ಯಸ್ಮೈ ಪ್ರಕಾಶಿತಂ ಯೇನ ತಥಾಖ್ಯಾನಸಮನ್ವಿತಂ ॥ ೧ ॥**

॥ ಸೂತ ಉವಾಚ ॥

**ಏಕದಾ ಪಾಂಡುತನಯಃ ಶುಶ್ರೂಷುಃ ಸೌಭರೇಶ್ಶುಭಂ ।**
**ಜ್ಞಾನಂ ತತ್ಸ್ಥಾನಮಭ್ಯೇತ್ಯ ನತ್ವಾ ತಮಿತಿ ಪೃಷ್ಟವಾನ್ ॥ ೨ ॥**

---

### ನೂರ ತೊಂಭತ್ತೈದನೆಯ ಅಧ್ಯಾಯವು



೧. ಋಷಿಗಳು ಹೇಳಿದರು– ಎಲೈ ಸೂತನೇ ! ಕಾಳಿಂದೀ ನದಿಯ ಮಹಿಮೆಯನ್ನು ವಿಸ್ತಾರವಾಗಿ ಹೇಳು. ಆ ಕಾಳಿಂದೀ ನದಿಯ ಮಹಿಮೆಯನ್ನು ಅದರ ಇತಿಹಾಸಗಳೊಡನೆ ಯಾರು ಯಾರಿಗೆ ಹೇಳಿದರು ?

೨. ಸೂತನು ಹೇಳಿದನು- ಒಂದುಸಾರಿ ಪಾಂಡುವಿನ ಮಗನಾದ ಧರ್ಮರಾಯನು ಸೌಭರಿಯ ಬಳಿಗೆ ಹೋಗಿ ಅವನಿಂದ ಒಳ್ಳೆಯ ಜ್ಞಾನವನ್ನು ಪಡೆಯಬೇಕೆಂದು ಅವನಿಗೆ ನಮಸ್ಕರಿಸಿ ಇಂತೆಂದು ಹೇಳಿದನು.

|| ಯುಧಿಷ್ಠಿರ ಉವಾಚ ||

ಬ್ರಹ್ಮನ್ ಮಾರ್ತಂಡತನಯಾತೀರತೀರ್ಥೇಷು ಯಚ್ಛುಭಂ |
ತೀರ್ಥಂ ತದ್ವದ ವೈಕುಂಠಜನ್ಮಭೂಮಿಪುರಾತ್ಪರಂ || ೩ ||

|| ಸೌಭರಿರುವಾಚ ||

ಏಕದಾ ತು ಮುನಿಶ್ರೇಷ್ಠೌ ದಿವಿ ನಾರದಪರ್ವತೌ |
ಗಚ್ಛಂತೌ ಖಾಂಡವವನಂ ಪಶ್ಯತಃ ಸುಮನೋಹರಂ || ೪ ||

ತತ್ರಾವತೀರ್ಣೌ ನಭಸಃ ಉಪವಿಷ್ಟೌ ತಟೇ ಶುಭೇ |
ಕಾಳಿಂದ್ಯಾಃ ಕ್ಷಣವಿಶ್ರಾನ್ತೌ ಸ್ನಾತುಂ ವಿವಿಶತುರ್ಜಲೇ || ೫ ||

ಶಿಬಿರೌಶೀನರೋ ರಾಜಾ ಮೃಗಯಾಂ ತೌ ಚರನ್ ವನೇ |
ದೃಷ್ಟ್ವಾ ತನ್ನಿರ್ಗಮಾಪೇಕ್ಷೀ ನಿಷಸಾದ ಸರಿತ್ತಟೇ || ೬ ||

---

೩. ಯುಧಿಷ್ಠಿರನು ಹೇಳಿದನು- ಎಲೈ ಬ್ರಾಹ್ಮಣನೇ ! ಸೂರ್ಯಪುತ್ರಿಯಾದ ಯಮುನೆಯ ತೀರದಲ್ಲಿರುವ ತೀರ್ಥಗಳಲ್ಲಿ ಯಾವುದು ಉತ್ತಮವಾದ ತೀರ್ಥವು? ವೈಕುಂಠವಾಸಿಯಾದ ವಿಷ್ಣುವಿನ ಜನ್ಮಭೂಮಿಯಾದ ದ್ವಾರಕೆಗಿಂತಲೂ ಮುಂದಕ್ಕೆ ಯಾವು ಯಾವುವಿವೆ ? ಹೇಳು.

೪. ಸೌಭರಿಯು ಹೇಳಿದನು- ಒಂದು ಸಾರಿ ಮುನಿಶ್ರೇಷ್ಠರಾದ ನಾರದ ಪರ್ವತರು ಖಾಂಡವ ವನಕ್ಕೆ ಹೋಗುತ್ತ ದಾರಿಯಲ್ಲಿ ಮನೋಹರವಾದ ಪ್ರದೇಶಗಳನ್ನು ನೋಡುತ್ತ ಹೋದರು.

೫. ಹೋಗುತ್ತಿರುವಾಗ ಕಾಳಿಂದೀನದಿಯು ಸಿಕ್ಕಲು ಅಂತರಿಕ್ಷದಿಂದ ಕೆಳಗಿಳಿದು ಅದರ ದಡದಲ್ಲಿ ಕುಳಿತುಕೊಂಡು ಕ್ಷಣಕಾಲ ವಿಶ್ರಾಂತಿಯನ್ನು ಹೊಂದಿ ಸ್ನಾನಮಾಡಲು ನೀರಿಗಿಳಿದರು.

೬. ಆಗ ಉಶೀನರ ದೇಶದ ಅರಸನಾದ ಶಿಬಿಯು ಆ ವನದಲ್ಲಿ ಬೇಟೆ ಯಾಡುತ್ತಿದ್ದನು. ಬಂದ ಆ ಋಷಿಗಳನ್ನು ನೋಡಿ ಅವರು ಸ್ನಾನಮಾಡಿ ಮೇಲೆ ಬರುತ್ತಿರುವುದನ್ನು ಎದುರು ನೋಡುತ್ತ ಆ ನದಿಯ ದಡದಲ್ಲೇ ಕುಳಿತನು.

ತೌ ಮುನೀ ವಿಧಿವತ್ ಸ್ನಾತ್ವಾ ಪರಿಧಾಯಾಂಬರಾಣಿ ಚ ।
ವಂದಿತೌ ಶಿರಸಾ ರಾಜ್ಞಾ ತೇನೋಪಾವಿಶತಾಂ ತಟೇ ॥ ೭ ॥

ತತ್ರಾಲೋಕ್ಯ ಸುವರ್ಣಸ್ಯ ಶಿಬಿರ್ಯೂಪಾನ್ ಸಹಸ್ರಶಃ ।
ನಾರದಂ ಗರ್ವರಹಿತಃ ಪರ್ವತಂ ಚ ಜಗಾದ ಸಃ ॥ ೮ ॥

॥ ಶಿಬಿರುವಾಚ ॥

ಕಥ್ಯತಾಂ ಮುನಿಶಾರ್ದೂಲೌ ಕಸ್ಯೇಮಾ ಯಾಗಯಷ್ಟಯಃ ।
ಕೇನಾತ್ರ ವಿಹಿತಾ ಯಜ್ಞಾಃ ಸುರೇಣಾಥ ನರೇಣ ವಾ ॥ ೯ ॥

ಮುಕ್ತ್ವಾ ಕಾಶ್ಯಾದಿತೀರ್ಥಾನಿ ಯಜ್ಞೈರೀಜೇತ್ರ ಕಃ ಪುಮಾನ್ ।
ಕೋ ವಿಶೇಷೋತ್ರ ತೀರ್ಥೇಭ್ಯಃ ತೇಭ್ಯೋ ವಿಜ್ಞಾನಸನ್ನಿಧಿಃ ॥ ೧೦ ॥

---

೭. ಆ ಋಷಿಗಳು ವಿಧಿಯಪ್ರಕಾರವಾಗಿ ಸ್ನಾನಮಾಡಿ ಬೇರೆಯ ಬಟ್ಟೆಗಳನ್ನು ಉಟ್ಟುಕೊಂಡು ಬರಲು ಆಗ ಆ ರಾಜನು ಅವರಿಗೆ ನಮಸ್ಕರಿಸಿದನು. ಆಗ ಆ ರಾಜನೊಡನೆ ಅವರೂ ಅಲ್ಲಿ ಕುಳಿತರು.

೮. ಆ ಜಾಗದಲ್ಲಿ ಚಿನ್ನದ ಯೂಪಸ್ತಂಭಗಳು ಸಾವಿರ ಗಟ್ಟಲೆಯಾಗಿ ಇದ್ದುದನ್ನು ಆ ಶಿಬಿಯು ನೋಡಿ ಗರ್ವವನ್ನು ಬಿಟ್ಟು ನಾರದ ಪರ್ವತವನ್ನು ಕುರಿತು ಇಂತೆಂದನು.

೯. ಶಿಬಿಯು ಹೇಳಿದನು- ಎಲೈ ಋಷಿಶ್ರೇಷ್ಠರುಗಳಿರಾ ! ಈ ಯಾಗದ ಕಂಬಗಳು ಯಾವುವು ? ಎಂಬುದನ್ನು ಹೇಳಿರಿ. ಇಲ್ಲಿ ಯಾರು ಯಾಗವನ್ನು ಮಾಡಿದರು ? ದೇವತೆಗಳು ಮಾಡಿದರೇ ? ಇಲ್ಲವೇ ಮನುಷ್ಯರು ಮಾಡಿದರೇ?

೧೦. ಕಾಶಿಯೇ ಮುಂತಾದ ತೀರ್ಥ ಪ್ರದೇಶಗಳನ್ನು ಬಿಟ್ಟು ಇಲ್ಲಿ ಯಾವನು ಯಾಗವನ್ನು ಮಾಡಿದನು? ಮಿಕ್ಕ ತೀರ್ಥಗಳಿಗಿಂತಲೂ ಇಲ್ಲಿ ವಿಶೇಷವೇನಿರುವುದು ?

॥ ನಾರದ ಉವಾಚ ॥

ಪುರಾ ಹಿರಣ್ಯಕಶಿಪುರ್ಜಿತ್ವಾ ಶಕ್ರಾದಿದೇವತಾಃ ।
ತ್ರೈಲೋಕ್ಯರಾಜ್ಯಮಾಸಾದ್ಯ ಸೋಽಖರ್ವಂ ಗರ್ವಮಾದಧೇ । ॥ ೧೧ ॥

ಪ್ರಹ್ಲಾದಸ್ತಸ್ಯ ತನಯೋ ನಾರಾಯಣಪರಾಯಣಃ ।
ತಸ್ಮೈ ಸೋಽದ್ರುಹ್ಯತಾಭೀಕ್ಷ್ಣಂ ಪಾಪಾತ್ಮಾ ನಷ್ಟಮಂಗಳಃ ॥ ೧೨ ॥

ತದ್ದ್ರೋಹಾದ್ವಿಷ್ಣುನಾ ಸದ್ಯೋ ನೃಸಿಂಹತನುಧಾರಿಣಾ ।
ಹತ್ವಾ ದೈತ್ಯಪತಿಂ ಸ್ವರ್ಗರಾಜ್ಯಂ ಸ್ವಃಪತಯೇಽರ್ಪಿತಂ ॥ ೧೩ ॥

ಸ್ವಪದಂ ಪ್ರಾಪ್ಯ ದೇವೇಶೋ ಬೃಹಸ್ಪತಿಮಥಾವದತ್ ।
ಮೂರ್ಧ್ನಾಽಭಿವಂದ್ಯ ತತ್ಪಾದೌ ನಾರಾಯಣಗುಣಾನ್ ಸ್ಮರನ್ ॥ ೧೪ ॥

---

೧೧. ನಾರದನು ಹೇಳಿದನು- ಪೂರ್ವದಲ್ಲಿ ಹಿರಣ್ಯಕಶಿಪುವು ಇಂದ್ರಾದಿಗಳನ್ನು ಜಯಿಸಿ ಮೂರು ಲೋಕದ ಸಾಮ್ರಾಜ್ಯವನ್ನೂ ಹೊಂದಿ ಅತ್ಯಧಿಕವಾದ ಗರ್ವವನ್ನು ಹೊಂದಿದನು.

೧೨. ಅವನಿಗೆ ಪ್ರಹ್ಲಾದನೆಂಬೊಬ್ಬ ಮಗನಿದ್ದನು. ಅವನು ನಾರಾಯಣನಲ್ಲಿ ಭಕ್ತಿಯಿಟ್ಟಿದ್ದನು. ಇದನ್ನು ನೋಡಿ ಪಾಪಿಯೂ ಅಶುಭಾಚಾರಿಯೂ ಆದ ಹಿರಣ್ಯಕಶಿಪುವು ಅವನಿಗೆ ತೊಂದರೆಗಳನ್ನು ಮಾಡಿದನು.

೧೩. ಆ ಪ್ರಹ್ಲಾದನಿಗೆ ತೊಂದರೆ ಕೊಡುತ್ತಿದ್ದುದನ್ನು ನೋಡಿ ವಿಷ್ಣುವು ನರಸಿಂಹಾವತಾರವನ್ನು ಹೊಂದಿ ಆ ಹಿರಣ್ಯಕಶಿಪುವನ್ನು ಕೊಂದು ಸ್ವರ್ಗದ ರಾಜ್ಯವನ್ನು ಮತ್ತೆ ಇಂದ್ರನಿಗೆ ಕೊಟ್ಟನು.

೧೪ ಹರಿಯು ಆ ರಾಜ್ಯವನ್ನು ಆ ಇಂದ್ರನಿಗೆ ಕೊಡಲು ಅದನ್ನು ತೆಗೆದು ಕೊಂಡನು. ಅನಂತರ ಇಂದ್ರನು ಬೃಹಸ್ಪತಿಯ ಬಳಿಗೆ ಹೋಗಿ ಅವನ ಪಾದಗಳಿಗೆ ನಮಸ್ಕರಿಸಿ ನಾರಾಯಣನ ಅನಂತಗುಣಗಳನ್ನು ಸ್ಮರಿಸಿಕೊಳ್ಳುತ್ತಾ ಆ ಬೃಹಸ್ಪತಿಗೆ ಇಂತೆಂದನು.

|| ಇಂದ್ರ ಉವಾಚ ||

ಗುರೋ ನೃಸಿಂಹರೂಪೇಣ ಹರಿಣಾ ಲೋಕಧಾರಿಣಾ ।
ದತ್ತಂ ಮೇ ದೇವತಾರಾಜ್ಯಂ ಯಷ್ಟುಮಿಚ್ಛಾಮಿ ತಂ ಮಖೈಃ ॥ ೧೫ ॥

ಸ್ಥಾನಂ ಪವಿತ್ರಂ ಕಥಯ ಬ್ರಾಹ್ಮಣಾಶ್ಚೈವ ಮೇ ಗುರೋ ।
ನ ವಿಧೇಯೋ ವಿಲಂಬೋತ್ರ ತ್ವಯಾ ನೋ ಹಿತಕಾರಿಣಾ ॥ ೧೬ ॥

|| ಬೃಹಸ್ಪತಿರುವಾಚ ||

ಅಸ್ತಿ ತೇ ಖಾಂಡವವನಂ ರಮ್ಯಂ ಪರಮಪಾವನಂ ।
ಕೇತಕಾಶೋಕವಕುಳಮಧುಮತ್ತಮಧುವ್ರತಂ ॥ ೧೭ ॥

ತತ್ರಾಸ್ತಿ ಯಮುನಾ ಪುಣ್ಯಾ ಧನ್ಯಾ ತ್ರೈಲೋಕ್ಯಪಾವನೀ ।
ದದಾತಿ ಸ್ಮರಣೇ ಸ್ವರ್ಗಂ ಮರಣೇ ಬ್ರಹ್ಮಣಃ ಪದಂ ॥ ೧೮ ॥

---

೧೫-೧೬. ಇಂದ್ರನು ಹೇಳಿದನು- ಎಲೈ ಗುರುವೇ ! ನರಸಿಂಹಾವತಾರವನ್ನು ಮಾಡಿದ ಲೋಕಧಾರಿಯಾದ ಹರಿಯು ನನಗೆ ಸ್ವರ್ಗದ ರಾಜ್ಯವನ್ನು ಕೊಟ್ಟನು. ಆದ್ದರಿಂದ ಅವನನ್ನು ಯಾಗಮಾಡಿ ತೃಪ್ತಿಪಡಿಸಬೇಕು. ಒಂದು ಪವಿತ್ರವಾದ ಜಾಗವನ್ನು ಹೇಳು. ಬ್ರಾಹ್ಮಣರಾರಿರುವರೆಂಬುದನ್ನು ಹೇಳು. ನೀನು ಸಾವಕಾಶ ಮಾಡಬೇಡ. ನಮಗೆ ಹಿತಕಾರಿಯಾಗಿದ್ದೀಯೆ.

೧೭. ಬೃಹಸ್ಪತಿಯು ಹೇಳಿದನು- ನೀನು ಯಾಗ ಮಾಡಲು ಖಾಂಡವ ವನವಿದೆ. ಅದು ರಮ್ಯವಾದುದು. ಬಹು ಪವಿತ್ರವಾದುದು. ತಾಳೆ, ಅಶೋಕ, ಪಗಡೆ ಇವುಗಳಲ್ಲಿರುವ ಪುಷ್ಪರಸದಿಂದ ಮದಿಸಿರುವ ದುಂಬಿಗಳು ಉಳ್ಳದ್ದು.

೧೮. ಅಲ್ಲಿ ಯಮುನಾನದಿಯು ಹರಿಯುವುದು. ಅದು ಪುಣ್ಯಾಕರವಾದುದು. ಧನ್ಯವಾದುದು. ಮೂರು ಲೋಕದಲ್ಲಿಯೂ ಪವಿತ್ರವಾದುದು. ಅದನ್ನು ಸ್ಮರಿಸಿದರೆ ಸ್ವರ್ಗವು ಬರುತ್ತದೆ. ಅದರಲ್ಲಿ ಸತ್ತರೆ ಬ್ರಹ್ಮನ ಸ್ಥಾನವು ಸಿಕ್ಕುತ್ತದೆ.

ತತ್ತೀರೇ ಯಜ ದೇವೇಶ ಕೇಶವಂ ಬಹುಭಿರ್ಮಖೈಃ |
ಯದೀಚ್ಛಸಿ ಸ್ವಕೀಯಾನಾಂ ಕಲ್ಯಾಣಂ ತ್ವಂ ನಿರಂತರಂ　　|| ೧೯ ||

॥ ನಾರದ ಉವಾಚ ॥

ಗುರೋರ್ವಚನಮಾಕರ್ಣ್ಯ ತೂರ್ಣಮಾರುಹ್ಯ ವಾಹನಂ |
ಶಿವಪ್ರದಮಿದಂ ಶಕ್ರಃ ಸ್ವಕೀಯಂ ವನಮಾಗಮತ್　　|| ೨೦ ||

ಗುರುಣಾ ಸಹ ದೇವೈಶ್ಚ ಯಜ್ಞೋಪಕರಣೈಸ್ತಥಾ |
ಅತ್ರಾಗತ್ಯ ವಿಲೋಕ್ಯೈತದ್ವನಂ ಲೇಭೇ ಮುದಂ ಪರಾಂ　　|| ೨೧ ||

ಗುರುಣಾ ನೋದಿತಶ್ಶಕ್ರಃ ಸಪ್ತರ್ಷೀನ್ ಬ್ರಹ್ಮಣಸ್ಸುತಾನ್ |
ವಸಿಷ್ಠಾದೀನ್ ದ್ವಿಜಾನ್ ವೃತ್ವಾ ಯಜತಿ ಸ್ಮ ಜಗತ್ಪತಿಂ　　|| ೨೨ ||

---

೧೯. ಆ ನದಿಯ ದಡದಲ್ಲಿ ಕೇಶವನನ್ನು ಅನೇಕ ಯಾಗಗಳನ್ನು ಮಾಡಿ ತೃಪ್ತಿಪಡಿಸು. ಹಾಗಾದರೆ ನಿನ್ನ ಕಡೆಯವರಿಗೆ ಯಾವಾಗಲೂ ಮಂಗಳ ವಾಗುತ್ತದೆ.

೨೦. ನಾರದನು ಹೇಳಿದನು- ಗುರುವಿನ ಈ ಮಾತನ್ನು ಕೇಳಿ ಜಾಗ್ರತೆ ಯಾಗಿ ವಾಹನದ ಮೇಲೆ ಕುಳಿತುಕೊಂಡು ಮಂಗಳಕರವಾದ ಈ ಖಾಂಡವ ವನಕ್ಕೆ ಬಂದನು.

೨೧. ಆ ಗುರುವನ್ನೂ, ದೇವತೆಗಳನ್ನೂ ಕರೆದುಕೊಂಡು ಯಜ್ಞದ ಸಲ ಕರಣೆಗಳನ್ನು ಜೊತೆಯಲ್ಲಿಯೇ ತಂದು ಆ ಜಾಗವನ್ನು ನೋಡಿ ಬಹುವಾದ ಸಂತೋಷವನ್ನು ಹೊಂದಿದನು.

೨೨. ಗುರುವಿನ ಮಾತಿನಂತೆ ಇಂದ್ರನು ಬ್ರಹ್ಮನ ಮಕ್ಕಳಾದ ವಸಿಷ್ಠನೇ ಮೊದಲಾದ ಸಪ್ತರ್ಷಿಗಳನ್ನು ಯಾಗದ ಋತ್ವಿಜರನ್ನಾಗಿರಿಸಿ ಆ ಯಾಗವನ್ನು ಮಾಡಿ ಸ್ವಾಮಿಯನ್ನು ತೃಪ್ತಿಪಡಿಸಲು ಉದ್ದೇಶಪಟ್ಟು ಯಾಗಕ್ಕೆ ಮೊದಲು ಮಾಡಿ ಪೂರೈಸಿದನು.

ತಸ್ಯ ಪ್ರಸನ್ನೋ ಭಗವಾನ್ ಬ್ರಹ್ಮೇಶಾಭ್ಯಾಂ ಸಹಾಗತಃ ।
ಕ್ರತೌ ಶತಕ್ರತೋರ್ಯತ್ರ ಮಹಾನಭವದುತ್ಸವಃ ॥ ೨೩ ॥

ದೇವತ್ರಯೀಂ ಸ ತಾಂ ವೀಕ್ಷ್ಯ ಶಕ್ರೋಽವಕ್ರಮತಿಸ್ತದಾ ।
ಉತ್ಥಾಯಾಸನತಸ್ತೂರ್ಣಂ ವವಂದೇ ಮುನಿಭಿಸ್ಸಹ ॥ ೨೪ ॥

ವಾಹನೇಭ್ಯೋಽವರುಹ್ಯಾಶು ತದಂತೇಷೂಪವಿಶ್ಯ ತೇ ।
ಆಸನೇಷು ಸುಹೈಮೇಷು ಬಭುರ್ವೇದಿಷ್ವಿವಾಗ್ನಯಃ ॥ ೨೫ ॥

ಸಿತರಕ್ತಾಂಗಯೋಶ್ಶಂಭುಬ್ರಹ್ಮಣೋರ್ಹರಿರಾಬಭೌ ।
ನೀಲಚ್ಛವಿಃ ಪೀತವಾಸಾಸ್ತಟಿತ್ವಾನಿವ ಶೃಂಗಯೋಃ ॥ ೨೬ ॥

ಶಕ್ರಃ ಪ್ರಕ್ಷಾಳ್ಯ ತತ್ಪಾದಾನ್ ಮೂರ್ಧ್ನಾ ತಜ್ಜಲಮಾದಧೇ ।
ಅಬ್ರವೀಚ್ಚ ಮುದಾ ಯುಕ್ತೋ ವಚನಂ ಮಧುರಾಕ್ಷರಂ ॥ ೨೭ ॥

---

೨೩. ಆ ಇಂದ್ರನಿಗೆ ಪ್ರಸನ್ನನಾದ ವಿಷ್ಣುವು ಬ್ರಹ್ಮ ಶಿವರೊಡನೆ ಅಲ್ಲಿಗೆ ಬಂದನು. ಆ ಯಾಗದಲ್ಲಿ ಮಹತ್ತಾದ ಸಂತೋಷವು ಉಂಟಾಯಿತು.

೨೪. ಆ ಇಂದ್ರನು ಆ ತ್ರಿಮೂರ್ತಿಗಳನ್ನು ನೋಡಿ ಶುದ್ಧವಾದ ಮನಸ್ಸಿನಿಂದ ಎದ್ದು ಋಷಿಗಳೊಡನೆ ಅವರನ್ನು ಎದುರುಗೊಂಡು ನಮಸ್ಕರಿಸಿದನು.

೨೫. ಆ ತ್ರಿಮೂರ್ತಿಗಳೂ ಅವರವರ ವಾಹನಗಳಿಂದಿಳಿದು ಚಿನ್ನದ ಆಸನಗಳಲ್ಲಿ ಕುಳಿತಿರಲು ಅವರು ಯಾಗದ ಮೂರು ಅಗ್ನಿಗಳಂತೆ ಪ್ರಕಾಶಿಸಿದರು.

೨೬. ಬಿಳಿಪು ಕೆಂಪು ದೇಹವುಳ್ಳ ಆ ಶಿವ ಬ್ರಹ್ಮರ ಮಧ್ಯದಲ್ಲಿ ಈ ನೀಲಿ ಬಣ್ಣದ ಹರಿಯು ಹೊಂಬಣ್ಣದ ಬಟ್ಟೆಯನ್ನು ಧರಿಸಿ ಕೋಡುಗಲ್ಲುಗಳ ಮೇಲೆ ಇರುವ ಮಿಂಚುಳ್ಳ ಮೇಘದಂತೆ ಪ್ರಕಾಶಿಸಿದನು.

೨೭. ಇಂದ್ರನು ಅವರ ಕಾಲುಗಳನ್ನು ತೊಳೆದು ಆ ನೀರನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಂಡನು. ಅನಂತರ ಸಂತೋಷದಿಂದ ಮಧುರವಾದ ಮಾತುಗಳನ್ನು ಆಡಿದನು.

॥ ಇಂದ್ರ ಉವಾಚ ॥

**ವಿಹಿತೋಽಯಂ ಮಯಾ ದೇವ ಯಜ್ಞೋಽದ್ಯ ಸಫಲೋಽಭವತ್ ।**
**ಯದ್ಭ್ಯೋಽಯಂ ದರ್ಶನಂ ಪ್ರಾಪ್ತಾ ದುರ್ಲಕ್ಷ್ಯಾ ಅಪಿ ಯೋಗಿಭಿಃ ॥ ೨೮ ॥**

**ಏಕೇನೈವ ತ್ವಯಾ ವಿಷ್ಣೋ ಕೃತಾ ಮೂರ್ತಿಸ್ತ್ರಯೀಮಯೀ ।**
**ಗುಣೈಸ್ತಥಾಪಿ ನಾನಾತ್ವಂ ಸ್ಫಟಿಕಸ್ಯೇವ ತೇ ನೃಷಾ ॥ ೨೯ ॥**

**ಯಥಾ ದಾರುಷು ಗೂಢೋಽಗ್ನಿರ್ಘರ್ಷಣೇನ ವಿನಾ ಪ್ರಭೋ ।**
**ನಾವಿರ್ಭವತಿ ಭೂತಾನಾಂ ಹೃತ್ಸು ಭಕ್ತ್ಯಾ ತಥಾ ಭವಾನ್ ॥ ೩೦ ॥**

**ಏಕಸ್ಯ ತ್ವಯಿ ಭಕ್ತಿಸ್ಸ್ಯಾತ್ಸರ್ವಭೂತೋಪಕಾರಿಣಿ ।**
**ಬಭೂವುಸ್ಸುಖಿನೋ ದೇವಾಃ ಪ್ರಹ್ಲಾದಕೃತಯಾ ತಯಾ ॥ ೩೧ ॥**

---

೨೮. ಇಂದ್ರನು ಹೇಳಿದನು–ಎಲೈ ಸ್ವಾಮಿಯೆ! ನಾನು ಮಾಡಿದ ಯಾಗವು ಈಗ ಸಫಲವಾಯಿತು. ಯೋಗಿಗಳಿಗೂ ಕೂಡ ಕಾಣಿಸಿಕೊಳ್ಳದ ನೀವುಗಳು ಈಗ ನಮಗೆ ದರ್ಶನವನ್ನು ಕೊಟ್ಟಿದ್ದೀರಿ.

೨೯. ಎಲೈ ವಿಷ್ಣುವೇ! ನೀನು ಒಬ್ಬನಾದರೂ ತ್ರಿಮೂರ್ತಿಯಾಗಿ ಭಾಗವಾಗಿದ್ದೀಯೆ. ಆದರೂ ನೀನು ಲೋಕದ ಗುಣಗಳನ್ನು ಹೊಂದಿ ನಾನಾ ರೀತಿಯಲ್ಲಿ ಕಾಣಿಸಿಕೊಳ್ಳುತ್ತಿದ್ದೀಯೆ. ಸ್ಫಟಿಕ ಮಣಿಯು ಹತ್ತಿರದಲ್ಲಿರುವ ಬೇರೆ ಬೇರೆ ಬಣ್ಣಗಳನ್ನು ಹೊಂದಿ ಆಯಾಯಾ ಬಣ್ಣದಂತೆ ಪ್ರಕಾಶಿಸುತ್ತದೆ. ಆದರೆ ತಾನು ಶುದ್ಧವಾಗಿಯೇ ಇರುತ್ತದೆ. ಅದರಂತೆ ನೀನು ಶುದ್ಧನು. ಗುಣಗಳ ಸಂಸರ್ಗದಿಂದ ಬೇರೆ ಬೇರೆಯಾಗಿ ಕಾಣುತ್ತೀಯೆ. ಆ ಗುಣಗಳು ನಿನ್ನಲ್ಲಿ ಸುಳ್ಳಾದುವು.

೩೦. ಮರಗಳಲ್ಲಿರುವ ಅಗ್ನಿಯು ಗುಟ್ಟಾಗಿದ್ದುಕೊಂಡಿರುತ್ತದೆ. ಘರ್ಷಣವಿಲ್ಲದಿದ್ದರೆ ಅದು ಹೊರಗೆ ಬರುವುದೇ ಇಲ್ಲ. ಅದರಂತೆ ನೀನು ಎಲ್ಲರಲ್ಲಿಯೂ ಇದ್ದೀಯೆ. ಅವರ ಭಕ್ತಿಯಿಂದ ಹೊರಗೆ ಬರುತ್ತೀಯೆ. ಇಲ್ಲದಿದ್ದರೆ ಹೊರಗೆ ಕಾಣಿಸಿಕೊಳ್ಳುವುದೇ ಇಲ್ಲ.

೩೧. ಸರ್ವ ಪ್ರಾಣಿಗಳಿಗೂ ಉಪಕಾರಿಯಾದ ನಿನ್ನಲ್ಲಿ ಒಬ್ಬನಿಗೆ ಭಕ್ತಿಯು ಹುಟ್ಟಿದರೆ ಅದರಿಂದ ಲೋಕೋಪಕಾರವಾಗುತ್ತವೆ. ಲೋಕೋಪಕಾರಿಯಾದ ನಿನ್ನಲ್ಲಿ ಪ್ರಹ್ಲಾದನಿಗೆ ಭಕ್ತಿಯು ಹುಟ್ಟಿತು. ಆ ಭಕ್ತಿಯಿಂದ ದೇವತೆಗಳೆಲ್ಲರೂ ಸುಖವನ್ನು ಹೊಂದಿದರು. (ಹಿರಣ್ಯಕಶಿಪುವನ್ನು ಕೊಂದುದರಿಂದ)

**ವಯಂ ವಿಷಯಿಣೋ ದೇವ ತ್ವನ್ಮಾಯಯಾವೃತಚೇತಸಃ ।**
**ನ ಜಾನೀಮಃ ಸ್ವರೂಪಂ ತೇ ಯಥಾವತ್ಪಾದಸೇವಕಾಃ ॥ ೩೨ ॥**

**ಭೋ ಬ್ರಹ್ಮನ್ ಭೋ ಮಹಾದೇವ ಯುವಾಮಪಿ ಜಗದ್ಗುರೂ ।**
**ಏಕಸ್ಯೈವ ಗುರುತ್ವೇನ ಯತೋ ನಾತಃ ಪೃಥಗ್ಯುವಾಂ ॥ ೩೩ ॥**

**ಯತ್ಕಿಂಚಿದುಚ್ಯತೇ ವಾಚಾ ಮನಸಾ ಚ ವಿಚಿಂತ್ಯತೇ ।**
**ಅಸ್ಯೈವ ಮಾಯಯಾ ತತ್ಸರ್ವಂ ತದ್ದ್ವಯೀದೂರವರ್ತಿನಃ ॥ ೩೪ ॥**

**ಪ್ರಪಂಚಜಾತಂ ಯದಿದಂ ವಿಲೋಕ್ಯತೇ**
**ನ ಸತ್ಯಮಿತ್ಯೇವ ವಿಚಿಂತ್ಯ ಯೇ ನರಾಃ ।**
**ಭಜಂತಿ ವಿಷ್ಣೋಶ್ಚರಣಂ ತರಂತಿ ತೇ**
**ಯದಂಬು ಮೂರ್ಧ್ನಾ ಹರ ಧಾರ್ಯತೇ ತ್ವಯಾ ॥ ೩೫ ॥**

---

೩೨. ಎಲೈ ದೇವನೇ ! ನಾವು ಸಂಸಾರಸುಖದಲ್ಲಿ ಆಸೆಯುಳ್ಳವರು. ನಿನ್ನ ಮಾಯೆಯು ನಮ್ಮ ಮನಸ್ಸನ್ನೆಲ್ಲಾ ಆವರಿಸಿಕೊಂಡಿರುವುದು. ನಿನ್ನ ಸ್ವರೂಪವನ್ನು ನಾವು ಸರಿಯಾಗಿ ತಿಳಿದುಕೊಂಡಿಲ್ಲ. ಆದರೆ ನಿನ್ನ ಪಾದ ಸೇವಕರೆಂಬುದನ್ನು ತಿಳಿದಿದ್ದೇವೆ.

೩೩. ಎಲೈ ಬ್ರಹ್ಮನೇ ! ಎಲೈ ಮಹಾದೇವನೇ ! ನೀವುಗಳೂ ಕೂಡ ಜಗತ್ತಿಗೆ ಗುರುಗಳು. ಈ ಜಗತ್ತಿಗೆ ಗುರುವಾಗಿರುವುದರಿಂದಲೇ ನೀವುಗಳು ಆ ವಿಷ್ಣುವಿಗಿಂತಲೂ ಬೇರೆಯವರಲ್ಲ.

೩೪. ಬಾಯಿನಿಂದ ಏನನ್ನು ಹೇಳುವೆವೋ ಮನಸ್ಸಿನಿಂದ ಯಾವುದನ್ನು ಯೋಚಿಸುವೆವೋ ಆ ವಾಕ್ ಮನಸ್ಸುಗಳಿಗೆ ದೂರನಾಗಿರುವ ಈ ಸ್ವಾಮಿಯು ಮಹಿಮೆಯೇ ಅದೆಲ್ಲವೂ ಆಗಿವೆ.

೩೫. ಕಣ್ಣಿಗೆ ಕಾಣುವ ಈ ಪ್ರಪಂಚವು ಯಾವುದಿದೆಯೋ ಅದನ್ನು ಸತ್ಯ ಸ್ವರೂಪವಲ್ಲವೆಂಬುದಾಗಿ ಯಾರು ತಿಳಿದಿರುವರೋ ಅವರು ಈ ವಿಷ್ಣುವಿನ ಪಾದಗಳನ್ನು ಭಜಿಸಿ ಈ ಸಂಸಾರದಿಂದ ಪಾರಾಗುತ್ತಾರೆ. ನೀನು ತಲೆಗೆ ಪ್ರೋಕ್ಷಿಸಿಕೊಳ್ಳುವ ಆ ನೀರು ಅಂತಹ ಅವನ ಚರಣಗಳದು. ಅದನ್ನೇ ನೀನು ಧರಿಸಿದ್ದೀಯೆ. (ನೀನು ತಲೆಯಲ್ಲಿ ಧರಿಸಿರುವ ಗಂಗೆ ಆ ವಿಷ್ಣುವಿನ ಪಾದವನ್ನು ತೊಳೆದ ನೀರು ಅದು ಅಂತಹ ಪವಿತ್ರವಾದುದು)

ವಿಧೇಽಸ್ಯ ಭೂಯಾದನುಜನ್ಮ ಪಾದಯೋ
ರತಿರ್ಮದೀಯಾ ಕಮಲಾಭಯೋರ್ಭೃಶಂ ।
ಯದೀಕ್ಷಣಕ್ಷೋಭಿತಯಾಽಜ ಯಾ ಜಗತ್
ಸಮಸ್ತಮೇತನ್ಮಹದಾದಿ ಜಾಯತೇ ॥ ೩೬ ॥

ಭವಾದೃಶೋ ನಾಸ್ತಿ ಕೃಪಾಪರೋಽಪರೋ
ವಿಪಕ್ಷಪಕ್ಷೇ ವಿತನೋಷಿ ಯತ್ಸುಖಂ ।
ಸ್ವಲೋಕಶೋಕಾಪನಯೇ ಕೃಪಾಳುತಾ
ಯದುಚ್ಯತೇ ತೇ ನೃಹರೇ ತದಜ್ಞತಾ ॥ ೩೭ ॥

॥ ನಾರದ ಉವಾಚ ॥

ಇತ್ಯಭಿಷ್ಟೂಯ ದೇವೇಶಃ ಕೇಶವಂ ಪ್ರಣತೋಗ್ರತಃ ।
ತಸ್ಥೌ ತದ್ವಾಕ್ಯಶುಶ್ರೂಷಾದತ್ತಚಿತ್ತೋ ಮಹೀಪತೇ ॥ ೩೮ ॥

---

೩೬. ಎಲೈ ವಿಧಿಯೇ! ಕಮಲದಂತಿರುವ ಆ ವಿಷ್ಣುವಿನ ಪಾದಗಳಲ್ಲಿ ಭಕ್ತಿಯು ನನಗೆ ಪ್ರತಿ ಜನ್ಮದಲ್ಲಿಯೂ ಉಂಟಾಗಲಿ. ಶಾಶ್ವತವಾದ ಯಾವನ ಪಾದಗಳ ಕಡೆಗಣ್ಣಿನ ನೋಟದಿಂದಲೇ ಮಹದಾದಿ ರೂಪವಾದ ಈ ಸಮಸ್ತವಾದ ಜಗತ್ತು ಹುಟ್ಟುತ್ತದೆಯೋ ಅವುಗಳಲ್ಲಿ ನನಗೆ ಭಕ್ತಿ ಇರಲಿ.

೩೭. ಎಲೈ ವಿಷ್ಣುವೇ! ಶತ್ರುಗಳಲ್ಲಿಯೂ ಕೂಡ ಸುಖವನ್ನುಂಟುಮಾಡುವ ನಿನ್ನಂತಹ ಕೃಪಾಳುವು ಮತ್ತೊಬ್ಬನಿಲ್ಲ. ಎಲೈ ಹರಿಯೇ! ನೀನು ನಿನ್ನ ಪಕ್ಷದವರ ಶೋಕವನ್ನು ನಾಶಮಾಡುವುದರಲ್ಲಿಯೇ ದಯೆಯುಳ್ಳವನೆಂದು ಹೇಳುವುದು ಯಾವುದಿದೆಯೋ ಅದು ದಡ್ಡತನ.

೩೮. ನಾರದನು ಹೇಳಿದನು-ದೇವೇಂದ್ರನು ಆ ಕೇಶವನನ್ನು ಹೊಗಳಿ ನಮಸ್ಕರಿಸಿ ಮುಂದೆ ನಿಂತುಕೊಂಡು ಅವನು ಏನನ್ನು ಹೇಳುವನೋ ಎಂದು ನಿರೀಕ್ಷಿಸುತ್ತಿದ್ದನು.

ಏವಮಾಕರ್ಣ್ಯ ಮುನಯಃ ಸ್ತುತಿಂ ತಸ್ಯ ರಮಾಪತೇಃ ।
ಕೃತಾಮಿಂದ್ರೇಣ ಸದಸಿ ಸಾಧು ಸಾಧ್ವಿತಿ ಚಾಬ್ರುವನ್ ॥ ೩೯ ॥

॥ ಮುನಯ ಊಚುಃ ॥

ಶತಮನ್ಯೋ ವರ್ಷಶತಂ ಯೇ ಕುರ್ವಂತಿ ಮಹತ್ತಪಃ ।
ನ ತೇಷಾಮೀದೃಶೀ ಭಕ್ತಿರ್ಯಾದೃಶೀ ತವ ಮಾಧವೇ ॥ ೪೦ ॥

ನ ಯೋಗಸ್ಸುಲಭೋಽಷ್ಟಾಂಗಃ ಖ್ಯಾತಿರ್ಯೇನಾಧಿಗಮ್ಯತೇ ।
ಸಮತ್ವೇನ ಚ ತತ್ತ್ಯಾಗಸ್ತದ್ಭಕ್ತಿಃ ಶರಣಂ ನೃಣಾಂ ॥ ೪೧ ॥

ಸ್ವಧರ್ಮಾರ್ಜಿತವಿತ್ತೈರ್ಯದ್ಯಥಾವಿಧಿ ವಿಧೀಯತೇ ।
ತತ್ಕರ್ಮಸ್ಯಾರ್ಪಣಂ ವಿಷ್ಣೌ ಭಕ್ತಿರೇಷಾ ಶಿವಪ್ರದಾ ॥ ೪೨ ॥

---

೩೯. ಅಲ್ಲಿದ್ದ ಮುನಿಗಳು ಶ್ರೀ ವಿಷ್ಣುವನ್ನು ಇಂದ್ರನು ಹೀಗೆ ಹೊಗಳಿದುದನ್ನು ಕೇಳಿ ಸಾಧು ಸಾಧು ಎಂದು ಶ್ಲಾಘಿಸಿದರು.

೪೦. ಮುನಿಗಳು ಹೇಳಿದರು–ಎಲೈ ಇಂದ್ರನೇ ! ನಿನಗೆ ಮಾಧವನಲ್ಲಿ ಯಾವ ರೀತಿಯಾದ ಭಕ್ತಿಯಿರುವುದೋ ಈ ರೀತಿಯಾದ ಭಕ್ತಿಯು ನೂರು ವರ್ಷಗಳು ತಪಸ್ಸು ಮಾಡಿದ ಯೋಗಿಗಳಿಗೂ ಬರುವುದಿಲ್ಲ.

೪೧. ಯಾವ ಯೋಗವನ್ನು ಮಾಡಿದರೆ ಪ್ರಸಿದ್ಧವಾಗುತ್ತಾನೆಯೋ ಅಂತಹ ಅಷ್ಟಾಂಗಗಳಿಂದ ಕೂಡಿದ ಯೋಗವು ಸುಲಭವಾದುದಲ್ಲ. ಕಾಪಾಡುವುದೂ ಅಲ್ಲ. ಸರ್ವವನ್ನೂ ಸಮವನ್ನಾಗಿ ತಿಳಿದು ತ್ಯಾಗಮಾಡಿದರೆ ಆ ತ್ಯಾಗ ರೂಪವಾದ ಭಕ್ತಿಯೇ ಲೋಕದಲ್ಲಿ ಕಾಪಾಡತಕ್ಕದ್ದು.

೪೨. ತಾನೇ ಸಂಪಾದಿಸಿದ ಹಣದಿಂದ ಯಾಗಾದಿಗಳನ್ನು ಕ್ರಮವಾಗಿ ಮಾಡಿ ಆ ಕರ್ಮದ ಫಲವನ್ನು ವಿಷ್ಣುವಿನಲ್ಲಿ ಅರ್ಪಣ ಮಾಡಿದರೆ ಅದೇ ಭಕ್ತಿ ಎನಿಸಿಕೊಳ್ಳುತ್ತದೆ. ಅದು ಮಂಗಳವನ್ನು ಉಂಟು ಮಾಡುತ್ತದೆ.

ನ ನಿಂದೇದ್ದೇವತಾಮನ್ಯಾಂ ವಿಷ್ಣುಬುದ್ಧ್ಯಾ ಚ ಯೋ ನಮೇತ್ ।
ನ ತ್ಯಜೇದ್ವೇದವಾಕ್ಯಾನಿ ಸ ಭಕ್ತೋऽಸ್ಯ ಹರೇಃ ಪ್ರಿಯಃ ॥ ೪೩ ॥

ಯೇ ಶೃಣ್ವನ್ತಿ ಹರೇರ್ಗುಣಾನಹರಹಃ ಕುರ್ವಂತಿ ಯೇ ಕೀರ್ತನಂ ।
ಯೇ ಚಾಸ್ಯ ಸ್ಮರಣಂ ತಥೈವ ಭಜನಂ ಯೇऽಮುಂ ಯಜಂತೇ ತಥಾ ॥
ಯೇ ದಾಸ್ಯೇನ ನಮಂತಿ ಚೈನಮಮುನಾ ಕುರ್ವಂತಿ ಯೇ ಮಿತ್ರತಾಂ ।
ಯೇऽತ್ರ ಸ್ವಂ ಚ ನಿವೇದಯಂತಿ ನ ಹಿ ತೇ ವಾಂಛಂತಿ
ಮುಕ್ತ್ಯಾದಿಕಂ ॥ ೪೪ ॥

ಇಂದ್ರ ಭಕ್ತ್ಯಾ ತ್ವಮಪ್ಯೇನಮಾರಾಧಯ ಜಗದ್ಗುರುಂ ।
ನ ಕಾಮಯ ಕಿಮಪ್ಯಸ್ಮಾತ್ಕೃತಕೃತ್ಯೋ ಭವಿಷ್ಯಸಿ ॥ ೪೫ ॥

---

೪೩. ಬೇರೆಯಾದ ದೇವತೆಯನ್ನು ನಿಂದಿಸಬಾರದು. ಆ ದೇವತೆಯನ್ನು ವಿಷ್ಣುವೆಂಬ ಬುದ್ಧಿಯಿಂದ ನಮಸ್ಕರಿಸಬೇಕು. ವೇದ ವಾಕ್ಯಗಳನ್ನು ಬಿಡದೆ ಅವುಗಳಂತೆ ನಡೆಯುತ್ತಿರಬೇಕು. ಅವನೇ ಭಕ್ತನು. ಮತ್ತು ಹರಿಗೆ ಪ್ರಿಯನು.

೪೪. ಹರಿಯ ಗುಣಗಳನ್ನು ಯಾರು ನಿತ್ಯವೂ ಕೇಳುತ್ತಾರೆಯೋ ಯಾರು ಕೀರ್ತಿಸುತ್ತಾರೆಯೋ ಯಾರು ಅವನನ್ನು ಸ್ಮರಿಸುತ್ತಾರೆಯೋ ಯಾರು ಸೇವಿಸುತ್ತಾರೆಯೋ ಯಾರು ಪೂಜಿಸುತ್ತಾರೆಯೋ ಯಾರು ದಾಸ್ಯ ಭಾವದಿಂದ ನಮಸ್ಕರಿಸುತ್ತಾರೆಯೋ ಯಾರು ಅವನೊಡನೆ ಸ್ನೇಹ ಬೆಳೆಸುತ್ತಾರೆಯೋ ಯಾರು ತಮ್ಮನ್ನು ಆತನಿಗೆ ಅರ್ಪಿಸುತ್ತಾರೆಯೋ ಅವರೊಬ್ಬರೂ ಮುಕ್ತಿ ಮುಂತಾದುವುಗಳನ್ನು ಕೇಳಬೇಕಾಗಿಯೇ ಇಲ್ಲ.

೪೫. ಎಲೈ ಇಂದ್ರನೇ ! ನೀನು ಭಕ್ತಿಯಿಂದ ಜಗದ್ಗುರುವಾದ ಆ ವಿಷ್ಣುವನ್ನು ಪೂಜಿಸು. ಇವನಿಂದ ನೀನು ಏನನ್ನೂ ಅಪೇಕ್ಷಿಸಬೇಡ. ಕೃತಕೃತ್ಯನಾಗುತ್ತೀಯೆ.

|| ನಾರದ ಉವಾಚ ||

ಮುನಿಭಿರಿತಿಮತಾಂ ಸಮಸ್ತಸೇವ್ಯಾಂ
ತ್ರಿಭುವನಪಾರಪದಪ್ರದಾಂ ನಿಶಮ್ಯ ।
ಹರಿರಖಿಲಗುರುಃ ಕೃತಾಂ ಸ್ವಭಕ್ತಿಂ
ಮಧುರಮುವಾಚ ವಚೋ ಹರಿಂ ಸಮಾಜೇ || ೪೬ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಇಂದ್ರ ಯಾಗ ವಿಧಾನಂ ನಾಮ ಪಂಚನವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೪೬. ನಾರದನು ಹೇಳಿದನು-ಋಷಿಗಳಿಗೆ ಇಷ್ಟವಾದ ಸಮಸ್ತರೂ ಸೇವಿಸುವಂತಹ ಮೂರು ಲೋಕಕ್ಕೂ ಮುಕ್ತಿಯನ್ನು ಕೊಡುವ ತನ್ನಲ್ಲಿರುವ ಭಕ್ತಿಯನ್ನು ಸರ್ವ ಗುರುವಾದ ಹರಿಯು ಕೇಳಿ ಆ ಇಂದ್ರನನ್ನು ಕುರಿತು ಆ ಸಭೆಯಲ್ಲಿ ಮಧುರವಾಗಿ ಇಂತೆಂದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಇಂದ್ರ ಯಾಗ ವಿಧಾನ ಎಂಬ ನೂರ ತೊಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಣ್ಣವತ್ಯಧಿಕಶತತಮೋಽಧ್ಯಾಯಃ ॥



**॥ ಶ್ರೀ ಭಗವಾನುವಾಚ ॥**

**ನೈತಚ್ಚಿತ್ರಂ ಸುರಾಧೀಶ ಮುನಯೋ ಜ್ಞಾನವತ್ತರಾಃ ।**
**ಮದೀಯಾಂ ಯದಿ ವೈ ಭಕ್ತಿಂ ಗುರ್ವೀಂ ಕುರ್ವಂತಿ ಸತ್ಕೃತಾಂ ॥ ೧ ॥**

**ಏತೇ ಜ್ಞಾನೋಪದೇಷ್ಟಾರಃ ತ್ರಿಲೋಕತಲವಾಸಿನಾಂ ।**
**ಪ್ರವರ್ತಯಂತ್ಯಮೀ ನಷ್ಟಂ ವೇದಮಾರ್ಗಂ ಯತಸ್ಸದಾ ॥ ೨ ॥**

**ಭಕ್ತ್ಯಾ ಭವಾನಪಿ ಸ್ವರ್ಗಭೋಗಾಸಕ್ತೋಽಪಿ ಮಾಂ ಯತಃ ।**
**ಪ್ರಪನ್ನೋಽಸಿ ಕಿಮಾಶ್ಚರ್ಯಂ ಯತಸ್ತವ ಗುರುರ್ಗುರುಃ ॥ ೩ ॥**

---

## ನೂರ ತೊಂಭತ್ತಾರನೆಯ ಅಧ್ಯಾಯವು



೧. ಶ್ರೀ ಭಗವಂತನು ಹೇಳಿದನು-ಎಲೈ ಇಂದ್ರನೇ ! ಮುನಿಗಳು ಜ್ಞಾನಿಗಳಲ್ಲಿ ಶ್ರೇಷ್ಠರೆಂಬುದೇನೂ ಆಶ್ಚರ್ಯವಲ್ಲ. ನನ್ನಲ್ಲಿ ಅವರು ಬಹುವಾಗಿ ಭಕ್ತಿಯನ್ನಿಟ್ಟುಕೊಂಡಿರುವುದು ಬಹು ಆಶ್ಚರ್ಯವಾದುದೇ ಸರಿ.

೨. ಈ ಮುನಿಗಳು ಮೂರು ಲೋಕದಲ್ಲಿರುವವರಿಗೂ ಜ್ಞಾನವನ್ನು ಉಪದೇಶಿಸುವವರಾಗಿದ್ದಾರೆ. ಅಲ್ಲದೆ ನಶಿಸಿ ಹೋಗಿರುವ ವೇದಮಾರ್ಗಗಳನ್ನು ಜ್ಞಾನದೃಷ್ಟಿಯಿಂದ ತಿಳಿದು ಅದನ್ನು ಆಚರಣೆಗೆ ತರುತ್ತಾರೆ.

೩. ನೀನು ಸ್ವರ್ಗಭೋಗವಲ್ಲಿ ಆಸಕ್ತನಾಗಿದ್ದರೂ ನನ್ನನ್ನು ಭಕ್ತಿಯಿಂದ ಆಶ್ರಯಿಸಿರುವುದೇನೂ ಆಶ್ಚರ್ಯವಲ್ಲ. ಏತಕ್ಕೆಂದರೆ ನಿನಗೆ ಗುರುವಾದ ಬೃಹಸ್ಪತಿಯು ಅವನು ಎಲ್ಲವನ್ನೂ ಉಪದೇಶಿಸಿದ್ದಾನೆ.

ಯಜಸ್ವ ಸುರಶಾರ್ದೂಲ ಮಖೈರ್ನಾನಾ ಬಹುದಕ್ಷಿಣೈಃ ।
ನಿಷ್ಕಾಮಸ್ತ್ವಂ ಸಮೀಪಸ್ಥಂ ತೂರ್ಣಂ ಪ್ರಾಪ್ಸ್ಯಸೀ ಮತ್ಪದಂ ॥ ೪ ॥

ಪ್ರತಿಯಾಗಂ ಪ್ರಯಚ್ಛ ತ್ವಂ ರತ್ನಪ್ರಸ್ಥಾನ್ಯನೇಕಶಃ ।
ಪ್ರಖ್ಯಯಾ ಸ್ಥಾನಮೇತತ್ತೇ ಇಂದ್ರಪ್ರಸ್ಥಂ ಭವಿಷ್ಯತಿ ॥ ೫ ॥

ವಿಧೇ ತ್ವಮತ್ರ ರಚಯ ಪ್ರಯಾಗಂ ತೀರ್ಥಪುಂಗವಂ ।
ಸರಸ್ವತೀಂ ಸಮಾನೀಯ ಗಂಗಾಂ ಚ ಜನಪಾವನೀಂ ॥ ೬ ॥

ಕಾಶೀಂ ಚ ಶಿವಕಾಶೀಂ ಚ ತ್ವಮತ್ರ ಸ್ಥಾಪಯೇಶ್ವರ ।
ಶಂಕರಾತ್ರ ಸಮಂ ಗೌರ್ಯಾ ನಿವಾಸಂ ಕುರು ಸರ್ವದಾ ॥ ೭ ॥

ಭೋ ಭೋ ಬ್ರಹ್ಮಸುತಾ ಯೂಯಂ ಜ್ಞಾನವಿಜ್ಞಾನಕೋವಿದಾಃ ।
ನಿಜಯೋಗಬಲೇನಾತ್ರ ಕುರುಧ್ವಂ ತೀರ್ಥಸಪ್ತಕಂ ॥ ೮ ॥

---

೪. ಎಲೈ ದೇವಶ್ರೇಷ್ಠನೇ ! ಬಹು ದಕ್ಷಿಣೆಯುಳ್ಳ ಯಾಗಗಳಿಂದ ನನ್ನನ್ನು ಪೂಜಿಸು. ನಾನು ಇಲ್ಲಿಯೇ ಇರುತ್ತೇನೆ. ನೀನು ಆ ಯಾಗವನ್ನು ನಿಷ್ಕಾಮ ಬುದ್ಧಿಯಿಂದ ಮಾಡು. ಅನಂತರ ನನ್ನ ಲೋಕವನ್ನು ಹೊಂದುತ್ತೀಯೆ.

೫. ನೀನು ಮಾಡತಕ್ಕ ಒಂದೊಂದು ಯಾಗದಲ್ಲಿಯೂ ರತ್ನಗಳನ್ನು ಪ್ರಸ್ಥ (ಬಳ್ಳ) ಗಳ ಪರಿಮಾಣದಲ್ಲಿಯೇ ದಾನ ಮಾಡು. ಆ ಪ್ರಸಿದ್ಧಿಯಿಂದ ಈ ಜಾಗವು ಇಂದ್ರಪ್ರಸ್ಥವೆಂದು ಹೆಸರನ್ನು ಹೊಂದುತ್ತದೆ.

೬. ಎಲೈ ಬ್ರಹ್ಮನೇ ! ನೀನು ಇಲ್ಲಿ ಪ್ರಯಾಗವೆಂಬ ಶ್ರೇಷ್ಠವಾದ ತೀರ್ಥವನ್ನು ಸೃಷ್ಟಿಸು. ಅಲ್ಲಿ ಸರಸ್ವತಿಯೂ ಜನಪಾವನಿಯಾದ ಗಂಗೆಯೂ ಬರಲಿ.

೭. ಎಲೈ ಈಶ್ವರನೇ ! ನೀನು ಕಾಶಿಯನ್ನೂ ಶಿವಕಾಶಿಯನ್ನೂ ಇಲ್ಲಿ ಸೃಷ್ಟಿಸು. ಅಲ್ಲದೆ ಗೌರಿಯೊಡನೆ ಯಾವಾಗಲೂ ಇಲ್ಲಿ ವಾಸಮಾಡು.

೮. ಎಲೈ ಬ್ರಹ್ಮನ ಮಾನಸ ಪುತ್ರರಾದ ಸಪ್ತ ಋಷಿಗಳಿರಾ? ನೀವು ಜ್ಞಾನದಲ್ಲಿಯೂ ಕೌಶಲ್ಯದಲ್ಲಿಯೂ ಬುದ್ಧಿಶಾಲಿಗಳು. ನಿಮ್ಮ ನಿಮ್ಮ ಯೋಗಾಭ್ಯಾಸ ಬಲದಿಂದ ಏಳು ತೀರ್ಥಗಳನ್ನು ರಚಿಸಿರಿ.

ನಿಗಮೋದ್ಬೋಧಕಂ ತೀರ್ಥಂ ತ್ವಂ ಗುರೋ ಪ್ರತಿಪಾದಯ ।
ವಿನಾಧ್ಯಯನಮಪ್ಯತ್ರ ಸ್ನಾನಾದ್ಬೋಧೋಽಸ್ತು ಛಂದಸಾಂ ॥ ೯ ॥

ಸ್ಮೃತಿಶ್ಚ ಜಾಯತಾಂ ಪೂರ್ವಜನ್ಮನಸ್ತು ಪರಾತ್ಮನಃ ।
ಅಹಮಾರೋಪಯಾಮ್ಯತ್ರ ದ್ವಾರಕಾಂ ಸುಮನೋಹರಾಂ ॥ ೧೦ ॥

ಸಮುದ್ರೇಣ ಸಮಂ ಯತ್ರ ಗೋಮತ್ಯಾಸ್ಸಂಗಮೋಽಭವತ್ ।
ಕೋಶಲಾಂ ಚ ಕರೋಮ್ಯತ್ರ ಮಧ್ವರಣ್ಯಂ ಚ ವಾಸವ ॥ ೧೧ ॥

ಯಯೋರವತರಿಷ್ಯಾಮಿ ವಪುರ್ಭ್ಯಾಂ ರಾಮಕೃಷ್ಣಯೋಃ ।
ಬದರ್ಯಾಶ್ರಮಮಪ್ಯತ್ರ ನರನಾರಾಯಣಾಸ್ಪದಂ ॥ ೧೨ ॥

ವಿದಧಾಮಿ ಸದಾ ಯತ್ರ ವಸಾಮಿ ಸುರನಾಯಕ ।
ಹರಿದ್ವಾರಂ ಪುಷ್ಕರಂ ಚ ತೀರ್ಥದ್ವಯಮನುತ್ತಮಂ ॥ ೧೩ ॥

---

೯. ಎಲೈ ಬೃಹಸ್ಪತಿಯೇ ! ನೀನು ಇಲ್ಲಿ ನಿಗಮೋದ್ಬೋಧಕ ತೀರ್ಥ ವೆಂಬ ಒಂದು ತೀರ್ಥವನ್ನು ರಚಿಸು. ಅದರಲ್ಲಿ ಸ್ನಾನಮಾಡಿದ ಒಡನೆಯೇ ವೇದಗಳ ಜ್ಞಾನವೂ ಜ್ಞಾಪಕವೂ ಉಂಟಾಗಲಿ.

೧೦. ಅಲ್ಲದೆ ಇಲ್ಲಿ ಸ್ನಾನ ಮಾಡಿದವರಿಗೆ ಪೂರ್ವ ಜನ್ಮದ ಮತ್ತು ಪರ ಮಾತ್ಮನ ಜ್ಞಾನವೂ ಉಂಟಾಗಲಿ. ನಾನೂ ಇಲ್ಲಿಯೇ ಮನೋಹರವಾದ ದ್ವಾರಕೆಯೆಂಬ ಪಟ್ಟಣವನ್ನು ರಚಿಸುತ್ತೇನೆ.

೧೧. ಆ ದ್ವಾರಕೆಯನ್ನು ಗೋಮತಿ ನದಿಯು ಸಮುದ್ರಕ್ಕೆ ಸಂಗಮ ವಾಗುವ ಜಾಗದಲ್ಲಿ ನಿರ್ಮಿಸುತ್ತೇನೆ. ಕೋಸಲ ದೇಶವನ್ನೂ ಚೆನ್ನಾಗಿರುವ ಮಧು ಎಂಬ ಅರಣ್ಯವನ್ನೂ ನಿರ್ಮಿಸುತ್ತೇನೆ.

೧೨. ನಾನು ರಾಮ ಕೃಷ್ಣರೆಂಬ ಅವತಾರಗಳಿಂದ ಆ ಕೋಸಲ ದ್ವಾರಕೆಗಳಲ್ಲಿ ಅವತಾರಮಾಡುತ್ತೇನೆ. ನರನಾರಾಯಣರು ತಪಸ್ಸುಮಾಡುವ ಬದರ್ಯಾಶ್ರಮವೂ ಇಲ್ಲಿಯೇ ಇರುವುದು.

೧೩. ಮತ್ತು ಹರಿದ್ವಾರ ಪುಷ್ಕರಗಳೆಂಬ ಉತ್ತಮ ತೀರ್ಥಗಳನ್ನು ಸೃಷ್ಟಿಸುತ್ತೇನೆ. ಮತ್ತು ಅಲ್ಲಿಯೇ ವಾಸವನ್ನೂ ಮಾಡಿಕೊಂಡಿರುತ್ತೇನೆ.

ತದಪಿ ಸ್ಥಾಪಯಾಮ್ಯತ್ರ ತವೈವ ಹಿತಕಾಮ್ಯಯಾ ।
ನೈಮಿಷೇ ಯಾನಿ ತೀರ್ಥಾನಿ ಯಾನಿ ಕಾಳಂಜರೇ ಗಿರೌ ।
ಸರಸ್ವತೀ ತಟೇ ಯಾನಿ ಸ್ಥಾಪಯಾಮ್ಯಹಮತ್ರ ವೈ ॥ ೧೪ ॥

॥ ಶ್ರೀ ನಾರದ ಉವಾಚ ॥

ಶಿಬೇ ಶಿವತರಂ ವಾಕ್ಯಂ ಹರೇಃ ಶ್ರುತ್ವಾ ಕೃತಂ ಚ ತತ್ ।
ದೃಷ್ಟ್ವಾ ತದುಕ್ತಮಪಿ ತೇ ಚಕ್ರುರ್ಬ್ರಹ್ಮಶಿವಾದಯಃ ॥ ೧೫ ॥

ಸರ್ವತೀರ್ಥಮಯೇಽಮುಷ್ಮಿನ್ ಸ್ಥಾನೇ ಸ ತ್ರಿದಶಾಧಿಪಃ ।
ಸ್ವರ್ಣಯೂಪೈರ್ಬಹುಮಖೈರೀಜೇ ಭೂಯೋ ರಮಾಪತಿಂ ॥ ೧೬ ॥

ರತ್ನಪ್ರಸ್ಥಾನಿ ವಿಪ್ರೇಭ್ಯಃ ಕೃಷ್ಣಸ್ಯ ಪುರತೋ ದದೌ ।
ನಾರಾಯಣಃ ಸಮಸ್ತಾತ್ಮಾ ಮಮಾಯಮಿತಿ ತುಷ್ಯತು ॥ ೧೭ ॥

---

೧೪. ಎಲೈ ವಾಸವನೇ ! ನಿನ್ನ ಹಿತಕ್ಕೋಸ್ಕರ ಆ ಎರಡು ತೀರ್ಥಗಳನ್ನು ಇಲ್ಲಿಯೇ ತಂದು ಇಡುತ್ತೇನೆ. ನೈಮಿಷ ಕಾಳಂಜರಗಿರಿ, ಸರಸ್ವತೀ ತೀರಗಳಲ್ಲಿ ಯಾವ ಯಾವ ತೀರ್ಥಗಳಿವೆಯೋ ಅವೆಲ್ಲವನ್ನೂ ಇಲ್ಲಿಯೇ ತಂದು ಇಡುತ್ತೇನೆ.

೧೫. ಶ್ರೀ ನಾರದನು ಹೇಳಿದನು- ಎಲೈ ಶಿಬಿಯೇ ! ಅವರೆಲ್ಲರೂ ಆ ಹರಿಯ ಮಂಗಳಕರವಾದ ಮಾತನ್ನು ಕೇಳಿದರು. ಅವನು ಹೇಳಿದಂತೆ ಬ್ರಹ್ಮ ಶಿವಾದಿಗಳೆಲ್ಲರೂ ಮಾಡಿದರು.

೧೬. ಸಮಸ್ತ ತೀರ್ಥಗಳಿಂದ ಕೂಡಿರುವ ಈ ಜಾಗದಲ್ಲಿ ಆ ದೇವೇಂದ್ರನು ಚಿನ್ನದ ಯೂಪಸ್ತಂಭಗಳನ್ನು ನೆಟ್ಟು ಅನೇಕ ಯಾಗಗಳಿಂದ ವಿಷ್ಣುವನ್ನು ಪೂಜಿಸಿ ತೃಪ್ತಿಪಡಿಸಿದನು.

೧೭. ಎಲ್ಲರಲ್ಲಿಯೂ ಆತ್ಮರೂಪದಿಂದ ಸೇರಿಕೊಂಡಿರುವ ನಾರಾಯಣನು ನನ್ನ ವಿಷಯದಲ್ಲಿ ಸಂತೋಷವನ್ನು ಹೊಂದಲಿ ಎಂಬುದಾಗಿ ಬಳ್ಳಗಳ ಅಳತೆಯಲ್ಲಿ ರತ್ನಗಳನ್ನು ವಿಷ್ಣುವಿನ ಎದುರಿಗೇನೇ ಬ್ರಾಹ್ಮಣರಿಗೆ ಕೊಟ್ಟನು.

ಇಂದ್ರಪ್ರಸ್ಥಮಿದಂ ತೀರ್ಥಂ ತತಃ ಪ್ರಭೃತಿ ಕಥ್ಯತೇ ।
ಸರ್ವತೀರ್ಥಮಯೇ ಯತ್ರ ಮೃತೋ ಭೂಯೋ ನ ಜಾಯತೇ ॥ ೧೮ ॥

ಇಂದ್ರದತ್ತಾನಿ ತೇ ಲಬ್ಧ್ವಾ ರತ್ನಪ್ರಸ್ಥಾನಿ ಭೂಸುರಾಃ ।
ತಸ್ಮೈ ದದುರವಿತಥಾಮಾಶಿಷಂ ತತ್ರ ಸಂಸದಿ ॥ ೧೯ ॥

ಇಂದ್ರಾಯ ತವ ಗೋವಿಂದೋ ದಾನೇನಾನೇನ ತುಷ್ಯತು ।
ತಾವಕೀ ಭಕ್ತಿರಸ್ಮಿನ್ ಭೂಯಾದವ್ಯಭಿಚಾರಿಣೀ ॥ ೨೦ ॥

ಕರ್ಮಭೂಮಾವಿಹ ವಿಭೋ ಪುರಾ ಯಜ್ಞಶತಂ ಕೃತಂ ।
ತೇನ ಪುಣ್ಯೇನ ಲಬ್ಧಂ ತೇ ಸಕಾಮೇನ ಸುರಾಸ್ಪದಂ ॥ ೨೧ ॥

ಅಧುನಾ ಪೂಜಿತೋ ವಿಷ್ಣುಃ ನಿಷ್ಕಾಮೇಣ ತ್ವಯಾ ಮಖೈಃ ।
ಸ್ವಪದಾದ್ವಿಚ್ಯುತೋ ಭೂಮೌ ಭವಿಷ್ಯತಿ ದ್ವಿಜಾಗ್ರಣೀಃ ॥ ೨೨ ॥

---

೧೮. ಅದು ಮೊದಲುಗೊಂಡು ಈ ತೀರ್ಥಕ್ಕೆ ಇಂದ್ರಪ್ರಸ್ಥವೆಂದು ಹೆಸರು ಬಂದು ಪ್ರಸಿದ್ಧವಾಗಿದೆ. ಸರ್ವತೀರ್ಥಗಳ ಸ್ವರೂಪವಾಗಿರುವ ಈ ಸ್ಥಳದಲ್ಲಿ ಸತ್ತವನು ಮತ್ತೆ ಹುಟ್ಟುವುದಿಲ್ಲ.

೧೯. ಆ ಬ್ರಾಹ್ಮಣರು ಇಂದ್ರನು ಕೊಟ್ಟ ರತ್ನಗಳನ್ನು ತೆಗೆದುಕೊಂಡು ಆ ಇಂದ್ರನಿಗೆ ಆ ಸಭೆಯಲ್ಲಿಯೇ ಸುಳ್ಳಾಗದ ಆಶೀರ್ವಾದಗಳನ್ನು ಮಾಡಿದರು.

೨೦. ಈ ದಾನದಿಂದ ಇಂದ್ರನ ವಿಷಯದಲ್ಲಿ ಗೋವಿಂದನು ಸಂತೋಷ ಗೊಳ್ಳಲಿ. ಮತ್ತು ನಿನ್ನ ಭಕ್ತಿಯು ಕೂಡ ಆ ಸ್ವಾಮಿಯಲ್ಲಿ ವ್ಯತ್ಯಾಸವಿಲ್ಲದೇ ಇರಲಿ.

೨೧. ಎಲೈ ವಿಭುವೇ ! ಈ ಕರ್ಮಭೂಮಿಯಲ್ಲಿ ಪೂರ್ವದಲ್ಲಿ ನೀನು ನೂರು ಯಾಗಗಳನ್ನು ಮಾಡಿದ್ದೆ. ಕಾಮನಾರೀತಿಯಿಂದ ನೀನು ಮಾಡಿದುದ ರಿಂದ ನಿನಗೆ ಈ ದೇವೇಂದ್ರ ಪದವಿಯು ಸಿಕ್ಕಿತು.

೨೨. ಈಗ ನಿಷ್ಕಾಮರೀತಿಯಿಂದ ನೀನು ಯಾಗಗಳನ್ನು ಮಾಡಿ ಆ ವಿಷ್ಣುವನ್ನು ಪೂಜಿಸಿದ್ದೀಯೆ. ಆದ್ದರಿಂದ ನಿನ್ನ ಆ ಇಂದ್ರಪದವಿಯಿಂದ ಚ್ಯುತನಾದ ಮೇಲೆ ಭೂಮಿಯಲ್ಲಿ ಬ್ರಾಹ್ಮಣಶ್ರೇಷ್ಠನಾಗಿ ಹುಟ್ಟುತ್ತೀಯೆ.

**ತತ್ರಾಪಿ ನಿಜಧರ್ಮೇಣ ವಿಷ್ಣುಮಾರಾಧಯನ್ ಭವಾನ್ ।**
**ಸ್ಮರಿಷ್ಯತಿ ನಿಜಂ ಕರ್ಮ ಕೃತಮತ್ರಮಖಾದಿಕಂ ॥ ೨೩ ॥**

**ತತಸ್ಸ್ಮೃತೋ ಗೃಹಮುತ್ಸೃಜ್ಯ ಭವಾಂಸ್ತೀರ್ಥಾನಿ ಪರ್ಯಟನ್ ।**
**ಜನಕೇನ ಸಮಂ ಶಕ್ರ ತೀರ್ಥೇಸ್ಮಿನ್ ಸಂಪ್ರಪತ್ಸ್ಯತೇ ॥ ೨೪ ॥**

**ಚತುರ್ಥಾಶ್ರಮಮಾದಾಯ ತ್ಯಕ್ಷ್ಯತ್ಯತ್ರ ಕಳೇಬರಂ ।**
**ತತೋ ವಿಮಾನಮಾರುಹ್ಯ ಗಣಾನೀತಂ ರವಿಪ್ರಭಂ ।**
**ಭವಾನ್ ದಿವ್ಯಾಂಗವಾನ್ ಭೂತ್ವಾ ಪ್ರಾಪ್ಸ್ಯಸಿ ಶ್ರೀಹರೇಃ ಪದಂ ॥ ೨೫ ॥**

**॥ ಶ್ರೀ ನಾರದ ಉವಾಚ ॥**

**ಏವಮಾಕರ್ಣ್ಯ ವಿಪ್ರಾಣಾಮಾಶಿಷಂ ತ್ರಿದಶಾಧಿಪಃ ।**
**ಭವಿಷ್ಯಪಿಶು ನಾಂ ಚೋಕ್ತ್ವಂ ಶಿಬೇ ಮುದಮುಗಾತ್ತರಾಂ । ॥ ೨೬ ॥**

---

೨೩. ಆ ಭೂಮಿಯಲ್ಲಿಯೂ ಕೂಡ ನಿನ್ನ ಸ್ವಧರ್ಮದಿಂದ ವಿಷ್ಣುವನ್ನು ಪೂಜಿಸುತ್ತೀಯೆ. ಮತ್ತು ಈಗ ಮಾಡಿದ ಕರ್ಮಗಳಿಂದ ಈ ಯಾಗಗಳನ್ನು ಸ್ಮರಿಸಿಕೊಳ್ಳುತ್ತೀಯೆ.

೨೪. ಆ ಯಾಗಾದಿಗಳ ಜ್ಞಾಪಕಬಂದೊಡನೆಯೇ ನೀನು ಮನೆಯನ್ನು ಬಿಟ್ಟು ತೀರ್ಥಯಾತ್ರೆಗಳನ್ನು ಮಾಡುತ್ತೀಯೆ. ಆಗ ನಿನ್ನ ತಂದೆಯೊಡನೆ ಈ ಕ್ಷೇತ್ರಕ್ಕೂ ಬರುತ್ತೀಯೆ.

೨೫. ಆಗ ಈ ಕ್ಷೇತ್ರದಲ್ಲಿಯೇ ನಾಲ್ಕನೆಯ ಆಶ್ರಮವಾದ ಸನ್ಯಾಸವನ್ನು ಸ್ವೀಕರಿಸುತ್ತೀಯೆ. ಅದರಲ್ಲಿಯೇ ಮೃತನಾಗುತ್ತೀಯೆ. ಆಗ ಮೇಲಿನಿಂದ ಸೂರ್ಯಕಾಂತಿಯುಳ್ಳ ಉತ್ತಮವಾದ ವಿಮಾನವು ಬರುತ್ತದೆ. ಅದನ್ನು ಗಣಗಳು ತರುತ್ತಾರೆ. ನೀನೂ ಕೂಡ ನಿನ್ನ ಪುಣ್ಯದಿಂದ ಉತ್ತಮವಾದ ಶರೀರವನ್ನು ಹೊಂದಿ ಆ ವಿಮಾನದಲ್ಲಿ ಕುಳಿತು ಶ್ರೀಹರಿಯ ಪದವಾದ ವೈಕುಂಠವನ್ನು ಹೊಂದುತ್ತೀಯೆ.

೨೬. ಶ್ರೀ ನಾರದನು ಹೇಳಿದನು- ಎಲೈ ಶಿಬಿಯೇ ! ಭವಿಷ್ಯವಿಷಯವನ್ನು ಸೂಚಿಸುವ ಈ ಬ್ರಾಹ್ಮಣರ ಆಶೀರ್ವಾದವನ್ನು ಕೇಳಿ ಇಂದ್ರನು ಹೆಚ್ಚಾಗಿ ಸಂತೋಷಪಟ್ಟನು.

ಸಮಾಪ್ಯ ವಿಧಿವದ್ಯಜ್ಞಾನತ್ರ ಸೌವರ್ಣಯುಷ್ಟಿಕಾನ್ ।
ಮಾಧವಪ್ರಮುಖಾನ್ ದೇವಾನ್ ಪೂಜಿತಾನ್ ಸ ವ್ಯಸರ್ಜಯತ್ ॥ ೨೭ ॥

ಋತ್ವಿಜೋ ಬ್ರಹ್ಮಣಃ ಪುತ್ರಾನಭ್ಯರ್ಚ್ಯ ಚ ಧನಾದಿಭಿಃ ।
ಬೃಹಸ್ಪತಿಂ ಪುರಸ್ಕೃತ್ಯ ಯಯೌ ಶಕ್ರಸ್ತ್ರಿವಿಷ್ಟಪಂ ॥ ೨೮ ॥

ತತ್ರ ರಾಜ್ಯಂ ವಿಧಾಯೇಂದ್ರೋ ಹರಿಭಕ್ತಿಯುತಃ ಶಿಬೇ ।
ಅವಾತರದ್ಭುವಿ ಕ್ಷೀಣೇ ಪುಣ್ಯೇ ಹಸ್ತಿನಪತ್ತನೇ ॥ ೨೯ ॥

ಶಿವಶರ್ಮಾ ದ್ವಿಜಃ ಕಶ್ಚಿದ್ವೇದವೇದಾಂಗಪಾರಗಃ ।
ತಸ್ಯ ಭಾರ್ಯಾ ಗುಣವತೀ ನಾಮ್ನಾ ತ್ವರ್ಥವತೀ ಭೃಶಂ ॥ ೩೦ ॥

ತಸ್ಯಾಂ ಜಾತಃ ಸುವೇಲಾಯಾಮಿಂದ್ರಃ ಶ್ರೀಪತಿಸೇವಕಃ ।
ಜ್ಯೋತಿರ್ವಿದಸ್ಸಮಾಹೂತಾ ಲಗ್ನಂ ದೃಷ್ಟ್ವಾ ಬಭಾಷಿರೇ ॥ ೩೧ ॥

---

೨೭. ಆಗ ಆ ಇಂದ್ರನು ಇಲ್ಲಿ ಈ ಚಿನ್ನದ ಯೂಪಗಳನ್ನು ನೆಟ್ಟು ಕ್ರಮವಾಗಿ ಯಾಗಗಳನ್ನು ಮಾಡಿ ಮುಗಿಸಿ ಮಾಧವನೇ ಮುಂತಾದ ದೇವತೆಗಳನ್ನು ಪೂಜಿಸಿ ಅವರನ್ನು ಕಳುಹಿಸಿದನು.

೨೮. ಋತ್ವಿಕ್ಕುಗಳಾದ ಆ ಬ್ರಹ್ಮನ ಮಕ್ಕಳನ್ನೂ ಧನ, ವಸ್ತ್ರ ಮುಂತಾದುವುಗಳಿಂದ ಪೂಜಿಸಿ ಬೃಹಸ್ಪತಿಯನ್ನು ಮುಂದುಮಾಡಿಕೊಂಡು ಸ್ವರ್ಗಕ್ಕೆ ಹೋದನು.

೨೯. ಇಂದ್ರನು ಆ ಸ್ವರ್ಗದಲ್ಲಿ ರಾಜ್ಯಭಾರಮಾಡುತ್ತಿದ್ದು ಹರಿಭಕ್ತಿಯುಳ್ಳವನಾಗಿದ್ದನು. ಪುಣ್ಯವು ಕ್ಷೀಣವಾಗಲು ಭೂಮಿಗಿಳಿದು ಹಸ್ತಿನಾಪಟ್ಟಣದಲ್ಲಿ ಅವತಾರಮಾಡಿದನು.

೩೦. ಆ ಹಸ್ತಿನಾ ಪಟ್ಟಣದಲ್ಲಿ ಶಿವಶರ್ಮನೆಂಬೊಬ್ಬ ಬ್ರಾಹ್ಮಣನಿದ್ದನು. ಅವನು ವೇದವೇದಾಂಗಗಳಲ್ಲಿ ಬಹು ಪಂಡಿತನು. ಅವನಿಗೆ ಒಳ್ಳೆಯ ಗುಣಗಳಿಂದ ಕೂಡಿದ ಅರ್ಥಕ್ಕೆ ಅನುಸಾರವಾದ ಹೆಸರುಳ್ಳ ಗುಣವತಿಯೆಂಬ ಹೆಂಡತಿ ಇದ್ದಳು.

೩೧. ಶ್ರೀಪತಿ ಸೇವಕನಾದ ಇಂದ್ರನು ಒಳ್ಳೆಯ ವೇಳೆಯಲ್ಲಿ ಆವಳಲ್ಲಿ ಹುಟ್ಟಿದನು. ಆ ಶಿವಶರ್ಮನು ಜ್ಯೋತಿಷ್ಕರನ್ನು ಕರೆಸಲು ಅವರು ಲಗ್ನವನ್ನು ನೋಡಿ ಇಂತೆಂದರು.

॥ ಜ್ಯೋತಿರ್ವಿದ ಊಚುಃ ॥

ಶಿವಶರ್ಮನ್ನಯಂ ಬಾಲಸ್ತವ ಭಾವೀ ಹರಿಪ್ರಿಯಃ ।
ಉದ್ಧರಿಷ್ಯತಿ ತ್ವದ್ವಂಶಂ ಬ್ರೂಮಃ ಸತ್ಯಂ ನ ವೈ ಮೃಷಾ ॥ ೩೨ ॥

ತ್ರಯೋದಶಾಬ್ದದೇಹೋ ಯಃ ಸಾಂಗಂ ವೇದಚತುಷ್ಟಯಂ ।
ಅಧೀತ್ಯ ಜ್ಞಾನಸಂಪನ್ನೋ ವಿವಾಹಂ ತು ಕರಿಷ್ಯತಿ ॥ ೩೩ ॥

ಪುನರುತ್ಪಾದ್ಯ ಸತ್ಪುತ್ರಂ ವಾನಪ್ರಸ್ಥೋ ಭವಿಷ್ಯತಿ ।
ತೀರ್ಥೇಷು ಪರ್ಯಟನ್ ಧೀರಃ ಸನ್ಯಾಸಂ ಧಾರಯಿಷ್ಯತಿ ॥ ೩೪ ॥

ಇಂದ್ರಪ್ರಸ್ಥೇ ಖಾಂಡವವನೇ ಯಮುನಾಸ್ತಿ ಸರಿದ್ವರಾ ।
ತತ್ತೀರೇಸ್ತಿ ಹರಿಪ್ರಸ್ಥಂ ಮರಣಂ ತತ್ರ ಯಾಸ್ಯತಿ ॥ ೩೫ ॥

---

೩೨. ಜೋಯಿಸರು ಹೇಳಿದರು–ಎಲೈ ಶಿವಶರ್ಮನೇ ! ಈ ನಿನ್ನ ಮಗನು ಮುಂದೆ ಹರಿಭಕ್ತನಾಗುತ್ತಾನೆ. ನಿನ್ನ ವಂಶವನ್ನು ಉದ್ಧಾರ ಮಾಡುತ್ತಾನೆ. ನಾನು ಸುಳ್ಳನ್ನು ಹೇಳುವುದಿಲ್ಲ. ಇದು ಸತ್ಯವಾದ ಮಾತು.

೩೩. ಹದಿಮೂರು ವರ್ಷಗಳ ವೇಳೆಗೇನೇ ವೇದಗಳನ್ನೂ ವೇದಾಂಗ ಗಳನ್ನೂ ಅಧ್ಯಯನ ಮಾಡುತ್ತಾನೆ. ಈ ಓದಿನಿಂದ ಜ್ಞಾನವನ್ನು ಹೊಂದಿ ಅನಂತರ ವಿವಾಹವನ್ನು ಮಾಡಿಕೊಳ್ಳುತ್ತಾನೆ.

೩೪. ಗೃಹಸ್ಥಾಶ್ರಮದಲ್ಲಿ ಇದ್ದುಕೊಂಡು ಅದನ್ನು ಸಾಂಗವಾಗಿ ನೆರವೇರಿಸುತ್ತ ಅದರಲ್ಲಿ ಮಕ್ಕಳನ್ನು ಹೊಂದಿ ವಾನಪ್ರಸ್ಥಾಶ್ರಮವನ್ನು ಹೊಂದು ತ್ತಾನೆ. ಅನಂತರ ತೀರ್ಥಯಾತ್ರೆಗಳನ್ನು ಮಾಡುತ್ತ ಸನ್ಯಾಸವನ್ನು ಸ್ವೀಕರಿಸುತ್ತಾನೆ.

೩೫. ಇಂದ್ರನ ಖಾಂಡವವನದಲ್ಲಿ ಶ್ರೇಷ್ಠವಾದ ಯಮುನಾನದಿ ಇರುವುದು. ಅದರ ದಡದಲ್ಲಿ ಇಂದ್ರಪ್ರಸ್ಥವೆಂಬ ಪಟ್ಟಣ ಒಂದಿರುವುದು. ಅಲ್ಲಿ ಈತನು ಮರಣವನ್ನು ಹೊಂದುತ್ತಾನೆ.

|| ನಾರದ ಉವಾಚ ||

ಗಣಕೋದಿತಮಾಕರ್ಣ್ಯ ಶಿವಶರ್ಮಾ ಶಿವಂ ವಚಃ |
ಚಕಾರ ವಿಷ್ಣುಶರ್ಮಾಣಂ ನಾಮ್ನಾ ನಿಜಸುತಂ ತದಾ || ३೬ ||

ತಾನ್ವಿಸೃಜ್ಯ ಚ ವಿತ್ತೇನ ಚಿಂತಯಾಮಾಸ ಬುದ್ಧಿಮಾನ್ |
ಧನ್ಯೋಽಹಂ ಯಸ್ಯ ಮೇ ಪುತ್ರೋ ವಿಷ್ಣುಭಕ್ತೋ ಭವಿಷ್ಯತಿ || ३೭ ||

ಸಾಧಯಿಷ್ಯತಿ ಪುತ್ರೋಽಯಮಾಶ್ರಮಾಂಶ್ಚತುರೋ ಮಮ |
ಮರಿಷ್ಯತಿ ಚ ಸತ್ತೀರ್ಥೇ ಮದನ್ಯಃ ಕೋಽಸ್ತಿ ಭಾಗ್ಯವಾನ್ || ३೮ ||

ಏವಂ ವಿಚಿಂತ್ಯ ಮನಸಾ ಜಾತಕರ್ಮಾದ್ಯಕಾರಯತ್ |
ಶಿಶೋರ್ದ್ವಿಜಾತಿಪ್ರವರೈಃ ಶಿವಶರ್ಮಾ ಶುಭೇಽಹನಿ || ३೯ ||

ಅಥ ಸಪ್ತಸ್ವತೀತೇಷು ವರ್ಷೇಷು ದ್ವಿಜಸತ್ತಮ |
ಸುತೋಪನಯನಂ ಚಕ್ರೇ ಚೈತ್ರಮಾಸ್ಯಷ್ಟಮೇಽಬ್ದಕೇ || ೪೦ ||

---

३೬. ನಾರದನು ಹೇಳಿದನು-ಆಗ ಆ ಶಿವಶರ್ಮನು ಜೋಯಿಸನು ಹೇಳಿದ ಆ ಉತ್ತಮವಾದ ಮಾತುಗಳನ್ನು ಕೇಳಿ ತನ್ನ ಮಗನಿಗೆ ವಿಷ್ಣುಶರ್ಮನೆಂದು ಹೆಸರಿಟ್ಟನು.

३೭. ಅವರಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಕಳುಹಿಸಿಬಿಟ್ಟು ಆತನು ನಾನು ಧನ್ಯನು. ಏತಕ್ಕೆಂದರೆ ನನ್ನ ಮಗನು ಈ ರೀತಿಯಾದ ವಿಷ್ಣುಭಕ್ತನಾಗುವನಲ್ಲ! ಎಂಬುದಾಗಿ ಯೋಚಿಸಿದನು.

३೮. ನನ್ನ ಮಗನು ಬ್ರಾಹ್ಮಣರಿಗೆ ಉತ್ತಮವಾಗಿರುವ ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥ ಸನ್ಯಾಸ ಈ ನಾಲ್ಕು ಆಶ್ರಮಗಳನ್ನೂ ಸಾಧಿಸಿಕೊಂಡು ಕೊನೆಗೆ ಉತ್ತಮವಾದ ತೀರ್ಥದಲ್ಲಿ ಮರಣವನ್ನು ಹೊಂದುವನಲ್ಲ! ಇಂತಹ ಮಗನನ್ನು ಪಡೆದ ನನಗಿಂತಲೂ ಭಾಗ್ಯವಂತರು ಮತ್ತೆ ಯಾರಿರುವರು!

३೯. ಈ ರೀತಿಯಾಗಿ ಯೋಚಿಸುತ್ತ ಆತನು ಮಗನಿಗೆ ಒಳ್ಳೆಯ ದಿನದಲ್ಲಿ ಬ್ರಾಹ್ಮಣರನ್ನು ಕರೆಯಿಸಿ ಜಾತಕರ್ಮ ನಾಮಕರಣಗಳನ್ನು ಮಾಡಿಸಿದನು.

೪೦. ಹೀಗಿರುತ್ತಿರಲು ಏಳು ವರ್ಷಗಳು ಕಳೆದು ಎಂಟನೆಯ ವರ್ಷವು ಆ ಹುಡುಗನಿಗೆ ನಡೆಯುತ್ತಿರುವಾಗ ಚೈತ್ರ ಮಾಸದಲ್ಲಿ ಉಪನಯನವನ್ನು ಮಾಡಿದನು.

ಆದ್ವಾದಶಾಬ್ದಾದಧ್ಯಾಪ್ಯ ವೇದಾನಂಗವತಸ್ಸುತಂ ।
ಶಿವಶರ್ಮಾ ಶಿವೇ ರಾಜ್ಞ ಯುಯೋಜ ಸಹ ಭಾರ್ಯಯಾ ॥ ೪೧ ॥

ವಿಷ್ಣುಶರ್ಮಾ ಸ್ವಭಾರ್ಯಾಯಾಂ ಪುತ್ರಮುತ್ಪಾದ್ಯ ಬುದ್ಧಿಮಾನ್ ।
ಚಕಾರ ತೀರ್ಥಯಾತ್ರಾಯಾಂ ಮನೋ ನಿರ್ವಿಷಯಂ ಸ್ವಕಂ ॥ ೪೨ ॥

ಅಭ್ಯೇತ್ಯ ಪಿತರಂ ಪ್ರಾಹ ನತ್ವಾ ತಚ್ಚರಣದ್ವಯಂ ।
ವಿಷ್ಣುಶರ್ಮಾ ಮಹಾಪ್ರಾಜ್ಞೋ ಮುನಿವಾಕ್ಯಮನುಸ್ಮರನ್ ॥ ೪೩ ॥

॥ ವಿಷ್ಣುಶರ್ಮೋವಾಚ ॥

ಅನುಜಾನೀಹಿ ಮಾಂ ತಾತ ವಿಷ್ಣುಮಾರಾಧಯಾಮ್ಯಹಂ ।
ತೃತೀಯಾಶ್ರಮಮಾಸಾದ್ಯ ಸತ್ಸಂಗತಿವಿಧಾಯಕಂ ॥ ೪೪ ॥

ದಾರಾಗಾರಧನಾಪತ್ಯಸುಹೃದಃ ಕ್ಷಣಭಂಗುರಾಃ ।
ಬುದ್ಬುದಾ ಇವ ತೋಯೇಷು ಸುಧೀಸ್ತೇಷು ನ ಸಜ್ಜತೇ ॥ ೪೫ ॥

---

೪೧. ಅನಂತರ ಹನ್ನೆರಡುವರ್ಷಗಳವರೆವಿಗೂ ವೇದ ವೇದಾಂಗಗಳನ್ನು ಅಧ್ಯಯನಮಾಡಿಸಿ ಆ ಶಿವಶರ್ಮನು ಮಗನಿಗೆ ಮದುವೆಯನ್ನು ಮಾಡಿದನು.

೪೨. ವಿಷ್ಣುಶರ್ಮನಿಗೆ ತನ್ನ ಹೆಂಡತಿಯಲ್ಲಿ ಮಕ್ಕಳಾಗಲು ತಾನು ತನ್ನ ಮನಸ್ಸನ್ನು ವಿಷಯ ಸುಖಗಳಿಂದ ಬೇರ್ಪಡಿಸಿ ತೀರ್ಥಯಾತ್ರೆಯಲ್ಲಿ ಮನಸ್ಸಿಟ್ಟನು.

೪೩. ಆಗ ವಿಷ್ಣುಶರ್ಮನು ತಂದೆಯ ಬಳಿಗೆ ಬಂದು ಆತನ ಪಾದಗಳಿಗೆ ನಮಸ್ಕರಿಸಿ ಮುನಿಗಳ ಮಾತನ್ನು ಜ್ಞಾಪಿಸಿಕೊಳ್ಳುತ್ತ ಇಂತೆಂದನು.

೪೪. ವಿಷ್ಣುಶರ್ಮನು ಹೇಳಿದನು-ಎಲೈ ತಂದೆಯೆ! ಮೂರನೆಯ ಆಶ್ರಮವಾದ ವಾನಪ್ರಸ್ಥವನ್ನು ಹೊಂದಿ ಅಲ್ಲಿ ಸತ್ಪುರುಷರ ಸಹವಾಸದಲ್ಲಿದ್ದು ಕೊಂಡು ವಿಷ್ಣುವನ್ನು ಆರಾಧಿಸುತ್ತೇನೆ ನನಗೆ ಅನುಜ್ಞೆಯನ್ನು ದಯಪಾಲಿಸು.

೪೫. ಹೆಂಡತಿ ಮನೆ ಹಣ ಮಕ್ಕಳು ಸ್ನೇಹಿತರು ಇವರು ಕ್ಷಣಕಾಲವಿದ್ದು ನಾಶವಾಗುವವರು. ನೀರಿನ ಮೇಲಿರುವ ಗುಳ್ಳೆಗಳಂತೆ ಇರುವವರು. ಇವೊಂದ ರಲ್ಲಿಯೂ ಬುದ್ಧಿವಂತನಾದವನು ಸ್ನೇಹವನ್ನಿಡುವುದಿಲ್ಲ.

ಸ್ವಾಧ್ಯಾಯೇನ ಚ ಸಂತತ್ಯಾ ಮಯಾ ತೀರ್ಣಂ ಋಣದ್ವಯಂ ।
ತೀರ್ಥೇಷು ಕಾಮರಹಿತೋ ಯಷ್ಟುಮಿಚ್ಛಾಮಿ ಕೇಶವಂ ॥ ೪೬ ॥

ಸನ್ಯಸ್ತಗುಣರಾಗೋ ಹಿ ಪಶ್ಚಾತ್ತೀರ್ಥೋತ್ತಮೇ ಕ್ವಚಿತ್ ।
ಸ್ಥಾತುಮಿಚ್ಛಾಮ್ಯಹಂ ತಾವದ್ಯಾವತ್ಪ್ರಾರಬ್ಧಮಸ್ತಿ ಮೇ ॥ ೪೭ ॥

॥ ನಾರದ ಉವಾಚ ॥

ಇತ್ಯುಕ್ತಸ್ತೇನ ಪುತ್ರೇಣ ಸ ಪಿತಾ ಬುದ್ಧಿಮತ್ತರಃ ।
ಸ್ಮೃತ್ವಾ ಜ್ಯೋತಿರ್ವಿದಾಂ ವಾಕ್ಯಮಾಹ ಸಂಸಾರನಿಸ್ಪೃಹಃ ॥ ೪೮ ॥

॥ ಶಿವಶರ್ಮೋವಾಚ ॥

ಚತುರ್ಥಾಶ್ರಮಕಾಲೋಽಯಂ ಮಮಾಪಿ ನಿರಹಂಕೃತೇಃ ।
ವಿಷಯಾನ್ವಿಷವತ್ತ್ಯಕ್ತ್ವಾ ಸೇವಿಷ್ಯೇ ಕೇಶವಾಮೃತಂ ॥ ೪೯ ॥

---

೪೬. ವೇದಾಧ್ಯಯನದಿಂದ ಋಷಿಋಣವನ್ನೂ ಮಕ್ಕಳಿಂದ ಪಿತೃಋಣ ವನ್ನೂ ತೀರಿಸಿದ್ದೇನೆ. ತೀರ್ಥಗಳಲ್ಲಿದ್ದುಕೊಂಡು ನಿಷ್ಕಾಮ ಬುದ್ಧಿಯಿಂದ ಕೇಶವನನ್ನು ಪೂಜಿಸಲು ಅಪೇಕ್ಷೆಯಿದೆ.

೪೭. ಗುಣ ರಾಗಗಳನ್ನು ಬಿಟ್ಟು ಸನ್ಯಾಸವನ್ನು ಹೊಂದಿ ಅನಂತರ ಯಾವುದಾದರೂ ಒಂದು ತೀರ್ಥದಲ್ಲಿ ನನ್ನ ಪ್ರಾರಬ್ಧವೆಲ್ಲವೂ ನಾಶವಾಗುವ ವರೆವಿಗೂ ಇರಬೇಕೆಂದು ಇದ್ದೇನೆ.

೪೮. ನಾರದನು ಹೇಳಿದನು-ಮಗನು ಹೀಗೆಂದು ಹೇಳಲು ಬುದ್ಧಿ ವಂತನಾದ ತಂದೆಯು ಹಿಂದೆ ಜೋಯಿಸರು ಹೇಳಿದ್ದ ಮಾತನ್ನು ಜ್ಞಾಪಿಸಿಕೊಂಡು ಸಂಸಾರದಲ್ಲಿ ತಾನೂ ಆಸೆಯನ್ನು ತೊರೆದು ಮಗನನ್ನು ಕುರಿತು ಇಂತೆಂದನು.

೪೯. ಶಿವಶರ್ಮನು ಹೇಳಿದನು-ಅಹಂಕಾರವನ್ನು ಬಿಟ್ಟು ನಾಲ್ಕನೆಯದಾದ ಸನ್ಯಾಶಾಶ್ರಮವನ್ನು ಸ್ವೀಕರಿಸಲು ನನಗೂ ಇದು ಸರಿಯಾದ ಕಾಲವು. ಆದ್ದರಿಂದ ಈ ವಿಷಯ ಸುಖಗಳನ್ನು ವಿಷದಂತೆ ದೂರಮಾಡಿ ಕೇಶವನೆಂಬ ಅಮೃತವನ್ನು ಪಾನಮಾಡುತ್ತೇನೆ.

ಗೃಹೇ ಮಮ ಮನಃ ಪುತ್ರ ರಮತೇ ನಾದ್ಯ ವಾರ್ಧಕೇ ।
ಆನೀತಸ್ಯ ವನಾದ್ಬದ್ಧ್ವಾ ಗಜಸ್ಯೇವ ನೃಪಾಲಯೇ ॥ ೫೦ ॥

ತವಾನುಜಸ್ಸುಶರ್ಮಾಯಂ ಕುಟುಂಬಂ ಧಾರಯಿಷ್ಯತಿ ।
ಆವಾಭ್ಯಾಮುಜ್ಝಿತಂ ವಿದ್ಯಾಶ್ರೀಕುಲಾಭ್ಯಾಂ ಯಥಾ ನರಂ ॥ ೫೧ ॥

ಪ್ರವ್ರಜಂತಂ ತು ಮಾಮೇವ ತವ ಮಾತಾ ಪತಿವ್ರತಾ ।
ಅನುಯಾಸ್ಯತಿ ಮಾರ್ತಂಡಂ ಯಥಾ ಕಾನ್ತಿರ್ದಿನಾತ್ಯಯೇ ॥ ೫೨ ॥

ತಸ್ಮಾದಾವಾಮವಿಜ್ಞಾತೌ ತಯಾ ತಾತ ತವಾಂಬಯಾ ।
ಗಚ್ಛಾವಶ್ಚಿಂತಯಂತೌ ಶ್ರೀಹರೇಃ ಪಾದಸರೋರುಹಂ ॥ ೫೩ ॥

॥ ನಾರದ ಉವಾಚ ॥

ಇತ್ಯಾಲೋಚ್ಯ ಮುಮುಕ್ಷೂ ತೌ ನಿಶೀಥೇ ತಮಸಾವೃತೇ ।
ಸುಪ್ತಂ ಕುಟುಂಬಮುತ್ಸೃಜ್ಯ ಗೃಹಾನ್ನಿರ್ಯಾಯ ಜಗ್ಮತುಃ ॥ ೫೪ ॥

---

೫೦. ಎಲೈ ಪುತ್ರನೇ! ಕಾಡಿನಿಂದ ತಂದು ಅರಮನೆಯಲ್ಲಿ ಕಟ್ಟಿಹಾಕಿರುವ ಆನೆಯಂತೆ ನನ್ನ ಮನಸ್ಸು ಮನೆಯಲ್ಲಿ ಈ ಮುಪ್ಪಿನಲ್ಲಿ ಸುಖಪಡುವುದಿಲ್ಲ.

೫೧. ನಾವಿಬ್ಬರೂ ಬಿಟ್ಟ ಈ ಕುಟುಂಬವನ್ನು ನಿನ್ನ ತಮ್ಮನಾದ ಸುಶರ್ಮನು ವಿದ್ಯೆಯೂ ಸಂಪತ್ತೂ ಮನುಷ್ಯನನ್ನು ಸೇರುವಂತೆ ಹೊಂದುತ್ತಾನೆ. ಕಾಪಾಡಿಕೊಳ್ಳುತ್ತಾನೆ.

೫೨-೫೩. ಸಾಯಂಕಾಲದಲ್ಲಿ ಕಾಂತಿಯು ಮುಳುಗುತ್ತಿರುವ ಸೂರ್ಯನನ್ನು ಅನುಸರಿಸಿ ಹೋಗುವಂತೆ ಪತಿವ್ರತೆಯಾದ ಈ ನಿನ್ನ ತಾಯಿಯು ಸನ್ಯಾಸವನು ಹೊಂದಿ ಹೋಗುವ ನನ್ನನ್ನೇ ಅನುಸರಿಸುತ್ತಾಳೆ. ಆದ್ದರಿಂದ ನಿಮ್ಮ ತಾಯಿಗೆ ತಿಳಿಯದಂತೆಯೇ ನಾವಿಬ್ಬರೂ ಶ್ರೀ ಹರಿಯನ್ನು ಧ್ಯಾನಿಸುತ್ತ ಹೊರಟು ಹೋಗಬೇಕು.

೫೪. ನಾರದನು ಹೇಳಿದನು–ಮೋಕ್ಷಾಪೇಕ್ಷಿಗಳಾದ ಅವರಿಬ್ಬರೂ ಹೀಗೆಂದು ಯೋಚನೆ ಮಾಡಿ ರಾತ್ರಿಯಲ್ಲಿ ಕತ್ತಲೆಯು ಹೆಚ್ಚಿದಮೇಲೆ ಮನೆಯವ ರೆಲ್ಲರೂ ಮಲಗಿರುವಾಗ ಅವರನ್ನು ಬಿಟ್ಟು ಮನೆಯಿಂದ ಹೊರಟು ಹೋದರು.

ಸಹೈವ ಪರ್ಯಟಂತೌ ತೌ ತತ್ತೀರ್ಥೇ ನಿರಹಂಕೃತೀ ।
ಶಿಬೇತ್ರ ಶಿವದೇ ತೀರ್ಥೇ ಶಕ್ರಪ್ರಸ್ಥೇ ಸಮೀಯತುಃ ॥ ೫೫ ॥

ಅತ್ರಾಗತಸ್ಸ್ವನಿಹಿತಾನ್ ಪೂರ್ವಜನ್ಮನಿ ಯೂಪಕಾನ್ ।
ವಿಷ್ಣುಶರ್ಮಾ ಸಮಾಲೋಕ್ಯ ಸಸ್ಮಾರ ಹರಿಸಂಗಮಂ ॥ ೫೬ ॥

ಊಚೇ ಚ ಪಿತರಂ ಧೀಮಾನ್ ಶಕ್ರ ಆಸಮಹಂ ಪುರಾ ।
ಮಯಾತ್ರ ವಿಹಿತಾ ಯಜ್ಞಾ ಮಾಧವಪ್ರೀಣನೇಚ್ಛಯಾ ॥ ೫೭ ॥

ಅತ್ರೈವ ಮೇ ಪ್ರಸನ್ನೋಽಭೂತ್ ಕೇಶವೋ ಭಕ್ತವತ್ಸಲಃ ।
ಸಂತೋಷಿತಾ ಮಣಿಪ್ರಸ್ಥೈಃ ದ್ವಿಜಾಸ್ಸಪ್ತರ್ಷಯಶ್ಚ ಮೇ ॥ ೫೮ ॥

ತೈರೇವ ವೈಷ್ಣವೀಭಕ್ತಿರ್ದತ್ತಾ ಮೋಕ್ಷೋ ಭವೇತ್ರ ಚ ।
ವಿಷ್ಣ್ವಾದಿಭಿಸ್ಸಮಸ್ತೈಸ್ತು ತೀರ್ಥಾನ್ಯತ್ರ ಕೃತಾನಿ ವೈ ॥ ೫೯ ॥

---

೫೫. ಅವರಿಬ್ಬರೂ ಅಹಂಕಾರಗಳನ್ನು ಬಿಟ್ಟು ಆ ತೀರ್ಥಗಳೆಲ್ಲೆಲ್ಲಾ ಜೊತೆಯಲ್ಲಿಯೇ ಸಂಚರಿಸುತ್ತಾ ಕೊನೆಗೆ ಮಂಗಳಕರವಾದ ಈ ಇಂದ್ರಪ್ರಸ್ಥ ತೀರ್ಥಕ್ಕೆ ಬಂದರು.

೫೬. ಅವರಿಬ್ಬರೂ ಇಲ್ಲಿಗೆ ಬಂದಾಗ ವಿಷ್ಣುಶರ್ಮನು ತಾನು ಯಾಗ ಮಾಡಿ ಪೂರ್ವಜನ್ಮದಲ್ಲಿ ನಟ್ಟಿರುವ ಯೂಪಗಳನ್ನು ನೋಡಿ ಅಲ್ಲಿಗೆ ಹರಿಯು ಬಂದಿದ್ದುದನ್ನೂ ಅವನು ವರಕೊಟ್ಟಿದ್ದುದನ್ನೂ ಜ್ಞಾಪಿಸಿಕೊಂಡನು.

೫೭. ಆಗ ಆ ಪಂಡಿತನು ತಂದೆಯನ್ನು ಕುರಿತು ಇಂತೆಂದನು. ಎಲೈ ತಂದೆಯೇ ! ನಾನು ಪೂರ್ವದಲ್ಲಿ ಇಂದ್ರನಾಗಿದ್ದೆನು. ಇಲ್ಲಿ ವಿಷ್ಣುವನ್ನು ತೃಪ್ತಿಪಡಿಸಿ ಅವನ ಅನುಗ್ರಹವನ್ನು ಹೊಂದಲು ಯಜ್ಞಗಳನ್ನು ಮಾಡಿದ್ದೆನು.

೫೮–೬೦. ಇಲ್ಲಿಯೇನೇ ಭಕ್ತವತ್ಸಲನಾದ ಕೇಶವನು ನನಗೆ ಪ್ರಸನ್ನನಾದನು. ನಾನು ಬ್ರಾಹ್ಮಣರನ್ನೂ ಸಪ್ತರ್ಷಿಗಳನ್ನೂ ಬಳ್ಳಗಟ್ಟಲೆಯಲ್ಲಿ ಮಣಿಗಳನ್ನು ಕೊಟ್ಟು ತೃಪ್ತಿಪಡಿಸಿದೆನು. ಅವರೇ ನನಗೆ ವಿಷ್ಣುಭಕ್ತಿಯನ್ನು ಕೊಟ್ಟು ಈ ಜನ್ಮದಲ್ಲಿ ಮೋಕ್ಷಬರುವಂತೆ ಅನುಗ್ರಹಿಸಿದರು. ವಿಷ್ಣುವೇ ಮುಂತಾದ ದೇವತೆಗಳೆಲ್ಲರೂ ಇಲ್ಲಿ ತೀರ್ಥವನ್ನು ಮಾಡಿದರು. ಈ ಇಂದ್ರಪ್ರಸ್ಥ ತೀರ್ಥವು

**ಸರ್ವತೀರ್ಥಮಯಂ ತೀರ್ಥಮಿಂದ್ರಪ್ರಸ್ಥಮಿದಂ ಕೃತಂ ।**
**ಅತ್ರೈವ ಮೇ ಮೃತಿಶ್ಚೋಕ್ತಾ ತೈರೇವಮುನಿಪುಂಗವೈಃ ॥ ೬೦ ॥**

**ತತೋ ಹರಿಪದಪ್ರಾಪ್ತಿರೇತತ್ಸರ್ವಂ ಸ್ಮರಾಮ್ಯಹಂ ।**
**ಇಮೇ ಗಂಗಾಸರಸ್ವತ್ಯೌ ನಿಜಲೋಕಾದ್ವಿರಿಂಚಿನಾ ॥ ೬೧ ॥**

**ಸಮಾನೀತೇ ಯಯೋರ್ಯೋಗೇ ಪ್ರಯಾಗೋಯಂ ನಿಗದ್ಯತೇ ।**
**ಏಷಾ ಕಾಶೀ ಶಿವಪುರೀ ಪ್ರಯಾಗಾತ್ಪೂರ್ವದೇಶಕೇ ॥ ೬೨ ॥**

**ದ್ವಿಪಂಚಾಶದ್ಧನುರ್ಮಾತ್ರೇ ಮೃತೋ ಯಸ್ಯಾಃ ನ ಜಾಯತೇ ।**
**ಕಾಶ್ಯಾಃ ಪಶ್ಚಿಮಕೇ ಭಾಗೇ ಧನುಷಾಮೇಕವಿಂಶತೌ ॥ ೬೩ ॥**

**ಶಿವಕಾಂಚೀ ಶಿವೇನೈಷಾ ಸ್ಥಾಪಿತಾ ಮೃತಮುಕ್ತಿದಾ ।**
**ಗೋಕರ್ಣಾಖ್ಯಮಿದಂ ಕ್ಷೇತ್ರಂ ಶಂಭೋಃ ಪರಮವಲ್ಲಭಂ ॥ ೬೪ ॥**

---

ಸರ್ವತೀರ್ಥಗಳ ಸ್ವರೂಪವಾಗಿ ಆಗಲೆಂದು ಹಾಗೆಯೇ ಮಾಡಿರುವರು. ಆ ಋಷಿಗಳೆಲ್ಲರೂ ಇಲ್ಲಿಯೇ ನಿನಗೆ ಮರಣವಾಗಲೆಂದೂ ಹೇಳಿರುವರು.

೬೧. ಅನಂತರ ವಿಷ್ಣುವಿನ ಸ್ಥಾನವಾದ ವೈಕುಂಠವೂ ದೊರೆಯುವುದೆಂದು ಹೇಳಿರುವರು. ಅವೆಲ್ಲವೂ ನನಗೆ ಜ್ಞಾಪಕಕ್ಕೆ ಬರುತ್ತಿದೆ. ಈ ಗಂಗೆ ಸರಸ್ವತಿಯರನ್ನೂ ಬ್ರಹ್ಮನು ತನ್ನ ಲೋಕದಿಂದಲೇ ತಂದಿರುವನು. ಅವುಗಳ ಸಂಬಂಧದಿಂದಲೇ ಈ ಸ್ಥಳವನ್ನು ಪ್ರಯಾಗವೆಂದು ಹೇಳುತ್ತಾರೆ

೬೨. ಈ ಪ್ರಯಾಗದಿಂದ ಪೂರ್ವಕ್ಕೆ ಶಿವಪುರಿಯಾದ ಕಾಶಿಯು ಇರುವುದು. ಈ ಊರಿನಲ್ಲಿಯೂ ಇದಕ್ಕೆ ಹೊರಗಡೆ ಇರುವ ಐವತ್ತೆರಡು ಧನುಸ್ಸಿನ ಪ್ರದೇಶಗಳಷ್ಟು ಜಾಗದಲ್ಲಿಯೂ ಸತ್ತವನು ಮತ್ತೆ ಜನ್ಮವನ್ನು ಎತ್ತುವುದಿಲ್ಲ.

೬೩. ಕಾಶಿಯ ಪಶ್ಚಿಮ ಭಾಗದಲ್ಲಿ ಇಪ್ಪತ್ತೊಂದು ಧನುಸ್ಸಿನ ಪ್ರಮಾಣದಷ್ಟು ದೂರದಲ್ಲಿ ಶಿವಕಾಂಚಿ ಎಂಬ ಕ್ಷೇತ್ರವನ್ನು ಶಿವನೇ ನಿರ್ಮಿಸಿದ್ದಾನೆ. ಅದೂ ಕೂಡ ತನ್ನಲ್ಲಿ ಮೃತರಾದವರಿಗೆ ಮುಕ್ತಿಯನ್ನು ಕೊಡುತ್ತದೆ.

೬೪-೬೫. ಇಲ್ಲಿ ಕಾಣುವ ಕ್ಷೇತ್ರವು ಗೋಕರ್ಣ ಕ್ಷೇತ್ರವು. ಇದು ಶಂಭುವಿಗೆ ಬಹು ಪ್ರೀತಿಕರವಾದುದು. ಇದು ಎರಡು ಧನುಸ್ಸಿನ ಪ್ರಮಾಣದ ಭೂಮಿ

**ಧನುರ್ದ್ವಯಪ್ರಮಾಣೇ ತು ಭೂಮಿಭಾಗೇ ವ್ಯವಸ್ಥಿತಂ ।**
**ಇಯಂ ದ್ವಾರವತೀ ಪುಣ್ಯಾ ತೀರ್ಥರಾಜಸ್ಯ ಪಶ್ಚಿಮೇ ॥ ೬೫ ॥**

**ಧನುಷಾಂ ಸಪ್ತತಿರ್ಯತ್ರ ಮೃತೋ ಭಾವೀ ಚತುರ್ಭುಜಃ ।**
**ಅತೋಽಸೌ ಪೂರ್ವದಿಗ್ಭಾಗೇ ಕೋಸಲಾ ಜನವತ್ಸಲಾ ॥ ೬೬ ॥**

**ಅಷ್ಟಾದಶಧನುರ್ಮಾತ್ರೇ ದೃಶ್ಯತೇ ಪುಣ್ಯದರ್ಶನಾ ।**
**ಏತನ್ಮಧುವನಂ ತಾತ ಸ್ಥಾಪಿತಂ ವಿಷ್ಣುನಾ ಸ್ವಯಂ ॥ ೬೭ ॥**

**ಕೋಸಲಾಪಶ್ಚಿಮೇ ಭಾಗೇ ದಶಚಾಪಪ್ರಮಾಣತಃ ।**
**ಅತ ಉತ್ತರತಸ್ತಾತ ನರನಾರಾಯಣಾಸ್ಪದಂ ॥ ೬೮ ॥**

**ಏತದೇಕಾದಶಧನುರ್ಭೂಮಿದೇಶೇ ಚ ತಿಷ್ಠತಿ ।**
**ಏತತ್ತೀರ್ಥಂ ಹರಿದ್ವಾರಮತೋ ದಕ್ಷಿಣತಸ್ಥಿತಂ ॥ ೬೯ ॥**

---

ಯಷ್ಟು ಅಗಲದಲ್ಲಿದೆ. ಈ ಇಂದ್ರಪ್ರಸ್ಥಕ್ಕೆ ಪಶ್ಚಿಮದಲ್ಲಿ ದ್ವಾರವತಿಯೆಂಬ ಪುಣ್ಯಕ್ಷೇತ್ರವಿದೆ. ಅದು ಎಪ್ಪತ್ತು ಧನುಸ್ಸುಗಳ ಅಗಲವಿದೆ. ಅಲ್ಲಿರಲ್ಲಿ ಮೃತನಾದವನು ವಿಷ್ಣುಸದೃಶನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

೬೬. ಈ ಇಂದ್ರಪ್ರಸ್ಥದ ಪೂರ್ವದಿಕ್ಕಿನಲ್ಲಿ ಕೋಸಲದೇಶವಿದೆ. ಅದು ಜನರಿಗೆ ಬಹು ಆನಂದಕರವಾದುದು. ಅದು ಹದಿನೆಂಟು ಧನುಸ್ಸುಗಳ ದೂರದಲ್ಲಿದೆ. ಅದು ಪುಣ್ಯ ದರ್ಶನ ಉಳ್ಳದ್ದು.

೬೭. ಈ ಕೋಸಲೆಯ ಹತ್ತಿರ ಮಧುವನವೆಂಬುದನ್ನು ಶ್ರೀ ವಿಷ್ಣುವೇ ನಿರ್ಮಿಸಿದ್ದಾನೆ. ಇದು ಆ ಕೋಸಲೆಗೆ ಪಶ್ಚಿಮದಲ್ಲಿ ಹತ್ತು ಧನುಸ್ಸುಗಳ ವಿಸ್ತಾರವುಳ್ಳದ್ದಾಗಿದೆ.

೬೮ ಅದಕ್ಕಿಂತಲೂ ಉತ್ತರಕ್ಕೆ ನರನಾರಾಯಣರಿಗೆ ಜಾಗವಾದ ಕ್ಷೇತ್ರವಿರುವುದು. ಇದು ಹನ್ನೊಂದು ಧನುಸ್ಸಿನ ಅಗಲವಾದ ಪ್ರದೇಶದಲ್ಲಿರುವುದು.

೬೯. ಅದಕ್ಕಿಂತಲೂ ದಕ್ಷಿಣಕ್ಕೆ ಹರಿದ್ವಾರವೆಂಬ ತೀರ್ಥವಿರುವುದು. ಅದು ಮೂವತ್ತು ಧನುಸ್ಸಿನ ಅಗಲದಲ್ಲಿ (ದೂರದಲ್ಲಿ) ಕಾಣುತ್ತದೆ.

ತ್ರಿಶಂಧ್ಯ ಸುವರ್ಣಹೀದೇಶೇ ದೃಶ್ಯತೇ ದೇವದುರ್ಲಭಂ ।
ನಿತತ್ತು ಪುಷ್ಕರಂ ನಾಮ ತೀರ್ಥಂ ತೀರ್ಥಶಿರೋಮಣಿಃ ॥ ೭೦ ॥

ದ್ವಾದಶೇಷ್ವಾಸಮಾತ್ರೇ ಭೂಭಾಗೇ ಭೋಸ್ತ್ರಾತ ತಿಷ್ಠತಿ ।
ಪ್ರಯಾಗಾದೇಕಗವ್ಯೂತಿಃ ಸಪ್ತರ್ಷೀಣಾಂ ಮಹಾತ್ಮನಾಂ ॥ ೭೧ ॥

ಪೂರ್ವಸ್ಯಾಂ ದಿಶಿ ತೀರ್ಥಾನಿ ಸಪ್ತ ತತ್ತೀರ್ಥಸಪ್ತಕಂ ।
ತೀರ್ಥಸಪ್ತಕಕಾಶ್ಯೋಸ್ತು ಸಂತಿ ತೀರ್ಥಾನ್ಯನೇಕಶಃ ॥ ೭೨ ॥

ಪದೇ ಪದೇ ಯೇಷು ಮೃತೋ ಜಾಯತೇ ಸ ಚತುರ್ಭುಜಃ ।
ಪ್ರಯಾಗಾದೇಕಗವ್ಯೂತಿಮಾತ್ರೇ ಪಶ್ಚಿಮಭೂತಲೇ ॥ ೭೩ ॥

ನಿಗಮೋದ್ಬೋಧಕಂ ನಾಮ ತೀರ್ಥಂ ಗುರುಕೃತಂ ಮಯಾ ।
ತೀರ್ಥಸಪ್ತಕನಿಗಮೋದ್ಭೇದಯೋರಂತರೇ ಮಹತ್ ॥ ೭೪ ॥

---

೭೦. ಇವರ ಹತ್ತಿರ ಪುಷ್ಕರವೆಂಬ ತೀರ್ಥವಿರುವುದು. ಇದು ಸರ್ವ ತೀರ್ಥಗಳಲ್ಲಿಯೂ ಉತ್ತಮವಾದುದು. ಇದು ಹನ್ನೆರಡು ಧನುಸ್ಸುಗಳಷ್ಟು ಅಗಲದಲ್ಲಿದೆ.

೭೧. ಪ್ರಯಾಗಕ್ಕಿಂತಲೂ ಪೂರ್ವದಿಕ್ಕಿನಲ್ಲಿ ಎರಡು ಹರಿದಾರಿಗಳ ದೂರದಲ್ಲಿ ಸಪ್ತರ್ಷಿಗಳ ಏಳು ತೀರ್ಥಗಳಿವೆ. ಅವು ಬಹು ಪವಿತ್ರವಾದುವು. ಈ ಸಪ್ತ ತೀರ್ಥಗಳಿಗೂ ಮಧ್ಯದಲ್ಲಿ ಅನೇಕ ತೀರ್ಥಗಳಿರುವುವು.

೭೨-೭೪. ಈ ತೀರ್ಥಗಳಲ್ಲಿ ತೀರ್ಥಸ್ನಾನ ಮಾಡುತ್ತ ಎಲ್ಲಿ ಸತ್ತರೂ ಕೂಡ ಆತನು ಚತುರ್ಭುಜವನ್ನು ಹೊಂದಿ ವಿಷ್ಣು ಸಾರೂಪ್ಯವನ್ನು ಹೊಂದುತ್ತಾನೆ. ಪ್ರಯಾಗಕ್ಕಿಂತಲೂ ಪಶ್ಚಿಮದ ಕಡೆಗೆ ಎರಡು ಕ್ರೋಶಗಳ ದೂರದಲ್ಲಿ ನಿಗಮೋದ್ಬೋಧಕವೆಂಬ ತೀರ್ಥವಿರುವುದು. ಅದು ಗುರುವಿನಿಂದ ರಚಿತವಾದುದು. ನಿಗಮೋದ್ಬೋಧಕ ತೀರ್ಥಕ್ಕೂ ಸಪ್ತರ್ಷಿಗಳ ತೀರ್ಥ ಸಪ್ತಕಗಳಿಗೂ ದೂರವು ಬಹುವಾಗಿರುವುದು.

ಇಂದ್ರಪ್ರಸ್ಥಮಿದಂ ಕ್ಷೇತ್ರಂ ಸ್ಥಾಪಿತಂ ದೈವತೈಃ ಪುರಾ ।
ಪೂರ್ವಪಶ್ಚಿಮಯೋಸ್ತಾತ ಏಕಯೋಜನವಿಸ್ತೃತಂ ॥ ೭೫ ॥

ಕಾಳಿಂದ್ಯಾ ದಕ್ಷಿಣೇ ಯಾವದ್ಯೋಜನಾನಾಂ ಚತುಷ್ಟಯಂ ।
ಇಂದ್ರಪ್ರಸ್ಥಸ್ಯ ಮರ್ಯಾದಾ ಕಥಿತೈಷಾ ಮಹರ್ಷಿಭಿಃ ।
ದೇವತ್ರಯ್ಯಾಂ ಚ ಯೋಽಪ್ಯತ್ರ ತ್ಯಜತ್ಯಂಗಂ ಭವತ್ಯಜಃ ॥ ೭೬ ॥

॥ ಶ್ರೀ ನಾರದ ಉವಾಚ ॥

ಪುತ್ರಸ್ಯೈತದ್ವಚಶ್ಶ್ರುತ್ವಾ ಶಿವಶರ್ಮಾ ಶಿಬೇ ದ್ವಿಜಃ ।
ಪ್ರತ್ಯಾಹ ಸಂದಿಹಾನಸ್ತಂ ಸ್ವಪುತ್ರಂ ಸತ್ಯವಾದಿನಂ ॥ ೭೭ ॥

॥ ಶಿವಶರ್ಮೋವಾಚ ॥

ಕಥಮೇತದ್ವಿಜಾನೀಯಾಂ ತ್ವಂ ಪುರಾಸೀಃ ಸುರೇಶ್ವರಃ ।
ತ್ವಮತ್ರ ಕೃತವಾನ್ ಯಜ್ಞಾನ್ ಮಣಿಭಿಸ್ತೋಷಿತಾ ದ್ವಿಜಾಃ ॥ ೭೮ ॥

---

೭೫-೭೬. ಈ ಇಂದ್ರ ಪ್ರಸ್ಥವೆಂಬ ಕ್ಷೇತ್ರವನ್ನು ಪೂರ್ವದಲ್ಲಿ ದೇವತೆಗಳೇ ಕಲ್ಪಿಸಿ ಸ್ಥಾಪಿಸಿದ್ದಾರೆ. ಈ ಕ್ಷೇತ್ರದ ವಿಸ್ತಾರವು ಪೂರ್ವ ಪಶ್ಚಿಮಗಳಿಗೆ ಒಂದು ಯೋಜನವೂ ಕಾಳಿಂದಿಗಿಂತಲೂ ದಕ್ಷಿಣಕ್ಕೆ ಎಂದರೆ ಅದನ್ನೇ ಎಲ್ಲೆಯನ್ನಾಗಿ ಮಾಡಿಕೊಂಡು ದಕ್ಷಿಣೋತ್ತರ ನಾಲ್ಕು ಯೋಜನಗಳೂ ಇದೆ. ಇಂದ್ರಪ್ರಸ್ಥದ ತೀರ್ಥಗಳ ಎಲ್ಲೆಯನ್ನು ಮಹರ್ಷಿಗಳೇ ಮಾಡಿದ್ದಾರೆ. ತ್ರಿಮೂರ್ತಿಗಳು ಮಾಡಿದ ಇಲ್ಲಿರುವ ಕ್ಷೇತ್ರಗಳಲ್ಲಿ ಯಾವನು ಮೃತನಾದರೂ ಅವನು ಬ್ರಹ್ಮನೇ ಆಗಿ ಬ್ರಹ್ಮ ಲೋಕವನ್ನು ಹೊಂದುತ್ತಾನೆ.

೭೭. ಶ್ರೀ ನಾರದನು ಹೇಳಿದನು-ಎಲೈ ಶಿಬಿಯೇ ! ಶಿವಶರ್ಮನು ಮಗನಾದ ವಿಷ್ಣುಶರ್ಮನ ಈ ಮಾತನ್ನು ಕೇಳಿ ಸಂದೇಹವುಂಟಾಗಿ ಅವನನ್ನು ಕುರಿತು ಇಂತೆಂದನು.

೭೮. ಶಿವಶರ್ಮನು ಹೇಳಿದನು-ಎಲೈ ವಿಷ್ಣುಶರ್ಮನೇ ! ನೀನು ಪೂರ್ವದಲ್ಲಿ ಇಂದ್ರನಾಗಿದ್ದೆ ಎಂಬುದನ್ನು ಹೇಗೆ ತಿಳಿಯಲಿ? ಮತ್ತು ನೀನೇ ಇಲ್ಲಿ ಯಜ್ಞಮಾಡಿದೆ ಎಂಬುದನ್ನೂ ಬ್ರಾಹ್ಮಣರನ್ನೂ ಮಣಿಗಳಿಂದ ತೃಪ್ತಿ ಪಡಿಸಿದೆ ಎಂಬುದನ್ನೂ ಕೂಡ ಹೇಗೆ ನಂಬಲಿ?

ತ್ವದುಕ್ತ್ಯಜ್ಞಾನವಾರ್ತಾ ಪುತ್ರ ಯಥಾಹಂ ಸ್ಯಾಂ ತಥಾ ಕುರು ।
ಇಂದ್ರಪ್ರಸ್ಥಸ್ಯ ಮರ್ಯಾದಾ ಕುತ ಏಷಾ ತ್ವಯಾ ಶ್ರುತಾ ॥ ೭೯ ॥

ಯತಃ ಪ್ರಭೃತಿ ತೇ ಜಾತಾ ಮತಿಸ್ತ್ವಂ ನಾತ್ಯಜೋ ಗೃಹಂ ।
ಮತ್ತ ಏವ ತ್ವಯಾಧೀತಂ ಸಾಂಗಂ ವೇದಚತುಷ್ಟಯಂ ॥
ಪೂರ್ವಜನ್ಮಕೃತೇ ಕೃತ್ಯೇ ಜ್ಞಾನಮಾಸೀತ್ಕುತಸ್ತವ ॥ ೮೦ ॥

॥ ವಿಷ್ಣುಶರ್ಮೋವಾಚ ॥

ಋಷಿಭಿರ್ಮೇ ವರೋ ದತ್ತಃ ಪೂರ್ವಜನ್ಮಸ್ಮೃತಿಪ್ರದಃ ।
ತೇಭ್ಯ ಏವಾಸ್ಯ ತೀರ್ಥಸ್ಯ ಶ್ರುತಾ ಹ್ಯೇಷಾ ಸ್ಮೃತಿರ್ಮಯಾ ॥ ೮೧ ॥

ನಿಗಮೋದ್ಬೋಧಕೇ ತೀರ್ಥೇ ಸ್ನಾನಮತ್ರ ಪಿತಃ ಕುರು ।
ದುರ್ಲಭಂ ಪ್ರಾಪ್ಸ್ಯಸೇ ಜ್ಞಾನಂ ಪೂರ್ವಜನ್ಮಸ್ಮೃತಿಪದಂ ॥ ೮೨ ॥

---

೭೯. ಎಲೈ ಮಗನೇ! ನೀನು ಹೇಳಿದುದು ಸರಿ. ಎಂಬ ಬುದ್ಧಿಯು ನನಗೆ ಬರುವಂತೆ ಮಾಡು. ಈ ಇಂದ್ರಪ್ರಸ್ಥದ ಎಲ್ಲೆಯನ್ನು ನೀನೆಲ್ಲಿ ಕೇಳಿದ್ದೆ ?

೮೦. ನಿನಗೆ ಬುದ್ಧಿ ಬಂದಾಗಿನಿಂದಲೂ ನೀನು ನನ್ನ ಮನೆಯನ್ನು ಬಿಟ್ಟು ಹೊರಟವನೇ ಅಲ್ಲ. ನನ್ನಿಂದಲೇ ನೀನು ನಾಲ್ಕು ವೇದಗಳನ್ನು ವೇದಾಂಗ ಗಳನ್ನೂ ಅಧ್ಯಯನ ಮಾಡಿದ್ದೀಯೆ. ಆದರೆ ಈ ಪೂರ್ವ ಜನ್ಮದ ಸಂಬಂಧವಾದ ಜ್ಞಾನವು ನಿನಗೆ ಹೇಗೆ ಬಂದಿತು?

೮೧. ವಿಷ್ಣುಶರ್ಮನು ಹೇಳಿದನು-ನಿನಗೆ ಪೂರ್ವ ಜನ್ಮದ ಸ್ಮೃತಿ ಯುಂಟಾಗಲೆಂದು ಋಷಿಗಳೇ ನನಗೆ ವರವನ್ನು ಕೊಟ್ಟರು. ಅವರಿಂದ ಕೇಳಿ ದುದನ್ನೇ ಜ್ಞಾಪಿಸಿಕೊಂಡು ಈಗ ಹೇಳುತ್ತಾ ಇದ್ದೇನೆ.

೮೨. ಎಲೈ ತಂದೆಯೇ! ನಿಗಮೋದ್ಬೋಧಕವೆಂಬ ಈ ತೀರ್ಥದಲ್ಲಿ ಸ್ನಾನವನ್ನು ಮಾಡು. ಪೂರ್ವ ಜನ್ಮದ ಸ್ಮೃತಿಯನ್ನು ಕೊಡುವ ಉತ್ತಮವಾದ ಜ್ಞಾನವನ್ನು ಹೊಂದುತ್ತೀಯೆ.

ಮಮಾಪಿ ಪೂರ್ವಜನುಷಃ ಪ್ರವೃತ್ತಿಂ ತ್ವಂ ಸ್ಮರಿಷ್ಯಸಿ ।
ಏತತ್ತೀರ್ಥಜಲಸ್ಪರ್ಶಾತ್ತಾತ ಸತ್ಯಂ ವದಾಮಿ ತೇ ॥ ೮೩ ॥

॥ ನಾರದ ಉವಾಚ ॥

ಶಿವಶರ್ಮಣಿ ವಿಪ್ರೇಂದ್ರೇ ಶ್ರುತ್ವೈತತ್ ಸ್ನಾತುಮುದ್ಯತೇ ।
ನಿಗಮೋದ್ಬೋಧಕೇ ತೀರ್ಥೇ ಸ್ಮೃತಯೇ ಪೂರ್ವಜನ್ಮನಃ ॥ ೮೪ ॥

ಸಿಂಹೇನಾನುಗತಃ ಕಶ್ಚಿದ್ಭಿಲ್ಲೋ ಧಾವನ್ ಸಮಾಗತಃ ।
ಅತಿತ್ರಾಸಪರೀತಾಂಗೋ ನಿಶ್ವಸನ್ ಭ್ರಮವಿಹ್ವಲಃ ॥ ೮೫ ॥

ಹಿಂಸಾತ್ಮಕೋ ವರ್ತ್ಮಘಾತೀ ವಣಿಜಾಂ ಲುಂಠಕಸ್ಸದಾ ।
ಕೃಷ್ಣಾಂಗಃ ಪಿಂಗಕೇಶಶ್ಚ ಖರ್ವೋ ಮಾರ್ಜಾಲಲೋಚನಃ ॥ ೮೬ ॥

ಕುಂತಹಸ್ತೋ ಭೀಮಮೂರ್ತಿರ್ದೇಹೀ ಪಾಪ್ಮೇವ ಭೂಪತೇ ।
ತತಃ ಪಶ್ಚಾತ್ಕಿಯದ್ದೂರೇ ಸಿಂಹಮಾಲೋಕ್ಯ ತಾವುಭೌ ॥ ೮೭ ॥

---

೮೩. ಆಗ ನಿನಗೂ ನನ್ನ ಪೂರ್ವ ಜನ್ಮದ ವಿಷಯವು ಗೊತ್ತಾಗುತ್ತದೆ. ಈ ತೀರ್ಥದ ನೀರನ್ನು ಮುಟ್ಟುವುದರಿಂದಲೇ ಆ ರೀತಿಯಾದ ಜ್ಞಾನವು ಬರುತ್ತದೆ. ನಾನು ಸತ್ಯವಾದ ಮಾತನ್ನು ಹೇಳುತ್ತೇನೆ.

೮೪-೮೫. ನಾರದನು ಹೇಳಿದನು-ಶಿವಶರ್ಮನು ಈ ಮಾತನ್ನು ಕೇಳಿ ಸ್ನಾನ ಮಾಡುವುದಕ್ಕೆ ನಿಗಮೋದ್ಬೋಧಕ ತೀರ್ಥಕ್ಕೆ ಹೋಗಿ ನೀರನ್ನು ಮುಟ್ಟುತ್ತಿರುವಷ್ಟರಲ್ಲಿಯೇ ಸಿಂಹದಿಂದ ಅಟ್ಟಿಸಿಕೊಳ್ಳಲ್ಪಡುತ್ತ ಒಬ್ಬ ಭಿಲ್ಲರವನು ಓಡುತ್ತ ಬಂದನು. ಆಗ ಈತನು ಬಹುವಾಗಿ ಹೆದರಿ ನಿಟ್ಟುಸಿರುಬಿಡುತ್ತಾ ರೋಮಾಂಚವನ್ನು ಹೊಂದಿ ನಡುಗುತ್ತಿದ್ದನು.

೮೬-೮೭. ಅವನು ಹಿಂಸೆಯನ್ನು ಮಾಡುವವನು. ಪ್ರಯಾಣಿಕರನ್ನು ಕೊಂದು ದೋಚತಕ್ಕವನು ಕಪ್ಪಾಗಿದ್ದನು. ಕೆಂಚಗಿರುವ ಕೂದಲುಗಳು ಇದ್ದುವು. ಕುಳ್ಳನು. ಬೆಕ್ಕಿನ ಕಣ್ಣಿನಂತೆ ಕಣ್ಣುಗಳಿದ್ದುವು. ಕುಂತಾಯುಧವನ್ನು ಕೈಯ್ಯಲ್ಲಿ ಹಿಡಿದು ಇದ್ದನು. ಭಯಂಕರವಾದ ದೇಹವುಳ್ಳವನು. ಆ ದೇಹವನ್ನು ನೋಡಿದರೆ ಪಾಪವೇ ಅವತರಿಸಿರುವಂತೆ ಕಾಣುತ್ತಿದ್ದಿತು. ಅವನ ಹಿಂದುಗಡೆಯಲ್ಲಿ ಸ್ವಲ್ಪ ದೂರದಲ್ಲಿ ಒಂದು ಸಿಂಹವು ಬರುತ್ತಿರುವುದನ್ನು ನೋಡಿ ಆ ತಂದೆ

ಪಿತಾಪುತ್ರೌ ಸಮೀಪಸ್ಥಂ ದ್ರುಮಮಾರುಹ್ಯ ತಸ್ಥತುಃ ।
ವದಂತಾವಿತಿ ಹಾ ಕೃಷ್ಣ ಮೋಚಯಾಪಮೃತ್ಯುತಃ ॥ ೮೮ ॥

ಸ ಕಿರಾತಸ್ತು ರಾಜೇಂದ್ರ ಗೃಹೀತೋ ವೇಗವತ್ತರಂ ।
ವೀಕ್ಷ್ಯ ಸಿಂಹಂ ದ್ರುಮಂ ಭೀತಃ ಸಮಾರೋಢುಂ ಪ್ರಚಕ್ರಮೇ ॥ ೮೯ ॥

ಆರೋಹಣಂ ಪ್ರಕುರ್ವಂತಂ ಸಿಂಹೋ ಜಗ್ರಾಹ ವೇಗವಾನ್ ।
ಪಾದಯೋರಥ ಭೂಪೃಷ್ಠೇ ಪಾತಯಿತ್ವಾರುರೋಹ ತಂ ॥ ೯೦ ॥

ಅಧಸ್ಥಿತಃ ಕಿರಾತೋಪಿ ಕುಂತೇನೋದರಮಸ್ಯ ವೈ ।
ದದಾರ ರುಧಿರೌಘಾಕ್ತನಿಸ್ಸೃತಾಂತ್ರಕದಂಬಕಂ ॥ ೯೧ ॥

ಜಾತವ್ಯಥೋ ವಿಧಾಯಾಥ ನಾದಂ ಪರಮದಾರುಣಂ ।
ಸಿಂಹಃ ಪಿಪೇಷ ಭಿಲ್ಲಸ್ಯ ಶಿರಸ್ಸದ್ಯೋ ಮಮಾರ ಚ ॥ ೯೨ ॥

---

ಮಕ್ಕಳಿಬ್ಬರೂ ಹತ್ತಿರದಲ್ಲಿದ್ದ ಮರವನ್ನು ಹತ್ತಿ ಕುಳಿತುಕೊಂಡು ಹಾ ಕೃಷ್ಣಾ ! ಈ ಅಪಮೃತ್ಯುವಿನಿಂದ ನಮ್ಮನ್ನು ಬಿಡಿಸು ಎಂಬುದಾಗಿ ಕೃಷ್ಣ ಸ್ಮರಣೆಯನ್ನು ಮಾಡುತ್ತಿದ್ದರು.

೮೯–೯೦. ಆ ಕಿರಾತನು ಇವರನ್ನು ಹಿಡಿದುಕೊಂಡು ದೋಚುವುದಕ್ಕೆ ಬರುತ್ತಿದ್ದನು ಇವನನ್ನು ಹಿಡಿದು ತಿನ್ನಲು ಆ ಸಿಂಹವು ಓಡಿಬರುತ್ತಿದ್ದಿತು. ಈ ಕಿರಾತನು ಸಿಂಹವನ್ನು ನೋಡಿ ಹೆದರಿ ಒಂದು ಮರವನ್ನು ಬೇಗ ಬೇಗನೆ ಹತ್ತಲು ಹೋದನು. ಆಗ ಹತ್ತುತ್ತಿರುವ ಆತನನ್ನು ಸಿಂಹವು ಕಾಲನ್ನು ಹಿಡಿದುಕೊಂಡು ಎಳೆದು ಕೆಳಗೆ ಕೆಡವಿಕೊಂಡು ಮೇಲೆ ಹೇರಿಕೊಂಡು ಹಿಡಿದು ಕೊಂಡಿತು.

೯೧-೯೨. ಸಿಂಹದ ಕೆಳಗೆ ಸಿಕ್ಕಿಕೊಂಡಿದ್ದ ಆ ಕಿರಾತನೂ ಕೂಡ ಕುಂತಾ ಯುಧದಿಂದ ಆ ಸಿಂಹದ ಹೊಟ್ಟೆಯನ್ನು ಸೀಳಿದನು. ಅದರಿಂದ ರಕ್ತವು ಸುರಿದು ದಲ್ಲದೆ ಒಳಗಿನ ಕರುಳುಗಳು ಬಹುವಾಗಿ ಹೊರಕ್ಕೆ ಬಂದಿತು. ಇದರಿಂದ ಸಿಂಹಕ್ಕೆ ನೋವುಂಟಾಗಲು ಬಹುವಾಗಿ ಗರ್ಜಿಸುತ್ತ ಆ ಭಿಲ್ಲನ ತಲೆಯನ್ನು ಹಿಸುಕಿತು. ಅದರಿಂದ ಅವನು ಸತ್ತನು ಇತ್ತ ಸಿಂಹವೂ ಸತ್ತಿತು.

ತಯೋಃ ಪಂಚತ್ವಮಾಪನ್ನೇ ಭೂತಸಂಘೇತ್ರ ಭೂಪತೇ ।
ವಿಮಾನದ್ವಯಮುತ್ತೀರ್ಣಂ ಗಣಾಭ್ಯಾಂ ಸಹ ಸತ್ವದಾತ್ ॥ ೯೩ ॥

ನವೀನಘನವರ್ಣಾಭ್ಯಾಂ ಸ್ಫಟಿಕೋಪಲನಿರ್ಮಿತಂ ।
ಚಾರುಕುಂಡಲಕರ್ಣಾಭ್ಯಾಂ ಮಣಿಪ್ರಕರಮಂಡಿತಂ ॥ ೯೪ ॥

ಶಂಖಚಕ್ರಗದಾಪದ್ಮಹಸ್ತಾಭ್ಯಾಂ ಚಾರುಚಿತ್ರಭೃತ್ ।
ದಧದ್ಭ್ಯಾಂ ಪೀತವಸ್ತ್ರಾಣಿ ಹೇಮಭಿತ್ತಿವಿಭೂಷಿತಂ ॥ ೯೫ ॥

ಪ್ರಫುಲ್ಲಾಂಬುಜನೇತ್ರಾಭ್ಯಾಂ ಪದ್ಮರಾಗಗವಾಕ್ಷಭೃತ್ ।
ಧೀರನಿಹ್ರ್ರಾದಮಂಜೀರಪದ್ಭ್ಯಾಂ ರಣಿತಕಿಂಕಿಣಿ ॥ ೯೬ ॥

ಪ್ರಕೋಷ್ಠೇ ವಲಯಶ್ರೇಣೀಂ ಬಿಭ್ರದ್ಭ್ಯಾಂ ಚಾರುವೇದಿಕಂ ।
ಮುಕ್ತಾಹಾರೈರ್ಮನೋಹಾರಿವಕ್ಷೋಭ್ಯಾಂ ಸದ್ವಿತಾನವತ್ ॥ ೯೭ ॥

---

೯೩. ಆ ರೀತಿಯಾಗಿ ಆ ಜಾಗದಲ್ಲಿ ಆ ಎರಡು ಪ್ರಾಣಿಗಳೂ ಸಾಯಲು ಆಗ ಅಂತರಿಕ್ಷದಿಂದ ಗಣಗಳೊಡನೆ ಎರಡು ವಿಮಾನಗಳು ಇಳಿದುವು.

೯೪-೯೫. ಅದರಲ್ಲಿದ್ದ ಗಣಗಳು ನೀಲಮೇಘಶ್ಯಾಮದವರಾಗಿದ್ದರು. ಕಿವಿಗಳಲ್ಲಿ ಮನೋಹರವಾದ ಕರ್ಣಾಭರಣಗಳಿದ್ದುವು. ಶಂಖ ಚಕ್ರ ಗದೆಗಳನ್ನು ಹಿಡಿದಿದ್ದರು. ಹೊಂಬಣ್ಣದ ಬಟ್ಟೆಯನ್ನು ಧರಿಸಿದ್ದರು. ಆ ವಿಮಾನವು ಸ್ಫಟಿಕ ಮಣಿಯಿಂದ ಕೆತ್ತಲ್ಪಟ್ಟಿದ್ದಿತು. ಅನೇಕ ಮಣಿಗಳನ್ನು ಹಾಕಿ ಅಲಂಕರಿಸಿದ್ದರು. ಮನೋಹರವಾದ ಚಿತ್ರಗಳು ಅದರಲ್ಲಿ ಕೆತ್ತಲ್ಪಟ್ಟಿದ್ದುವು. ಸುತ್ತಲೂ ಚಿನ್ನದ ಗೋಡೆಗಳಿದ್ದುವು.

೯೬-೯೭. ಆ ಗಣಗಳು ಅರಳಿರುವ ಕಮಲದಂತಿರುವ ಕಣ್ಣುಗಳನ್ನು ಹೊಂದಿದ್ದರು. ಚೆನ್ನಾಗಿ ಶಬ್ದಮಾಡುವ ಕಾಲುಬಳೆಗಳನ್ನು ಹಾಕಿಕೊಂಡಿದ್ದರು. ತೋಳುಗಳಿಗೆ ಬಳೆಗಳನ್ನು ಹಾಕಿಕೊಂಡಿದ್ದರು. ಮುತ್ತಿನ ಹಾರದಿಂದ ಅವರ ಎದೆಯ ಪ್ರದೇಶವು ಪ್ರಕಾಶಿಸುತ್ತಿದ್ದಿತು. ಈ ವಿಮಾನವು ಪದ್ಮರಾಗಮಣಿಯ ಕಿಟಕಿಗಳಿಂದ ಕೂಡಿದ್ದಿತು. ಕಿರುಗೆಜ್ಜೆಗಳು ಸದ್ದುಮಾಡುತ್ತಿದ್ದುವು. ಮನೋಹರವಾದ ಜಗುಲಿಗಳಿದ್ದುವು. ಮೇಲ್ಕಟ್ಟು ಚೆನ್ನಾಗಿದ್ದಿತು.

**ಕುಟಿಲಾಲಕವಕ್ತ್ರಾಭ್ಯಾಮುನ್ನತಧ್ವಜರಾಜಿತಂ ।**
**ಭ್ರೂಯುಗಾತ್ ಕ್ಷಿಪ್ತಪಂಚೇಷುಧನುಭ್ಯಾರ್ಮುಚ್ಚತೋರಣಂ ॥ ೯೮ ॥**

**ನಾಸಾಲಜ್ಜಿತಕೀರಾಭ್ಯಾಂ ನಿರ್ಯೂಹಶತಶೋಭಿತಂ ।**
**ನವವಿದ್ರುಮಸಚ್ಛಾಯತಲಾಭ್ಯಾಂ ದರ್ಪಣಾಮಲಂ । ॥ ೯೯ ॥**

**ದಿವ್ಯಾಂಗೌ ಭಿಲ್ಲಪಂಚಾಸ್ಯೌ ತ್ಯಕ್ತ್ವಾಂಗಂ ಪ್ರಾಕೃತಂ ಸ್ಥಿತೌ ।**
**ಪುರೈವ ಪ್ರಾಣನಿರ್ಯಾಣೇ ತೀರ್ಥಸ್ಯಾಸ್ಯ ಪ್ರಭಾವತಃ । ॥ ೧೦೦ ॥**

**ತಯೋಸ್ಸಮೀಪಮಾನೀಯ ವಿಮಾನೌ ತೌ ಹರೇರ್ಗಣೌ ।**
**ಊಚತುಸ್ತು ದಯಾರೂಪವೇಷಾಕೃತಿಧರೌ ತತಃ ॥ ೧೦೧ ॥**

**॥ ಗಣಾವೂಚತುಃ ॥**

**ಭೋಃ ಕಿರಾತ ನರಶ್ರೇಷ್ಠ ಭೋಃ ಪಂಚಾಸ್ಯ ಮೃಗಾಧಿಪ ।**
**ಆವಾಂ ಜಾನೀತಮಾಯಾತೌ ವೈಕುಂಠಾಚ್ಛ್ರೀಹರೇರ್ಗಣೌ ॥ ೧೦೨ ॥**

---

೯೮-೯೯. ಆ ಗಣಗಳು ಗುಂಗುರು ಗುಂಗುರಾದ ಕೂದಲುಗಳಿಂದ ಕೂಡಿದ್ದರು. ಅವರ ಹುಬ್ಬುಗಳು ಮನ್ಮಥನ ಬಾಣಗಳಂತಿದ್ದುವು. ಮೂಗುಗಳು ಗಿಳಿಗಳಂತಿದ್ದುವು. ಕೈಗಳ ತಲಭಾಗಗಳು ಹೊಸದಾದ ಹವಳಗಳಂತಿದ್ದುವು. ಈ ವಿಮಾನಗಳು ಎತ್ತರವಾಗಿ ಕಟ್ಟಲ್ಪಟ್ಟಿದ್ದ ಬಾವುಟಗಳಿಂದ ಕೂಡಿದ್ದುವು. ಎತ್ತರವಾದ ಹೆಬ್ಬಾಗಿಲಿದ್ದಿತು. ಅನೇಕವಾದ ಲೋವಿಕೆಗಳಿದ್ದುವು. ಕನ್ನಡಿಯಂತೆ ಶುದ್ಧವಾಗಿದ್ದಿತು

೧೦೦. ಪ್ರಾಣವನ್ನು ಬಿಟ್ಟ ಈ ಭಿಲ್ಲ ಮತ್ತು ಸಿಂಹಗಳು ಈ ತೀರ್ಥದ ಮಹಿಮೆಯಿಂದ ಪ್ರಾಕೃತವಾದ ಈ ದೇಹವನ್ನು ಬಿಟ್ಟೊಡನೆಯೇ ಉತ್ತಮವಾದ ದೇಹವನ್ನು ಧರಿಸಿ ನಿಂತಿದ್ದುವು.

೧೦೧. ಅವರುಗಳ ಹತ್ತಿರಕ್ಕೆ ವಿಮಾನಗಳನ್ನು ಆ ಹರಿಯ ಗಣಗಳು ತಂದು ದಯಾಳುಗಳಾದ ಅವರು ಅವರನ್ನು ಕುರಿತು ಇಂತೆಂದರು.

೧೦೨. ಗಣಗಳು ಹೇಳಿದರು- ಎಲೈ ಕಿರಾತನೇ ! ಎಲೈ ಸಿಂಹವೇ ! ನೀವಿಬ್ಬರೂ ನಮ್ಮನ್ನು ವೈಕುಂಠದಿಂದ ಬಂದಿರುವ ಶ್ರೀ ಹರಿಯ ಗಣಗಳೆಂದು ತಿಳಿಯಿರಿ.

ನೇಷ್ಯಾಮಸ್ತತ್ಪದಂ ಸತ್ಯಂ ಯುವಾಂ ತತ್ರ ನ ಚೋರ್ಮಯಃ ।
ಸ್ವಂ ಸ್ವಂ ವಿಮಾನಮಾರುಹ್ಯ ಗಮ್ಯತಾಮಾಶು ಮಾ ಚಿರಂ ॥ ೧೦೩ ॥

॥ ನಾರದ ಉವಾಚ ॥

ಸ್ವಂ ಸ್ವಂ ವಿಮಾನಮಾರೂಢೌ ತೌ ಕಿರಾತಮೃಗಾಧಿಪೌ ।
ಊಚತುರ್ವಿಸ್ಮಯಾವಿಷ್ಟೌ ಲಕ್ಷ್ಮೀಪತಿಗಣೌ ಪ್ರತಿ ॥ ೧೦೪ ॥

॥ ಕಿರಾತಮೃಗಾಧಿಪೌ ಉಚತುಃ ॥

ಭೋ ಭೋಸ್ತ್ರಿದಶಶಾರ್ದೂಲೌ ಶ್ರೂಯತಾಂ ವಾಕ್ಯಮಾವಯೋಃ !
ಯುವಯೋರ್ದರ್ಶನಾಜ್ಜಾತಂ ಜ್ಞಾನಂ ನೌ ಪಾರಮಾರ್ಥಿಕಂ ॥ ೧೦೫ ॥

ಅತ್ರ ಜನ್ಮನಿ ನಾವಾಭ್ಯಾಂ ಕೃತಂ ಸುಕೃತಮಲ್ಪಕಂ ।
ಸ್ಮೃತಿರ್ನೌ ಜಾಯತೇ ಪೂರ್ವಕರ್ಮಣಾ ವಾಂ ಪ್ರಸಾದತಃ ॥ ೧೦೬ ॥

---

೧೦೩. ಶೀತೋಷ್ಣ ಮುಂತಾದ ದ್ವಂದ್ವಗಳಿಂದ ಬಿಡಲ್ಪಟ್ಟ ಶಾಶ್ವತವಾದ ಆ ವಿಷ್ಣುವಿನ ಸ್ಥಾನವಾದ ವೈಕುಂಠಕ್ಕೆ ಕರೆದುಕೊಂಡು ಹೋಗುತ್ತೇವೆ. ಶೀಘ್ರ ನಿಮ್ಮ ನಿಮ್ಮ ವಿಮಾನವನ್ನು ಹತ್ತಿ ಹೊರಡಿರಿ. ಸಾವಕಾಶವನ್ನು ಮಾಡಬೇಡಿರಿ.

೧೦೪. ನಾರದನು ಹೇಳಿದನು– ಆಗ ಕಿರಾತ ಮತ್ತು ಸಿಂಹರು ತಮ್ಮ ತಮ್ಮ ವಿಮಾನಗಳನ್ನು ಹತ್ತಿದರು. ಮತ್ತು ಆಶ್ಚರ್ಯಗೊಂಡವರಾಗಿ ಆ ಲಕ್ಷ್ಮೀಪತಿಯ ಗಣಗಳನ್ನು ಕುರಿತು ಇಂತೆಂದರು.

೧೦೫. ಕಿರಾತ ಮೃಗಾಧಿಪರು ಹೇಳಿದರು. ಎಲೈ ದೇವತಾ ಶ್ರೇಷ್ಠರಿರಾ ! ನಮ್ಮ ಮಾತನ್ನು ಸ್ವಲ್ಪ ಲಾಲಿಸಿರಿ. ನಿಮ್ಮಗಳ ದರ್ಶನದಿಂದ ನಮಗೆ ಪಾರಮಾರ್ಥಿಕವಾದ ಜ್ಞಾನವು ಹುಟ್ಟಿದೆ.

೧೦೬. ಈ ಜನ್ಮದಲ್ಲಿ ನಾವು ಸ್ವಲ್ಪವೂ ಸುಕೃತವನ್ನು ಮಾಡಲೇ ಇಲ್ಲ. ನಿಮ್ಮಗಳ ಅನುಗ್ರಹದಿಂದಲೂ ಪೂರ್ವಜನ್ಮದ ಕರ್ಮದಿಂದಲೂ ಈಗ ನಮಗೆ ಸ್ಮೃತಿಯು ಉಂಟಾಗುತ್ತಿರುವುದು.

ಮಾಂಸಾಹಾರೌ ಪ್ರಾಣಹಿಂಸಾರತೌ ಕ್ರೂರಾಂತರೇಂದ್ರಿಯೌ ।
ಪಾಪಾಚಾರಕುಲೇ ಜಾತೌ ದರ್ಶನೇನ ಭಯಪ್ರದೌ ॥ ೧೦೭ ॥

ಆವಾಮೇತಾದೃಶೌ ಲೋಕೇ ಹ್ಯಭೂತಾಮಿತಿ ಪಾಪಿನೌ ।
ಕೇನ ಪುಣ್ಯೇನ ಯುವಯೋರ್ಜಾತಂ ದರ್ಶನಮಾವಯೋಃ ।
ಸಾರೂಪ್ಯಂ ಚ ಕುತಃ ಪುಣ್ಯಾದ್ಯಾಯಾವ ಶ್ರೀಹರೇಃ ಪದಂ ॥ ೧೦೮ ॥

॥ ಗಣಾವೂಚತುಃ ॥

ತೀರ್ಥೇಽತ್ರ ಮರಣಾನ್ನೂನಂ ಸುರಾಚಾರ್ಯಕೃತೇ ಪುರಾ ।
ಯುವಯೋರ್ದರ್ಶನಂ ಜಾತಂ ನೌ ಚ ಸಾರೂಪ್ಯಮುದ್ಭುತಂ ॥ ೧೦೯ ॥

ಲಕ್ಷ್ಮೀಪತಿಪದಪ್ರಾಪ್ತಿರ್ಭವಿಷ್ಯತಿ ಚ ವಾಂ ಚಿರಂ ।
ತಾವತ್ಪಾಪಾನಿ ಗರ್ಜಂತಿ ಬ್ರಹ್ಮಹತ್ಯಾದಿಕಾನಿ ವೈ ॥ ೧೧೦ ॥

---

೧೦೭. ನಾವು ಮಾಂಸಾಹಾರಿಗಳಾಗಿಯೂ, ಪ್ರಾಣಿಹಿಂಸೆಯಲ್ಲಿ ಆಸಕ್ತರಾಗಿಯೂ, ಕ್ರೂರವಾದ ಬುದ್ಧಿಯುಳ್ಳವರಾಗಿಯೂ ಆಗಿ ಪಾಪಿಗಳ ಕುಲದಲ್ಲಿ ಹುಟ್ಟಿ ನೋಡಿದಕೂಡಲೇ ಹೆದರಿಕೆಯನ್ನುಂಟುಮಾಡುವವರಾಗಿದ್ದೇವೆ.

೧೦೮. ಈ ರೀತಿಯಾಗಿ ನಾವು ಲೋಕದಲ್ಲಿ ಬಹುವಾದ ಪಾಪಿಗಳಾಗಿ ಹುಟ್ಟಿದೆವು. ನಮಗೆ ಯಾವ ಪುಣ್ಯದಿಂದ ನಿಮ್ಮಗಳ ದರ್ಶನವಾಯಿತು? ಯಾವ ಪುಣ್ಯದಿಂದ ಸಾರೂಪ್ಯವು ಬಂದಿರುವುದು? ಶ್ರೀ ಹರಿಯ ವೈಕುಂಠವು ಸಿಕ್ಕಲು ಕಾರಣವೇನು?

೧೦೯. ಗಣಗಳು ಹೇಳಿದರು– ದೇವತೆಗಳ ಆಚಾರ್ಯನಾದ ಗುರುವು ಮಾಡಿದ ಈ ತೀರ್ಥದಲ್ಲಿ ಮರಣವಾದುದರಿಂದ ನಮ್ಮಗಳ ದರ್ಶನವೂ ಆಯಿತು. ಮತ್ತು ಸಾರೂಪ್ಯವೂ ಉಂಟಾಯಿತು.

೧೧೦. ನಿಮ್ಮಗಳಿಗೆ ಲಕ್ಷ್ಮೀಪತಿಯ ಪದವಾದ ವೈಕುಂಠವೂ ಸ್ವಲ್ಪಕಾಲದಲ್ಲಿಯೇ ಉಂಟಾಗುತ್ತದೆ. ಇಲ್ಲಿ ಸ್ನಾನಮಾಡುವವರಿಗೆ ಕೊನೆಗೆ ಈ ಕ್ಷೇತ್ರ ದರ್ಶನವಾಗುವವರಿಗೂ ಪ್ರಾಣಿಗಳಿಗೆ ಬ್ರಹ್ಮಹತ್ಯಾದಿಗಳಾದ ಪಾಪಗಳು ಗರ್ಜಿಸುತ್ತವೆ.

ಜಾತಂ ನೋ ದರ್ಶನಂ ಯಾವತ್ತೀರ್ಥಸ್ಯಾಸ್ಯ ಬೃಹಸ್ಪತೇಃ ।
ಯಥಾ ತಮಾಂಸಿ ನಶ್ಯಂತಿ ಭಾಸ್ಕರಸ್ಯೋದಯಾದಿಹ ।          ॥ ೧೧೧ ॥

ತಥಾ ಪಾಪಾನಿ ನಿಗಮೋದ್ಬೋಧಕಸ್ಯ ವಿಲೋಕನಾತ್ ।
ಇಂದ್ರಪ್ರಸ್ಥಾಖ್ಯಮೇತದ್ವೈ ಕ್ಷೇತ್ರಮಿಂದ್ರಸ್ಯ ಪಾವನಂ          ॥ ೧೧೨ ॥

ತೇನಾತ್ರ ಪೂಜಿತೋ ವಿಷ್ಣುಃ ಕ್ರತುಭಿರ್ಬಹುದಕ್ಷಿಣೈಃ ।
ತುಷ್ಟೇನ ವಿಷ್ಣುನಾ ತಸ್ಮೈ ವರೋ ದತ್ತೋ ನಿಶಮ್ಯತಾಂ          ॥ ೧೧೩ ॥

॥ ವಿಷ್ಣುರುವಾಚ ॥

ಭೋಃ ಶಕ್ರ ತಾವಕೇ ಕ್ಷೇತ್ರೇ ಸರ್ವತೀರ್ಥಮಯೇ ಜನಾಃ ।
ತನುಂ ತ್ಯಕ್ಷ್ಯಂತಿ ಯೇ ತೇ ವೈ ಮತ್ತುಲ್ಯಾ ಹಿಂಸಕಾ ಅಪಿ          ॥ ೧೧೪ ॥

---

೧೧೧. ಈ ಕ್ಷೇತ್ರವನ್ನು ನೋಡಿದ ಕೂಡಲೇ ಸೂರ್ಯನು ಹುಟ್ಟಿದೊಡನೆಯೇ ಕತ್ತಲೆಯು ಹೋಗುವಂತೆ ಆ ಪಾಪಗಳೆಲ್ಲವೂ ನಾಶವಾಗುತ್ತವೆ.

೧೧೨ ಈ ನಿಗಮೋದ್ಬೋಧಕ ತೀರ್ಥವನ್ನು ನೋಡುವುದರಿಂದಲೇ ಪಾಪಗಳೆಲ್ಲವೂ ಹೋಗುತ್ತವೆ. ಇಂದ್ರಪ್ರಸ್ಥವೆಂಬ ಈ ಕ್ಷೇತ್ರವು ಇಂದ್ರನ ಸಂಬಂಧವಾದುದು. ಪವಿತ್ರವಾದುದು.

೧೧೩. ಆ ಇಂದ್ರನು ಅನೇಕ ಯಾಗಗಳನ್ನು ಮಾಡಿ ವಿಷ್ಣುವನ್ನು ತೃಪ್ತಿಪಡಿಸಿದನು. ವಿಷ್ಣುವು ಇದರಿಂದ ಸಂತೋಷಗೊಂಡು ಆ ಇಂದ್ರನಿಗೆ ವರವನ್ನು ಕೊಟ್ಟನು. ಅದನ್ನು ಕೇಳು.

೧೧೪. ವಿಷ್ಣುವು ಹೇಳಿದನು- ಎಲೈ ಇಂದ್ರನೇ ! ಸರ್ವತೀರ್ಥಸ್ವರೂಪವಾದ ಈ ನನ್ನ ಕ್ಷೇತ್ರದಲ್ಲಿ ಯಾರು ಪ್ರಾಣವನ್ನು ಬಿಡುವರೋ ಅವರು ಹಿಂಸಕರಾಗಿದ್ದು ಪಾಪಿಗಳಾಗಿದ್ದರೂ ಕೂಡ ನನ್ನ ರೀತಿಯಾಗುವರು.

॥ ಶ್ರೀ ನಾರದ ಉವಾಚ ॥

ಇತ್ಯುಕ್ತ್ವಾ ತೌ ಗಣಶ್ರೇಷ್ಠೌ ನೀತ್ವಾ ತೌ ಜಗ್ಮತುಃ ಪದಂ ।
ಹರೇರ್ಯತ್ರ ಗತೇ ಭೂಯೋ ವಿಶ್ವಾಬ್ಧೌ ನ ನಿಮಜ್ಜತಿ ॥ ೧೧೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಭಿಲ್ಲ ಸಿಂಹ ವೈಕುಂಠಾರೋಹಣಂ ನಾಮ ಷಣ್ಣವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೧೫. ಶ್ರೀ ನಾರದನು ಹೇಳಿದನು- ಆ ಗಣಗಳು ಇಂತೆಂದು ಹೇಳಿ ಅವರಿಬ್ಬರನ್ನೂ ಕರೆದುಕೊಂಡು ಯಾವ ಜಾಗಕ್ಕೆ ಹೋದರೆ ಮತ್ತೆ ಈ ಪ್ರಪಂಚ ವೆಂಬ ಸಮುದ್ರದಲ್ಲಿ ಮುಳುಗುವುದಿಲ್ಲವೋ ಅಂತಹ ಹರಿಯ ಸ್ಥಾನವಾದ ವೈಕುಂಠಕ್ಕೆ ಕರೆದುಕೊಂಡು ಹೋದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಭಿಲ್ಲ ಸಿಂಹರ ವೈಕುಂಠಾರೋಹಣ ಎಂಬ ನೂರ ತೊಂಭತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತನವತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ನಾರದ ಉವಾಚ ॥

**ಅಥಾವರುಹ್ಯ ತೌ ವೃಕ್ಷಾತ್ಪಿತಾಪುತ್ರೌ ಸುವಿಸ್ಮಿತೌ ।**
**ದೃಷ್ಟ್ವಾ ಹರಿಪದಪ್ರಾಪ್ತಿಮಭೂತಾಂ ಪಾಪಿನೋರಪೀ ॥ ೧ ॥**

**ಶಿವಶರ್ಮಾಥ ವಿಪ್ರೇಂದ್ರಃ ಶ್ರುತ್ವಾ ತೀರ್ಥಸ್ತುತಿಂ ತದಾ ।**
**ಗಣೋಕ್ತಾಂ ವಿಷ್ಣುಶರ್ಮಾಣಮುವಾಚ ಸುತಮಾತ್ಮನಃ ॥ ೨ ॥**

॥ ಶಿವಶರ್ಮೋವಾಚ ॥

**ಯತ್ಪದಂ ನ ಸುಲಭಂ ದ್ವಿಜನ್ಮನಾಂ ಸಾಧಿತೇನ ತಪಸಾಪಿ ಲೀಲಯಾ ।**
**ಪ್ರಾಪತುಃ ಶಬರದಂಷ್ಟ್ರಿಣೌ ಚ ತತ್ತೀರ್ಥರಾಜಮಹಿಮಾವಿಲೋಕ್ಯತಾಂ ॥ ೩**

---

### ನೂರ ತೊಂಭತ್ತೇಳನೆಯ ಅಧ್ಯಾಯವು



೧. ಶ್ರೀ ನಾರದನು ಹೇಳಿದನು-ಆಗ ಆ ಇಬ್ಬರು ತಂದೆ ಮಕ್ಕಳೂ ಆಶ್ಚರ್ಯಗೊಂಡು ಮರದಿಂದ ಕೆಳಗೆ ಇಳಿದರು. ಮತ್ತು ಆ ಪಾಪಿಗಳಿಗೂ ಕೂಡ ಈ ರೀತಿಯಾಗಿ ವೈಕುಂಠ ಸಿಕ್ಕಿದುದನ್ನು ನೋಡಿ ಮತ್ತೂ ಆಶ್ಚರ್ಯವುಂಟಾಯಿತು

೨. ಶಿವಶರ್ಮನು ಗಣಗಳು ಹೇಳಿದ ಆ ತೀರ್ಥ ಸ್ತುತಿಯನ್ನು ಕೇಳಿ ಮಗನಾದ ವಿಷ್ಣುಶರ್ಮನನ್ನು ಕುರಿತು ಇಂತೆಂದನು.

೩. ಶಿವಶರ್ಮನು ಹೇಳಿದನು-ದ್ವಿಜರು ಅನೇಕ ಜನ್ಮಗಳಿಂದ ಸಾಧಿಸಿದರೂ ಯಾವ ಜಾಗವನ್ನು ಹೊಂದಲಾರರೋ ಅಂತಹ ಜಾಗವನ್ನು ಈ ಶಬರ ಸಿಂಹರು ಬಹು ಸುಲಭವಾಗಿಯೇ ಹೊಂದಿದರು. ಆದ್ದರಿಂದ ಈ ತೀರ್ಥರಾಜನ ಮಹಿಮೆಯು ಎಂತಹದು ? ಎಂಬುದನ್ನು ನೋಡು.

ಜನ್ಮನಃ ಪ್ರಭೃತಿ ತಾವದಾ ಮೃತೇಃ ಪಾಪಿನಾಮಪಿ ಚ ಯತ್ರಭಾವತಃ ।
ಜಗ್ಮತುಃ ಸುತ ಹರೇಃ ಸರೂಪತಾಮಸ್ಯ ತೀರ್ಥನೃಪಭಸ್ಯ ಕಾ ಸ್ತುತಿಃ ॥ ೪ ॥

ಶುದ್ಧಸತ್ವಮಪಿ ರೂಪಮೈಶ್ವರಂ ಕ್ವಾಂಬುಜನ್ಮಜನಿದೇವದುರ್ಲಭಂ ।
ತಾಪಸೌ ಕ್ವ ಮೃಗನಾಥಭಿಲ್ಲಕೌ ಕಿಂ ತು ತೀರ್ಥಮಿದಮದ್ಭುತಕ್ರಿಯಂ ॥೫॥

ತಾತ ಭೋಃ ಪತತಿ ವೇಧಸಃ ಪದಾಜ್ಜನ್ತುರಂತಮಧಿಗಮ್ಯ ಕರ್ಮಣಾಂ ।
ಅತ್ರ ದೇವಗುರುನಿರ್ಮಿತೇ ಮೃತಿಂ ಪ್ರಾಪ್ಯ ಮಾಧವಪದಾನ್ನವಿಚ್ಯುತಃ ॥೬॥

॥ ನಾರದ ಉವಾಚ ॥

ಏವಂ ಪ್ರತ್ಯಕ್ಷಮಾಲೋಕ್ಯ ಮಾಹಾತ್ಮ್ಯಂ ಸ ದ್ವಿಜೋತ್ತಮಃ ।
ತೀರ್ಥಸ್ಯಾಸ್ಯ ಗುರೋಃ ರಾಜನ್ ಸ್ನಾತುಂ ತತ್ರ ಪ್ರಚಕ್ರಮೇ ॥ ೭ ॥

---

೪. ಹುಟ್ಟಿದ ಮೊದಲುಗೊಂಡು ಸಾಯುವವರೆವಿಗೂ ಪಾಪಿಗಳಾಗಿದ್ದವರೂ ಯಾವ ತೀರ್ಥದಲ್ಲಿನ ಮಹಿಮೆಯಿಂದ ಹರಿಯ ಸಾರೂಪ್ಯವನ್ನು ಹೊಂದಿದರೋ ಅಂತಹ ತೀರ್ಥರಾಜನನ್ನು ಎಷ್ಟು ಹೊಗಳಿದರೆ ತಾನೇ ಸಾಧ್ಯವು !

೫. ಬ್ರಹ್ಮನಿಂದ ಉತ್ಪನ್ನವಾದ ತೀರ್ಥದಿಂದ ಹೊಂದಿದ, ದೇವತೆಗಳಿಗೂ ದುರ್ಲಭವಾದ, ಶುದ್ಧವಾದ ಸತ್ವ ಗುಣವುಳ್ಳ ಈಶ್ವರನ ಸಂಬಂಧವಾದ, ರೂಪವೆಲ್ಲಿ? ಸಿಂಹ ಶಬರರಾದ ಈ ದಯನೀಯರಾದ ಪಾಪಿಗಳೆಲ್ಲಿ? ಆದರೆ ಈ ತೀರ್ಥವು ಅದ್ಭುತವಾದ ಸಾಮರ್ಥ್ಯವುಳ್ಳದ್ದು. ಆ ಪಾಪಿಗಳಿಗೂ ಅದ್ಭುತ ರೂಪವನ್ನು ಕೊಟ್ಟಿದೆಯಲ್ಲ !

೬. ಎಲೈ ತಂದೆಯೇ ! ಪ್ರಾಣಿಯಾದವನು ಬ್ರಹ್ಮನ ಪದವನ್ನು ಹೊಂದಿ ತನ್ನ ಕರ್ಮಗಳು ಮುಗಿದ ಮೇಲೆ ಆ ಬ್ರಹ್ಮನ ಸ್ಥಾನದಿಂದ ಕೆಳಗೆ ಬೀಳುತ್ತಾನೆ. ಆದರೆ ದೇವ ಗುರುವಿನಿಂದ ನಿರ್ಮಿತವಾದ ಈ ತೀರ್ಥದಲ್ಲಿ ಮರಣವನ್ನು ಹೊಂದಿದರೆ ವೈಕುಂಠದಿಂದ ಅವನು ಹೊರಗೆ ಬೀಳುವುದೇ ಇಲ್ಲ.

೭. ನಾರದನು ಹೇಳಿದನು-ಈ ರೀತಿಯಾಗಿ ಅಲ್ಲಿನ ಮಹಿಮೆಯನ್ನು ಆ ಬ್ರಾಹ್ಮಣನು ಕಣ್ಣೆದುರಿಗೆ ನೋಡಿ ಆ ಗುರುವಿನ ತೀರ್ಥದಲ್ಲಿ ಸ್ನಾನ ಮಾಡಲು ಮೊದಲು ಮಾಡಿದನು.

ಮುಖದಂತಪದಾನಾಂ ಸ ಕೃತ್ವಾ ಶುದ್ಧಿಂ ಚ ಚೇತಸಃ ।
ಪಂಚಕಚ್ಛಃ ಶಿಖಾಬಂಧೋಪಗ್ರಹೀ ಮಾಧವಂ ಸ್ಮರೇತ್ ॥ ೮ ॥

ಅಶ್ವಕ್ರಾನ್ತೇತಿ ಶ್ಲೋಕೇನ ಪಾಠೇನ ತಟಮೃತ್ತಿಕಾಂ ।
ಸ್ಪೃಶೇತ್ ತಸ್ಯೈವ ವಿಧೃತತಿಲಕೋ ಜಲಮಾವಿಶತ್ ॥ ೯ ॥

ತತ್ರ ಪ್ರವಾಹಾಭಿಮುಖೋ ನಿಮಜ್ಜ್ಯ ಪುನರುತ್ಥಿತಃ ।
ಪುನರ್ಮಗ್ನೋ ಹರಿಂ ಸ್ಮೃತ್ವಾ ಗಂಗಾಂ ಚ ಜನಪಾವನೀಂ ॥ ೧೦ ॥

ಅಯೋಧ್ಯಾದ್ಯಾಃ ಪುರೀಸ್ಸಪ್ತ ಪುನರುತ್ಥಾಯ ಸಂಸ್ಮರೇತ್ ।
ಪುನರ್ಮಮಜ್ಜ ಸಲಿಲೇ ಗೋವಿಂದಾರ್ಪಿತಮಾನಸಃ ॥ ೧೧ ॥

ಕೃತ್ವಾ ಯಥಾವಿಧಿ ಸ್ನಾನಂ ಧೌತವಸ್ತ್ರೇ ಚ ಪರ್ಯಧಾತ್ ।
ಬಹಿರಾಗತ್ಯ ತಿಲಕಂ ಚಕ್ರೇ ಚ ದ್ವಿಜಸತ್ತಮಃ ॥ ೧೨ ॥

---

೮. ಆ ಬ್ರಾಹ್ಮಣನು ಮುಖ ಹಲ್ಲು ಕೈ ಕಾಲುಗಳನ್ನು ಶುದ್ಧಿಮಾಡಿಕೊಂಡು ಶುದ್ಧವಾದ ಮನಸ್ಸಿನಿಂದ ಪಂಚಗಚ್ಚೆಯನ್ನು ಹಾಕಿಕೊಂಡು ತಲೆಯನ್ನು ಗಂಟು ಹಾಕಿಕೊಂಡು ಶ್ರೀ ವಿಷ್ಣುವನ್ನು ಸ್ಮರಿಸುತ್ತ ಸ್ನಾನಕ್ಕೆ ಇಳಿದನು.

೯. ಅಶ್ವಕ್ರಾನ್ತೇ ರಥಕ್ರಾನ್ತೇ ಎಂಬ ವೇದದ ಋಕ್ಕನ್ನೇ ಹೇಳುತ್ತ ಆ ತೀರ್ಥದ ದಡದಲ್ಲಿರುವ ಮಣ್ಣನ್ನು ತೆಗೆದುಕೊಂಡು ಅದನ್ನು ಪೂಸಿಕೊಂಡು ತಿಲಕವನ್ನು ಇಟ್ಟುಕೊಂಡು ಅನಂತರ ನೀರಿಗೆ ಇಳಿದನು.

೧೦. ಆಗ ಆ ಪ್ರವಾಹಕ್ಕೆ ಎದುರಾಗಿ ಮುಳುಗಿ ಮತ್ತೆ ಎದ್ದನು. ಮತ್ತೆ ಹರಿಯನ್ನು ಸ್ಮರಿಸುತ್ತ ಜನಪಾವನಿಯಾದ ಆ ಗಂಗೆಯನ್ನು ಸ್ಮರಿಸಿದನು. ಮತ್ತೆ ಮುಳುಗಿದನು.

೧೧. ಹಾಗೆ ಎದ್ದವನು ಅಯೋಧ್ಯಾ ಮಥುರ ಮಾಯ ಕಾಶಿ ಕಾಂಚಿ ಅವಂತಿಕಾ ದ್ವಾರವತಿಗಳೆಂಬ ಏಳು ಪಟ್ಟಣಗಳನ್ನು ಸ್ಮರಿಸುತ್ತ ಆ ಸ್ವಾಮಿಯಾದ ಗೋವಿಂದನನ್ನು ಸ್ಮರಿಸುತ್ತ ನೀರಿನಲ್ಲಿ ಮುಳುಗಿದನು.

೧೨. ಈ ರೀತಿಯಲ್ಲಿ ಕ್ರಮವಾಗಿ ಸ್ನಾನಮಾಡಿ ಮೇಲಕ್ಕೆ ಬಂದು ಮಡಿ ಬಟ್ಟೆಗಳನ್ನುಟ್ಟುಕೊಂಡು ಹಣೆಗೆ ತಿಲಕವನ್ನು ಇಟ್ಟುಕೊಂಡನು.

ಕರಪಾದಶಿಖಾಸೂತ್ರೈರ್ದರ್ಭಾಂಶ್ಚ ವಿಧದ್ವಶೀ ।
ಸಂಧ್ಯಾಂ ಚಕಾರ ವಿಧಿವತ್ತರ್ಪಣಂ ತ್ರಿವಿಧಂ ತಥಾ ॥ ೧೩ ॥

ಸೂರ್ಯಾಯ ಕುಸುಮೈರ್ದತ್ವಾ ಸಜಲೈರರ್ಘ್ಯಮಾದೃತಃ ।
ಶಿರೋಬದ್ಧಾಂಜಲಿಪುಟೋ ನಮಶ್ಚಕ್ರೇ ದ್ವಿಜೋತ್ತಮಃ ॥ ೧೪ ॥

ಆವಾಹನಾದಿನೈವೇದ್ಯಪರ್ಯಂತಮಥ ವಿಪ್ರರಾಟ್ ।
ಜಗತ್ಪೂಜ್ಯಪದಾಜ್ಞಸ್ಯ ವಿಷ್ಣೋಃ ಪೂಜಾಮುಚೀಕರತ್ ॥ ೧೫ ॥

ಕೃತಕ್ರಿಯಸ್ಸೂಪವಿಷ್ಟಸ್ತ್ವಾದೃಶಂ ಸುತಮಾತ್ಮನಃ ।
ಜಗಾದ ಸಂಸ್ಮರನ್ ಪೂರ್ವಜನ್ಮಕರ್ಮಾಣಿ ಕೃತ್ಸ್ನಶಃ ॥ ೧೬ ॥

॥ ಶಿವಶರ್ಮೋವಾಚ ॥

ವಿಷ್ಣುಶರ್ಮನ್ನ ತೇ ಮಿಥ್ಯಾ ವಾಕ್ಯಂ ತಾತ ಯತಃ ಸ್ಮೃತಿಃ ।
ಅತ್ರ ಸ್ನಾನೇನ ಮೇ ಜಾತಾ ಪೂರ್ವೇಷಾಂ ಜನ್ಮಕರ್ಮಣಾಂ ॥ ೧೭ ॥

---

೧೩. ಅನಂತರ ಕೈ ಕಾಲು ತಲೆ ಇವುಗಳಿಗೆ ದರ್ಭೆಯನ್ನು ಸಿಕ್ಕಿಸಿ ಕೊಂಡು ಸಂಧ್ಯಾವಂದನೆಯನ್ನು ಕ್ರಮವಾಗಿ ಮಾಡಿ ದೇವ ಋಷಿ ಪಿತೃಗಳಿಗೆ ಮೂರು ಗುಂಪಿಗೂ ತರ್ಪಣವನ್ನು ಕೊಟ್ಟನು

೧೪. ಅನಂತರ ಸೂರ್ಯನಿಗೆ ಹೂವು ಮಂತ್ರಾಕ್ಷತೆಗಳಿಂದ ಕೂಡಿದ ಅರ್ಘ್ಯವನ್ನು ಕೊಟ್ಟನು. ತಲೆಯ ಮೇಲೆ ಕೈ ಮುಗಿದುಕೊಂಡು ನಮಸ್ಕಾರ ವನ್ನು ಮಾಡಿದನು.

೧೫. ಅನಂತರ ಆ ಬ್ರಾಹ್ಮಣನು ಲೋಕಪೂಜ್ಯನಾದ ವಿಷ್ಣುವಿಗೆ ಆವಾಹನವೇ ಮೊದಲಾದ ನೈವೇದ್ಯದವರೆಗೂ ಪೂಜೆಮಾಡಿದನು.

೧೬. ಈ ರೀತಿಯಾಗಿ ಸ್ನಾನ, ಸಂಧ್ಯಾವನೆ, ಪೂಜೆಗಳನ್ನು ಮಾಡಿ ಕೊಂಡು ಸುಖವಾಗಿ ಕುಳಿತುಕೊಳ್ಳಲು ಹಿಂದಿನ ಜನ್ಮಗಳ ಸ್ಮರಣೆಗಳೆಲ್ಲವೂ ಬಂದುವು. ಆಗ ಮಗನನ್ನು ಕುರಿತು ಇಂತೆಂದನು.

೧೭. ಶಿವಶರ್ಮನು ಹೇಳಿದನು– ಎಲೈ ವಿಷ್ಣುಶರ್ಮನೇ! ನಿನ್ನ ಮಾತು ಸುಳ್ಳಲ್ಲ. ಇಲ್ಲಿ ಸ್ನಾನಮಾಡಿದುದರಿಂದ ಪೂರ್ವಜನ್ಮಗಳ ಸ್ಮರಣೆಯು ನನಗೆ ಉಂಟಾಯಿತು.

ಆಕರ್ಣಯ ಮಹಾಭಾಗ ಕಥಯಾಮಿ ತವಾಗ್ರತಃ ।
ಪುರಾಹಮನ್ವಯೇ ಜಾತೋ ವಿಶಾಂ ಧನಿಕಧರ್ಮಿಣಾಂ ॥ ೧೮ ॥

ಪಿತಾ ಮೇ ಶರಭೋ ನಾಮ್ನಾ ಕಾನ್ಯಕುಬ್ಜೇ ಪುರೇ ವಸನ್ ।
ವಾಣಿಜ್ಯೇನಾರ್ಜಯನ್ವಿತ್ತಂ ಭೂರಿಧರ್ಮಧನಾಶ್ರಿತಃ ॥ ೧೯ ॥

ವ್ಯತೀತಸ್ತು ಮಹಾನ್ ಕಾಲಸ್ತಸ್ಯ ನಾಭವದಾತ್ಮಜಃ ।
ಜರಾಗೃಹೀತದೇಹಸ್ಯ ತಚ್ಚಿಂತಾತುರಚೇತಸಃ ॥ ೨೦ ॥

ಅಚಿಂತಯದಹೋರಾತ್ರಮಿತಿ ವೈಶ್ಯವರಸ್ತದಾ ।
ವಿನಾ ಸುತೇನ ಮೇ ವ್ಯರ್ಥಂ ಧನಂ ಭೂರ್ಯಪಿ ಸಂಚಿತಂ ॥ ೨೧ ॥

ಋತೇ ಸುತಮೃಣೀ ಲೋಕೇ ಪಿತೄಣಾಂ ಧನವಾನಪಿ ।
ಸಜಲೋಪಿ ವಿನಾ ವರ್ಷಂ ಚಾತಕಾನಾಂ ಯಥಾ ಘನಃ ॥ ೨೨ ॥

---

೧೮. ಎಲೈ ಮಹಾತ್ಮನೇ! ಕೇಳು ನಿನ್ನೆದುರಿಗೆ ನನ್ನ ಕಥೆಯನ್ನು ಹೇಳುತ್ತೇನೆ. ನಾನು ಹಿಂದೆ ಒಬ್ಬ ಧನಿಕನೂ ಧರ್ಮಿಷ್ಠನೂ ಆದ ವೈಶ್ಯನ ವಂಶದಲ್ಲಿ ಹುಟ್ಟಿದ್ದೆನು.

೧೯. ನನ್ನ ತಂದೆಯ ಹೆಸರು ಶರಭನೆಂದು. ಅವನು ಕಾನ್ಯಕುಬ್ಜದಲ್ಲಿ ವಾಸಿಸುತ್ತಿದ್ದನು. ವ್ಯಾಪಾರದಿಂದ ಹಣವನ್ನು ಸಂಪಾದಿಸುತ್ತ ಬಹುಧನಿಕನಾದನು.

೨೦. ಬಹುಕಾಲವಾದರೂ ಅವನಿಗೆ ಮಕ್ಕಳೇ ಆಗಲಿಲ್ಲ. ಮುಪ್ಪಿನಿಂದ ಮೈ ಕೈಗಳೆಲ್ಲವೂ ಸುಕ್ಕು ಬಂದಿತು. ಆತನು ಯಾವಾಗಲೂ ಮಕ್ಕಳ ಯೋಚನೆಯಲ್ಲಿಯೇ ಇದ್ದನು.

೨೧. ನನಗೆ ಮಕ್ಕಳಿಲ್ಲದಿದ್ದರೆ ನಾನು ಸಂಪಾದಿಸಿದ ಬಹುವಾದ ಈ ಹಣವು ವ್ಯರ್ಥವೆಂಬುದಾಗಿ ಆ ವೈಶ್ಯನು ಯಾವಾಗಲೂ ಯೋಚಿಸುತ್ತಿದ್ದನು.

೨೨. ಮಕ್ಕಳಿಲ್ಲದಿದ್ದರೆ ಅವನು ಧನವಂತನಾದರೂ, ಪಿತೃಗಳಿಗೆ ಸಾಲಗಾರನಾಗಿಯೇ ಇರುವನು. ಲೋಕದಲ್ಲಿ ಮೋಡದಲ್ಲಿ ನೀರಿದ್ದರೂ ಆ ಮೋಡವು ನೀರನ್ನು ಸುರಿಸದಿದ್ದರೆ ಚಾತಕಗಳು ಹೇಗೆ ನೀರಿಲ್ಲದಿರುವುವೋ ಹಾಗೆ ಮಗನಿಲ್ಲದಿದ್ದರೆ ಅವರಿಗೆ ಉಪಯೋಗವಿಲ್ಲ.

ಪುಮರ್ಗಾ ಜಯತಿ ಸಂತತ್ಯಾ ವಿಶ್ವಂ ಧರ್ಮಧುರೀಣಯಾ ।
ಶಕ್ತ್ಯಾ ತ್ರಿವಿಧಯಾ ರಾಜಾ ವಿಪಕ್ಷಮಿವ ದುರ್ಜಯಂ ॥ ೨೩ ॥

ಪ್ರಾಣಿತಿ ಸಂತತಿಶ್ಶುದ್ಧಾ ಸುಮುಸಃ ಪಿತೃಮಾನವಾನ್ ।
ಮಿತ್ರಪ್ರತ್ಯರ್ಥ್ಯುದಾಸೀನಾನ್ಸೂನೃತಾ ವಾಗ್ಯಥೇರಿತಾ ॥ ೨೪ ॥

ಉದಯಸ್ಥೇನ ಪುತ್ರೇಣ ವರ್ಧತೇ ಸ್ವಯಶಃ ಪಿತುಃ ।
ನಿರ್ಮಲಂ ದ್ವಿಜರಾಜೇನ ನೀರಂ ನೀರನಿಧೇರಿವ ॥ ೨೫ ॥

ತಸ್ಮಾದ್ಯತೇತ್ಸುತೋತ್ಪತ್ತ್ಯೈ ಶರೀರೇಣ ಧನೇನ ವಾ ।
ತನ್ಮೃತೇ ಹಿ ದ್ವಯಂ ವ್ಯರ್ಥಂ ಜನಾನಾಂ ತಡಿದಾಯುಷಾಂ ॥ ೨೬ ॥

ಏವಂ ಚಿಂತಯತಸ್ತಸ್ಯ ಗೃಹೇ ಮುನಿವರಸ್ತದಾ ।
ದೇವಲೋತೀಂದ್ರಿಯಜ್ಞಾನೋ ವರಂ ದಾತುಂ ಸಮಾಯಯೌ ॥ ೨೭ ॥

---

೨೩. ಪ್ರಭುಶಕ್ತಿ, ಉತ್ಸಾಹಶಕ್ತಿ, ಕೋಶಶಕ್ತಿಗಳಿಂದ ರಾಜನಾದವನು ದುರ್ಜಯನಾದ ಶತ್ರುವನ್ನು ಹೇಗೆ ಜಯಿಸುವನೋ ಹಾಗೆ ಧರ್ಮವಂತರಾದ ಮಕ್ಕಳಿಂದ ಮನುಷ್ಯನು ಪ್ರಪಂಚಗಳೆಲ್ಲವನ್ನೂ ಜಯಿಸುವನು.

೨೪. ಶುದ್ಧರಾದ ಮಕ್ಕಳು ಹುಟ್ಟಿ ಬದುಕಿದ್ದರೆ ಆ ತಂದೆಯು ಮನುಷ್ಯನಾದವನು ಒಳ್ಳೆಯ ಮಾತನ್ನಾಡಿದರೆ ಮಿತ್ರರು ಶತ್ರುಗಳು ಉದಾಸೀನರುಗಳನ್ನು ತೃಪ್ತಿಪಡಿಸುವಂತೆ ಜನರನ್ನು ತೃಪ್ತಿಪಡಿಸುವನು.

೨೫. ಚಂದ್ರನು ಉದಯಿಸುತ್ತಿದ್ದರೆ ಸಮುದ್ರದ ನೀರು ನಿರ್ಮಲವಾಗಿ ಉಕ್ಕುವಂತೆ ಉತ್ತಮನಾದ ಮಗನು ಹುಟ್ಟಿ ಬದುಕುತ್ತಿದ್ದರೆ ಆ ತಂದೆಯ ವಂಶವೂ ಯಶಸ್ಸೂ ವೃದ್ಧಿಯಾಗುತ್ತವೆ.

೨೬. ಆದ್ದರಿಂದ ನಾನು ದೇಹಶ್ರಮದಿಂದಲಾಗಲೀ ಹಣದವ್ಯಯದಿಂದಲಾಗಲೀ ಮಕ್ಕಳಾಗಲು ಪ್ರಯತ್ನ ಪಡುತ್ತೇನೆ. ಮಿಂಚಿನಂತೆ ಚಂಚಲವಾದ ಆಯುಸ್ಸುಳ್ಳ ಈ ಜನರಿಗೆ ಆ ಮಗನಿಲ್ಲದಿದ್ದರೆ ಇಹಪರಗಳೆರಡೂ ವ್ಯರ್ಥವಾಗುತ್ತವೆ.

೨೭. ಈತನು ಹೀಗೆ ಯೋಚಿಸುತ್ತಿರಲು ಅವನ ಮನೆಗೆ ಒಬ್ಬನು ಋಷಿಯು ಬಂದನು. ಅವನ ಹೆಸರು ದೇವಲನೆಂದು. ಅವನು ಬಹು ಜ್ಞಾನಿಯು. ವರವನ್ನು ಕೊಡಲು ಅಲ್ಲಿಗೆ ಬಂದನು.

ಆಗತಂ ತಂ ಸಮಾಲೋಕ್ಯ ಪ್ರತ್ಯುತ್ಥಾಯಾಸನಾತ್ಪಿತಾ ।
ದತ್ವಾರ್ಘ್ಯಮಥ ಪಾದ್ಯಂ ಚ ವವಂದೇ ಶಿರಸಾ ಮುನಿಂ ॥ ೨೮ ॥

ಉಪವೇಶ್ಯಾಸನೇ ದತ್ತೇ ಸ್ವಹಸ್ತೇಸ ಪಿತಾ ಮಮ ।
ಪಪ್ರಚ್ಛ ಚ ಮುನಿಶ್ರೇಷ್ಠಂ ದೇವಲಂ ದೇವದರ್ಶನಂ ॥ ೨೯ ॥

॥ ವೈಶ್ಯ ಉವಾಚ ॥

ಸ್ವಾಗತಂ ತು ಮುನಿಶ್ರೇಷ್ಠ ಶಮಸ್ತಿ ಭವತಾಂ ಕುಲೇ ।
ತಪಸ್ಸ್ವಾಧ್ಯಾಯನಿಯಮಾ ನಿಷ್ಪ್ರತ್ಯೂಹಾ ಭವಂತಿ ಚ । ॥ ೩೦ ॥

ಕಾಲೇಚಾತಿಥಯಃ ಕಚ್ಚಿದಾಯಾಂತಿ ಭವದಾಶ್ರಮೇ ।
ಕಚ್ಚಿದಾಶ್ರಮವೃಕ್ಷಾ ವಃ ಫಲಂತಿ ಮನಸೇಪ್ಸಿತಂ ॥ ೩೧ ॥

ವ್ಯಾಘ್ರಾದಯೋ ನ ಕುರ್ವಂತಿ ಕಚ್ಚಿದ್ವೈರಂ ಮೃಗಾದಿಭಿಃ ।
ತ್ವದೀಯಾಶ್ರಮಮಭ್ಯೇತ್ಯ ಭ್ರಾತರೋ ಭ್ರಾತೃಭಿರ್ಯಥಾ ॥ ೩೨ ॥

---

೨೮. ಆ ಋಷಿಯು ಬರುತ್ತಿರುವುದನ್ನು ನೋಡಿ ನನ್ನ ತಂದೆಯು ಆಸನದಿಂದ ಎದ್ದು ಆತನಿಗೆ ಅರ್ಘ್ಯಪಾದ್ಯಗಳನ್ನು ಕೊಟ್ಟು ನಮಸ್ಕರಿಸಿದನು.

೨೯. ಆಗ ಆತನು ಪೀಠದಲ್ಲಿ ಕುಳಿತುಕೊಂಡ ಮೇಲೆ ಆ ಜ್ಞಾನಿಯಾದ ದೇವಲನನ್ನು ಕುಶಲ ಪ್ರಶ್ನೆಗಳನ್ನು ಕೇಳಿದನು.

೩೦. ವೈಶ್ಯನು ಹೇಳಿದನು–ಎಲೈ ಋಷಿಯೇ ! ಸ್ವಾಗತವೇ ! ನಿಮ್ಮ ಗುಂಪು ಸುಖವಾಗಿದೆಯೇ ! ನಿಮ್ಮ ತಪಸ್ಸು ಅಧ್ಯಯನ ನಿಯಮಗಳು ನಿರ್ವಿಘ್ನವಾಗಿ ನಡೆಯುತ್ತಿವೆಯೇ ?

೩೧. ಆಯಾ ಕಾಲಗಳಿಗೆ ಸರಿಯಾಗಿ ಅತಿಥಿಗಳು ನಿನ್ನ ಆಶ್ರಮಕ್ಕೆ ಬರುತ್ತಾರೆಯೇ ? ನಿನ್ನ ಆಶ್ರಮದಲ್ಲಿರುವ ಮರಗಳು ನಿನ್ನ ಮನಸ್ಸಿಗೆ ಬಂದ ರೀತಿಯಲ್ಲಿ ಹಣ್ಣು ಹೂಗಳನ್ನು ಬಿಡುತ್ತವೆಯೇ ?

೩೨. ಹುಲಿಯೇ ಮುಂತಾದ ದುಷ್ಟಪ್ರಾಣಿಗಳು ನಿನ್ನ ಆಶ್ರಮದಲ್ಲಿ ಮೃಗಗಳೊಡನೆ ವೈರವನ್ನು ಮಾಡುವುದಿಲ್ಲವಷ್ಟೇ ! ಮತ್ತು ಅಣ್ಣತಮ್ಮಂದಿರಂತೆ ಸ್ನೇಹದಿಂದ ಇದ್ದುಕೊಂಡುರುತ್ತವೆಯೇ ?

ತವಾಟನಂ ಭುವಿ ಮುದೇ ಗೃಹಿಣಾಮನ್ಯಥಾ ಕಥಂ ।
ತೇಷಾಂ ಗೃಹಾಧಿಮಗ್ನಾನಾಂ ದರ್ಶನಂ ಕ್ವ ಭವಾದೃಶಃ ॥ ೩೩ ॥

ಹರಿಪಾದರಜೋಬುದ್ಧೇಃ ಕಾಮಂ ಕಾಮೋ ನ ಕುತ್ರಚಿತ್ ।
ಮುನೇ ತವ ತಥಾಪ್ಯಾಶು ಹೇತುಮಾಗಮನೇ ವದ ॥ ೩೪ ॥

॥ ಶಿವಶರ್ಮೋವಾಚ ॥

ಇತ್ಯುಕ್ತಸ್ತೇನ ಸ ಮುನಿಃ ದೇವಲೋ ದೇವಪೂಜಿತಃ ।
ಅಬ್ರವೀತ್ತನ್ಮನೋಭಾವಂ ಜ್ಞಾತುಕಾಮೋ ನಿಶಾಂ ಪತಿಂ ॥ ೩೫ ॥

॥ ದೇವಲ ಉವಾಚ ॥

ವೈಶ್ಯವರ್ಯ ತ್ವಯಾ ಭೂರಿ ಧನಂ ಧರ್ಮೇಣ ಸಂಚಿತಂ ।
ಕರೋಷಿ ಯೇನ ಧರ್ಮಜ್ಞ ನಿತ್ಯನೈಮಿತ್ತಿಕೀಃ ಕ್ರಿಯಾಃ ॥ ೩೬ ॥

---

೩೩. ಇಂತಹ ಜ್ಞಾನಿಯಾದ ನೀನು ಪ್ರಪಂಚದಲ್ಲಿ ಸುತ್ತುತ್ತಿದ್ದರೆ ಗೃಹಸ್ಥರಿಗೆ ಸಂತೋಷವಾಗದಿರುವುದೇ? ಮನೆಯ ಸಂಬಂಧವಾದ ಮನೋವ್ಯಥೆಯುಳ್ಳ ಆ ಗೃಹಸ್ಥರಿಗೆ ನಿನ್ನ ದರ್ಶನವು ವ್ಯರ್ಥವಾಗುವುದುಂಟೆ?

೩೪. ಹರಿಯ ಪಾದದ ಧೂಳನ್ನೇ ಸ್ಮರಿಸುತ್ತಿರುವ ನಿನಗೆ ಬೇರೆಯಾದ ಇಚ್ಛೆಗಳೇ ಇರುವುದಿಲ್ಲ. ಆದರೂ ನೀನು ಇಲ್ಲಿಗೆ ಬರಲು ಕಾರಣವೇನು? ಹೇಳು.

೩೫. ಶಿವಶರ್ಮನು ಹೇಳಿದನು– ನಮ್ಮ ತಂದೆಯು ಹೀಗೆಂದು ಹೇಳುತ್ತಲೂ ದೇವಪೂಜಿತನಾದ ಆ ದೇವಲನು ಅವನ ಮನಸ್ಸನ್ನು ತಿಳಿಯಲು ಇಂತೆಂದನು.

೩೬. ದೇವಲನು ಹೇಳಿದನು- ಎಲೈ ವೈಶ್ಯನೇ! ನೀನು ಧರ್ಮದಿಂದ ಬಹುವಾದ ಹಣವನ್ನು ಸಂಪಾದಿಸಿದ್ದೀಯೆ. ಆ ಧರ್ಮದ ಹಣದಿಂದಲೇ ನಿತ್ಯವೂ ನೈಮಿತ್ತಿಕವೂ ಆದ ಕೆಲಸಗಳನ್ನು ಮಾಡುತ್ತಿದ್ದೀಯೆ.

ಆದರಂ ರಾಜಸದಸಿ ಧನೇನ ಲಭತೇ ನರಃ ।
ಸುಭಟಶ್ಶತ್ರುಸಂಗ್ರಾಮೇ ವಿಕ್ರಮೇಣ ಯಥಾ ಜಯಂ ।     ॥ ೩೭ ॥

ಗೃಹಸ್ಥಸ್ತು ಧನಂ ಪ್ರಾಪ್ಯ ಪರಾಂ ಪುಷ್ಟಿಂ ಪ್ರಜತ್ಯಲಂ ।
ಶರತ್ಪರಿಣತಂ ಸಸ್ಯಮನಡ್ವಾನಿವ ವಿಟ್ಪತೇ     ॥ ೩೮ ॥

ಧನಿನಂ ನ ವಿಮುಂಚಂತಿ ಬಂಧವೋನ್ಯೇ ಚ ಯೇ ಜನಾಃ ।
ಮಧುಮತ್ಸುಮನೋ ಯುಕ್ತಂ ಪಾದಪಂ ಮಧುಪಾ ಇವ     ॥ ೩೯ ॥

ಧನಾಭಾವೇನ ಗೃಹಿಣಾಂ ಕೃಶತ್ವಮುಪಜಾಯತೇ ।
ಸರ್ವತೋ ಗ್ರೀಷ್ಮಸಮಯೇ ತ್ವಂಭಸಾಂ ಸರಸಾಮಿವ     ॥ ೪೦ ॥

ತದ್ಧನಂ ವರ್ತತೇ ಭೂರಿ ಗೃಹೇ ತವ ವಿಶಾಂ ಪತೇ ।
ಕುತಃ ಕೃಶತ್ವಮಂಗಾನಾಂ ಗೋಪ್ಯಂ ಚೇನ್ನ ವದಾದ್ಯ ಮೇ     ॥ ೪೧ ॥

---

೩೭. ಒಳ್ಳೆಯ ಯೋಧನಾದವನು ಶತ್ರುಗಳೊಡನೆ ಯುದ್ಧಮಾಡಿ ಜಯವನ್ನು ಹೊಂದುವಂತೆ ಹಣವುಳ್ಳವನು ರಾಜನ ಸಭೆಯಲ್ಲಿ ಸನ್ಮಾನವನ್ನು ಹೊಂದುತ್ತಾನೆ.

೩೮. ಶರದೃತುವಿನಲ್ಲಿ ಪಕ್ವವಾದ ಸಸ್ಯವನ್ನು ತಿಂದು ಹೋರಿಗಳು ಪುಷ್ಟಿಯಾಗುವಂತೆ ಗೃಹಸ್ಥನಾದವನು ಧನವನ್ನು ಹೊಂದಿ ಪುಷ್ಟಿಯನ್ನು ಹೊಂದುತ್ತಾನೆ.

೩೯. ಜೇನುನೊಣಗಳು ಮಕರಂದ ಕೂಡಿದ ಹೂವಿರುವ ಮರವನ್ನು ಯಾವಾಗಲೂ ಬಿಡದಿರುವಂತೆ ಧನಿಕರಾದವರನ್ನು ಬಂಧುಗಳಾಗಲೀ ಇತರರಾಗಲೀ ಬಿಡುವುದಿಲ್ಲ.

೪೦. ಬೇಸಗೆಯ ಕಾಲದಲ್ಲಿ ನೀರಿಲ್ಲದೆ ಕೊಳ ಕೆರೆಗಳು ಒಣಗಿ ಹೋಗುವಂತೆ ಹಣವಿಲ್ಲದಿದ್ದರೆ ಕೃಶರಾಗುತ್ತಾರೆ.

೪೧. ಆ ರೀತಿಯಾದ ಹಣವು ನಿನ್ನಲ್ಲಿ ಬಹುವಾಗಿದೆ. ಆದರೂ ಕೂಡ ನೀನು ಬಹು ಕೃಶವಾಗಿದ್ದೀಯೆ. ಗುಟ್ಟಿಲ್ಲದೆ ಹೇಳಲು ಯೋಗ್ಯವಾಗಿದ್ದರೆ ಇದರ ಕಾರಣವನ್ನು ನನಗೆ ಹೇಳು.

|| ವೈಶ್ಯ ಉವಾಚ ||

ಹಿತೋಪದೇಶನಿರತಾ ಭವಂತಃ ಪಿತರೋ ಯಥಾ ।
ಗೋಪನೀಯಂ ಭವದ್ಭ್ಯಃ ಕಿಂ ಮಾದೃಶೈಃ ಪುತ್ರತಾಂ ಗತೈಃ || ೪೨ ||

ತ್ವತ್ಪ್ರಸಾದಾನ್ಮುನಿಶ್ರೇಷ್ಠ ಸರ್ವತೋಽಸ್ತಿ ಶಿವಂ ಮಮ ।
ನಾರ್ಭಕೇಽಪಿ ಸುತಾಭಾವೋ ದುಃಖಮೇಕಮಿದಂ ಮಮ || ೪೩ ||

ತಸ್ಮಾತ್ಕೃಶತ್ವಮಂಗಾನಾಂ ವಿದ್ಧಿ ಮೇ ಮುನಿಪುಂಗವ ।
ಬಿಭೇಮ್ಯಹಂ ಪಿತೃಋಣಾದ್ಯತೋಽಧಃಪತನಂ ನೃಣಾಂ || ೪೪ ||

ತಮುಪಾಯಂ ಕುರು ಮುನೇ ಯೇನ ಸ್ಯಾಂ ಸುತವಾನಹಂ ।
ಕಿಂಚಿತ್ಕರ್ತುಮಶಕ್ಯಂ ನ ಭೂತಲೇಽತ್ರ ಭವಾದೃಶೈಃ || ೪೫ ||

|| ಶಿವಶರ್ಮೋವಾಚ ||

ಇತ್ಯಾಕರ್ಣ್ಯ ವಚಸ್ತಸ್ಯ ವೈಶ್ಯವರ್ಯಸ್ಯ ದೇವಲಃ ।
ಮನಃ ಕ್ಷಣಂ ಸ್ಥಿರಾಂ ಕೃತ್ವಾ ದಧ್ಯೌ ಮೀಲಿತಲೋಚನಃ || ೪೬ ||

---

೪೨. ವೈಶ್ಯನು ಹೇಳಿದನು-ತಾವು ತಂದೆಯಂತೆ ನನಗೆ ಹಿತೋಪದೇಶ ಮಾಡುವಾಗ ಮಕ್ಕಳಂತಿರುವ ನಾವು ಮುಚ್ಚಿಡತಕ್ಕದ್ದು ಏನಿರುವುದು ?

೪೩. ಎಲೈ ಮುನಿಯೇ ! ನಿನ್ನ ಅನುಗ್ರಹದಿಂದ ನನಗೆ ಎಲ್ಲದರಲ್ಲಿಯೂ ಮಂಗಳವೂ ಕ್ಷೇಮವೂ ಇರುವುದು. ಒಂದುಮಾತ್ರ ದುಃಖವಾಗಿರುವುದು ಅದೇನೆಂದರೆ ಮುಪ್ಪು ಬಂದರೂ ನನಗೆ ಮಕ್ಕಳು ಆಗದೆ ಇರುವುದು.

೪೪. ಆದ್ದರಿಂದಲೇನೆ ಇಷ್ಟುಬಡವಾಗಿರುವುದೆಂದು ತಿಳಿ ಪಿತೃಋಣವು ನರಕಕ್ಕೆ ಬೀಳಿಸುತ್ತದೆಯಾದುದರಿಂದ ನಾನು ಆ ಪಿತೃಋಣಕ್ಕೆ ಹೆದುರುತ್ತೇನೆ

೪೫. ಎಲೈ ಋಷಿಯೇ ! ನನಗೆ ಮಕ್ಕಳಾಗುವಂತೆ ಒಂದು ಉಪಾಯವನ್ನು ಹೇಳು. ನಿನ್ನಂತಹವರಿಗೆ ಈ ಭೂಲೋಕದಲ್ಲಿ ಏನನ್ನು ತಾನೆ ಮಾಡಲು ಸಾಧ್ಯವಾಗುವುದಿಲ್ಲ !

೪೬. ಶಿವಶರ್ಮನು ಹೇಳಿದನು-ಆಗ ಆ ದೇವಲನೆಂಬ ಋಷಿಯು ಆ ವೈಶ್ಯನ ಮಾತನ್ನು ಕೇಳಿ ಒಂದು ಗಳಿಗೆ ಮನಸ್ಸನ್ನು ಸ್ಥಿರಮಾಡಿಕೊಂಡು ಕಣ್ಣುಗಳನ್ನು ಮುಚ್ಚಿಕೊಂಡು ಧ್ಯಾನಮಾಡಿದನು.

ಸಂತತೇ ರ್ಮತ್ಪಿತುರ್ದೃಷ್ಟ್ವಾ ಪ್ರತಿಬಂಧಸ್ಯ ಕಾರಣಂ ।
ದೇವಲೋತೀಂದ್ರಿಯಜ್ಞಾನೀ ಬಭಾಷೇ ಕಾರಯನ್ ಸ್ಮೃತಿಂ    ॥ ೪೭ ॥

॥ ದೇವಲ ಉವಾಚ ॥

ಏಕದಾ ತು ಪುರಾ ವೈಶ್ಯ ತವೇಯಂ ಧರ್ಮಚಾರಿಣೀ ।
ಯಂ ಚಕಾರ ಸ್ವಚಿತ್ತೇ ತಂ ಕಥಯಾಮಿ ಮನೋರಥಂ ।    ॥ ೪೮ ॥

ಗುರ್ವಿಣೀ ಯದ್ಯಹಂ ಗೌರಿ ಭವೇಯಂ ಶಂಭುವಲ್ಲಭೇ ।
ತದಾ ತ್ವಾಂ ತೋಷಯಿಷ್ಯಾಮಿ ಷಡ್ರಸಾನ್ವಿತಭೋಜನ್ಯೈಃ    ॥ ೪೯ ॥

ಧೂಪದೀಪಕಮಲಾಭಿಸ್ತಾಂಬೂಲೈರ್ನೃತ್ಯವಾದ್ಯಕೈಃ ।
ತಂತ್ರೀಮುಖೋದ್ಗತೈರ್ಗೀತೈಃ ನಾನಾವಿಧವಿಲೇಪನೈಃ    ॥ ೫೦ ॥

ಏವಂ ಪ್ರತಿಶ್ರುತ್ಯ ಪುರಃ ಸಖೀನಾಂ ದಯಿತಾ ತವ ।
ಪ್ರತೀಕ್ಷಮಾಣಾ ತಂ ಕಾಲಂ ತಸ್ಥೌ ತದ್ಭಕ್ತಿಸಂಯುತಾ    ॥ ೫೧ ॥

---

೪೭. ಆಗ ಆ ದೇವಲನು ತನ್ನ ತಂದೆಗೆ ಮಕ್ಕಳು ಆಗದಿರಲು ಪ್ರತಿಬಂಧಕವಾದ ಕಾರಣವನ್ನು ತಿಳಿದು ನನ್ನ ತಂದೆಗೆ ಇಂತೆಂದು ಜ್ಞಾಪಿಸುತ್ತ ಹೇಳಿದನು.

೪೮. ದೇವಲನು ಹೇಳಿದನು-ಎಲೈ ವೈಶ್ಯನೇ! ನಿನ್ನ ಧರ್ಮಚಾರಿಣಿಯಾದ ಈ ಹೆಂಡತಿಯು ಒಂದುಸಾರಿ ಮನಸ್ಸಿನಲ್ಲಿ ಮಾಡಿಕೊಂಡ ವಿಷಯವನ್ನು ಹೇಳುತ್ತೇನೆ. ಕೇಳು.

೪೯-೫೦. ಎಲೈ ಶಂಭುವಲ್ಲಭೆಯಾದ ಗೌರಿಯೇ! ನಾನು ಗರ್ಭಿಣಿಯಾದರೆ ಆಗ ನಿನ್ನನ್ನು ಷಡ್ರಸವುಳ್ಳ ಭೋಜನದಿಂದಲೂ ಧೂಪ ದೀಪ ಮಾಲೆ ತಾಂಬೂಲ ನೃತ್ಯ ವಾದ್ಯ ವೀಣೆ ಗಂಧ ಮುಂತಾದುವುಗಳಿಂದಲೂ ತೃಪ್ತಿಪಡಿಸಿ ಸಂತೋಷಗೊಳಿಸುತ್ತೇನೆ.

೫೧. ಈ ರೀತಿಯಾಗಿ ಸಖಿಯರ ಮುಂದೆ ಪ್ರತಿಜ್ಞೆಮಾಡಿ ನಿನ್ನ ಹೆಂಡತಿಯು ಆ ಗರ್ಭಿಣಿಯಾಗುವ ಕಾಲವನ್ನು ನೋಡುತ್ತ ಬಹು ಭಕ್ತಿಯಿಂದಿದ್ದಳು.

ತಸ್ಮಿನ್ನೇವಾಭವದ್ಗರ್ಭೋ ಮಾಸೇಸ್ಯಾ ಯೋಷಿತಸ್ತವ ।
ಊಚುರೇನಾಂ ತತಸ್ಸಖ್ಯಃ ಸರ್ವಾಃ ಸಸ್ನೇಹಚೇತಸಃ ॥ ೫೨ ॥

॥ ಸಖ್ಯ ಊಚುಃ ॥

ಯಸ್ತ್ವಯಾ ವಾಂಛಿತೋ ಗರ್ಭೋ ಗೌರ್ಯಾ ಸ ಪ್ರತಿಪಾದಿತಃ ।
ಅತಃ ಪ್ರತಿಶ್ರುತಂ ದೇವ್ಯಾಃ ಪೂಜನಂ ಸುಭಗೇ ಕುರು ॥ ೫೩ ॥

ನೋ ಚೇದ್ವಿಕಾರಾದ್ಭವತಿ ವಿಘ್ನಂ ತು ತದನುಷ್ಠಿತಾತ್ ।
ತೋಷಿತಾ ರೋಷಿತಾಶ್ಚಾತ್ರ ದೇವ್ಯೋ ಹಿ ವರಶಾಪದಾಃ ॥ ೫೪ ॥

॥ ದೇವಲ ಉವಾಚ ॥

ಸಖೀಭಿರಿತಿ ತೇ ಭಾರ್ಯಾ ಕಥಿತೇಯಂ ಮುದಾನ್ವಿತಾ ।
ತ್ವಾಮುವಾಚ ಮಹಾಭಾಗಾ ವಿನಯೇನ ಪತಿವ್ರತಾ ॥ ೫೫ ॥

---

೫೨. ಆ ತಿಂಗಳಲ್ಲಿಯೇ ನಿನ್ನ ಹೆಂಡತಿಯು ಗರ್ಭಿಣಿಯಾದಳು. ಆಗ ಅವಳ ಸಖಿಯರ ಸ್ನೇಹದಿಂದ ಅವಳಿಗೆ ಇಂತೆಂದನು.

೫೩. ಸಖಿಯರು ಹೇಳಿದರು–ಎಲೈ ಸಖಿಯೇ ! ನೀನು ಅಪೇಕ್ಷಿಸಿದ ಗರ್ಭವನ್ನು ಗೌರಿಯು ದಯಪಾಲಿಸಿದ್ದಾಳೆ. ಆದ್ದರಿಂದ ಅವಳಿಗೆ ಕೊಡುತ್ತೇನೆಂದು ಹರಕೆ ಮಾಡಿಕೊಂಡಿರುವುದನ್ನು ಕೊಟ್ಟು ಪೂಜೆಮಾಡು.

೫೪. ಹಾಗೆ ಮಾಡದಿದ್ದರೆ ಆ ಗರ್ಭಕ್ಕೆ ವಿಘ್ನಬರುತ್ತದೆ. ದೇವತೆಗಳು ಸಂತೋಷಗೊಂಡರೆ ವರವನ್ನೂ ಕೋಪಗೊಂಡರೆ ಶಾಪವನ್ನೂ ಕೊಡುತ್ತಾರೆ.

೫೫. ದೇವಲನು ಹೇಳಿದನು–ನಿನ್ನ ಹೆಂಡತಿಗೆ ಆಕೆಯ ಸಖಿಯರು ಹೀಗೆ ಹೇಳಲು ಆಕೆಯು ಸಂತೋಷಗೊಂಡು ವಿನಯದಿಂದ ನಿನ್ನನ್ನು ಕುರಿತು ಇಂತೆಂದಳು.

॥ ವೈಶ್ಯಭಾರ್ಯೋವಾಚ ॥

ನಾಥ ಪೂಜಯಿತುಂ ಗೌರೀಂ ವಾಂಛಾಮ್ಯಖಿಲಕಾಮದಾಂ ।
ಯತ್ಪ್ರಸಾದಾದಹಂ ಜಾತಾ ವಾಂಛಿತಾರ್ಥವತೀ ಪ್ರಭೋ ॥ ೫೬ ॥

॥ ದೇವಲ ಉವಾಚ ॥

ವೈಶ್ಯವರ್ಯ ತ್ವಮೇನ್ನೈತಚ್ಛ್ರುತ್ವಾಽಸ್ಯಾ ವಚನಂ ಶುಭಂ ।
ಅಮನ್ಯಥಾ ಗರ್ಭವತೀಮೇನಾಂ ನಿಜಗೃಹೇಶ್ವರೀಂ ॥ ೫೭ ॥

ಪರಮೋತ್ಸವಯಾ ಮೋದಮಾನಸ್ಸದ್ಯೋ ಭವಾನಪಿ ।
ಭೃತ್ಯಾನಾಜ್ಞಾಪಯಾಮಾಸ ಪೂಜಾವಸ್ತೂಪಪಾದನೇ ॥ ೫೮ ॥

ತೈರಾನಾಯ್ಯ ಸಮಸ್ತಾನಿ ವಸ್ತೂನಿ ಭವತಾ ತತಃ ।
ಅಸ್ಯೈ ದತ್ತಾನಿ ಮಧ್ವನ್ನದ್ರಾಕ್ಷಾಗಂಧಾದಿಕಾನ್ಯಪಿ ।
ತತೋ ನಿಜಸಖೀಸ್ಸರ್ವಾ ಆಹೂಯೇದಮಿಯಂ ಜಗೌ ॥ ೫೯ ॥

---

೫೬. ವೈಶ್ಯನ ಹೆಂಡತಿಯು ಹೇಳಿದಳು–ಎಲೈ ನಾಥನೇ! ಸನಗೆ ಗೌರಿಯು ಇಷ್ಟವಾದುದನ್ನು ಕೊಟ್ಟಿರುವುದರಿಂದ ಆ ಇಷ್ಟಾರ್ಥವನ್ನು ಕೊಟ್ಟ ಗೌರಿಯನ್ನು ಪೂಜಿಸಬೇಕು. ಎಂದು ಅಪೇಕ್ಷೆ ಪಡುತ್ತಿದ್ದೇನೆ.

೫೭. ದೇವಲನು ಹೇಳಿದನು-ವೈಶ್ಯ ವರ್ಯನೇ! ನೀನು ಈ ಶುಭವಾರ್ತೆಯನ್ನು ಕೇಳಿ ನಿನ್ನ ಹೆಂಡತಿಯು ಗರ್ಭಿಣಿಯಾಗಿರುವಳೆಂದು ತಿಳಿದುಕೊಂಡೆ.

೫೮. ಆಗ ನೀನು ಬಹುವಾಗಿ ಸಂತೋಷಪಟ್ಟು ಉತ್ಸವವನ್ನು ಮಾಡುವುದಕ್ಕೋಸ್ಕರ ಒಡನೆಯೇ ಅದಕ್ಕೆ ಬೇಕಾಗುವ ಪದಾರ್ಥಗಳನ್ನು ತರಲು ಆಳುಗಳಿಗೆ ಅಪ್ಪಣೆಮಾಡಿದೆ.

೫೯. ಆ ಆಳುಗಳಿಂದ ಪೂಜೆಯ ಪದಾರ್ಥಗಳೆಲ್ಲವನ್ನೂ ತರಿಸಿ ಆ ದ್ರಾಕ್ಷಿ, ಗಂಧ ಮುಂತಾದುವುಗಳನ್ನೆಲ್ಲಾ ಆಕೆಗೆ ಕೊಟ್ಟೆ. ಅನಂತರ ಆಕೆಯು ತನ್ನ ಸಖಿಯರನ್ನೆಲ್ಲಾ ಕರೆದು ಇಂತೆಂದು ಹೇಳಿದಳು.

॥ ವೈಶ್ಯಭಾರ್ಯೋವಾಚ ॥

ಸಖ್ಯಸ್ಸಮಸ್ತಾ ಸಾಮಗ್ರೀ ಸಮಾನೀತಾಂಬಿಕಾರ್ಚನೇ ।
ನೀತ್ವಾ ಪೂಜೋಪಕರಣಂ ಯೂಯಂ ಯಾತಾಂಬಿಕಾಲಯಂ ॥ ೬೦ ॥

ಸಂತೋಷಯತ ತಾಂ ದೇವೀಂ ಪೂಜಯಾ ವಿಧಿದೃಷ್ಟಯಾ ।
ಗುರ್ವಿಣೀತಿ ಕುಲೇಸ್ಮಾಕಂ ನ ನಿರ್ಯಾತಿ ಗೃಹಾದ್ಬಹಿಃ ।
ಅತೋಹಂ ನಾಗಮಿಷ್ಯಾಮಿ ಯೂಯಂ ಯಾತ ತದರ್ಚನೇ ॥ ೬೧ ॥

॥ ದೇವಲ ಉವಾಚ ॥

ಇತ್ಯಾಜ್ಞಪ್ತಾಸ್ತು ತಾಃ ಸಖ್ಯೋ ನೀತ್ವೋಪಕರಣಂ ಯಯುಃ ।
ಅಂಬಿಕಾಲಯಮುನ್ಮತ್ತಭ್ರಮದ್ಭ್ರಮರಕೇತಕಂ ॥ ೬೨ ॥

ಕೋಕಿಲಾಕುಲಸಂಕೇಲಿಸಹಕಾರಕುಲಾಕುಲಂ ।
ಹಂಸಸಾರಸಚಕ್ರಾಹ್ವಮಂಡಿತಸ್ವಚ್ಛಸಾರಸಂ ॥ ೬೩ ॥

---

೬೦. ವೈಶ್ಯನ ಹೆಂಡತಿಯು ಹೇಳಿದಳು–ಎಲೈ ಸಖಿಯರಿರ! ದೇವಿಯ ಪೂಜೆಗೆ ಬೇಕಾದ ಪದಾರ್ಥಗಳೆಲ್ಲವನ್ನೂ ತರಿಸಿದ್ದೇನೆ. ಈ ಸಾಮಗ್ರಿಗಳನ್ನೆಲ್ಲಾ ತೆಗೆದುಕೊಂಡು ನೀವು ದೇವಿಯ ದೇವಾಲಯಕ್ಕೆ ಹೋಗಿರಿ.

೬೧- ಆ ತಾಯಿಯನ್ನು ಶಾಸ್ತ್ರ ರೀತಿಯಿಂದ ಪೂಜಿಸಿ ಸಂತೋಷಪಡಿಸಿರಿ. ನಮ್ಮ ಮನೆತನದವರು ಗರ್ಭಿಣಿಯರಾದರೆ ಅವರು ಹೊರಗೆ ಹೊರಡುವುದಿಲ್ಲ. ಆದ್ದರಿಂದ ನಾನು ಬರುವುದಿಲ್ಲ. ನೀವೇ ಹೋಗಿ ಪೂಜೆಯನ್ನು ಮಾಡಿರಿ.

೬೨-೬೩. ದೇವಲನು ಹೇಳಿದನು–ಆಕೆಯ ಅಪ್ಪಣೆಯಂತೆ ಸಖಿಯರು ಆ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಹೋದರು. ಆ ದೇವಾಲಯದ ಸುತ್ತಲೂ ತಾಳೆಯ ಮರಗಳಿದ್ದು ಅವುಗಳಲ್ಲಿ ಹೂಬಿಟ್ಟು ಇರುವುದರಿಂದ ಅವಕ್ಕೆ ದುಂಬಿಗಳು ಮುತ್ತುತ್ತಿದ್ದುವು. ಅಲ್ಲಿ ಅನೇಕವಾಗಿ ಕೋಗಿಲೆಗಳು ವಾಸಿಸುತ್ತಿದ್ದು ಮನೋಹರವಾಗಿ ಕೂಗುತ್ತಿದ್ದುವು. ಅಲ್ಲಿರುವ ಸರೋವರದಲ್ಲಿ ಹಂಸ, ಸಾರಸ, ಚಕ್ರವಾಕಗಳು ಸಂಚರಿಸುತ್ತಿದ್ದುವು. ಮತ್ತು ಅದರ ನೀರು ನಿರ್ಮಲವಾಗಿದ್ದಿತು.

ಮಹಾದೇವಗುಣಾಲಾಪಿಶುಕಸಾರಿಸಮಾವೃತಂ ।
ಪೂರಯೋಗ್ಯಲತಾಸೇಕತತ್ಪರೋಮಾಸಖೀಧರಂ ॥ ೬೪ ॥

ಉಮಾಪತಿಶಿರಸ್ಸೋಮಜ್ಯೋತ್ಸ್ನಯಾಸ್ತತಮೋವರಂ ।
ಮಹಾಜಂಬೂಫಲವ್ಯಾಜಾಲ್ಲಿಂಗಾನೀವ ಸುಬಿಭ್ರತಂ ॥ ೬೫ ॥

ಉಮಾಪತೇರುಮಾಪಾದನ್ಯಾಸಪೂತಮಹೀತಲಂ ।
ಸ್ಫಟಿಕೋಪಲಸಂಬದ್ಧಜಲಾಧಾರಸುರದ್ರುಮಂ ॥ ೬೬ ॥

ಪಾರ್ವತೀಪತಿಸನ್ನಾಟ್ಯಗಾಂಧರ್ವೇಣ ವಿನಾದಿತಂ ।
ಮಂದಾನಿಲಮನಾಗ್ಧೂತಜೂತಚಂಪಕಕೋರಕಂ ॥ ೬೭ ॥

ನೃತ್ಯನ್ಮಯೂರನಿರ್ಹ್ರಾದಪ್ರತಿನಾದಿಲತಾಗೃಹಂ ।
ತಲ್ಲೀಲಾಚಲವಿದ್ಯೋತಮಾನಂ ರತ್ನಸಮುಪ್ರಭಂ ॥ ೬೮ ॥

---

೬೪. ಅಲ್ಲಿರುವ ಗಿಳಿ, ಸಾರಿಕೆ ಪಕ್ಷಿಗಳು, ಮಹಾದೇವನ ಗುಣಗಳನ್ನು ಹೊಗಳುತ್ತಿದ್ದುವು. ಅಲ್ಲಿ ಆ ದೇವಿಯ ಪೂಜೆಯ ಹಾರಕ್ಕೆ ಬೇಕಾದ ಹೂವನ್ನು ಬಿಡುವ ಹೂಗಿಡಗಳಿಗೆ ನೀರನ್ನು ಹಾಕುತ್ತ ಆ ದೇವಿಯ ಸೇವಕರಿದ್ದರು.

೬೫. ಆ ಶಿವನ ತಲೆಯಲ್ಲಿರುವ ಚಂದ್ರನ ಚಂದ್ರಿಕೆಯಿಂದ ಅಲ್ಲಿನ ಕತ್ತಲೆಯೆಲ್ಲವೂ ನಾಶವಾಗಿದ್ದಿತು. ಅಲ್ಲಿರುವ ನೇರಳೆಯ ಮರಗಳು ಹಣ್ಣು ಬಿಟ್ಟಿರುವುದನ್ನು ನೋಡಿದರೆ ಅವು ಹಣ್ಣೆಂಬ ವ್ಯಾಜದಿಂದ ಲಿಂಗಗಳನ್ನು ಧರಿಸಿರುವಂತೆ ಕಾಣುತ್ತಾ ಇದ್ದವು.

೬೬. ಈಶ್ವರನೂ ಪಾರ್ವತಿಯೂ ಅಲ್ಲಲ್ಲಿ ಸುತ್ತಾಡುವುದರಿಂದ ಆ ಜಾಗವೆಲ್ಲವೂ ಪವಿತ್ರವಾಗಿದ್ದಿತು ಅಲ್ಲಿರುವ ಕಲ್ಪವೃಕ್ಷಗಳಿಗೆ ಸ್ಫಟಿಕದ ಕಲ್ಲುಗಳ ಪಾತಿಗಳನ್ನು ಕಟ್ಟಿದರು.

೬೭. ಪಾರ್ವತೀಪತಿಯು ಅಲ್ಲಿ ನಾಟ್ಯವಾಡುತ್ತಿದುದ್ದರಿಂದ ಅದು ಸಂಗೀತದ ಸದ್ದಿನಿಂದ ಕೂಡಿದ್ದಿತು. ಮಂದಮಾರುತವು ಬೀಸುತ್ತಿದ್ದುದರಿಂದ ಮಾವು ಸಂಪಿಗೆಗಳ ಹಣ್ಣು ಮಗ್ಗುಗಳು ಅಲ್ಲಾಡುತ್ತಿದ್ದುವು.

೬೮. ನವಿಲು ಅಲ್ಲಿರುವ ಲತಾಗೃಹಗಳಲ್ಲಿ ಕುಣಿಯುತ್ತ ಕೇಕೆಹಾಕುತ್ತಿದ್ದಿತು. ಅಲ್ಲಿರುವ ಕ್ರೀಡೆಯ ಪರ್ವತಗಳಲ್ಲಿ ರತ್ನಗಳು ಪ್ರಕಾಶಿಸುತ್ತಿದ್ದುದರಿಂದ ಆ ಕಾಂತಿಯಿಂದ ಆ ಪ್ರದೇಶವೆಲ್ಲವೂ ಕೂಡಿದ್ದಿತು.

ತತ್ರ ಗತ್ವಾ ಗಿರಿಸುತಾಂ ಪ್ರಣೇಮುಸ್ತಾಸ್ಸಭರ್ತೃಕಾಂ ।
ಪ್ರದಕ್ಷಿಣೀಕೃತ್ಯ ತತೋ ಭಕ್ತ್ಯಾ ತಾಂ ಚ ಬಭಾಷಿರೇ ॥ ೬೯ ॥

॥ ಸಖ್ಯ ಊಚುಃ ॥

ಜಗದಂಬೇ ನಮಸ್ತುಭ್ಯಂ ಶಂ ನೋ ದೇಹಿ ಶಿವಪ್ರಿಯೇ ।
ತ್ವತ್ಪೂಜಾರ್ಥೇ ಸಮಾನೀತೋ ಬಲಿರೇಷ ಪ್ರಗೃಹ್ಯತಾಂ ॥ ೭೦ ॥

ವೈಶ್ಯಸ್ತು ಶರಭೋ ನಾಮ್ನಾ ತಸ್ಯಾಸ್ತಿ ಲಲಿತಾಂಗನಾ ।
ತಯಾಭಿಲಷಿತೋ ಗರ್ಭಸ್ತತ್ಪ್ರಾಪ್ತೌ ತವ ಪೂಜನಂ ॥ ೭೧ ॥

ತ್ವತ್ಪ್ರಸಾದಾದಭೂತ್ತಸ್ಯಾಃ ಸ ಗರ್ಭಶ್ಶಂಭುವಲ್ಲಭೇ ।
ತ್ವತ್ಪೂಜನಾಯ ಪ್ರಹಿತೋ ಬಲಿರಸ್ಮಾಭಿರೇಷಕಃ ॥ ೭೨ ॥

ತಸ್ಯಾಃ ಕುಲೇ ಗರ್ಭವತೀ ನ ನಿರೇತಿ ಬಹಿರ್ಗೃಹಾತ್ ।
ಅತಸ್ಸಾ ನಾಗತಾ ದೇವಿ ಪ್ರಸೀದೈನಂ ಗೃಹಾಣ ವೈ ॥ ೭೩ ॥

---

೬೯. ಅವರೆಲ್ಲರೂ ಆ ದೇವಸ್ಥಾನಕ್ಕೆ ಹೋಗಿ ಪರಮೇಶ್ವರ ಸಹಿತಳಾದ ಪಾರ್ವತಿಗೆ ನಮಸ್ಕರಿಸಿದರು. ಮತ್ತು ಪ್ರದಕ್ಷಿಣೆ ಮಾಡುತ್ತ ಭಕ್ತಿಯಿಂದ ಇಂತೆಂದರು.

೭೦ ಸಖಿಯರು ಹೇಳಿದರು-ಎಲೈ ಜಗದಂಬೆಯೆ ! ನಿನಗೆ ನಮಸ್ಕಾರವು. ನಮಗೆ ಮಂಗಳವನ್ನು ಕೊಡು. ನಿನ್ನ ಪೂಜೆಗೋಸ್ಕರ ಈ ಪದಾರ್ಥಗಳೆಲ್ಲವನ್ನೂ ತಂದಿದ್ದೇವೆ. ಸ್ವೀಕರಿಸು.

೭೧. ಈ ಊರಿನಲ್ಲಿ ಶರಭನೆಂಬ ವೈಶ್ಯನೊಬ್ಬನಿರುವನು. ಅವನಿಗೆ ಒಬ್ಬಳು ಸುಂದರಿಯಾದ ಹೆಂಡತಿಯಿರುವಳು. ಅವಳು ಗರ್ಭವನ್ನು ಹೊಂದಬೇಕೆಂದು ಪ್ರಾರ್ಥಿಸಿದ್ದಳು. ಅದನ್ನು ಹೊಂದಿದರೆ ಪೂಜಿಸುತ್ತೇನೆಂದುಪ್ರಾರ್ಥಿಸಿಕೊಂಡಿದ್ದಳು.

೭೨. ನಿನ್ನ ಅನುಗ್ರಹದಿಂದ ಅವಳಿಗೆ ಆ ಗರ್ಭವುಂಟಾಯಿತು. ಆದ್ದರಿಂದ ನಿನ್ನ ಪೂಜೆಗೋಸ್ಕರ ಈ ಪದಾರ್ಥಗಳನ್ನು ಕಳುಹಿಸಿದ್ದಾಳೆ.

೭೩. ಅವಳ ಕುಲದಲ್ಲಿ ಗರ್ಭಿಣಿಯರಾದವರು ಮನೆಯಿಂದ ಹೊರಗೆ ಬರುವುದಿಲ್ಲ. ಆದ್ದರಿಂದ ಆಕೆಯು ಇಲ್ಲಿಗೆ ಬರಲಿಲ್ಲ. ಪ್ರಸನ್ನಳಾಗು. ಇವೆಲ್ಲವನ್ನೂ ಸಹ ಸ್ವೀಕರಿಸು.

## ॥ ದೇವಲ ಉವಾಚ ॥

ಇತ್ಯುಕ್ತ್ವಾ ತಾಂ ತದಾ ವೈಶ್ಯ ತ್ವತ್‌ಸ್ತ್ರೀಸಖ್ಯಸ್ತು ತಂ ಬಲಿಂ ।
ಸಮರ್ಪ್ಯ ತಸ್ಯೈ ವಿಧಿವದಾನರ್ಚುಶ್ಚಂದನಾದಿಭಿಃ ॥ ೭೪ ॥

ಪ್ರತಿವಾಕ್ಯಮಲಬ್ಧ್ವಾ ತಾ ಗೌರ್ಯಾಃ ಪ್ರತ್ಯಾಯಯುರ್ಗೃಹಂ ।
ನಿಜಸಖ್ಯೈ ಸಮಾಚಖ್ಯುಃ ವಿಷಣ್ಣಾಂ ತಾಂ ಶಿವಪ್ರಿಯಾಂ ॥ ೭೫ ॥

ತಾಸಾಮಾಕರ್ಣ್ಯ ವಚನಮಿತಿ ವೈಶ್ಯಾ ತವಾಬಲಾ ।
ಉನ್ಮನಾಶ್ಚಿಂತಯಾಮಾಸ ಕುತೋ ಗೌರೀ ನ ಪಿಪ್ರಿಯೇ ॥ ೭೬ ॥

ಸಾ ಜಾನಾತಿ ಯಥಾ ಭಕ್ತಿಸ್ತತ್ಪೂಜಾ ಯಾ ಕೃತಾ ಮಯಾ ।
ತಾದೃಶೀನಾಂ ಕಿಮಜ್ಞಾತಂ ಬಾಹ್ಯಂ ಚಾಭ್ಯಂತರಂ ನೃಣಾಂ ॥ ೭೭ ॥

ನ ಗತಾಹಂ ಯತಸ್ತತ್ರ ತಜ್ಞಾನಾತ್ಯಪಿ ಕಾರಣಂ ।
ಮಯಾ ದತ್ತೇನ ಬಲಿನಾ ಕುತಸ್ಸಾ ನ ತುತೋಷ ವೈ ॥ ೭೮ ॥

---

೭೪. ದೇವಲನು ಹೇಳಿದನು-ನಿನ್ನ ಹೆಂಡತಿಯ ಸಖಿಯರು ಆ ದೇವಿಗೆ ಹೀಗೆಂದು ಹೇಳಿ ಆ ಪೂಜಾದ್ರವ್ಯಗಳಿಂದ ಆಕೆಯನ್ನು ಪೂಜಿಸಿದರು.

೭೫. ಆಗ ಆ ಗೌರಿಯು ಉತ್ತರವನ್ನು ಕೊಡದಿರಲು ಅವರೆಲ್ಲರೂ ಮನೆಗೆ ಬಂದು ಆ ಪಾರ್ವತಿಯು ಸಂತೋಷಗೊಳ್ಳಲಿಲ್ಲವೆಂದು ಸಖಿಗೆ ಹೇಳಿದರು.

೭೬. ಎಲೈ ವೈಶ್ಯನೇ ! ನಿನ್ನ ಹೆಂಡತಿಯು ಅವರ ಮಾತನ್ನು ಕೇಳಿ ಚಿಂತೆಯಿಂದ ದುಃಖಿಸುತ್ತ ಗೌರಿಯು ಏತಕ್ಕೆ ಸಂತೋಷಗೊಳ್ಳಲಿಲ್ಲವೆಂದು ಯೋಚಿಸುತ್ತಿದ್ದಳು.

೭೭. ಆ ಪಾರ್ವತಿಯು ನಾವು ಮಾಡುವ ಒಳಗಿನ ಮತ್ತು ಹೊರಗಿನ ಪೂಜೆಗಳನ್ನೂ ಭಕ್ತಿಯಿಂದ ಮಾಡುವುದನ್ನೂ ತಿಳಿದೇ ತಿಳಿಯುವಳು. ಎಂದು ಆಕೆಯು ತಿಳಿದುಕೊಂಡಳು.

೭೮. ಅಲ್ಲಿಗೆ ಹೋಗದಿದ್ದುದರ ಕಾರಣವನ್ನು ಆಕೆಯು ತಿಳಿದುಕೊಂಡಿದ್ದಾಳೆ. ನಾನು ಕೊಟ್ಟಿರುವ ಪೂಜೆಯ ದ್ರವ್ಯಗಳಿಂದ ಆಕೆಯು ಸಂತೋಷ ಪಡದಿರುವುದಕ್ಕೆ ಕಾರಣವೇ ಇಲ್ಲ.

ನಾಹಮನ್ಯತ್ಪ್ರಜಾನಾಮಿ ತದತೋಷೇ ಹಿ ಕಾರಣಂ ।
ಋತೇ ಮದಗತೇಸ್ತತ್ರ ಸೂನಂ ರಮ್ಯೇ ತದಾಲಯೇ ॥ ೭೯ ॥

ಯದತೀತಂ ನ ತಚ್ಛಕ್ಯಮನ್ಯಥಾ ಕರ್ತುಮದ್ಯ ವೈ ।
ಗಭ್ರಾನ್ಮುಕ್ತಾ ಗಮಿಷ್ಯಾಮಿ ತತ್ಪೂಜಾಯೈ ತದಾಲಯೇ ॥ ೮೦ ॥

ನಮಸ್ತಸ್ಯೈ ಮಹಾದೇವಭಾರ್ಯಾಯೈ ಸಾ ಕರೋತು ಶಂ ।
ಇತ್ಯುಕ್ತ್ವಾ ದಧತೀ ಗರ್ಭಂ ತಸ್ಥೌ ವೈಶ್ಯ ಕವಾಂಗನಾ ॥ ೮೧ ॥

॥ ಶಿವಶರ್ಮೋವಾಚ ॥

ವಿಷ್ಣುಶರ್ಮನ್ನಿದಂ ಪೂರ್ವವೃತ್ತಮಾಜ್ಞಾಯ ಮತ್ಪಿತಾ ।
ಪಪ್ರಚ್ಛ ಮುನಿಶಾರ್ದೂಲಂ ದೇವಲಂ ಜ್ಞಾನವತ್ತರಂ ॥ ೮೨ ॥

---

೭೯. ಆ ಪಾರ್ವತಿಯು ಸಂತೋಷಪಡದಿರುವುದಕ್ಕೆ ಕಾರಣವು ನನಗೆ ತಿಳಿದಂತೆ ಒಂದೂ ಇಲ್ಲವೇ ಇಲ್ಲ. ಆದರೆ ನಾನು ಆ ದೇವಸ್ಥಾನಕ್ಕೆ ಹೋಗಲಿಲ್ಲವೆಂಬುದು ಒಂದು ಕಾರಣವಿದೆ. ಅದು ಹೊರತಾಗಿ ಮತ್ತೊಂದೂ ಸಹ ಇಲ್ಲವೇ ಇಲ್ಲವು.

೮೦. ಕಳೆದುಹೋದುದನ್ನು ಸರಿಮಾಡಲು ಸಾಧ್ಯವಾಗುವುದೇ ಇಲ್ಲ. ಇರಲಿ. ಹೆತ್ತಮೇಲೆ ಆಕೆಯನ್ನು ಪೂಜಿಸಲು ನಾನೇ ಅಲ್ಲಿಗೆ ಹೋಗುತ್ತೇನೆ.

೮೧. ಆ ಮಹಾದೇವನ ಹೆಂಡತಿಯಾದ ಪಾರ್ವತಿಗೆ ನಮಸ್ಕಾರವು. ಆಕೆಯು ಮಂಗಳವನ್ನು ಮಾಡಲಿ. ಎಂದುಕೊಂಡು ಆಕೆಯು ಗರ್ಭವನ್ನು ಪೋಷಿಸುತ್ತ ಇದ್ದಳು.

೮೨. ಶಿವಶರ್ಮನು ಹೇಳಿದನು-ಎಲೈ ವಿಷ್ಣುಶರ್ಮನೇ ! ಆಗ ನನ್ನ ತಂದೆಯು ಹಿಂದಿನ ವಿಷಯಗಳೆಲ್ಲವನ್ನೂ ತಿಳಿದು ಜ್ಞಾನಿಯಾದ ಆ ದೇವಲನನ್ನು ಕುರಿತು ಇಂತೆಂದನು.

॥ ವೈಶ್ಯ ಉವಾಚ ॥

ಮುನೇ ಯಥಾ ಪ್ರತಿಶ್ರುತಾ ಪೂಜಾ ತೇ ಸ್ನುಷಯಾ ತಥಾ ।
ತಥೈವಾಕಾರಿ ಪಾರ್ವತ್ಯಾ ವಿಷಾದೇ ಕಾರಣಂ ವದ ॥ ೮೩ ॥

ಯತೋಽಸೌ ನ ಗತಾ ತತ್ರ ತಜ್ಞಾನಾತಿ ಶಿವಾ ಸ್ವತಃ ।
ಸಖೀಭಿಶ್ಚೋಕ್ತಮಸ್ಯಾಸ್ತದ್ವಿಷಣ್ಣಾ ಸಾ ಕುತೋ ಭವತ್ ॥ ೮೪ ॥

॥ ದೇವಲ ಉವಾಚ ॥

ವೈಶ್ಯವರ್ಯ ಶೃಣುಷ್ವೇದಂ ಕಾರಣಂ ಕಥಯಾಮಿ ತೇ ।
ಯತಸ್ತಸ್ಯಾ ವಿಷಾದೋಭೂತ್ಪಾರ್ವತ್ಯಾ ಗರ್ಭನಾಶಕಃ ॥ ೮೫ ॥

ನಿವೃತ್ತಾಸು ಸಖೀಸ್ವಸ್ಯಾಃ ಸಂಪೂಜ್ಯ ಸ್ಕಂದಮಾತರಂ ।
ವಿಜಯಾ ಪಾರ್ವತೀಂ ಪ್ರಾಹ ಕೌತೂಹಲಸಮನ್ವಿತಾ ॥ ೮೬ ॥

---

೮೩. ವೈಶ್ಯನು ಹೇಳಿದನು–ಎಲೈ ಮುನಿಯೇ ! ತಾನು ಒಪ್ಪಿಕೊಂಡಿರುವ ರೀತಿಯಲ್ಲಿ ಪೂಜೆಯನ್ನು ಆಕೆಯು ಮಾಡಿದಳು. ಆದರೂ ಈ ರೀತಿ ದುಃಖಿಸಲು ಕಾರಣವೇನಿರಬಹುದು ?

೮೪. ಆಕೆಯು ಹೋಗದಿರುವುದಕ್ಕೆ ಕಾರಣವನ್ನು ಪಾರ್ವತಿಯು ತಾನೇ ತಿಳಿದುಕೊಂಡಿದ್ದಾಳೆ. ಸಖಿಯರು ಪೂಜೆಮಾಡಿರುವುದನ್ನು ಹೇಳಿದ್ದಾರೆ. ಆದರೂ ಈಕೆಯು ಏಕೆ ದುಃಖಿನಿಯಾದಳು ?

೮೫. ದೇವಲನು ಹೇಳಿದನು–ಎಲೈ ವೈಶ್ಯನೇ ! ಕೇಳು. ಈಕೆಯ ಗರ್ಭವನ್ನು ನಾಶಮಾಡುವಂತಹ ವಿಷಾದವು ಆ ಪಾರ್ವತಿಗೆ ಉಂಟಾಗಲು ಕಾರಣವೇನೆಂಬುದನ್ನು ಹೇಳುತ್ತೇನೆ.

೮೬. ಈಕೆಯ ಸಖಿಯರು ಪಾರ್ವತಿಯನ್ನು ಪೂಜಿಸಿ ಹೊರಟು ಹೋದನಂತರ ವಿಜಯೆಯೆಂಬ ಈಕೆಯ ಸಖಿಯು ಪಾರ್ವತಿಯನ್ನು ಕುರಿತು ಇಂತೆಂದಳು

|| ವಿಜಯೋವಾಚ ||

ಗಿರಿಜೇ ಶ್ರದ್ಧಯಾ ತುಭ್ಯಂ ದತ್ತೋಮೂಭಿರಯಂ ಬಲಿಃ |
ಮಾನುಷೀಭಿಃ ಕುತಃ ಪ್ರೀತಾ ನಾಭವಸ್ತ್ವಂ ವರಾನನೇ || ೮೭ ||

ಧೂಪದೀಪಕನೈವೇದ್ಯೈಃ ಪೂಜಿತಾ ತೋಷಹೇತವೇ |
ಪ್ರತ್ಯುತಾಕಾರಣಂ ದೇವಿ ತ್ವಂ ವಿಷಾದಂ ಕುತೋ ಗರೌ || ೮೮ ||

|| ದೇವಲ ಉವಾಚ ||

ಇತ್ಯಾಕರ್ಣ್ಯ ವಚಸ್ಸಖ್ಯಾ ದೇವೀ ದೇವವರಾರ್ಚಿತಾ |
ಅಬ್ರವೀದ್ವಿಜಯಾಂ ವೈಶ್ಯ ವಿಷಾದೇ ಕಾರಣಂ ಸಖೀಂ || ೮೯ ||

|| ಪಾರ್ವತ್ಯುವಾಚ ||

ವಿಜಯೇ ಸಖಿ ಜಾನಾಮಿ ವೈಶ್ಯಭಾರ್ಯಾಂ ಗೃಹಾದ್ಬಹಿಃ |
ನಿರ್ಗನ್ತುಮಕ್ಷಮಾಂ ಗರ್ಭಭಾರಣಾತ್ ಸ್ವವಿವೇಕತಃ || ೯೦ ||

---

೮೭. ವಿಜಯೆಯು ಹೇಳಿದಳು-ಎಲೈ ಗಿರಿಜೆಯೇ ! ಈ ಮನುಷ್ಯರು ಶ್ರದ್ಧೆಯಿಂದ ನಿನಗೆ ಈ ಪೂಜೆಯನ್ನು ಮಾಡಿದ್ದಾರೆ. ನೀನು ಅವರ ವಿಷಯದಲ್ಲಿ ಏಕೆ ಸಂತೋಷಗೊಳ್ಳಲಿಲ್ಲ ?

೮೮. ಧೂಪ ದೀಪ ನೈವೇದ್ಯಗಳಿಂದ ಅವರು ನಿನಗೆ ಸಂತೋಷ ವುಂಟಾಗಲೆಂದು ಪೂಜಿಸಿದ್ದಾರೆ. ಆದರೂ ಕಾರಣವಿಲ್ಲದೇನೆ ನೀನು ವಿಷಾದ ಪಡಲು ಕಾರಣವೇನು ? ಹೇಳು.

೮೯. ದೇವಲನು ಹೇಳಿದನು–ದೇವತೆಗಳಿಂದ ಪೂಜಿತಳಾದ ಆ ಪಾರ್ವತಿಯು ಸಖಿಯ ಈ ಮಾತನ್ನು ಕೇಳಿ ಆ ವಿಜಯೆಯನ್ನು ಕುರಿತು ವಿಷಾದಕ್ಕೆ ಕಾರಣವನ್ನು ಹೇಳಿದಳು.

೯೦-೯೧. ಪಾರ್ವತಿಯು ಹೇಳಿದಳು_ಎಲೈ ವಿಜಯೆಯೇ ! ಆ ವೈಶ್ಯನ ಹೆಂಡತಿಯು ಗರ್ಭದ ಭಾರದಿಂದ ಹೊರಗೆ ಬಾರದೆ ವಿವೇಕದಿಂದಿರುವಳೆಂಬುದನ್ನು

ಸಮಾಗತಾಸ್ತು ತಸ್ಸಖ್ಯೋ ಮತ್ಪೂಜಾಯೈ ತದೀರಿತಾಃ ।
ಮಾದೃಶ್ಯೋ ನ ಚ ಗೃಹ್ಣಂತಿ ಪರಹಸ್ತಕೃತಂ ಬಲಿಂ ॥ ೯೧ ॥

ತತ್ಪತಿಶ್ಚೇತ್ಸಮಾಯಾಸ್ಯದಭವಿಷ್ಯತ್ತದಾ ಶಿವಂ ।
ತಸ್ಮಾಸ್ತು ಮದವಜ್ಞಾತೋ ಗರ್ಭಪಾತೋ ಭವಿಷ್ಯತಿ ॥ ೯೨ ॥

ಯದ್ವ್ರತಂ ಪೂಜನಂ ಯಚ್ಚ ಕರ್ತುಂ ನ ಕ್ಷಮತೇಂಗನಾ ।
ತತ್ಕಾರಯತಿ ನಾಥೇನ ನ ಭಂಗಃ ಸ್ಯಾತ್ತಯೋಃ ಸಖಿ ॥ ೯೩ ॥

ಅಥವಾ ವಿಪ್ರಮುಖ್ಯೇನ ಪೃಷ್ಟ್ವಾ ಪತಿಮನನ್ಯಧೀಃ ।
ಯತಸ್ಸ್ವಯಮನಾಗತ್ಯ ತತ್ಕೃತಂ ಮೇ ತಯಾರ್ಚನಂ ॥ ೯೪ ॥

ನ ಕಾರಿತಂ ಚ ಭರ್ತ್ರಾತೋ ಭವಿತಾ ದೋಹದೋಽಫಲಃ ।
ಯದ್ಯುಭೌ ತೌ ಸಮಾಗತ್ಯ ದಂಪತೀ ಶ್ರದ್ಧಯಾ ಪುನಃ ।
ಮಾಂ ಪೂಜಯಿಷ್ಯತಃ ಪುತ್ರೋ ಭವಿಷ್ಯತಿ ತದಾ ತಯೋಃ ॥ ೯೫ ॥

---

ನಾನು ಬಲ್ಲೆನು. ಆದರೆ ಅವಳಿಂದ ಹೇಳಲ್ಪಟ್ಟ ಆಕೆಯ ಸಖಿಯರು ನನ್ನ ಬಳಿಗೆ ಬಂದು ಮಾಡಿದ ಪೂಜೆಯನ್ನೂ ಬಲ್ಲೆನು. ಆದರೆ ನನ್ನಂತಹವರು ಬೇರೆಯವ ಮತ್ತೊಬ್ಬರಿಗೋಸ್ಕರ ಮಾಡಿದ ಪೂಜೆಯನ್ನು ಸ್ವೀಕರಿಸುವುದಿಲ್ಲ.

೯೨. ಅವಳಿಗಾಗದಿದ್ದರೆ ಅವಳ ಗಂಡನಾದರೂ ಬಂದಿದ್ದರೆ ಆಗ ಒಳ್ಳೆಯ ದಾಗುತ್ತಿದ್ದಿತು. ಈಗ ನನ್ನ ವಿಷಯದಲ್ಲಿ ತಿರಸ್ಕಾರಮಾಡಿರುವುದರಿಂದ ಆ ಗರ್ಭವು ಪತನವಾಗಿ ಹೋಗುತ್ತದೆ.

೯೩. ವ್ರತವನ್ನಾಗಲೀ ಪೂಜೆಯನ್ನಾಗಲೀ ಹೆಂಗಸಿನ ಕೈಯ್ಯಲ್ಲಿ ಮಾಡಲಾಗದಿದ್ದರೆ ಅದನ್ನು ಗಂಡನಿಂದ ಮಾಡಿಸಬೇಕು. ಆ ವ್ರತವು ಅದರಿಂದ ಭಂಗವಾಗುವುದಿಲ್ಲ.

೯೪. ಗಂಡನ ಕೈಯ್ಯಲ್ಲಿ ಆಗದಿದ್ದರೆ ಏಕಮನಸ್ಸಿನಿಂದ ಬ್ರಾಹ್ಮಣನ ಕೈಯ್ಯಲ್ಲಾದರೂ ಮಾಡಿಸಬೇಕು. ಹೀಗಿರುವಲ್ಲಿ ಅವರೊಬ್ಬರೂ ಬರದೆ ಸಖಿಯರ ಕೈಯ್ಯಲ್ಲಿ ನನಗೆ ಪೂಜೆಯನ್ನು ಮಾಡಿಸಿದಳು.

೯೫. ಗಂಡನೂ ಕೂಡ ಪೂಜೆಯನ್ನು ಮಾಡದುದರಿಂದ ಗರ್ಭವು ಫಲವಿಲ್ಲದೆ ಹೋಗುತ್ತದೆ. ಆದರೆ ಆ ದಂಪತಿಗಳು ಶ್ರದ್ಧೆಯಿಂದ ಮತ್ತೆ ಬಂದು ನನ್ನನ್ನು ಪೂಜಿಸಿದರೆ ಅವರಿಗೆ ಮಕ್ಕಳಾಗುತ್ತವೆ.

॥ ದೇವಲ ಉವಾಚ ॥

ಸ ಶಾಪೋ ನ ತ್ವಯಾ ವೈಶ್ಯ ನ ಚೈವ ತವ ಭಾರ್ಯಯಾ ।
ಶ್ರುತಸ್ಸಖೀಭಿರಸ್ಮಾಕಂ ನೋ ಪ್ರಸಾದಶ್ಚ ತಯಾರ್ಪಿತಃ ॥ ೯೬ ॥

ತಯೋರಜ್ಞಾನತೋ ವೈಶ್ಯ ಯುವಯೋರ್ನಾಭವತ್ಸುತಃ ।
ಅಜಾನತೋಃ ಪ್ರತಿವಿಧಿಂ ಪರತ್ರಾತ್ರ ಸುಖಪ್ರದಂ ॥ ೯೭ ॥

ಏತತ್ತೇ ಕಥಿತಂ ವೈಶ್ಯ ಸಂತಾನಾಭಾವಕಾರಣಂ ।
ವಸಿಷ್ಠೇನ ಯಥಾ ಪೂರ್ವಂ ದಿಲೀಪಸ್ಯ ಮಹೀಪತೇಃ ॥ ೯೮ ॥

ತಚ್ಛ್ರುತ್ವಾ ಸ ಯಥಾ ರಾಜಾ ನಂದಿನೀಂ ಸಮತೋಷಯತ್ ।
ಸಸ್ತ್ರೀಕಸ್ತ್ವಂ ತಥಾ ವೈಶ್ಯ ಗೌರೀಂ ತೋಷಯ ಕಾಮದಾಂ ॥ ೯೯ ॥

---

೯೬. ದೇವಲನು ಹೇಳಿದನು–ಎಲೈ ವೈಶ್ಯನೇ ! ಆ ಶಾಪವು ನಿನಗಾಗಲಿ ನಿನ್ನ ಹೆಂಡತಿಗಾಗಲಿ ಗೊತ್ತಾಗಲೇ ಇಲ್ಲ. ಸಖಿಯರಿಗೂ ಗೊತ್ತಾಗಲಿಲ್ಲ. ಆ ಗೌರಿಯು ಅನುಗ್ರಹ ಮಾಡಿದುದೂ ಗೊತ್ತಾಗಲಿಲ್ಲ.

೯೭. ಇಹಪರಗಳಲ್ಲಿ ಸುಖದಾಯಕವಾದ ಆ ವಿಷಯವು ನಿನಗೆ ಗೊತ್ತಾಗದಿದ್ದುದರಿಂದ ನೀವು ಅದನ್ನು ಮಾಡಲಿಲ್ಲ. ಆದ್ದರಿಂದ ನಿಮಗೆ ಮಕ್ಕಳಾಗಲಿಲ್ಲ.

೯೮. ಎಲೈ ವೈಶ್ಯನೇ ! ವಸಿಷ್ಠನು ಪೂರ್ವದಲ್ಲಿ ದಿಲೀಪನಿಗೆ ಹೇಳಿದಂತೆ ಈ ಸಂತಾನವಾಗದ ಕಾರಣವನ್ನು ನಿನಗೆ ಹೇಳಿರುತ್ತೇನೆ.

೯೯. ಆ ವಸಿಷ್ಠನು ಹೇಳಿದುದನ್ನು ಕೇಳಿ ದಿಲೀಪನು ನಂದಿನಿಯನ್ನು ಸಂತೋಷಪಡಿಸಿದಂತೆ ನೀನೂ ಹೆಂಡತಿಯೊಡನೆ ಹೋಗಿ ಆ ಗೌರಿಯನ್ನು ಸೇವಿಸಿ ಸಂತೋಷಪಡಿಸು.

**ಸಾ ಯಥಾರಾಧಿತಾ ರಾಜ್ಞೀ ದಿಲೀಪಾಯ ದದೌ ಸುತಂ ।**
**ಆರಾಧಯ ತಥಾ ಗೌರೀಂ ತ್ವಂ ಸಾ ತುಭ್ಯಂ ಚ ದಾಸ್ಯತಿ　　॥ ೧೦೦ ॥**

**॥ ವೈಶ್ಯ ಉವಾಚ ॥**

**ದಿಲೀಪ ಇತಿ ಭೂಪಃ ಕಃ ಕಾ ಚ ಸಾ ನಂದಿನೀ ಮುನೇ ।**
**ಯಾಮಾರಾಧ್ಯ ಸುತಂ ಲೇಭೇ ಸ ಭೂಯೋ ಭೂಪಸತ್ತಮಃ　॥ ೧೦೧ ॥**

**ಮಹೇಶಾದಿಸುರಾರ್ನ್ ಮುಕ್ತ್ವಾ ತ್ರಿವರ್ಗಫಲದಾಯಿನಃ ।**
**ಆರಾಧಿತಾ ಕುತಃ ಸೈವ ಸುತಾರ್ಥಂ ತೇನ ಭೂಭುಜಾ　　॥ ೧೦೨ ॥**

**ಏತತ್ಸರ್ವಂ ಸಮಾಖ್ಯಾಹಿ ಮುನೇ ಯತ್ಪೃಷ್ಟವಾನಹಂ ।**
**ಶ್ರುತ್ವಾ ತತೋ ಗಿರಿಸುತಾಂ ಸೇವಿಷ್ಯೇ ಸಹ ಭಾರ್ಯಯಾ　　॥ ೧೦೩ ॥**

---

೧೦೦. ಸೇವೆಯನ್ನು ಮಾಡಿಸಿಕೊಂಡ ಆ ನಂದಿನಿಯು ದಿಲೀಪನಿಗೆ ವರವನ್ನು ಕೊಟ್ಟು ಮಗನನ್ನು ಉಂಟುಮಾಡಿದಂತೆ ನಿನ್ನ ಸೇವೆಯಿಂದ ಗೌರಿಯು ಸಂತೋಷಗೊಂಡು ನಿನಗೆ ಮಕ್ಕಳಾಗುವ ವರವನ್ನು ಕೊಡುತ್ತಾಳೆ.

೧೦೧. ವೈಶ್ಯನು ಹೇಳಿದನು-ಎಲೈ ಋಷಿಯೇ ! ದಿಲೀಪನೆಂಬ ರಾಜನು ಯಾರು ? ಆ ನಂದಿನಿಯು ಯಾವುದು ? ಅದನ್ನು ಹೇಗೆ ಸೇವಿಸಿ ಆ ರಾಜನು ಮಗನನ್ನು ಪಡೆದನು ?

೧೦೨. ಧರ್ಮ ಕಾಮ ಅರ್ಥಗಳನ್ನು ಕೊಡುವ ಮಹೇಶಾದಿಗಳನ್ನು ಬಿಟ್ಟು ಮಗನಿಗೋಸ್ಕರ ಆ ಹಸುವನ್ನೇಕೆ ಆ ದಂಪತಿಗಳು ಸೇವಿಸಿದರು ?

೧೦೩. ಎಲೈ ಋಷಿಯೇ ! ನಾನು ಕೇಳಿದುದನ್ನೆಲ್ಲಾ ವಿಸ್ತಾರವಾಗಿ ಹೇಳು. ಅದನ್ನು ಕೇಳಿ ಅದರಂತೆ ನಾನೂ ನನ್ನ ಹೆಂಡತಿಯೂ ಆ ಪಾರ್ವತಿಯನ್ನು ಸೇವಿಸುತ್ತೇವೆ.

॥ ಶಿವಶರ್ಮೋವಾಚ ॥

ಗದಿತಮಿತಿ ನಿಶಮ್ಯ ವಿಷ್ಣುಶರ್ಮನ್
ವಿನಯಯುತೇನ ವಿಶಾ ಮದೀಯಪಿತ್ರಾ ।
ಮುನಿರಿತಿ ಗದಿತುಂ ದಿಲೀಪವೃತ್ತಂ
ಜಗತಿ ಪವಿತ್ರತರಂ ಪ್ರಚಕ್ರಮೇ ಸಃ ॥ ೧೦೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಶಿವಶರ್ಮ ಪೂರ್ವಜನ್ಮವೃತ್ತ ಕಥನಂ ನಾಮ ಸಪ್ತನವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೦೪. ಶಿವಶರ್ಮನು ಹೇಳಿದನು-ನನ್ನ ತಂದೆಯು ಆ ಋಷಿಯು ಹೇಳಿದುವನ್ನು ಕೇಳಿ ವಿನಯದಿಂದ ಅವೆಲ್ಲವನ್ನೂ ಹೇಳಿನಲು ದಿಲೀಪ ಚರಿತ್ರೆಯನ್ನು ಹೇಳಲು ಮೊದಲು ಮಾಡಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಶಿವಶರ್ಮನ ಪೂರ್ವಜನ್ಮವೃತ್ತ ಕಥನ ಎಂಬ ನೂರ ತೊಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟನವತ್ಯಧಿಕಶತತಮೋಽಧ್ಯಾಯಃ ॥



॥ ದೇವಲ ಉವಾಚ ॥

ಶೃಣುಷ್ವ ಭೋ ಮಹಾಪ್ರಾಜ್ಞ ದಿಲೀಪಸ್ಯ ಮಹೀಪತೇಃ ।
ಕಥಾಂ ದಿವ್ಯಾಂ ವಿಚಿತ್ರಾಂ ಚ ಶೃಣ್ವತಾಂ ಪಾಪನಾಶಿನೀಂ ॥ ೧ ॥

ವೈವಸ್ವತಮನೋರ್ವಂಶೇ ದಿಲೀಪೋ ಭೂಭುಜಾಂ ವರಃ ।
ಆಸೀತ್ಪ್ರಾಚೀನಬರ್ಹಿಸ್ತು ಸ್ವಾಯಂಭುವಮನೋರಿವ ॥ ೨ ॥

ಸ ತು ಧರ್ಮಭೃತಾಂ ಶ್ರೇಷ್ಠೋ ಧರ್ಮೇಣ ಪ್ರತಿಪಾಲಯನ್ ।
ಮಹೀಂ ಮಹೀಪತಿರ್ಲೋಕಾನ್ ಗುಣೈರಾಢ್ಯೈರರಂಜಯತ್ ॥ ೩ ॥

---

## ನೂರ ತೊಂಭತ್ತೆಂಟನೆಯ ಅಧ್ಯಾಯವು



೧. ದೇವಲನು ಹೇಳಿದನು-ಎಲೈ ವೈಶ್ಯನೆ! ಈ ದಿಲೀಪನ ಕಥೆಯನ್ನು ಕೇಳು. ಆ ಕಥೆಯು ವಿಚಿತ್ರವಾದುದು. ಪಾಪನಾಶಕವಾದುದು.

೨. ಸ್ವಾಯಂಭುವ ಮನುವಿನ ದೆಸೆಯಿಂದ ಇಂದ್ರನು ಹುಟ್ಟಿದಂತೆ ವೈವಸ್ವತಮನುವಿನ ವಂಶದಲ್ಲಿ ದಿಲೀಪನೆಂಬ ರಾಜನು ಹುಟ್ಟಿದನು.

೩. ಅವನು ಧರ್ಮಿಷ್ಠರಲ್ಲಿ ಮುಂದಾಳಾಗಿ ಭೂಮಿಯನ್ನು ಧರ್ಮದಿಂದ ಪಾಲಿಸುತ್ತ ಜನರನ್ನು ತನ್ನ ಉತ್ತಮ ಗುಣಗಳಿಂದ ರಂಜಿಸಿದನು.

ಮಗಧಾಧಿಪತೇಃ ಪುತ್ರೀ ಮಹಿಷೀ ತಸ್ಯ ಭೂಪತೇಃ ।
ಸುದಕ್ಷಿಣಾಖ್ಯಯಾ ಖ್ಯಾತಾ ಶಚೀವಾಸೀದ್ದಿವಸ್ಪತೇಃ ॥ ೪ ॥

ಗತೇ ಮಹತಿ ಕಾಲೇ ತು ಮಹಿಷ್ಯಾಂ ನಾಭವತ್ಸುತಃ ।
ದಧ್ಯಾವಿತಿ ನಿಜಸ್ವಾಂತೇ ಸ ಸಮ್ರಾಟ್ ಕೋಶಲಾಧಿಪಃ ॥ ೫ ॥

ರತ್ನಾಕರಸುಮೇರ್ವಾದಿನಗರತ್ನೈರ್ವಿರಾಜಿತಂ ।
ಧೃತಂ ಭೂವಲಯಂ ದೋಷ್ಣೋರ್ಭೂಷಾಯೈ ನಾಪ್ರಜಸ್ಯ ಮೇ ॥ ೬ ॥

ವರ್ಗತ್ರಯೀ ಯಥಾಕಾಲಂ ಸೇವಿತಾ ನ ವಿರೋಧಿತಾ ॥
ತಥಾಪಿ ಮೇಽನಪತ್ಯಸ್ಯ ನ ಸೌಖ್ಯಂ ವಿದ್ಯತೇ ಹೃದಿ ॥ ೭ ॥

ಯಜ್ಞೈರಾರಾಧಿತೋ ವಿಷ್ಣುರಿಂದ್ರಾದ್ಯಾಶ್ಚ ಸುರೋತ್ತಮಾಃ ।
ದೀರ್ಘಿಕಾರಾಮಕೂಪಾಶ್ಚ ಕಾರಿತಾಸ್ಸರ್ವತೋ ಭುವಿ ॥ ೮ ॥

---

೪. ಆ ರಾಜನಿಗೆ ಮಗಧ ದೇಶದ ರಾಜನ ಮಗಳಾದ ಸುದಕ್ಷಿಣೆ ಎಂಬುವಳು ಹೆಂಡತಿಯಾದಳು. ಆಕೆಯು ಇಂದ್ರನಿಗೆ ಶಚಿಯು ಇರುವಂತೆ ರಂಜಿಸುತ್ತಿದ್ದಳು.

೫. ಬಹು ಕಾಲವಾದರೂ ಆ ಹೆಂಡತಿಯಲ್ಲಿ ಮಕ್ಕಳೇ ಆಗಲಿಲ್ಲ. ಆಗ ಆತನು ತನ್ನ ಮನಸ್ಸಿನಲ್ಲಿ ಇಂತೆಂದು ಯೋಚಿಸಿದನು.

೬. ಸಮುದ್ರ ಮೇರುಪರ್ವತವೇ ಮುಂತಾದುವುಗಳಿಂದ ಪ್ರಕಾಶಮಾನ ವಾದ ಭೂಮಿಯು ಮಕ್ಕಳಿಲ್ಲದ ನನ್ನ ತೋಳುಗಳಿಗೆ ಭೂಷಣವಾಗಿ ಕಾಣುವುದಿಲ್ಲ.

೭. ಧರ್ಮಾರ್ಥ ಕಾಮಗಳನ್ನು ಆಯಾಯ ಕಾಲಗಳಲ್ಲಿ ಸೇವಿಸಿದ್ದೇನೆ ಅವುಗಳ ವಿಷಯದಲ್ಲಿ ವಿರುದ್ಧವಾಗಿ ನಡೆದುಕೊಂಡಿಲ್ಲ. ಆದರೂ ಕೂಡ ಮಕ್ಕಳಿಲ್ಲದುದರಿಂದ ನನ್ನ ಮನಸ್ಸಿನಲ್ಲಿ ಸೌಖ್ಯವೇ ಇಲ್ಲ.

೮. ಯಾಗಗಳನ್ನು ಮಾಡಿ ವಿಷ್ಣುವನ್ನೂ ಇಂದ್ರನೇ ಮುಂತಾದ ದೇವತೆಗಳನ್ನೂ ಸಂತೋಷಗೊಳಿಸಿದ್ದೇನೆ. ಭೂಮಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಕೆರೆಕಟ್ಟೆಗಳನ್ನೂ ಭಾವಿಗಳನ್ನೂ ಉದ್ಯಾನವನಗಳನ್ನೂ ನಿರ್ಮಿಸಿದ್ದೇನೆ.

ಗೋಭೂಹಿರಣ್ಯವಾಸೋಭಿಃ ಷಡ್ರಸಾನ್ವಿತಭೋಜನೈಃ ।
ವಿಪ್ರಾ ಅತಿಥಯಶ್ಚೈವ ಭಕ್ತ್ಯಾ ಸಂತೋಷಿತಾ ಮಯಾ ॥ ೯ ॥

ವೃದ್ಧ್ಯರ್ಥಂ ಪೃಥಿವೀಪಾಲಾನುದ್ಧೃತ್ಯ ಯುಧಿ ಧರ್ಮತಃ ।
ಧನೇನ ಮಹತಾ ಕೋಶೋ ಮಯಾ ಹಿ ಬಹುಳೀಕೃತಃ ॥ ೧೦ ॥

ಉನ್ಮಾರ್ಗಗಾಮಿನೋ ಮತ್ತಾ ನಿಜಧರ್ಮವಿಲಂಘಿನಃ ।
ವಿಮುಖಾಃ ಪಿತೃದೇವೇಭ್ಯೋ ದಂಡ್ಯಾಸ್ತೇ ದಂಡಿತಾ ಮಯಾ ॥ ೧೧ ॥

ಪಂಚಪರ್ವಸು ವೈಷ್ಣವ್ಯಾಂ ರವೌ ಪಿತ್ರ್ಯೇ ಚ ಕರ್ಮಣಿ ।
ದಶಮ್ಯೇಕಾದಶೀತಿಥ್ಯೋರ್ನ ಸ್ತ್ರೀಸೇವಾ ಕೃತಾ ಮಯಾ ॥ ೧೨ ॥

ಋತುಕಾಲಾವಧೌ ಸ್ನಾತಾಂ ಸ್ವಸ್ತ್ರಿಯಂ ನಾಹಮತ್ಯಜಂ ।
ಅನ್ಯತಾವಪಿ ತದ್ಯೋಗ್ಯೇ ಕಾಲೇಹಂ ಪ್ರಾರ್ಥಿತಸ್ತಯಾ ॥ ೧೩ ॥

---

೯. ಗೋವುಗಳು ಚಿನ್ನ ಬಟ್ಟೆ ಇವುಗಳಿಂದಲೂ ಷಡ್ರಸದ ಭೋಜನದಿಂದಲೂ ಬ್ರಾಹ್ಮಣರನ್ನೂ ಅತಿಥಿಗಳನ್ನೂ ಭಕ್ತಿಯಿಂದ ಬಡಿಸಿ ಸಂತೋಷಪಡಿಸಿದ್ದೇನೆ.

೧೦ ರಾಜರನ್ನು ಯುದ್ಧದಲ್ಲಿ ಧರ್ಮದಿಂದ ಜಯಿಸಿ ಏಳಿಗೆಗೆ ಬಂದೆನು. ಅಲ್ಲದೆ ಬಹು ಧನವನ್ನೂ ಧರ್ಮದಿಂದ ಸಂಪಾದಿಸಿ ಬೊಕ್ಕಸವನ್ನು ತುಂಬಿದ್ದೇನೆ.

೧೧. ದಾರಿಬಿಟ್ಟು ಹೋಗತಕ್ಕವರನ್ನೂ ತಮ್ಮ ಧರ್ಮದಂತೆ ನಡೆಯದವರನ್ನೂ ಪಿತೃಗಳೂ ದೇವತೆಗಳೂ ಇವರಲ್ಲಿ ಗೌರವವಿಲ್ಲದೆ ಅವರನ್ನು ತಿರಸ್ಕರಿಸುವವರನ್ನೂ ದಂಡಿಸಿದ್ದೇನೆ. ತಪ್ಪಿತಸ್ಥರನ್ನೂ ಸರಿಯಾಗಿ ದಂಡಿಸಿದ್ದೇನೆ.

೧೨. ಐದು ಬಗೆಯಾದ ಪರ್ವಕಾಲಗಳಲ್ಲಿಯೂ ವಿಷ್ಣುವಿನ ದಿನದಲ್ಲಿಯೂ ರವಿಯ ದಿನದಲ್ಲಿಯೂ ಪಿತೃಕರ್ಮದ ದಿನದಲ್ಲಿಯೂ ದಶಮಿ ಏಕಾದಶಿಗಳಲ್ಲಿಯೂ ಹೆಂಗಸಿನ ಸಂಗವನ್ನು ಮಾಡಿಲ್ಲ.

೧೩-೧೪. ಮುಟ್ಟಾಗಿ ಸ್ನಾನಮಾಡಿದ ನನ್ನ ಹೆಂಡತಿಯನ್ನು ತಪ್ಪದೆ ಭೋಗಿಸಿದ್ದೇನೆ. ಮುಟ್ಟು ಕಳೆದಮೇಲೆಯೂ ಶಾಸ್ತ್ರನಿಷಿದ್ಧವಲ್ಲದ ದಿನದಲ್ಲಿಯೂ ಆಕೆಯು ನನ್ನನ್ನು ಅಪೇಕ್ಷಿಸಿದಾಗಲೂ ಅಪೇಕ್ಷೆಯು ಕೈಗೂಡುವಂತೆ ಅವಳಲ್ಲಿ

ತದಾ ತಸ್ಯಾಂ ಸಕಾಮಿನ್ಯಾಂ ಸಕಾಮಂ ರಮಿತಾ ಮಯಾ ।
ಏವಂ ಧರ್ಮಾರ್ಥಕಾಮಾ ಮೇ ಯಥಾಕಾಲಂ ನಿಷೇವಿತಾಃ ॥ ೧೪ ॥

ಮಹಿಷ್ಯಾಂ ಕೇನ ದೋಷೇಣ ಜಾಯತೇ ಮೇ ನ ಸಂತತಿಃ ।
ಅತೀತಾನಾಗತಜ್ಞಾನೋ ವಸಿಷ್ಠೋ ಗುರುರೇವ ನಃ ॥
ಕಥಯಿಷ್ಯತಿ ತಂ ದೋಷಂ ಯನ್ಮೇ ಪುತ್ರೋ ನ ಜಾಯತೇ ॥ ೧೫ ॥

॥ ದೇವಲ ಉವಾಚ ॥

ಇತ್ಯಾಲೋಚ್ಯ ಸ ಭೂಪಾಲೋ ಗಮಿಷ್ಯನ್ನಾಶ್ರಮಂ ಗುರೋಃ ।
ಮಂತ್ರಿಷ್ವಾರೋಪಯಾಮಾಸ ಕೋಶಲಾಮೃದ್ಧಿಕೋಶಲಾಂ ॥ ೧೬ ॥

ಅಥ ಪ್ರಜಾಸ್ರಜಂ ದೇವಂ ಪೂಜಯಿತ್ವಾಶ್ರಮಂ ಗುರೋಃ ।
ಪ್ರತಸ್ಥಾತೇ ಪುತ್ರಕಾಮೌ ದಂಪತೀ ತೌ ಶುಭೇಹನಿ ॥ ೧೭ ॥

---

ರಮಿಸಿದ್ದೇನೆ. ಈ ರೀತಿಯಾಗಿ ಧರ್ಮಾರ್ಥಕಾಮಗಳನ್ನು ಆಯಾಯ ಕಾಲಗಳಲ್ಲಿ ನಾನು ಸೇವಿಸಿದ್ದೇನೆ.

೧೫. ಹೀಗಿದ್ದರೂ ಯಾವ ದೋಷದಿಂದ ನನ್ನ ಹೆಂಡತಿಯಲ್ಲಿ ಮಕ್ಕಳಾಗಲಿಲ್ಲ? ಇರಲಿ. ನನ್ನ ಗುರುವಾದ ವಸಿಷ್ಠನು ಭೂತ ಭವಿಷ್ಯದ್ವರ್ತಮಾನ ಜ್ಞಾನಗಳುಳ್ಳವನು. ನನಗೆ ಮಕ್ಕಳಾಗದಿರುವುದಕ್ಕೆ ಉಂಟಾಗಿರುವ ದೋಷವನ್ನು ಅವನು ಹೇಳುವನು.

೧೬. ದೇವಲನು ಹೇಳಿದನು—ಆ ದೊರೆಯು ಹೀಗೆ ಆಲೋಚಿಸಿ ಗುರುವಿನ ಆಶ್ರಮಕ್ಕೆ ಹೋಗಲು ಇಚ್ಛಿಸಿ ಫಲವತ್ತಾದ ಆ ಕೋಸಲದೇಶದ ರಾಜ್ಯಭಾರವನ್ನು ಮಂತ್ರಿಗಳ ವಶವನ್ನಾಗಿ ಮಾಡಿದನು.

೧೭. ಅನಂತರ ಪ್ರಜೆಗಳನ್ನು ಉತ್ಪತ್ತಿಮಾಡುವ ಬ್ರಹ್ಮ ದೇವರನ್ನು ಪೂಜಿಸಿ ಮಕ್ಕಳ ಅಪೇಕ್ಷೆಯುಳ್ಳ ಆ ದಂಪತಿಗಳು ಒಳ್ಳೆಯ ದಿನದಲ್ಲಿ ವಸಿಷ್ಠನ ಆಶ್ರಮಕ್ಕೆ ಪ್ರಯಾಣವನ್ನು ಬೆಳಸಿದರು.

**ಕತಿಚಿದ್ವಾಸರೈರ್ಮಾರ್ಗಮುಲ್ಲಂಘ್ಯೈಕರಥೇ ಸ್ಥಿತೌ ।**
**ತೌ ದಂಪತೀ ಗುರೋಸ್ಸಾಯಮಾಶ್ರಮಂ ಪ್ರಾಪತುಶ್ಶುಭಂ ॥ ೧೮ ॥**

**ವೈಶ್ವದೇವಾನ್ತಸಂಪ್ರಾಪ್ತಾತಿಥಿಸತ್ಕಾರಕೃನ್ಮುನಿಂ ।**
**ಹುತಾಶನಹುತದ್ರವ್ಯಪ್ರಸರದ್ಧೂಮಮಾಲಯಾ ॥ ೧೯ ॥**

**ಪವಿತ್ರಯನ್ತಮಾತ್ಮಸ್ಥಾನ್ಮುನೀನಾಗಂತುಕಾನಪಿ ।**
**ಮೃಗೈರ್ದೂರ್ವಾಪ್ರತಾನೌಘಪ್ರಪೂರ್ಣೋದರಮಂಥರಂ ॥ ೨೦ ॥**

**ಅಭ್ಯಾಗಚ್ಛದ್ಭಿರಭಿತೋ ಮಂಡಿತಂ ಸನ್ಮೃಗೀಗಣೈಃ ।**
**ವಾಸವೃಕ್ಷಮಿಲತ್ಪಕ್ಷಿಕುಲಕೋಲಾಹಲಾಕುಲಂ ॥ ೨೧ ॥**

**ಪರಸ್ಪರವಿನಿರ್ಮುಕ್ತವೈರವ್ಯಾಘ್ರಮೃಗಾದಿಕಂ ।**
**ಜಪಧ್ಯಾನಪರರ್ಷೀಣಾಂ ಕ್ಷಣಶ್ರಾನ್ತಶ್ರುತಿಧ್ವನಿಂ ॥ ೨೨ ॥**

---

೧೮. ಆ ದಂಪತಿಗಳು ಒಂದೇ ರಥದಲ್ಲಿ ಕುಳಿತುಕೊಂಡು ಪ್ರಯಾಣ ಮಾಡುತ್ತ ಕೆಲವು ದಿನಗಳಲ್ಲಿ ಒಂದುದಿನ ಸಾಯಂಕಾಲದ ವೇಳೆಯಲ್ಲಿ ಆ ಆಶ್ರಮವನ್ನು ಹೊಂದಿದರು.

೧೯-೨೦. ಆ ಆಶ್ರಮವು ವೈಶ್ವದೇವವಾದೊಡನೆಯೇ ಬಂದ ಅತಿಥಿಗಳನ್ನು ಸತ್ಕಾರಮಾಡುತ್ತಿರುವ ಮುನಿಗಳನ್ನು ಹೊಂದಿದ್ದಿತು ಅಗ್ನಿಯಲ್ಲಿ ಹೋಮಮಾಡುವುದರಿಂದ ಮೇಲಕ್ಕೇಳುತ್ತಿರುವ ಹೊಗೆಯ ಗುಂಪಿನಿಂದ ತನ್ನ ಒಳಗಿರುವ ಋಷಿಗಳನ್ನೂ ಬಂದಿರತಕ್ಕವರನ್ನು ಪವಿತ್ರವನ್ನಾಗಿ ಮಾಡುತ್ತಿದ್ದಿತು. ಜಿಂಕೆಗಳು ಗರಿಕೆಯ ಚಿಗುರನ್ನು ತಿಂದು ಹೊಟ್ಟೆತುಂಬಿಸಿಕೊಂಡ ಮೆಲುಕು ಹಾಕುತ್ತಿದ್ದುವು.

೨೧. ಎಲ್ಲಾಕಡೆಯಿಂದಲೂ ಜಿಂಕೆಗಳು ಬಂದು ಅಲ್ಲಿ ಸೇರಿಕೊಳ್ಳುತ್ತಿದ್ದುವು. ಪಕ್ಷಿಗಳೆಲ್ಲವೂ ತಾವು ವಾಸಮಾಡುವುದಕ್ಕೆ ಆ ಆಶ್ರಮದಲ್ಲಿರುವ ಮರಗಳನ್ನೇ ಗೊತ್ತು ಮಾಡಿಕೊಂಡಿದುದರಿಂದ ಅಲ್ಲಿಗೆ ಬಂದು ಸೇರಿಕೊಂಡು ಕಲಕಲ ಧ್ವನಿಮಾಡುತ್ತಿದ್ದುವು.

೨೨ ಅಲ್ಲಿರುವ ಮೃಗಗಳೆಲ್ಲವೂ ವೈರವನ್ನು ಬಿಟ್ಟು ಅನ್ಯೋನ್ಯ ಸ್ನೇಹದಿಂದಿದ್ದುವು. ಸಾಯಂಕಾಲದಲ್ಲಿ ಜಪಧ್ಯಾನದಲ್ಲಿ ಆ ಋಷಿಗಳು ಇರುತ್ತಿದ್ದುದಾಗಿದ್ದಿತು.

ಅನಧ್ಯಯನಕಾಲೋತ್ಥಕ್ರೀಡಾಸಕ್ತಕುಮಾರಕೇ ।
ತಸ್ಮಿನ್ ವಸಿಷ್ಠಮದ್ರಾಕ್ಷಾಂ ದಂಪತೀ ತೌ ಕೃತಕ್ರಿಯಂ ॥ ೨೩ ॥

ಬೃಸ್ಯಾಂ ನಿಷಣ್ಣಮವ್ಯಗ್ರಮರುಂಧತ್ಯೋಪಸೇವಿತಂ ।
ಸ ವವಂದೇ ಗುರೋಃ ಪಾದೌ ಮಹಿಷೀ ಸಾ ಚ ತತ್‌ಸ್ತ್ರಿಯಾಃ ॥ ೨೪ ॥

ಆಶಿಷಾ ಗುರುರಪ್ಯೇನಂ ಯುಯೋಜಾರುಂಧತೀ ಚ ತಾಂ ।
ಅತಿಥಿಂ ತಮಥಾಭ್ಯರ್ಚ್ಯ ಮಧುಪರ್ಕಾದಿಭಿರ್ಗುರುಃ ॥
ಅರ್ಹಣೈರರ್ಹತಾಂ ಶ್ರೇಷ್ಠೋ ವಸಿಷ್ಠ ಇತಿ ಪೃಷ್ಟವಾನ್ ॥ ೨೫ ॥

॥ ವಸಿಷ್ಠ ಉವಾಚ ॥

ಭೋ ಭೋ ಭೂಮಿಭೃತಾಂ ಶ್ರೇಷ್ಠ ರಾಜ್ಯೇ ಕುಶಲಮಸ್ತಿ ತೇ ।
ಕುಲೇ ಚ ಕಚ್ಚಿಲ್ಲೋಕೇ ಚ ನಿಜಧರ್ಮಾನುವರ್ತಿನಿ ॥ ೨೬ ॥

---

೨೩. ಅನಧ್ಯಯನ ಕಾಲಗಳಲ್ಲಿ ಹುಡುಗರೆಲ್ಲರೂ ಆಟವಾಡುತ್ತಿದ್ದರು. ಅಂತಹ ಆ ಆಶ್ರಮದಲ್ಲಿ ತಮ್ಮ ಕೆಲಸಗಳೆನ್ನೆಲ್ಲಾ ಮಾಡಿಕೊಂಡು ಕುಳಿತಿರುವ ಆ ವಸಿಷ್ಠನನ್ನು ಈ ದಂಪತಿಗಳು ನೋಡಿದರು.

೨೪. ಋಷಿಗಳಿಗೆ ಯೋಗ್ಯವಾದ ಆಸನಗಳಲ್ಲಿ ಕುಳಿತಿರುವ ಸ್ತಿಮಿತನಾಗಿರುವ ಅರುಂಧತಿಯಿಂದ ಸೇವಿಸಲ್ಪಡುತ್ತಿರುವ ಆ ಗುರುವಿನ ಪಾದಗಳನ್ನು ಆ ರಾಜನು ನಮಸ್ಕರಿಸಿದನು. ಆತನ ಹೆಂಡತಿಯು ಅರುಂಧತಿಗೆ ನಮಸ್ಕರಿಸಿದಳು.

೨೫ ಗುರುವು ಆ ದಿಲೀಪನನ್ನೂ ಆತನ ಹೆಂಡತಿಯು ಸುದಕ್ಷಿಣೆಯನ್ನೂ ಆಶೀರ್ವದಿಸಿದರು. ಅನಂತರ ಆ ಗುರುವು ಮಧುಪರ್ಕದಿಂದ ಅತಿಥಿಯಾದ ರಾಜನನ್ನು ಸತ್ಕರಿಸಿದನು. ಸತ್ಕಾರವಾದನಂತರ ಪೂಜ್ಯನಾದ ವಸಿಷ್ಠನು ದಿಲೀಪನನ್ನು ಕುರಿತು ಇಂತೆಂದು ಕೇಳಿದನು.

೨೬. ವಸಿಷ್ಠನು ಹೇಳಿದನು- ಎಲೈ ರಾಜಶ್ರೇಷ್ಠನೆ! ನಿನ್ನ ರಾಜ್ಯವು ಕುಶಲವೇ ? ನಿನ್ನ ಕುಲವು ಕುಶಲವೇ ? ತಮ್ಮ ತಮ್ಮ ಧರ್ಮವನ್ನು ಅನುಸರಿಸುತ್ತಿರುವ ನಿನ್ನ ಲೋಕವು ಕುಶಲವಾಗಿರುವುದೆ ?

**ಧರ್ಮೇಣ ಪಾಲಿತಾ ಕಚ್ಚಿತ್ತ್ವಯಾ ವೀರ ವಸುಂಧರಾ ।**
**ಸಂವರ್ಧಯತಿ ತೇ ಕೋಶಂ ಧರ್ಮಂ ಧೀರಿವ ಸಾತ್ತ್ವಿಕೀ ॥ ೨೭ ॥**

**ತವ ಜಾನಪದಾ ರಾಜನ್ ಪೌರಾಶ್ಚ ಸ್ಥಿತಿಮಾತ್ಮನಃ ।**
**ಸಾರಮಂತೋ ವಿಮುಂಚಂತಿ ಕಚ್ಚಿನ್ನಾಂಬುಧಯೋ ಯಥಾ ॥ ೨೮ ॥**

**ಸ್ನೇಹೇನ ಸಾಹಚರ್ಯೇಣ ಸಹವಾಸತಯಾ ಪ್ರಭೋ ।**
**ಲಕ್ಷ್ಮೀನಾರಾಯಣಾವೇತೇ ಕಚ್ಚಿತ್ತೇ ಪುರದಂಪತೀ ॥ ೨೯ ॥**

**ಕಾಮ್ಯವ್ರತಾನಿ ರಾಜೇಂದ್ರ ಪ್ರಜಾನಾಂ ನಗರೇ ತವ ।**
**ಫಲಂತಿ ವಾಂಛಿತಂ ಕಚ್ಚಿತ್ ಹರಿಚಂದನವದ್ದಿವಿ ॥ ೩೦ ॥**

**॥ ದೇವಲ ಉವಾಚ ॥**

**ಪೃಷ್ಟ್ವೈವಂ ಸ ಮುನಿಶ್ರೇಷ್ಠೋ ವಸಿಷ್ಠೋ ವೈಶ್ಯಪುಂಗವ ।**
**ಯೋಗಪ್ರಭಾವೋಪನತೈರ್ನೃಪಂ ಭೋಜ್ಯೈರಭೋಜಯತ್ ॥ ೩೧ ॥**

---

೨೭. ಎಲೈ ಧೀರನೆ! ಭೂಮಿಯನ್ನು ಧರ್ಮದಿಂದ ಪಾಲಿಸುತ್ತಿರುವೆಯಾ? ಸತ್ವಗುಣದಿಂದ ಕೂಡಿದ ಬುದ್ಧಿಯು ಧರ್ಮವನ್ನು ಹೆಚ್ಚಿಸುವಂತೆ ನಿನ್ನ ಕೋಶವು ನಿನ್ನ ಬುದ್ಧಿಯಿಂದ ಅಭಿವೃದ್ಧಿಯಾಗುತ್ತಿರುವುದೆ?

೨೮. ನಿನ್ನ ಪಟ್ಟಣದವರೂ ದೇಶದವರೂ ಸ್ನೇಹದಿಂದಲಾಗಲಿ ಸಹವಾಸದೋಷದಿಂದಲಾಗಲಿ ಸಮುದ್ರವು ತನ್ನ ಎಲ್ಲೆಯನ್ನು ಬಿಡದಿರುವಂತೆ ಅವರೂ ತಮ್ಮ ಸ್ಥಿತಿಯನ್ನು ಬಿಡದಿರುವರೆ?

೨೯-೩೦. ಎಲೈ ದೊರೆಯೆ! ನಿನ್ನ ದೇಶದಲ್ಲಿರುವ ದಂಪತಿಗಳು ಲಕ್ಷ್ಮೀನಾರಾಯಣರಂತೆ ಸ್ನೇಹದಿಂದಿರುವರೆ? ಹರಿಚಂದನಮರವು ಸ್ವರ್ಗದಲ್ಲಿ ಇಷ್ಟವಾದುದನ್ನು ಕೊಡುವಂತೆ ನಿನ್ನ ಪಟ್ಟಣದಲ್ಲಿ ದಂಪತಿಗಳು ಮಾಡುತ್ತಿರುವ ವ್ರತಗಳು ಇಷ್ಟಾರ್ಥಗಳನ್ನು ಕೊಡುತ್ತಿರುವುವೆ?

೩೧. ದೇವಲನು ಹೇಳಿದನು– ಎಲೈ ವೈಶ್ಯ ಶ್ರೇಷ್ಠನೆ! ಆ ವಸಿಷ್ಠನು ಹೀಗೆ ಕೇಳಿ ತಾನು ಯೋಗದಿಂದ ಸೃಷ್ಟಿಸಿದ ಆಹಾರ ಪದಾರ್ಥಗಳಿಂದ ಆ ರಾಜನನ್ನು ಊಟಮಾಡಿಸಿ ಸಂತೋಷಪಡಿಸಿದನು.

ಅರುಂಧತೀ ಚ ತಾಂ ರಾಜ್ಞೀಂ ಬಹ್ವಾದರಸಮನ್ವಿತಾ ।
ನಾನಾವ್ಯಂಜನಪಕ್ವಾನ್ನೈರಭೋಜಯದುದಾರಧೀಃ ॥ ೩೨ ॥

ಕೃತಭೋಜನಮಾಸೀನಂ ಸ್ವಸ್ಥಃ ಸ್ವಸ್ಥಂ ಮುನಿರ್ನೃಪಂ ।
ಪುನಃ ಪಪ್ರಚ್ಛ ಸಂಗೃಹ್ಯ ಪಾಣಿನಾ ಪಾಣಿಮಾನತಂ ॥ ೩೩ ॥

॥ ವಸಿಷ್ಠ ಉವಾಚ ॥

ಸಪ್ತಾಂಗಸಂಯುತಂ ರಾಜ್ಯಂ ನಿಜಧರ್ಮರತಪ್ರಜಂ ।
ಪ್ರೀತಬಂಧುಜನಾಮಾತ್ಯಂ ಶಸ್ತ್ರಾಸ್ತ್ರವಿಧಿವದ್ಭಟಂ । ॥ ೩೪ ॥

ವಶ್ಯಮಿತ್ರಂ ಹತಾಮಿತ್ರಂ ಕೃಷ್ಣಾರ್ಚಾಪರಮಾನಸಂ
ಯಸ್ಯಾಸ್ತಿ ನೃಪತೇ ರಾಜ್ಯಂ ಸ್ವರ್ಗರಾಜ್ಯೇನ ತಸ್ಯ ಕಿಂ । ॥ ೩೫ ॥

---

೩೨. ಅರುಂಧತಿಯು ಆ ರಾಣಿಯನ್ನು ಬಹು ಪ್ರೀತಿಯಿಂದ ನೋಡುತ್ತ ಅನೇಕವಾದ ವ್ಯಂಜನಗಳಿಂದಲೂ ಅನೇಕ ಬಗೆಯಾದ ಅನ್ನಗಳಿಂದಲೂ ತೃಪ್ತಿಪಡಿಸಿದಳು.

೩೩. ರಾಜನು ಊಟಮಾಡಿ ಸುಖವಾಗಿ ಕೈಕಟ್ಟಿಕೊಂಡು ಕುಳಿತಿರಲು ಈ ಮುನಿಯು ಸುಖವಾಗಿ ಅವನ ಬಳಿಯಲ್ಲಿ ಕುಳಿತುಕೊಂಡು ಮತ್ತೆ ಇಂತೆಂದು ಕೇಳಿದನು.

೩೪-೩೫. ವಸಿಷ್ಠನು ಹೇಳಿದನು-ಸ್ವಾಮಿ! ಅಮಾತ್ಯ ಸುಹೃತ್ ಕೋಶ ರಾಷ್ಟ್ರ ದುರ್ಗ ಬಲಗಳೆಂಬ ಏಳು ಬಗೆಯಾದ ಅಂಗಗಳಿಂದ ಕೂಡಿರುವ, ತಮ್ಮ ತಮ್ಮ ಧರ್ಮವನ್ನು ಅನುಸರಿಸಿಕೊಂಡಿರುವ ಪ್ರಜೆಗಳುಳ್ಳ, ಪ್ರೀತಿಯಿಂದ ಕೂಡಿರುವ ಬಂಧು ಜನಗಳೂ ಅಮಾತ್ಯರೂ ಇರುವ, ಶಸ್ತ್ರಅಸ್ತ್ರಗಳನ್ನು ಬಲ್ಲ ಭಟರಿರುವ, ಮಿತ್ರರು ಅಧೀನರಾಗಿರುವ, ಶತ್ರುಗಳಿಲ್ಲದಿರುವ, ಕೃಷ್ಣನ ಪೂಜೆಯಲ್ಲಿಯೇ ಮನಸುಳ್ಳ, ರಾಜ್ಯವು ಯಾವ ರಾಜನಿಗೆ ಇರುವುದೋ ಅವನಿಗೆ ಸ್ವರ್ಗರಾಜ್ಯದಿಂದ ಪ್ರಯೋಜನವೇನು ! ಅದು ತುಚ್ಛವಾದುದು.

ಇಕ್ಷ್ವಾಕುವಂಶರಾಜಾನಃ ಪುತ್ರಾನುತ್ಪಾದ್ಯ ಧಾರ್ಮಿಕಾಃ ।
ರಾಜ್ಯಂ ಚ ತೇಷು ವಿನ್ಯಸ್ಯ ಪ್ರಪನ್ನಾಸ್ತಪಸಿ ಪ್ರಭೋ ॥ ೩೬ ॥

ತ್ವಂ ಯುವಾಽದೃಷ್ಟಪುತ್ರಾಸ್ಯೋ ನಾಧಿಕಾರೀ ತಪೋವಿಧೌ ।
ಕಿಮರ್ಥಮಾಗತೋ ಹ್ಯತ್ರ ರಾಜ್ಯಂ ತ್ಯಕ್ತ್ವಾ ತಥಾವಿಧಂ ॥ ೩೭ ॥

॥ ರಾಜೋವಾಚ ॥

ಬ್ರಹ್ಮನ್ನಾಹಂ ತಪಃ ಕರ್ತುಮಾಗತಸ್ತಾವಕಾಶ್ರಮೇ ।
ಸ್ವರ್ಗಕಾಮನಯಾ ತ್ಯಕ್ತ್ವಾ ರಾಜ್ಯಮತ್ರ ತಥಾವಿಧಂ ॥ ೩೮ ॥

ಬ್ರಹ್ಮರ್ಷೇ ಸತ್ಯಮಿದಂ ಚೋಕ್ತಂ ಭವತಾ ಯತ್ತಪೋವನಂ ।
ರಾಜ್ಯಮಾರೋಪ್ಯ ಪುತ್ರೇಷು ಪ್ರಾಪ್ತಾ ಇಕ್ಷ್ವಾಕುವಂಶಜಾಃ ॥ ೩೯ ॥

ನ ತೈಸ್ತ್ಯಕ್ತಂ ಮಹೀರಾಜ್ಯಮಿದಂ ಸ್ವರ್ಗಗತೈರಪಿ ।
ತನ್ಮೂರ್ತಿರಸ್ಯಾಂ ವಿಮನಾಸ್ತಿಷ್ಠತಿ ಹ್ಯೇವ ಸಂತತಿಃ ॥ ೪೦ ॥

---

೩೬. ಇಕ್ಷ್ವಾಕುವಂಶದ ರಾಜರು ಧರ್ಮಿಷ್ಠರಾಗಿದ್ದುಕೊಂಡು ಮಕ್ಕಳನ್ನು ಹೊಂದಿ ರಾಜ್ಯವನ್ನು ಅವರಿಗೆ ಕೊಟ್ಟು ಅನಂತರ ತಪಸ್ಸಿಗೆ ಬರುತ್ತಾರೆ.

೩೭. ನೀನು ಇನ್ನೂ ಯುವಕನು. ಮಕ್ಕಳ ಮುಖವನ್ನೇ ಕಾಣದವನು. ತಪಸ್ಸಿನಲ್ಲಿ ಇನ್ನೂ ಅಧಿಕಾರವನ್ನೇ ಹೊಂದಿಲ್ಲ. ಈ ರೀತಿಯಾದ ನೀನು ಆ ರೀತಿಯಾದ ರಾಜ್ಯವನ್ನು ಏಕೆ ಬಿಟ್ಟು ಬಂದಿದ್ದೀಯೆ ?

೩೮. ರಾಜನು ಹೇಳಿದನು-ಎಲೈ ಬ್ರಾಹ್ಮಣನೇ! ಅಂತಹ ಉತ್ತಮವಾದ ರಾಜ್ಯವನ್ನು ಬಿಟ್ಟು ಸ್ವರ್ಗವನ್ನು ಹೊಂದಲು ನಾನು ನಿನ್ನ ಆಶ್ರಮಕ್ಕೆ ತಪಸ್ಸನ್ನು ಮಾಡಬೇಕೆಂದು ಬಂದವನಲ್ಲ.

೩೯. ಎಲೈ ಋಷಿಯೆ! ನೀನು ಹೇಳಿದುದು ಸತ್ಯವು. ಇಕ್ಷ್ವಾಕು ವಂಶದವರು ಮಕ್ಕಳಿಗೆ ರಾಜ್ಯವನ್ನು ಕೊಟ್ಟು ತಪಸ್ಸಿಗೆ ಇಲ್ಲಿಗೆ ಬರುತ್ತಿದ್ದರೆಂದು ನೀನು ನಿಜವನ್ನೇ ಹೇಳಿದೆ.

೪೦. ಅವರು ಸ್ವರ್ಗವನ್ನು ಹೊಂದಿದರೂ ಕೂಡ ಈ ಭೂಲೋಕದ ರಾಜ್ಯವನ್ನು ಬಿಟ್ಟವರಲ್ಲ. ಏತಕ್ಕೆಂದರೆ ಅವರ ಸಂತತಿಯಲ್ಲಿ ಅವರು ರಾಜ್ಯವನ್ನು ಕೊಡುತ್ತಿದ್ದರಷ್ಟೆ! ಆ ಸಂತತಿಯು ಅವರ ಮೂರ್ತಿಯಲ್ಲವೆ!

ಯಥಾ ಬಾಲ್ಯಂ ಗತಂ ತಾತ ಯೌವನಂ ಚ ಸಮಾಗತಃ ।
ಯಾಸ್ಯತ್ಯದೋಪಿ ಚ ತಥಾ ಜರಾಪ್ಯೇಷ್ಯತಿ ನಿಶ್ಚಿತಂ ॥ ೪೧ ॥

ಜರಸೋನಂತರಂ ಮೃತ್ಯುಃ ಪುರುಷಸ್ಯ ನ ಸಂಶಯಃ ।
ಮೃತ್ಯುಂ ಗತೇ ಮಯಿ ಬ್ರಹ್ಮನ್ ವಿನಾ ತನಯಸಂಭವಂ ॥ ೪೨ ॥

ಕಸ್ಯೇದಂ ಜಗತೀರಾಜ್ಯಂ ಭವಿಷ್ಯತಿ ಗುರೋ ವದ ।
ತಸ್ಮಾದಪತ್ಯಹೀನಸ್ಯ ರಾಜ್ಯೇಪಿ ಮಮ ತಿಷ್ಠತಃ ॥ ೪೩ ॥

ಮಮತ್ವಂ ವಿದ್ಯತೇ ನಾತ್ರ ಪುರಸ್ತಾತ್ತದಭಾವತಃ ।
ವರ್ಗತ್ರಯಸ್ಯ ವೈ ಸಮ್ಯಕ್ ಸವಿತಾ ತ್ವಂ ಗುರೋ ಮಮ ॥ ೪೪ ॥

ಕೇನ ದೋಷೇಣ ಮೇ ಪುತ್ರೋ ಜಾಯತೇ ನ ತಪೋನಿಧೇ ।
ಧ್ಯಾನೇನ ದೋಷಮಾಲೋಕ್ಯ ತಂ ಗುರೋ ಕಥಯಾಶು ಮೇ ।
ತಸ್ಯ ಪ್ರತಿಕ್ರಿಯಾಂ ಕುರ್ಯಾಂ ಶ್ರುತ್ವಾ ಸಂತಾನಲಬ್ಧಯೇ ॥ ೪೫ ॥

---

೪೧-೪೨. ಬಾಲ್ಯವು ಕಳೆಯಿತು. ಯೌವನವು ಬಂದಿತು. ಈ ಯೌವನವೂ ಹೋಗುತ್ತದೆ. ಮುಪ್ಪು ಬರುತ್ತದೆ. ಆ ಮುಪ್ಪು ಹೋಗುತ್ತದೆ. ಮೃತ್ಯುವು ಬರುತ್ತದೆ. ಪುರುಷನಿಗೆ ಇವು ಬರುವುದು ನಿಶ್ಚಯವು. ನನಗೆ ಮಕ್ಕಳೇ ಇಲ್ಲ. ಇಂತಹ ನಾನು ಸತ್ತರೆ ಈ ಭೂರಾಜ್ಯವು ಯಾರಿಗೆ ಸೇರುವುದು? ಎಂಬುದನ್ನು ಹೇಳು.

೪೩-೪೪. ನನಗೆ ಮಕ್ಕಳಿಲ್ಲದಿರುವುದರಿಂದ ರಾಜ್ಯಭಾರ ಮಾಡುತ್ತಿದ್ದರೂ ಮುಂದೆ ಆ ರಾಜ್ಯವನ್ನು ಹೊರುವವರು ಇಲ್ಲದೆ ಇರುವುದರಿಂದ ನನಗೆ ನನ್ನದು ಎಂಬ ಪ್ರೀತಿಯೇ ಹೊರಟುಹೋಗಿದೆ. ನೀನೂ ಸೂರ್ಯನೂ ನನ್ನ ತಾತ ಮುತ್ತಾತಂದಿರ ಕಾಲದಿಂದಲೂ ಗುರುವಾಗಿರುವಿ.

೪೫. ಎಲೈ ತಪೋನಿಧಿಯೆ! ಯಾವ ದೋಷದಿಂದ ನನಗೆ ಮಕ್ಕಳಾಗಲಿಲ್ಲ? ಧ್ಯಾನದಿಂದ ದೋಷವನ್ನು ತಿಳಿದು ನನಗೆ ಅದನ್ನು ಹೇಳು. ಅದನ್ನು ಕೇಳಿ ಮಕ್ಕಳಾಗುವುದಕ್ಕೆ ಬೇಕಾದ ಪ್ರತೀಕಾರವನ್ನು ಮಾಡುವೆನು.

|| ದೇವಲ ಉವಾಚ ||

ಇತ್ಯಾಕರ್ಣ್ಯ ವಸಿಷ್ಠಸ್ತು ವಚಸ್ತಸ್ಯ ಮಹೀಪತೇಃ ।
ಉವಾಚ ಸಂತತಿಸ್ತಂಭಹೇತುಂ ವೀಕ್ಷ್ಯ ಸಮಾಧಿನಾ || ೪೬ ||

|| ವಸಿಷ್ಠ ಉವಾಚ ||

ತ್ವಂ ಪುರಾ ರಾಜಶಾರ್ದೂಲ ಸಂಸೇವ್ಯ ಸುರನಾಯಕಂ ।
ಸ್ನಾತಾಮಿಮಾಂ ವಧೂಂ ಸ್ಮೃತ್ವಾ ಚಲಿತೋ ನಿಜಮಂದಿರಂ || ೪೭ ||

ಗಚ್ಛತಸ್ತ್ವರಯಾ ತಾತ ಸಂತಾನೋತ್ಕಂಠಿತಸ್ಯ ತೇ ।
ಆಸೀತ್ಸುರತರೋರ್ಮೂಲೇ ಕಾಮಧೇನುಃ ಸ್ಥಿತಾ ಪಥಿ || ೪೮ ||

ಉತ್ಪಾದಿತಾ ತ್ವಯಾ ತಸ್ಯಾಃ ಪೂಜ್ಯಾಂಘ್ರಿರಜಸೋತಿರುಟ್ ।
ಪ್ರದಕ್ಷಿಣನಮಸ್ಕಾರಸದಾಚಾರಮಕುರ್ವತಾ || ೪೯ ||

---

೪೬. ದೇವಲನು ಹೇಳಿದನು-ರಾಜನು ಹೇಳಿದ ಈ ಮಾತನ್ನು ವಸಿಷ್ಠನು ಕೇಳಿ ಯೋಗದೃಷ್ಟಿಯಿಂದ ಆ ರಾಜನಿಗೆ ಸಂತತಿಯು ನಿಂತುಹೋಗಿರುವುದಕ್ಕೆ ಕಾರಣವನ್ನು ತಿಳಿದು ಇಂತೆಂದು ಹೇಳಿದನು.

೪೭. ವಸಿಷ್ಠನು ಹೇಳಿದನು-ಎಲೈ ದೊರೆಯೆ! ನೀನು ಪೂರ್ವದಲ್ಲಿ ದೇವೇಂದ್ರನನ್ನು ಸೇವಿಸುತ್ತಿದ್ದಾಗ ನಿನ್ನ ಹೆಂಡತಿಯು ಋತು ಸ್ನಾನವನ್ನು ಮಾಡಿರುವುದು ಜ್ಞಾಪಕಕ್ಕೆ ಬರಲು ಅಲ್ಲಿಂದ ಮನೆಗೆ ಹೊರಟೆ.

೪೮. ಸಂತಾನವಾಗಲೆಂದು ಋತು ಕಾಲವನ್ನು ಮೀರದಂತೆ ನೀನು ಹೊರಟು ಬರುತ್ತಿರುವಾಗ ದಾರಿಯಲ್ಲಿ ಕಲ್ಪವೃಕ್ಷದ ಕೆಳಗೆ ಕಾಮಧೇನುವು ಇದ್ದಿತು.

೪೯. ನೀನು ಅವಸರದಿಂದ ಬರುತ್ತ ಅದಕ್ಕೆ ಪ್ರದಕ್ಷಿಣ ನಮಸ್ಕಾರ ಗಳನ್ನು ಮಾಡದೆ ಹೋದೆ. ಪೂಜ್ಯರನ್ನು ಗೌರವಿಸದಿರುವುದು ತಪ್ಪಾಗುವುದಾದ್ದರಿಂದ ಆ ಕಾಮಧೇನುವಿಗೆ ಆಗ ಕೋಪ ಬಂದಿತು.

ಸಾ಻ಶಪತ್ತ್ವಾಮತಿಕ್ರೋಧಾತ್ಪುತ್ರೋ ನೋತ್ಪತ್ಸ್ಯತೇ ತವ ।
ಮಮ ಸಂತಾನಶುಶ್ರೂಷಾಂ ಯಾವತ್ತ್ವಂ ನ ಕರಿಷ್ಯಸಿ ॥ ೫೦ ॥

ಗಚ್ಛಂಸ್ತ್ವಮೃತುಡಾನಾಯ ತ್ವರಯಾ ಸುತಕಾಮುಕಃ ।
ತನ್ಮನಾಃ ನಾಶೃಣೋಃ ಶಾಪಂ ನ ಯಂತಾ಻ಕ್ಷನಿನಾದತಃ ॥ ೫೧ ॥

ತಸ್ಯಾಃ ಸುತಾಸುತಾಂ ಧೇನುಂ ನಂದಿನೀಂ ಸಸುತಾಂ ಮಮ ।
ಆರಾಧಯಾನಯಾ ವಧ್ವಾ ಸಾರ್ಧಂ ತೇ ದಾಸ್ಯತೇ ಸುತಂ । ॥ ೫೨ ॥

॥ ದೇವಲ ಉವಾಚ ॥

ಇತ್ಯುಕ್ತವತಿ ತತ್ರರ್ಷೌ ವಸಿಷ್ಠೇ ಸಾ ತು ನಂದಿನೀ ।
ತಪೋವನಾತ್ಸಮಾಯಾತಾ ವತ್ಸಸ್ನೇಹಸ್ರುತಸ್ತನೀ ॥ ೫೩ ॥

---

೫೦. ಎಲೈ ದೊರೆಯೆ ! ನೀನು ನನ್ನ ವಂಶದಲ್ಲಿ ಹುಟ್ಟಿದ ಧೇನುವನ್ನು ಶುಶ್ರೂಷೆ ಮಾಡುವವರೆಗೂ ನಿನಗೆ ಮಕ್ಕಳಾಗದಿರಲೆಂದು ಕೋಪದಿಂದ ನಿನಗೆ ಶಾಪವನ್ನು ಕೊಟ್ಟಿತು.

೫೧. ನೀನು ಪುತ್ರರನ್ನು ಹೊಂದುವುದಕ್ಕೋಸ್ಕರ ಅವಸರದಿಂದ ಆಸೆಯಿಂದ ಹೋಗುತ್ತ ಅದರಲ್ಲಿಯೇ ಮನಸ್ಸನ್ನಿಟ್ಟದ್ದರಿಂದ ಅದು ಕೇಳಲಿಲ್ಲ. ರಥದ ಚಕ್ರವು ಧ್ವನಿಮಾಡುತ್ತಿದ್ದುದರಿಂದ ಸಾರಥಿಗೂ ಆ ಶಾಪವು ಕೇಳಿಸಲಿಲ್ಲ.

೫೨. ಆ ಕಾಮಧೇನುವಿನ ಮಗಳ ಮಗಳಾದ ನಂದಿನಿಧೇನುವು ನನ್ನ ಬಳಿಯಲ್ಲಿದೆ. ಅದು ಕರುವನ್ನು ಹಾಕಿದೆ. ಅದನ್ನು ನೀನೂ ನಿನ್ನ ಹೆಂಡತಿಯೂ ಸೇವಿಸಿರಿ. ಅದೇ ನಿಮಗೆ ಮಕ್ಕಳನ್ನು ಕೊಡುವುದು.

೫೩. ದೇವಲನು ಹೇಳಿದನು-ಆ ವಸಿಷ್ಠನು ಹೀಗೆ ಹೇಳುತ್ತಿರುವ ಸಮಯದಲ್ಲಿ ನಂದಿನಿಯು ಕರುವನ್ನು ಜ್ಞಾಪಿಸಿಕೊಂಡು ಹಾಲನ್ನು ಹಿಡಿಸಲಾರದಂತೆ ಹಿಡಿದುಕೊಂಡು ಕಾಡಿನಿಂದ ಮನೆಗೆ ಬಂದಿತು.

ತಾಂ ದೃಷ್ಟ್ವಾ ಹೃಷ್ಟಹೃದಯೋ ವಸಿಷ್ಠೋ ಮುನಿಪುಂಗವಃ ।
ಉವಾಚ ಭೂಪತಿಂ ಭೂಯೋ ದರ್ಶಯಿತ್ವಾ ಚ ನಂದಿನೀಂ ॥ ೫೪ ॥

॥ ವಸಿಷ್ಠ ಉವಾಚ ॥

ರಾಜರ್ಷೆ ಸಮಾಗತಾ ಹ್ಯೇಷಾ ಸ್ಮೃತಮಾತ್ರಶುಭಾವಹಾ ।
ಅತೋ ವಿದ್ಧಿ ಸಮೀಪಸ್ಥಾಂ ಕಾರ್ಯಸಿದ್ಧಿಮಿಹಾತ್ಮನಃ ॥ ೫೫ ॥

ಆರಾಧಿತಾನುಗತ್ಯೇಯಂ ತ್ವಯಾರಣ್ಯೇ ತಥಾಶ್ರಮೇ ।
ವಧ್ವಾ ಪ್ರಸಾದಾತ್ತೇ ಪುತ್ರಂ ದಾಸ್ಯತೇ ನಾತ್ರ ಸಂಶಯಃ ॥ ೫೬ ॥

ಯಥಾ ನಾಭಿಭವೇದೇನಾಂ ಜಂತುಃ ಕಶ್ಚಿದ್ವನೋದ್ಭವಃ ।
ತಥಾ ಚಾರಯ ರಾಜೇಂದ್ರ ವನೇ ಹಿಂಸ್ರೋ ಧನುರ್ಧರಃ ॥ ೫೭ ॥

---

೫೪. ಆ ನಂದಿನಿಯನ್ನು ನೋಡಿ ಋಷಿಶ್ರೇಷ್ಠನಾದ ವಸಿಷ್ಠನು ಆ ರಾಜನಿಗೆ ನಂದಿನಿ ಧೇನುವನ್ನು ತೋರಿಸುತ್ತ ಇಂತೆಂದನು.

೫೫. ವಸಿಷ್ಠನು ಹೇಳಿದನು–ಎಲೈ ರಾಜನೇ! ಜ್ಞಾಪಿಸಿಕೊಂಡ ಒಡನೆಯೇ ಇದು ಬಂದಿತು. ಆದ್ದರಿಂದ ಶುಭಕರವು. ಇದರಿಂದ ನಿನ್ನ ಕಾರ್ಯ ಸಿದ್ಧಿಯು ಸಮೀಪದಲ್ಲಿರುವುದೆಂದೇ ತಿಳಿ.

೫೬. ನೀನು ನಿನ್ನ ಹೆಂಡತಿಯೊಡನೆ ಅದನ್ನೇ ಅನುಸರಿಸುತ್ತ ಕಾಡಿನಲ್ಲಿಯೂ ಆಶ್ರಮದಲ್ಲಿಯೂ ಸೇವಿಸುತ್ತಿದ್ದರೆ ನಿನಗೆ ಅದು ಮಗನ ವರವನ್ನು ಕೊಡುತ್ತದೆ. ಇದರಲ್ಲಿ ಸಂಶಯವಿಲ್ಲ.

೫೭. ಕಾಡಿನಲ್ಲಿರುವ ಯಾವ ದುಷ್ಟ ಪ್ರಾಣಿಯೇ ಆಗಲಿ ಇದನ್ನು ತೊಂದರೆಮಾಡದಂತೆ ನೋಡಿಕೊಳ್ಳುತ್ತ ಧನುರ್ಧರನಾಗಿ ಇದನ್ನು ನೋಡಿಕೊಂಡು ಸೇವಿಸುತ್ತಿರು.

॥ ದೇವಲ ಉವಾಚ ॥

ತಥೇತಿ ಲಘುವಾದಿನೇ ನೃಪತಯೇ ಸ್ನುಷಾಯ್ಯೈ ಚ ಸಃ ।
ಕ್ಷಪಾಶಯನಹೇತವೇ ಸದುಟಜಂ ದದೌ ತಾಪಸಃ ॥
ಸ ತತ್ರ ಸಹಭಾರ್ಯಯಾ ಸಮಧಿಶಯ್ಯ ದರ್ಭಾಸ್ತೃತಾಂ ॥
ಮಹೀಮಗಮಯನ್ನಿಶಾಂ ನಿಯತಮಾನಸೋ ವಿಟ್ಪತೇ ॥ ೫೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ದಿಲೀಪ ಪುತ್ರ ಪ್ರಾಪ್ತಿ ಸಾಧನ ಕಥನಂ ನಾಮ ಅಷ್ಟನವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೫೮. ದೇವಲನು ಹೇಳಿದನು-ಆ ರಾಜನು ಹಾಗೆಯೇ ಆಗಲೆಂದು ಹೇಳಿ ಹೆಚ್ಚು ಮಾತಾಡದಿರಲು ಆ ವಸಿಷ್ಠನು ರಾಜನಿಗೂ ರಾಣಿಗೂ ರಾತ್ರಿಯಲ್ಲಿ ಮಲಗಿ ಕೊಳ್ಳಲು ಒಂದು ಒಳ್ಳೆಯ ಪರ್ಣಶಾಲೆಯನ್ನು ಕೊಟ್ಟನು. ಆ ರಾಜನೂ ಕೂಡ ಅಲ್ಲಿ ದರ್ಭೆಯನ್ನು ಹಾಸಿರುವ ನೆಲದ ಮೇಲೆ ಮಲಗಿ ಆ ರಾತ್ರಿಯನ್ನು ಕಳೆಯಲು ಹೋದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ದಿಲೀಪ ಪುತ್ರ ಪ್ರಾಪ್ತಿ ಸಾಧನ ಕಥನ ಎಂಬ ನೂರ ತೊಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ನವನವತ್ಯಧಿಕಶತತಮೋಽಧ್ಯಾಯಃ ॥



॥ ದೇವಲ ಉವಾಚ ॥

**ಅಥೋಷಸಿ ನರಾಧೀಶಃ ಪೂಜಿತಾಂ ಕುಸುಮಾದಿಭಿಃ ।**
**ಮಹಿಷ್ಯಾ ನಂದಿನೀಂ ಧೇನುಂ ನೀತ್ವಾರಣ್ಯಂ ಜಗಾಮ ಸಃ ॥ ೧ ॥**

**ಗಚ್ಛನ್ತೀಮನು ತಾಂ ಧೇನುಂ ಛಾಯೇವ ನೃಪತಿರ್ಯಯೌ ।**
**ಖಾದಂತೀಮನು ಸಸ್ಯಾದಿ ಸೋಽಪಿ ಮೂಲಾದ್ಯಭಕ್ಷಯತ್ ॥ ೨ ॥**

**ತರುಚ್ಛಾಯಾಮುಪಾಸೀನಾಮನು ಸೋಽಪ್ಯುಪವಿಷ್ಟವಾನ್ ।**
**ಪಿಬಂತೀಮನು ಪಾನೀಯಂ ರಾಜಾಪಿ ಸಲಿಲಂ ಪಪೌ ॥ ೩ ॥**

---

## ನೂರ ತೊಂಭತ್ತೊಂಭತ್ತನೆಯ ಅಧ್ಯಾಯವು



೧. ದೇವಲನು ಹೇಳಿದನು-ಬೆಳಗ್ಗೆ ಏಳುತ್ತಲೂ ಆ ದೊರೆಯು ಹೆಂಡತಿಯೊಡನೆ ಆ ನಂದಿನಿ ಧೇನುವನ್ನು ಹೂವು ಮುಂತಾದುವುಗಳಿಂದ ಪೂಜಿಸಿ ಮೇಯಿಸಲು ಕಾಡಿಗೆ ತೆಗೆದುಕೊಂಡು ಹೋದನು.

೨. ಹಸುವು ಹೋಗುತ್ತಿರಲು ಅದನ್ನು ರಾಜನು ಅನುಸರಿಸಿ ಅದರ ನೆರಳಿನಂತೆ ಹೋಗುತ್ತಿದ್ದನು. ಅದು ಹುಲ್ಲು ಮುಂತಾದುವನ್ನು ತಿನ್ನುತ್ತಿರಲು ತಾನು ಗೆಡ್ಡೆ ಗೆಣಸುಗಳನ್ನು ತಿನ್ನುತ್ತಿದ್ದನು.

೩. ಆ ಹಸುವು ಮರದ ನೆರಳಿನಲ್ಲಿ ನಿಂತುಕೊಳ್ಳಲು ತಾನೂ ಅಲ್ಲಿ ಕುಳಿತುಕೊಂಡನು. ಅದು ನೀರನ್ನು ಕುಡಿಯಲು ಲಗ ತಾನೂ ಕೂಡ ನೀರನ್ನು ಕುಡಿದನು.

ಸ ಚ ರಾಜಾ ತೃಣಗ್ರಾಸೈರ್ದಂಶಾಪನಯನೇನ ಚ ।
ಕಂಡೂಯನೈಃ ಕಾಮಧೇನುಂ ಗುರೋರೇವಮಸೇವತ ॥ ೪ ॥

ಅಥ ಪ್ರತ್ಯಾಶ್ರಮಂ ಸಾಯಂ ನ್ಯವರ್ತತ ಮಹೀಪತೇಃ ।
ಅಂಗಂ ಪವಿತ್ರಯಂತೀ ಸಾ ಖುರೋದ್ಧೂತೈ ರಜಃಕಣೈಃ ॥ ೫ ॥

ಊಧೋಭಾರೇಣ ಗುರುಣಾ ಗಚ್ಛಂತೀ ಮಂಥರಂ ಬಭೌ ।
ಮಹೀಪಾಲಮಹಾಕಾರ್ಯಭಾರಾಕ್ರಾನ್ತೇವ ನಂದಿನೀ ॥ ೬ ॥

ತಾಂ ಮುನೇರಾಶ್ರಮಾಭ್ಯಾಶೇ ರಾಜ್ಞೀ ಪ್ರತ್ಯುಜ್ಜಗಾಮ ಹ ।
ಚಂದನಾಕ್ಷತನೈವೇದ್ಯಧೂಪಾದೀನುಪನೀಯ ಚ ॥ ೭ ॥

ತಾಂ ಪೂಜಯಿತ್ವಾ ವಿಧಿವತ್ಪ್ರಣಮ್ಯ ಚ ಪುನಃ ಪುನಃ ।
ಕೃತ್ವಾ ಪ್ರದಕ್ಷಿಣಂ ರಾಜ್ಞೀ ತಸ್ಥೌ ಪ್ರಾಂಜಲಿರಗ್ರತಃ ॥ ೮ ॥

---

೪. ಆ ರಾಜನು ಆ ಹಸುವಿಗೆ ಹುಲ್ಲುಗಳನ್ನು ಕೊಡುವುದರಿಂದಲೂ ನೊಣವನ್ನು ಓಡಿಸುವುದರಿಂದಲೂ ನವೆಯನ್ನು ತುರಿಸುವುದರಿಂದಲೂ ಅದನ್ನು ಎಡಬಿಡದೆ ಸೇವಿಸುತ್ತಿದ್ದನು.

೫. ಅನಂತರ ಸಾಯಂಕಾಲವಾಗುತ್ತಲೂ ಆ ನಂದಿನಿಯು ತನ್ನ ಪಾದದ ಧೂಳಿನಿಂದ ಎಲ್ಲರನ್ನೂ ಶುದ್ಧಿ ಮಾಡುತ್ತ ಆಶ್ರಮಕ್ಕೆ ಬಂದಿತು.

೬. ಕೆಚ್ಚಲಿನ ಭಾರದಿಂದ ಆ ನಂದಿನಿಯು ಹೋಗುತ್ತಿರುವುದನ್ನು ನೋಡಿದರೆ ಆ ರಾಜನ ಮಹಾಕಾರ್ಯದ ಭಾರವನ್ನು ಹೊತ್ತಿರುವುದರಿಂದ ನಿಧಾನ ವಾಗಿ ಹೋಗುತ್ತದೆಯೋ ಎಂಬಂತಿದ್ದಿತು.

೭. ಆ ಹಸುವನ್ನು ಆಶ್ರಮದ ಹತ್ತಿರ ಆ ರಾಣಿಯು ಚಂದನ ಅಕ್ಷತೆ ನೈವೇದ್ಯ ಧೂಪ ದೀಪಗಳನ್ನು ತೆಗೆದುಕೊಂಡು ಹೋಗಿ ಎದುರುಗೊಂಡಳು.

೮. ಆಕೆಯು ಆ ಹಸುವನ್ನು ಅವುಗಳಿಂದ ಪೂಜಿಸಿ ಅನೇಕ ಬಾರಿ ನಮ ಸ್ಕರಿಸಿ ಪ್ರದಕ್ಷಿಣೆಯನ್ನು ಮಾಡುತ್ತ ಕೈಮುಗಿದುಕೊಂಡು ಎದುರಿಗೆ ನಿಂತು ಕೊಂಡಳು.

ಸು ಗೃಹೀತ್ವಾ ಚ ತಾಂ ಪೂಜಾಂ ವಿಹಿತಾಂ ಶ್ರದ್ಧಯಾ ತಯಾ ।
ರಾಜ್ಞ್ಯಾ ನಿಶ್ಚಲಮಾಸ್ಥಾಯ ಯಯೌ ತಾಭ್ಯಾಂ ಸಹಾಶ್ರಮಂ ॥ ೯ ॥

ಆರಾಧಯತಿ ತಾಮೇವಂ ದಿಲೀಪೇ ತು ದೃಢವ್ರತೇ ।
ಏಕಾಧಿಕಾ ವ್ಯತೀಯಾಯ ದಿನಾನಾಂ ವೈಶ್ಯ ವಿಂಶತಿಃ ॥ ೧೦ ॥

ಅಥ ಭೂಮಿಪತೇಸ್ತಸ್ಯ ಭಾವಜಿಜ್ಞಾಸಯಾ ತು ಸಾ ।
ವಿವೇಶ ನಿರ್ಭಯಸ್ವಾಸ್ತಾ ಸುಶಷ್ಪಾಂ ಹಿಮವದ್ಗುಹಾಂ ॥ ೧೧ ॥

ಪಶ್ಯತಾ ಹಿಮವತ್ಸಾನುಶೋಭಾಮಥ ಮಹೀಭೃತಾ ।
ಅಲಕ್ಷಿತಾಗಮಸ್ಸಿಂಹೋ ಬಲಾಜ್ಜಗ್ರಾಹ ನಂದಿನೀಂ ॥ ೧೨ ॥

ಸಾ ಚಕ್ರಂದ ಭೃಶಂ ಧೇನುರ್ದುಃಖಿತೇವ ದಯಾಸ್ವನಾ ।
ಚಿತ್ತೇ ಧನುರ್ಭೃತಸ್ತಸ್ಯ ಜನಯಂತೀ ದಯೋದಯಂ ॥ ೧೩ ॥

---

೯. ಆಕೆಯು ಶ್ರದ್ಧೆಯಿಂದ ಮಾಡಿದ ಪೂಜೆಯನ್ನು ಹಸುವು ಅಲ್ಲಾಡದೆ ನಿಂತುಕೊಂಡು ಸ್ವೀಕರಿಸಿ ಅನಂತರ ಆ ದಂಪತಿಗಳೊಡನೆ ಆಶ್ರಮಕ್ಕೆ ಹೋಯಿತು.

೧೦. ದಿಲೀಪನು ಈ ರೀತಿಯಾಗಿ ಒಂದೇ ಮನಸ್ಸಿನಿಂದ ಸೇವಿಸುತ್ತಿರಲು ಇಪ್ಪತ್ತೊಂದು ದಿನಗಳು ಕಳೆದುವು

೧೧. ಅನಂತರ ಆ ರಾಜನ ಮನಸ್ಸನ್ನು ಪರೀಕ್ಷೆ ಮಾಡಬೇಕೆಂಬ ಮನಸ್ಸಿನಿಂದ ಆ ಹಸುವು ಭಯವಿಲ್ಲದೆ ಒಳ್ಳೆಯ ಹುಲ್ಲು ಬೆಳೆದಿರುವ ಹಿಮವತ್ಪರ್ವತದ ಒಂದು ಗುಹೆಯನ್ನು ಹೊಕ್ಕಿತು.

೧೨. ಅಲ್ಲಿ ಹಿಮವತ್ಪರ್ವತದ ತಪ್ಪಲಿನ ಸೌಂದರ್ಯವನ್ನು ನೋಡುತ್ತ ಆ ರಾಜನು ಅನ್ಯಮನಸ್ಕನಾಗಿರಲು ಅವನಿಗೆ ಕಾಣದಂತೆ ಒಂದು ಸಿಂಹವು ಬಂದು ಆ ಹಸುವನ್ನು ಹಿಡಿದುಕೊಂಡಿತು.

೧೩. ಆಗ ಆ ಹಸುವು ದಯೆ ಬರುವಂತೆ ದುಃಖದಿಂದ ಕೂಗಿಕೊಂಡಿತು. ಅದನ್ನು ಕೇಳಿ ಧನುಸ್ಸನ್ನು ಧರಿಸಿರುವ ಅವನ ಮನಸ್ಸಿನಲ್ಲಿಯೂ ದಯೆಯು ಹುಟ್ಟುವಂತೆ ಮಾಡಿತು.

ತದಾಕ್ರಂದಿತಮಾಕರ್ಣ್ಯ ತಸ್ಯಾಸ್ಸ ಜಗತೀಪತಿಃ ।
ಹಿಮವತ್ಪಾನುಸಂಲಗ್ನಾಂ ನಿಜದೃಷ್ಟಿಂ ನ್ಯವರ್ತಯತ್ ॥ ೧೪ ॥

ಉಪರ್ಯುಪರಿ ತಾಂ ಧೇನುಂ ಸ್ರವದಶ್ರುಮುಖೀಂ ನೃಪಃ ।
ತೀಕ್ಷ್ಣದಂಷ್ಟ್ರನಖಂ ಸಿಂಹಂ ದೃಷ್ಟ್ವಾ ಸ ವ್ಯಥಿತೋಽಭವತ್ ॥ ೧೫ ॥

ಗೃಹೀತಾಂ ತೇನ ಸಿಂಹೇನ ತಾಮಾಲಕ್ಷ್ಯ ಧನುರ್ಧರಃ ।
ನಿಷಂಗಾದ್ಬಾಣಮುದ್ಧರ್ತುಂ ಪ್ರಾಹಿಣೋದ್ದಕ್ಷಿಣಂ ಭುಜಂ ॥ ೧೬ ॥

ಬಾಣಮುದ್ಧೃತ್ಯ ತೂಣೀರಾತ್ಸಿಂಹಂ ಹಂತುಂ ಮೃಗಾಧಿಪಂ ।
ಗುಣೇನಾಕರ್ಣಮಾಯೋಜ್ಯ ಚಕರ್ಷ ವಸುಧಾಧಿಪಃ ॥ ೧೭ ॥

ಜಡೀಭೂತಸಮಸ್ತಾಂಗಸ್ತತ್ಸಿಂಹಾಲೋಕನೇನ ಸಃ ।
ನಾಶಕದ್ಬಾಣಮುತ್ಸ್ರಷ್ಟುಂ ರಾಜಾಽಸೀದ್ವಿಸ್ಮಿತಸ್ತತಃ ॥ ೧೮ ॥

---

೧೪. ಆ ರಾಜನು ಆ ಹಸುವಿನ ದುಃಖದ ಕೂಗನ್ನು ಕೇಳಿ ಹಿಮವಂತನ ತಪ್ಪಲನ್ನು ನೋಡುತ್ತಿದ್ದ ಅವನ ಕಣ್ಣನ್ನು ಹಿಂತಿರುಗಿಸಿತು.

೧೫. ಮೇಲು ಮೇಲೆ ಹೆಚ್ಚು ಕಣ್ಣೀರು ಬಿಡುತ್ತಿರುವ ಆ ಹಸುವನ್ನು ನೋಡಿ ಅದರ ಮೇಲೆ ಕೋರೆ ದಾಡೆಗಳಿಂದ ಹಿಡಿದಿರುವ ಸಿಂಹವನ್ನೂ ನೋಡಿ ಅವನು ವ್ಯಥೆಗೊಂಡನು.

೧೬. ಸಿಂಹವು ಹಿಡಿದಿರುವುದನ್ನು ನೋಡಿ ಧನುರ್ಧರನಾದ ಆತನು ಬತ್ತಳಿಕೆಯಿಂದ ಬಾಣವನ್ನು ತೆಗೆಯಲು ಬಲಗೈಯನ್ನು ಆ ಬತ್ತಳಿಕೆಗೆ ಹಾಕಿದನು.

೧೭. ಸಿಂಹವನ್ನು ಕೊಲ್ಲಲು ಆ ರಾಜನು ಬತ್ತಳಿಕೆಯಿಂದ ಬಾಣವನ್ನು ತೆಗೆದು ಅದನ್ನು ಧನುಸ್ಸಿನಲ್ಲಿ ಹೂಡಿ ಕಿವಿಯವರೆಗೂ ಎಳೆದನು.

೧೮. ಹೊಡೆಯಲು ಈತನು ಸಿದ್ಧವಾಗಿರುವುದನ್ನು ಆ ಸಿಂಹವು ನೋಡಲು ಇವನ ಅವಯುವವೆಲ್ಲವೂ ಒಡನೆಯೇ ಮರವಾದಂತೆ ಅಲ್ಲಾಡಲಾರದೆ ಹೋಯಿತು. ಮತ್ತು ಬಾಣವನ್ನು ಬಿಡಲು ಸಾಧ್ಯವಾಗಲೇ ಇಲ್ಲ. ಅದನ್ನು ತಿಳಿದು ರಾಜನು ಆಶ್ಚರ್ಯಗೊಂಡನು.

**ತಾದೃಶಂ ನೃಪಮಾಲಕ್ಷ್ಯ ಜಗಾದ ಸ ಮೃಗಾಧಿಪಃ |**
**ನರವಾಚಾ ಭೃಶಂ ಭೂಯೋ ವಿಸ್ಮಯಂ ಪ್ರಾಪಯನ್ನಿದಂ ॥ ೧೯ ॥**

॥ ಸಿಂಹ ಉವಾಚ ॥

**ದಿಲೀಪಂ ತ್ವಾಮಹಂ ರಾಜನ್ ಜಾನಾಮಿ ರವಿವಂಶಜಂ |**
**ತ್ವಂ ಚ ಜಾನೀಹಿ ಮಾಂ ಶಂಭೋರ್ಗಣಂ ಕುಂಭೋದರಾಭಿದಂ ॥ ೨೦ ॥**

**ದೇವದಾರುರಯಂ ಯಸ್ತೇ ವರ್ತತೇ ದೃಷ್ಟಿಗೋಚರೇ |**
**ಪಾರ್ವತ್ಯಾ ಪುತ್ರವದ್ವೀರ ಪಾಲಿತಃ ಸ್ನಿಗ್ಧಚಿತ್ತಯಾ ॥ ೨೧ ॥**

**ಏಕದಾಮುಷ್ಯ ವನ್ಯೇನ ಗಜೇನಾಕರ್ಷತಾ ಕಟಂ |**
**ಉದಪಾಟಿ ಮಹಾರಾಜ ವಲ್ಕಲಂ ಮೃದುಲಂ ಭೃಶಂ ॥ ೨೨ ॥**

**ಏನಂ ತಾದೃಶಮಾಲಕ್ಷ್ಯ ಮೃಡಾನೀ ಕರುಣಾನ್ವಿತಾ |**
**ಮಾಮತ್ರ ಸ್ಥಾಪಯಾಮಾಸ ಸಿಂಹಂ ಕೃತ್ವಾಸ್ಯ ರಕ್ಷಣೇ ॥ ೨೩ ॥**

---

೧೯. ಆ ರಾಜನು ಆ ರೀತಿಯಾಗಿ ಮರದಂತೆ ಆಗಿರುವುದನ್ನು ನೋಡಿ ಸಿಂಹವು ಮನುಷ್ಯರಂತೆ ಮಾತನಾಡುತ್ತ ಆಶ್ಚರ್ಯಪಡುವಂತೆ ಇಂತೆಂದಿತು.

೨೦. ಸಿಂಹವು ಹೇಳಿತು-ಎಲೈ ರಾಜನೆ! ನೀನು ಸೂರ್ಯವಂಶದಲ್ಲಿ ಹುಟ್ಟಿದ ದಿಲೀಪನೆಂಬದಾಗಿ ನಿನ್ನನ್ನು ನಾನು ಬಲ್ಲೆನು. ಶಂಭುವಿನ ಗಣದಲ್ಲಿ ಸೇರಿದ ಕುಂಭೋದರನೆಂಬದಾಗಿ ನನ್ನನ್ನು ನೀನು ತಿಳಿದುಕೊ.

೨೧. ನಿನ್ನ ಕಣ್ಣೆದುರಿಗೆ ಇರುವ ಈ ದೇವದಾರುವನ್ನು ಪಾರ್ವತಿಯು ಸ್ನೇಹದ ಮನಸ್ಸಿನಿಂದ ಮಗನಂತೆ ಕಾಪಾಡಿದ್ದಾಳೆ.

೨೨. ಒಂದುಸಾರಿ ಒಂದು ಕಾಡಾನೆಯು ಕೆನ್ನೆಯನ್ನು ಈ ಮರದಲ್ಲಿ ತಿಕ್ಕಲು ಇದರ ಮೃದುವಾದ ತೊಗಟೆಯು ಹೊರಕ್ಕೆ ಬಂದು ಬಿಟ್ಟಿತು.

೨೩. ಈ ಮರವು ಹೀಗೆ ತೊಗಟೆಯೆದ್ದುದನ್ನು ನೋಡಿ ಪಾರ್ವತಿಯು ದುಃಖಗೊಂಡವಳಾಗಿ ನನಗೆ ಸಿಂಹದ ವೇಷವನ್ನು ಕೊಟ್ಟು ಇದನ್ನು ಕಾಪಾಡಲು ಇಲ್ಲಿರುವಂತೆ ನಿಯಮಿಸಿದಳು.

ಮಮಾಹ ಚೇತಿ ಸಾ ದೇವೀ ಕುಂಭೋದರ ನಿಶಮ್ಯತಾಂ ।
ಯೋತ್ರ ಜಂತುಸಮಾಗಚ್ಛೇತ್ತಂ ಖಾದೇಸ್ತ್ವಂ ವಸನ್ನಿಹ ॥ ೨೪ ॥

ತತಃ ಪ್ರಭೃತಿ ರಾಜೇಂದ್ರ ತದಾಜ್ಞಾಂ ಪಾಲಯನ್ನಹಂ ।
ಪಾಲಿತಾಂ ತ್ರಿದಶೈಸ್ಸರ್ವೈಃ ಕಂದರೇತ್ರ ವಸಾಮ್ಯಹಂ ॥ ೨೫ ॥

ಜಡೀಭಾವೇ ಸ್ವದೇಹಸ್ಯ ತ್ವಯಾ ಕಾರ್ಯೋ ನ ವಿಸ್ಮಯಃ ।
ಮಹತೀ ಶಾಂಭವೀ ಮಾಯಾ ವರ್ತತೇತ್ರ ಹಿಮಾಚಲೇ ॥ ೨೬ ॥

ಅನ್ಯಸ್ಮಿನ್ನಿವ ಸಿಂಹೇ ತ್ವಂ ಪ್ರಹರ್ತುಂ ನ ಮಯಿ ಕ್ಷಮಃ ।
ಯತೋ ಮತ್ಪೃಷ್ಠಮಾರುಹ್ಯ ವೃಷಮಾರೋಹತಿ ಪ್ರಭುಃ ॥ ೨೭ ॥

ನಿವರ್ತಸ್ವ ನಿಜಂ ದೇಹಂ ರಕ್ಷ ಸರ್ವಾರ್ಥಸಾಧನಂ ।
ದೈವೇನಾಸಾದಿತಾ ವೀರ ಗೌರಿಯಂ ಭಕ್ಷಣಾಯ ಮೇ ॥ ೨೮ ॥

---

೨೪. ಎಲೈ ಕುಂಭೋದರನೇ ! ನಾನು ಹೇಳುವುದನ್ನು ಕೇಳು ಇಲ್ಲಿಗೆ ಬರುವ ಪ್ರಾಣಿಯನ್ನು ನೀನಿಲ್ಲಿದ್ದುಕೊಂಡು ತಿನ್ನು. ಎಂಬುದಾಗಿ ನನಗೆ ಅಪ್ಪಣೆ ಮಾಡಿರುವಳು.

೨೫. ಎಲೈ ದೊರೆಯೆ ! ಅದು ಮೊದಲುಗೊಂಡು ಆಕೆಯ ಅಪ್ಪಣೆಯನ್ನು ಪಾಲಿಸುತ್ತ ದೇವತೆಗಳೆಲ್ಲರಿಂದಲೂ ಎಚ್ಚರಿಕೆಯಿಂದ ನೋಡಲ್ಪಡುತ್ತಿರುವ ಈ ಮರವನ್ನು ರಕ್ಷಿಸುತ್ತ ಈ ಪರ್ವತದ ಗುಹೆಯಲ್ಲಿ ನಾನು ವಾಸಿಸುತ್ತಿದ್ದೇನೆ.

೨೬. ಆದ್ದರಿಂದ ದೇಹವು "ಅಲ್ಲಾಡಲಿಲ್ಲವಲ್ಲ" ಎಂದು ನೀನು ಆಶ್ಚರ್ಯಪಡಬೇಕಾದುದಿಲ್ಲ. ಈ ಹಿಮಾಚಲದಲ್ಲಿ ಶಂಭುವಿನ ಮಾಯೆಯು ಅಪಾರವಾಗಿದೆ

೨೭. ಬೇರೆಯ ಸಿಂಹಗಳನ್ನು ಹೊಡೆಯುವಂತೆ ನೀನು ನನ್ನನ್ನು ಹೊಡೆಯಲಾರೆ. ನಿನಗೆ ಶಕ್ತಿಯೂ ಇಲ್ಲ. ಏಕೆಂದರೆ ಆ ಶಂಭುವು ಎತ್ತರವಾದ ಬಸವನನ್ನು ಹತ್ತಲು ಹೋಗುವಾಗ ನಿಲುಕದುದರಿಂದ ನನ್ನ ಬೆನ್ನಿನ ಮೇಲೆ ಹತ್ತಿ ಕಾಲನ್ನಿಟ್ಟು ಮೆಟ್ಟಲನ್ನಾಗಿ ಮಾಡಿಕೊಂಡು ಅದರ ಮೇಲೆ ಕುಳಿತುಕೊಳ್ಳುವನು.

೨೮. ನೀನು ಹಿಂತಿರುಗಿ ಹೋಗು. ಎಲ್ಲಾ ಸುಖವನ್ನೂ ಅನುಭವಿಸಲು ಕಾರಣವಾದ ಈ ದೇಹವನ್ನು ಕಾಪಾಡಿಕೋ. ಈ ಹಸುವು ದೇವರ ಅನುಗ್ರಹದಿಂದಲೇ ನನ್ನ ತಿಂಡಿಗಾಗಿ ಬಂದಿದೆ.

॥ ದೇವಲ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ವೀರಸಂಬೋಧನಾನ್ವಿತಾಂ ।
ಪ್ರತ್ಯುವಾಚ ದಿಲೀಪಸ್ತಂ ಸ ಜಡೀಭೂತವಿಗ್ರಹಃ ॥ ೨೯ ॥

॥ ರಾಜೋವಾಚ ॥

ಸರ್ಗಸ್ಥಿತಿವಿಸರ್ಗಾಣಾಂ ಕಾರಣಂ ಜಗತಶ್ಶಿವಂ ।
ಅಂಬಿಕಾಂ ಜಗದಂಬಾಂ ಚ ನಮಾಮಿ ಮೃಗರಾಜ ತೌ ॥ ೩೦ ॥

ತ್ವಂ ಚ ತತ್ಸೇವಕತ್ವೇನ ಮಾನ್ಯೋ ಮಮ ಮೃಗಾಧಿಪ ।
ಬ್ರವೀಮಿ ಯದಹಂ ವಾಕ್ಯಂ ಶ್ರುತ್ವಾ ಶಾಧಿ ಕರೋಮಿ ಕಿಂ ॥ ೩೧ ॥

ವಸಿಷ್ಠೋ ಬ್ರಹ್ಮಣಃ ಪುತ್ರೋ ಗುರುರ್ನೋ ವಿದಿತಸ್ತ್ವಪ ।
ತಸ್ಯೇಯಂ ನಂದಿನೀ ನಾಮ ಧೇನುಸ್ಸರ್ವಾರ್ಥಸಾಧಿಕಾ ॥ ೩೨ ॥

---

೨೯. ದೇವಲನು ಹೇಳಿದನು-ವೀರನನ್ನು ವೀರನು ಸಂಬೋಧಿಸುವ ರೀತಿಯಲ್ಲಿ ಮಾತಾಡಿಸಿದುದನ್ನು ದಿಲೀಪನು ಕೇಳಿ ತಾನು ಅಲ್ಲಾಡದಂತೆ ಆದವನಾಗಿದ್ದರೂ ಆ ಸಿಂಹವನ್ನು ಕುರಿತು ಇಂತೆಂದನು.

೩೦. ರಾಜನು ಹೇಳಿದನು-ಪ್ರಪಂಚದ ಉತ್ಪತ್ತಿ ರಕ್ಷಣೆ ನಾಶಗಳಿಗೆ ಕಾರಣನಾದ ಶಿವನನ್ನೂ ಪ್ರಪಂಚಕ್ಕೆ ತಾಯಿಯಾದ ಆ ಅಂಬಿಕೆಯನ್ನೂ ಇಬ್ಬರನ್ನೂ ನಮಸ್ಕರಿಸುತ್ತೇನೆ.

೩೧. ಎಲೈ ಮೃಗಾಧಿಪನೆ ! ನೀನೂ ಕೂಡ ಅವರ ಸೇವಕನಾದುದರಿಂದ ನನಗೆ ಗೌರವಿಸುವುದಕ್ಕೆ ಯೋಗ್ಯನಾದವನು. ನಾನು ಹೇಳುವ ಮಾತನ್ನು ಕೇಳಿ ನಾನು ಏನು ಮಾಡಬೇಕೆಂಬುದನ್ನು ನೀನೇ ಅಪ್ಪಣೆಮಾಡು.

೩೨. ಬ್ರಹ್ಮನ ಮಗನಾದ ವಸಿಷ್ಠಮಹರ್ಷಿಯು ನನಗೆ ಗುರುವೆಂಬುದನ್ನು ನೀನೇ ತಿಳಿದಿದ್ದೀಯೆ ಅವನದು ಈ ನಂದಿನೀ ಧೇನುವು. ಇದು ಕೇಳಿದು ದೆಲ್ಲವನ್ನೂ ಕೊಡುತ್ತದೆ.

ಸಂತಾನೋತ್ಪತ್ತಯೇ ತೇನ ಪತ್ರಾರಾಧಯಿತುಂ ಮಮ ।
ಇಯಮಾರಾಧಿತಾ ಸಮ್ಯಗ್ದಿನಾನಿ ಕತಿಚಿನ್ಮಯಾ ॥ ೩೩ ॥

ಲಘುತರ್ಣಕಮಾತೇಯಂ ಧೃತಾ ತೇ ಗಿರಿಕಂದರೇ ।
ಶಂಭುಭೃತ್ಯಾದ್ಬಲಾತ್ತ್ವತ್ತೋಽಶಕ್ಯಾ ಮೋಚಯಿತುಂ ಮಯಾ ॥ ೩೪ ॥

ಅಹಂ ತಸ್ಯ ಮುನೇರಗ್ರೇ ಗಚ್ಛಾಮ್ಯೇನಾಮೃತೇ ಕಥಂ ।
ಕಾಮಧೇನೋಸ್ತು ದೌಹಿತ್ರೀ ಜಗತ್ಸೇವ್ಯಾ ಯಶಸ್ವಿನೀ ॥ ೩೫ ॥

ಅನಯಾ ಸದೃಶೀ ನಾನ್ಯಾ ಗೌರ್ಯಯಾ ತೋಷಯಾಮಿ ತಂ ।
ತಸ್ಮಾದ್ವಿಮುಚ್ಯ ಗಾಮೇನಾಂ ಮಯಾ ಕುರು ನಿಜಾಶನಂ ॥ ೩೬ ॥

---

೩೩. ಆತನು ನನಗೆ ಸಂತಾನವಾಗಲೆಂದು ಹೇಳಿ ಈ ಹಸುವನ್ನು ಸೇವಿಸುವುದಕ್ಕೆ ನಿಯಮಿಸಿರುವನು. ನಾನೂ ಕೂಡ ಕೆಲವು ದಿನಗಳವರೆಗೆ ಈ ಹಸುವನ್ನು ಚೆನ್ನಾಗಿಯೇ ರಕ್ಷಿಸುತ್ತ ಸೇವಿಸಿದೆನು.

೩೪. ಈ ಹಸುವು ಕರುವನ್ನು ಹಾಕಿ ಸ್ವಲ್ಪ ದಿವಸವೇ ಆಗಿದೆ. ಕರುವು ಇನ್ನೂ ಚಿಕ್ಕದು. ಇಂತಹುದನ್ನು ಈ ಪರ್ವತದ ಗುಹೆಯಲ್ಲಿ ನೀನು ಹಿಡಿದಿದ್ದೀಯೆ. ನೀನು ಶಂಭುವಿನ ಸೇವಕನಾದುದರಿಂದ ಇದನ್ನು ಹಿಡಿಯಲು ಸಾಧ್ಯವಾಯಿತೇ ಹೊರತು ಇಲ್ಲದಿದ್ದರೆ ಆಗುತ್ತಿರಲಿಲ್ಲ. ಆದ್ದರಿಂದಲೇ ಆ ನಿನ್ನ ಕೈಯ್ಯಿಂದ ಬಿಡಿಸಿ ಕೊಳ್ಳಲು ನನಗೂ ಆಗುವುದಿಲ್ಲ.

೩೫. ಈ ಹಸುವು ಕಾಮಧೇನುವಿನ ಮೊಮ್ಮಗಳು. ಜಗತ್ತಿಗೇ ಪೂಜ್ಯಳಾದವಳು. ಯಶೋವಂತಳು. ಈಕೆಯನ್ನು ಬಿಟ್ಟು ಆ ಋಷಿಯ ಬಳಿಗೆ ನಾನು ಹೇಗೆ ಹೋಗಲಿ ?

೩೬. ಇದಕ್ಕೆ ಸಮವಾದ ಹಸುವು ಮತ್ತೊಂದಿಲ್ಲ. ಈ ಹಸುವನ್ನು ಸೇವಿಸುವುದರಿಂದ ಆ ಋಷಿಯನ್ನು ಸಂತೋಷಗೊಳಿಸುತ್ತೇನೆ. ಆದ್ದರಿಂದ ಈ ಹಸುವನ್ನು ಬಿಟ್ಟು ನನ್ನನ್ನು ತಿಂದು ನಿನ್ನ ಹೊಟ್ಟೆಯನ್ನು ತುಂಬಿಸಿಕೋ.

ದದಾಮಿ ದೇಹಮಾತ್ಮೀಯಮಪಕೀರ್ತಿಮಲೀಮಸಂ ।
ಏವಂ ನ ಧರ್ಮಹಾನಿಸ್ಸ್ಯಾದೃಷೇಸ್ತವ ತು ಭೋಜನಂ
ಗವಾರ್ಥೇ ತ್ಯಜತಃ ಪ್ರಾಣಾನ್ ಮಮಾಪಿ ಗತಿರುತ್ತಮಾ　　|| ೩೭ ||

|| ದೇವಲ ಉವಾಚ ||

ಏವಮಾಕರ್ಣ್ಯ ಸಿಂಹೇನ ಕೃತೇ ಮೌನೇ ವಿಶಾಂ ಪತೇ ।
ತದಗ್ರೇಽವಾಙ್ಮುಖೋ ರಾಜಾ ನ್ಯಪತದ್ಧರ್ಮಕೋವಿದಃ　　|| ೩೮ ||

ತಸ್ಯ ಪ್ರತೀಕ್ಷಮಾಣಸ್ಯ ಸಿಂಹಪಾತಂ ಸುದುಸ್ಸಹಂ ।
ಪಪಾತೋಪರಿ ಪುಷ್ಪಾಣಾಂ ವೃಷ್ಟಿರ್ಮುಕ್ತಾ ಸುರೇಶ್ವರೈಃ　　|| ೩೯ ||

ಪುತ್ರೋತ್ತಿಷ್ಠೇತಿ ವಚನಂ ಶ್ರುತ್ವಾ ರಾಜಾ ಸ ಉತ್ಥಿತಃ ।
ಜನನೀಮಿವ ತಾಂ ಧೇನುಂ ದದರ್ಶ ನ ಮೃಗಾಧಿಪಂ ।
ತಂ ವಿಸ್ಮಿತಮುವಾಚೇದಂ ನಂದಿನೀ ನೃಪಸತ್ತಮಂ　　|| ೪೦ ||

---

೩೭. ಅಪಯಶಸ್ಸಿನಿಂದ ತಿರಸ್ಕೃತವಾದ ಈ ನನ್ನ ದೇಹವನ್ನು ನಿನಗೆ ಕೊಡುತ್ತೇನೆ. ಹಾಗೆ ಮಾಡಿದರೆ ನನಗೆ ಧರ್ಮಹಾನಿಯೂ ಆಗುವುದಿಲ್ಲ. ಋಷಿಯ ಹಸುವೂ ನಾಶವಾಗುವುದಿಲ್ಲ. ನಿನಗೂ ಆಹಾರ ಸಿಕ್ಕಿದಂತಾಗುತ್ತದೆ. ಗೋವಿಗೋಸ್ಕರ ಪ್ರಾಣವನ್ನು ಬಿಟ್ಟ ನನಗೂ ಉತ್ತಮಗತಿಯು ಬರುತ್ತದೆ.

೩೮ ದೇವಲನು ಹೇಳಿದನು-ಸಿಂಹವು ಇದನ್ನು ಕೇಳಿ ಸುಮ್ಮನಿರಲು ಮೌನವು ಅರ್ಧಾಂಗೀಕಾರವೆಂದು ತಿಳಿದು ಈ ರಾಜನು ಆ ಸಿಂಹದ ಮುಂದೆ ಕತ್ತನ್ನು ಬಗ್ಗಿಸಿಕೊಂಡು ನಿಂತನು.

೩೯. ಹಾಗೆ ಕತ್ತನ್ನು ಬಗ್ಗಿಸಿಕೊಂಡು ಆ ಸಿಂಹದ ಬಿರುಸಿನಿಂದ ಬೀಳುವಿಕೆಯನ್ನು ನಿರೀಕ್ಷಿಸುತ್ತಿರುವ ಆ ರಾಜನ ತಲೆಯ ಮೇಲೆ ದೇವತೆಗಳು ಹೂಮಳೆಯನ್ನು ಸುರಿಸಿದರು.

೪೦. ಆಗ "ಮಗುವೇ" ಏಳು. ಎಂಬ ಮಾತನ್ನು ರಾಜನು ಕೇಳಿ ಮೇಲಕ್ಕೆ ತಲೆಯೆತ್ತಿದನು ಎದುರುಗಡೆಯಲ್ಲಿ ತಾಯಿಯಂತೆ ನಿಂತಿರುವ ಆ ಹಸುವನ್ನು ಕಂಡನೇ ಹೊರತು ಆ ಸಿಂಹವನ್ನು ಕಾಣಲಿಲ್ಲ. ಆಗ ಆ ರಾಜನಿಗೆ ಆಶ್ಚರ್ಯವಾಗಲು ಅವನನ್ನು ಕುರಿತು ನಂದಿನಿಯು ಇಂತೆಂದಿತು.

|| ನಂದಿನ್ಯುವಾಚ ||

ಮಾಯಯಾ ಸಿಂಹರೂಪಿಣ್ಯಾ ತ್ವಂ ಮಯಾಸಿ ಪರೀಕ್ಷಿತಃ ।
ಮುನಿಪ್ರಭಾವಾನ್ಮಾಂ ರಾಜನ್ ಗೃಹೀತುಂ ನ ಕ್ಷಮೋಂತಕಃ || ೪೧ ||

ಮನಸಾಪಿ ಕುತೋಽನ್ಯೇಷಾಂ ಮದ್ಗ್ರಹೇ ಶಕ್ತಿರಂಗಿನಾಂ ।
ಸ್ವಶರೀರಸ್ಯ ದಾನೇನ ಮಾಂ ಚ ರಕ್ಷಿತುಮುದ್ಯತಃ ॥
ಅತಸ್ತೇಽಹಂ ಪ್ರಸನ್ನಾಸ್ಮಿ ವೃಣೀಷ್ವ ವರಮೀಪ್ಸಿತಂ || ೪೨ ||

|| ರಾಜೋವಾಚ ||

ನ ಗುಪ್ತಂ ದೇಹಿನಾಮನ್ತರ್ವರ್ತಿ ವೃತ್ತಂ ಭವಾದೃಶಾಂ ।
ಅತೋ ಜನನಿ ಜಾನಾಸಿ ವಾಂಛಿತಂ ಮಮ ದೇಹಿ ತತ್ || ೪೩ ||

ಮಗಧೇಶಸುತಾಯಾಂ ಮೇ ವಂಶಕರ್ತಾರಮಾತ್ಮಜಂ ।
ಪ್ರಯಚ್ಛ ಕಿಂಚಿತ್ಸ್ವಸ್ಥಾನಾಂ ನಾಸಾಧ್ಯಂ ಹಿ ಭವಾದೃಶಾಂ || ೪೪ ||

---

೪೧. ನಂದಿನಿಯು ಹೇಳಿತು-ಮಾಯೆಯಿಂದ ಸಿಂಹದ ರೂಪವನ್ನು ಮಾಡಿಕೊಂಡು ನಿನ್ನನ್ನು ಪರೀಕ್ಷಿಸಿದೆನು. ಅಷ್ಟೆ. ಆ ವಸಿಷ್ಠ ಋಷಿಯ ಪ್ರಭಾವದಿಂದ ನನ್ನನ್ನು ಯಮನೂ ಕೂಡ ಹಿಡಿಯಲಾರನು.

೪೨. ನನ್ನನ್ನು ಹಿಡಿಯಲು ಮಿಕ್ಕಪ್ರಾಣಿಗಳು ಮನಸ್ಸಿನಿಂದಲೂ ಶಕ್ತವಾಗಲಾರವು. ನೀನಾದರೋ ನಿನ್ನ ಶರೀರವನ್ನೇ ಕೊಟ್ಟು ನನ್ನನ್ನು ಕಾಪಾಡಲು ಪ್ರಯತ್ನಪಟ್ಟೆ. ಆದ್ದರಿಂದ ನಿನಗೆ ನಾನು ಪ್ರಸನ್ನಳಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳಿಕೋ.

೪೩. ರಾಜನು ಹೇಳಿದನು–ಅಮ್ಮಾ! ನಿನ್ನಂತಹವರಿಗೆ ಪ್ರಾಣಿಗಳ ಮನಸ್ಸಿನಲ್ಲಿರುವುದು ತಿಳಿಯದಿರುವುದಿಲ್ಲ. ಆದ್ದರಿಂದ ನನ್ನ ಮನಸ್ಸಿನಲ್ಲಿವುದನ್ನು ನೀನೇ ಬಲ್ಲೆ. ಅದನ್ನು ನನಗೆ ಕೊಡು.

೪೪. ಮಗಧದೇಶದ ರಾಜನ ಮಗಳಾದ ಈ ನನ್ನ ಹೆಂಡತಿಯಲ್ಲಿ ವಂಶವನ್ನುದ್ಧರಿಸುವ ಮಗನನ್ನು ಕೊಡು. ಸಿದ್ಧಿಯೆಲ್ಲವೂ ಸ್ವಾಧೀನವಾಗಿರುವ ನಿನ್ನಂತಹವರಿಗೆ ಅಸಾಧ್ಯವಾದುದೇ ಇಲ್ಲ.

॥ ದೇವಲ ಉವಾಚ ॥

ಇತ್ಯುಕ್ತ್ವಾಂಜಲಿಮಾಧಾಯ ತತ್ಪುರಃ ಸ್ಥಿತವಾನ್ ನೃಪಃ ।
ತೂಷ್ಣೀಂ ತದುತ್ತರಾಪೇಕ್ಷೀ ತತ್ಪುರಾಬದ್ಧಲೋಚನಃ ॥ ೪೫ ॥

ನಿಶಮ್ಯೇತಿ ವಚಸ್ತಸ್ಯ ಭೂಪತೇರಿದಮಬ್ರವೀತ್ ।
ನಂದಿನೀ ಪಿತೃದೇವರ್ಷಿನರಭೂತಾರ್ಥಸಾಧಿಕಾ ॥ ೪೬ ॥

॥ ನಂದಿನ್ಯುವಾಚ ॥

ಪುತ್ರ ಪತ್ರಪುಟೇ ದುಗ್ಧ್ವಾ ಪಯೋ ಮಮ ಪಿಬೇಪ್ಸಿತಂ ।
ಆಶ್ರಮೇ ಗುರುಣಾಜ್ಞಪ್ತಃ ಪುನಃ ಪಾಸ್ಯಸಿ ಶೇಷಿತಂ ॥
ಭವಿತಾ ವಂಶಕರ್ತಾ ತೇ ಸುತಃ ಶಸ್ತ್ರಾಸ್ತ್ರತತ್ವವಿತ್ ॥ ೪೭ ॥

॥ ದೇವಲ ಉವಾಚ ॥

ಇತ್ಯುಕ್ತಸ್ಸೌರಭೇಯೀಂ ತಾಮುವಾಚ ವಿನಯೇನ ಸಃ ॥ ೪೮ ॥

---

೪೫. ದೇವಲನು ಹೇಳಿದನು-ಹೀಗೆಂದು ಹೇಳುತ್ತ ರಾಜನು ಆ ನಂದಿನಿಯ ಎದುರಿಗೆ ಅದರ ಪಾದಗಳಲ್ಲಿ ಕಣ್ಣಿಟ್ಟವನಾಗಿ ಸುಮ್ಮನೆ ಅದರ ಉತ್ತರವನ್ನು ನಿರೀಕ್ಷಿಸುತ್ತ ನಿಂತುಕೊಂಡನು.

೪೬. ಆ ರಾಜನು ಹೇಳಿದ ಈ ಮಾತನ್ನು ಕೇಳಿ ಪಿತೃಗಳು ದೇವತೆಗಳು ಮನುಷ್ಯರು ಇವರಿಗೆ ಬೇಕಾದುದನ್ನು ಕೊಡುವ ಆ ನಂದಿನಿಯು ಅವನನ್ನು ಕುರಿತು ಇಂತೆಂದಿತು.

೪೭. ನಂದಿನಿಯು ಹೇಳಿತು-ಎಲೈ ಮಗನೆ! ನನ್ನ ಹಾಲನ್ನು ಒಂದು ದೊನ್ನೆಯಲ್ಲಿ ಕರೆದು ಈಗ ಕುಡಿ. ಆಶ್ರಮಕ್ಕೆ ಹೋದಮೇಲೆ ಗುರುವಿನ ಅಪ್ಪಣೆಯನ್ನು ಹೊಂದಿ ನಿನಗೆ ಬೇಕಾದಷ್ಟನ್ನು ಕುಡಿಯುತ್ತೀಯಂತೆ. ಹಾಗೆ ಮಾಡಿದರೆ ಶಸ್ತ್ರ ಅಸ್ತ್ರಗಳಲ್ಲಿ ಪಂಡಿತನಾದ ಮಗನು ನಿನಗೆ ಹುಟ್ಟಿ ವಂಶವನ್ನು ವೃದ್ಧಿಪಡಿಸುವನು.

೪೮. ದೇವಲನು ಹೇಳಿದನು-ಹಸುವು ಹೀಗೆಂದು ಹೇಳುತ್ತಲೂ ಆ ಹಸುವನ್ನು ಕುರಿತು ರಾಜನು ವಿನಯದಿಂದ ಇಂತೆಂದು ಹೇಳಿದನು.

|| ರಾಜೋವಾಚ ||

ಮಾತಸ್ತ್ವನ್ವೈವ ಪಾಸ್ಯಾಮಿ ಶೇಷಂ ಸರ್ವಕ್ರಿಯಾವಿಧೇಃ ।
ತೃಪ್ತೋಽಹಂ ಮಾತರಾಸಾದ್ಯ ಮಿಷ್ಟಂ ತೇ ವಚನಾಮೃತಂ || ೪೯ ||

ನಾನ್ಯದಿಚ್ಛಾಮಿ ಸಾರಂಗಃ ಕಾದಂಬಿನ್ಯಾ ಯಥಾ ಜಲಂ ।
ತವ ಶುಶ್ರೂಷಣಾನ್ಮಾತರಭವಂ ಸಕಲೋದ್ಭವಃ || ೫೦ ||

ಸಮಸ್ತಜನಪೂಜ್ಯಾಯಾ ವಿದ್ಯಾಯಾ ಇವ ಮೂಢಧೀಃ ।
ತವ ಮಾತಾಮಹೀದತ್ತಃ ಶಾಪೋಽಪ್ಯಾಸೀ ದ್ವರೋ ಮಮ || ೫೧ ||

ತನ್ಮೃತೇ ಪುತ್ರಲಾಭೋ ಮೇ ಕುತಸ್ತವ ಚ ದರ್ಶನಂ ।
ಪರಾಯ್ವೈವ ತಥಾಪ್ಯಂಬ ಸಮಾರಾಧ್ಯಾ ಭವಾದೃಶಃ ॥
ನ ಹಿ ಕಶ್ಚಿ ದ್ವಿಷಾಕಾಂಕ್ಷೀ ಮಹಾದೇವಾತ್ತ್ರಿವರ್ಗದಾತ್ || ೫೨ ||

---

೪೯. ರಾಜನು ಹೇಳಿದನು–ಅಮ್ಮಾ! ನಿನ್ನ ಹಾಲನ್ನು ಹೋಮ ಅತಿಥಿಗಳು ಎಲ್ಲವುಗಳಿಗೂ ಕೊಟ್ಟು ಅನಂತರ ಉಳಿದುದನ್ನು ಕುಡಿಯುತ್ತೇನೆ. ಈಗ ನಿನ್ನ ರುಚಿಯಾದ ಮಾತನ್ನು ಹೊಂದಿಯೇ ನನಗೆ ತೃಪ್ತಿಯಾಯಿತು.

೫೦. ಚಾತಕ ಪಕ್ಷಿಯು ಮೇಘದಿಂದ ನೀರನ್ನು ಹೊಂದಿ ತೃಪ್ತಿಪಡುವಂತೆ ನಾನು ತೃಪ್ತಿಪಟ್ಟಿದ್ದೇನೆ. ನನಗೆ ಮತ್ತೊಂದೂ ಬೇಕಿಲ್ಲ. ನಿನ್ನ ಸೇವೆಯಿಂದಲೇ ಎಲ್ಲವನ್ನೂ ಹೊಂದಿದವನಾದೆನು.

೫೧. ಎಲ್ಲಾ ಜನಗಳಿಂದ ಗೌರವವನ್ನು ಕೊಡಿಸುವ ವಿದ್ಯೆಯಿಂದ ದಡ್ಡನು ಗೌರವವನ್ನು ಹೊಂದುವಂತೆ ನಿನ್ನ ತಾಯಿಯ ತಾಯಿಯಾದ ಕಾಮಧೇನುವು ಕೊಟ್ಟ ಶಾಪವೂ ಕೂಡ ನನಗೆ ವರವೇ ಆಗಿ ಪರಿಣಮಿಸಿತು

೫೨. ಆ ಶಾಪವಿಲ್ಲದಿದ್ದರೆ ನನಗೆ ಮಕ್ಕಳಿಲ್ಲಿಂದ ಬಂದೀತು? ನಿನ್ನ ದರ್ಶನವೂ ಕೂಡ ಹೇಗಾಗುತ್ತಿದ್ದಿತು? ನಿನ್ನ ಸೇವೆಯು ಶಾಪವಿಮೋಚನೆ ಮಾಡುವುದಿರಲಿ! ವರವನ್ನು ಹೊಂದುವುದಕ್ಕೆ ಸಿಕ್ಕಿತು. ಧರ್ಮ ಅರ್ಥ ಕಾಮಗಳನ್ನು ಯಥೇಚ್ಛವಾಗಿ ನೀಡುವ ಮಹಾದೇವನ ದೆಸೆಯಿಂದ ಒಳ್ಳೆಯದನ್ನು ಕೇಳುತ್ತಾರೆಯೇ ಹೊರತು ವಿಷವನ್ನು ಯಾವನೂ ಕೇಳುವುದಿಲ್ಲ.

॥ ದೇವಲ ಉವಾಚ ॥

ಶ್ರುತ್ವೇತಿ ತದ್ವಚಸ್ತಾ ಗೌಃ ಪ್ರಸನ್ನಾ ಸಾಧು ಸಾಧ್ವಿತಿ |
ಅಭಾಷ್ಯ ಹಿ ಮಹಾದರ್ಪಾ ಯಯೌ ತೇನ ಸಹಾಶ್ರಮಂ ॥ ೫೩ ॥

ಪೂರ್ವೇದ್ಯುರಿವ ತತ್ರಾಪಿ ಪೂಜಿತಾ ರಾಜಭಾರ್ಯಯಾ |
ಪ್ರಸನ್ನಾ ಸಾ ಬಭೌ ಧೇನುಃ ಕಾರ್ಯಸಿದ್ಧಿರಿವಾಂಗಭಾಕ್ ॥ ೫೪ ॥

ಮುಖಂ ಪ್ರಸನ್ನಮಾಲಕ್ಷ್ಯ ಮೃಗಾಕ್ಷೀ ಸಾ ಕ್ಷಿತೀಶತುಃ |
ಅಜ್ಞಾಸೀಜ್ಜನಿತಂ ಕಾರ್ಯಂ ಸಿದ್ಧೋ ಯತ್ನೋ ಯತಃ ಕೃತೇ ॥ ೫೫ ॥

ಅಥ ತೌ ದಂಪತೀ ಧೇನ್ವಾ ವಿಧಿವದ್ವಿಹಿತಾರ್ಚಯಾ |
ತಯಾ ಸಹ ಗುರೋರಗ್ರೇ ಕೃತಕೃತ್ಯಸ್ಯ ಜಗ್ಮತುಃ ॥ ೫೬ ॥

ನಿರೀಕ್ಷ್ಯ ತೌ ಮುನಿವರಃ ಪ್ರಸನ್ನಮುಖಪಂಕಜೌ |
ಅತೀಂದ್ರಿಯಜ್ಞಾನನಿಧಿಃ ಪ್ರೋವಾಚೇದಂ ಪ್ರಹರ್ಷಯನ್ ॥ ೫೭ ॥

---

೫೩. ದೇವಲನು ಹೇಳಿದನು-ಅವನ ಆ ಮಾತನ್ನು ಕೇಳಿ ನಂದಿನಿಯು ಸಂತೋಷಗೊಂಡು ಸಾಧು ಸಾಧು ಎಂದು ಎಂದಿತು. ಮತ್ತು ಹೀಗೆ ಹೇಳಿ ಬಹುವಾದ ದರ್ಪವುಳ್ಳ ಆ ಹಸುವು ಅವನೊಡನೆ ಆಶ್ರಮಕ್ಕೆ ಹೊರಟು ಬಂದಿತು.

೫೪. ಆ ಆಶ್ರಮದಲ್ಲಿ ಹಿಂದಿನ ದಿನದಂತೆಯೇ ರಾಜನ ಹೆಂಡತಿಯು ಹಸುವನ್ನು ಪೂಜಿಸಲು ಪ್ರಸನ್ನವಾದ ಆ ಹಸುವು ಶರೀರವನ್ನು ಹೊಂದಿ ಪ್ರತ್ಯಕ್ಷವಾದ ಕಾರ್ಯಸಿದ್ಧಿಯಂತೆ ಪ್ರಕಾಶಿಸಿತು.

೫೫, ಆಗ ಆ ರಾಣಿಯು ರಾಜನ ಮುಖವನ್ನು ನೋಡಿ ಅವನು ಸಂತೋಷದಿಂದ ಇರಲು ಅದರಿಂದ ಕಾರ್ಯಸಿದ್ಧಿಯಾಗಿದೆಯೆಂದು ಊಹಿಸಿ ತಿಳಿದುಕೊಂಡಳು. ಮತ್ತು ತಾವು ಯಾತಕ್ಕೋಸ್ಕರ ಪ್ರಯತ್ನಿಸುತ್ತೇವೆಯೋ ಅದು ಸಿದ್ಧಿಸಿತೆಂದುಕೊಂಡಳು.

೫೬. ಅನಂತರ ಆ ದಂಪತಿಗಳು ಕ್ರಮವಾಗಿ ಆ ಹಸುವಿಗೆ ಪೂಜೆಮಾಡಿ ಆ ಹಸುವನ್ನು ಕರೆದುಕೊಂಡು ಹೋಗಿ ಸರ್ವಕಾಮಗಳನ್ನೂ ಹೊಂದಿರುವ ಗುರುವಿನ ಬಳಿಯಲ್ಲಿ ನಿಂತುಕೊಂಡರು

೫೭. ಸಂತೋಷಗೊಂಡಿರುವ ಮುಖವುಳ್ಳ ಆ ದಂಪತಿಗಳನ್ನು ನೋಡಿ ಪರೋಕ್ಷಜ್ಞಾನವುಳ್ಳ ಆ ವಸಿಷ್ಠನು ಅವರನ್ನು ಸಂತೋಷಪಡಿಸುತ್ತ ಇಂತೆಂದನು.

॥ ವಸಿಷ್ಠ ಉವಾಚ ॥

ರಾಜನ್ ಜಾನಾಮಿ ಗೌರೇಷಾ ಪ್ರಸನ್ನಾ ವಾಮಭೂತ್ಕಿಲ ।
ಅಪೂರ್ವಾ ಯುವಯೋರದ್ಯ ಮುಖಕಾನ್ತಿರ್ಹಿ ಲಕ್ಷ್ಯತೇ ॥ ೫೮ ॥

ಸುರಭಿಃ ಸುರಶಾಖೀ ಚ ವಿಶ್ರುತೌ ಕಾಮಪೂರಣೌ ।
ತದಪತ್ಯಂ ಸಮಾರಾಧ್ಯ ಸಿದ್ಧಾರ್ಥಃ ಸ್ಯಾತ್ಕಿಮದ್ಭುತಂ ॥ ೫೯ ॥

ಯಾ ದದಾತಿ ನಿಖಿಲಂ ಮನೋರಥಂ ಕೀರ್ತಿತೇಯಮನಘಾಪಿ ದೂರತಃ ।
ಶ್ರದ್ಧಯಾ ನಿಕಟ ಏವ ಸೇವಿತಾ ಕಿಂ ಪುನಃ ಸುರತರಂಗಿಣೀ ಚ ಸಾ ॥೬೦॥

ಜ್ಞಾನತೋ ವಿದಿತಮದ್ಭುತಂ ಮಯಾ
ತ್ವತ್ಕೃತಂ ಯದನಯಾ ಪರೀಕ್ಷಣಂ ।
ಭೂಪತೇ ತ್ವಮಪಿ ಧರ್ಮಮಾತ್ಮನಃ
ರಕ್ಷಸಿ ಸ್ಮ ಚ ಯಥಾ ತಥಾ ಚ ತತ್ ॥ ೬೧ ॥

---

೫೮. ವಸಿಷ್ಠನು ಹೇಳಿದನು–ಎಲೈ ರಾಜನೆ! ನಿಮ್ಮಗಳಿಗೆ ಹಸುವು ಪ್ರಸನ್ನವಾಗಿರುವುದಾಗಿ ನನಗೆ ತೋರುತ್ತದೆ. ಈದಿನ ನಿಮ್ಮಗಳ ಮುಖಕಾನ್ತಿಯು ಅಪೂರ್ವವಾಗಿದೆಯಲ್ಲ!

೫೯. ಕಾಮಧೇನು ಕಲ್ಪವೃಕ್ಷಗಳು ಇಷ್ಟಾರ್ಥವನ್ನು ಕೊಡುವುದರಲ್ಲಿ ಪ್ರಸಿದ್ಧವಾಗಿವೆ. ಅವುಗಳ ಮಕ್ಕಳನ್ನು ಸೇವಿಸಿದರೆ ಇಷ್ಟಾರ್ಥವು ನೇರವೇರುವುದರಲ್ಲಿ ಆಶ್ಚರ್ಯವೇನಿದೆ!

೬೦. ದೂರದಲ್ಲಿಯೇ ಸ್ಮರಿಸಿದರೂ ಉತ್ತಮಗತಿಯನ್ನೂ ಮತ್ತು ಸಕಲಇಷ್ಟಾರ್ಥವನ್ನೂ ಕೊಡುವ ಗಂಗಾನದಿಯನ್ನು ಹತ್ತಿರದಲ್ಲಿಯೇ ಹೋಗಿ ಶ್ರದ್ಧೆಯಿಂದ ಸೇವಿಸಿದರೆ ಬೇಕಾದುದನ್ನು ಕೊಡುತ್ತದೆ. ಎಂಬುದರಲ್ಲಿ ಸಂದೇಹವೇನಿದೆ ?

೬೧. ಎಲೈ ದೊರೆಯೆ! ಈ ಹಸುವು ನಿನ್ನನ್ನು ಪರೀಕ್ಷೆಮಾಡಿದ ರೀತಿಯನ್ನು ನಾನು ಜ್ಞಾನದೃಷ್ಟಿಯಿಂದಲೇ ತಿಳಿದುಕೊಂಡೆನು. ನೀನೂ ಕೂಡ ನಿನ್ನ ಧರ್ಮವನ್ನು ಕಾಪಾಡಿಕೊಂಡಿದ್ದೀಯೆ! ಎರಡೂ ಸರಿಯಾಗಿದೆ.

ತ್ವಯ್ಯಸೌ ಮಮ ಮನೋನುಕೂಲತಾ
ಭಾವಮಾತ್ಮನಿ ವಿಬುಧ್ಯತೇ ತಥಾ ।
ತುಷ್ಯತಿ ಸ್ಮ ಕಮಲಾ ಯಥಾ ಹರೇಃ
ಪಾರ್ವತೀವ ಗಿರಿಶಸ್ಯ ಸಜ್ಜನೇ		॥ ೬೨ ॥

ರಾತ್ರಿರತ್ರ ಸಹ ಭಾರ್ಯಯಾನಯಾ
ಧೇನುಪೂಜನಪರೇಣ ನೀಯತಾಂ ।
ಭೂಪ ಭವ್ಯ ಭವತಾ ಗಮಿಷ್ಯತೇ
ಶ್ವಃಸಮಾಪ್ತವಿಧಿನಾ ನಿಜಾಪುರೀ		॥ ೬೩ ॥

॥ ದೇವಲ ಉವಾಚ ॥

ವೈಶ್ಯೈವಂ ಧೇನುಮಾರಾಧ್ಯ ಸಭಾರ್ಯಃ ಪ್ರಾಪ್ತವಾಂಛಿತಃ ।
ಪ್ರಾತರ್ಯುಕ್ತರಥಃ ಪ್ರಾಪ್ಯ ಗುರೋರಾಜ್ಞಾಮಗಾದ್ಗೃಹಂ		॥ ೬೪ ॥

---

೬೨. ನೀನು ನನ್ನಲ್ಲಿ ಯಾವ ರೀತಿಯಲ್ಲಿ ನಡೆದುಕೊಳ್ಳುತ್ತೀಯೋ ಅದರಂತೆ ತನ್ನಲ್ಲಿಯೂ ನಡೆದುಕೊಂಡಿರುವನೆಂದು ಈ ಹಸುವು ತಿಳಿದುಕೊಳ್ಳುತ್ತದೆ. ಸಜ್ಜನರಲ್ಲಿ ಹರಿಯೂ ಶಿವನೂ ಹೇಗೆ ನಡೆದುಕೊಳ್ಳುತ್ತಾರೆಯೋ ಹಾಗೆ ಲಕ್ಷ್ಮಿಯೂ ಪಾರ್ವತಿಯೂ ನಡೆದುಕೊಳ್ಳುತ್ತಾರಲ್ಲವೆ !

೬೩. ನೀನೂ ನಿನ್ನ ಹೆಂಡತಿಯೂ ಈದಿನ ರಾತ್ರಿಯೂ ಹಸುವನ್ನು ಸೇವಿಸುತ್ತ ಕಳೆಯಿರಿ. ಎಲೈ ದೊರೆಯೆ ! ನಾಳೆಯ ದಿನ ವ್ರತಸಮಾಪ್ತಿಯನ್ನು ಮಾಡಿಕೊಂಡು ನಿನ್ನ ಊರಿಗೆ ಹೋಗುತ್ತೀಯಂತೆ

೬೪. ದೇವಲನು ಹೇಳಿದನು_ಎಲೈ ವೈಶ್ಯನೆ ! ಹೀಗೆ ದಿಲೀಪನು ಹಸುವನ್ನು ಸೇವಿಸಿ ಇಷ್ಟಾರ್ಥವನ್ನು ಹೊಂದಿ ಬೆಳಗ್ಗೆ ಎದ್ದು ಗುರುವಿನ ಅಪ್ಪಣೆಯನ್ನು ಹೊಂದಿ ರಥದಲ್ಲಿ ಕುಳಿತುಕೊಂಡು ತನ್ನ ರಾಜಧಾನಿಗೆ ಹೋದನು

ಕತಿಚಿದ್ವಾಸರೈಸ್ತಸ್ಯ ದಿಲೀಪಸ್ಯಾಭವದ್ರಘುಃ ।
ಯಸ್ಯ ನಾಮ್ನಾ ರವೇರ್ವಂಶಃ ಪೃಥಿವ್ಯಾಂ ವಿಶ್ರುತೋಽಭವತ್ ॥ ೬೫ ॥

ಯಃ ಪಠಿಷ್ಯತಿ ಭೂಪಸ್ಯ ದಿಲೀಪಸ್ಯ ಕಥಾಮಿಮಾಂ ।
ಧನಂ ಧಾನ್ಯಂ ಸುತಂ ವೈಶ್ಯ ಲಪ್ಸ್ಯತೇ ಸ ಪುಮಾನಿಹ ॥ ೬೬ ॥

ಶರಭ ವರಸುತಾಪ್ತಯೇ ಸ್ವಬುದ್ಧ್ಯಾ
ಸಮುಮನಯಾ ಪರಿತೋಷಯಾಶು ಗೌರೀಂ ।
ತ್ವಮಪಿ ಕುಲಧುರಂ ಗುಣಾನ್ವಿತಂ ಸಾ
ಸುತಮನಘಂ ಖಲು ದಾಸ್ಯತೇ ಚ ತುಭ್ಯಂ ॥ ೬೭ ॥

---

೬೫. ಕೆಲವು ದಿನಗಳಮೇಲೆ ಆ ದಿಲೀಪನ ಹೆಂಡತಿಯು ಗರ್ಭಿಣಿಯಾಗಿ ಹೆತ್ತಳು. ದಿಲೀಪನು ಆ ಮಗುವಿಗೆ ರಘುವೆಂದು ಹೆಸರಿಟ್ಟನು ಅವನ ಹೆಸರಿನಿಂದಲೇ ಸೂರ್ಯವಂಶವು ರಘುವಂಶವೆಂಬುದಾಗಿ ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಿತು.

೬೬. ಎಲೈ ವೈಶ್ಯನೇ! ಈ ರಾಜನಾದ ದಿಲೀಪನ ಚರಿತ್ರೆಯನ್ನು ಯಾವನು ಓದುತ್ತಾನೆಯೋ ಅವನಿಗೆ ಧನ ಧಾನ್ಯ ಮಕ್ಕಳು ಎಲ್ಲವೂ ಸಮೃದ್ಧಿಯಾಗಿ ಉಂಟಾಗುತ್ತವೆ.

೬೭. ಎಲೈ ಶರಭನೆ! ನೀನು ಮಕ್ಕಳನ್ನು ಹೊಂದಬೇಕಾದರೆ ನಿನ್ನ ಹೆಂಡತಿಯೊಡನೆ ಆ ಗೌರಿಯನ್ನು ಸೇವಿಸಿ ತೃಪ್ತಿಪಡಿಸು. ಹಾಗೆ ಸೇವಿಸಿದರೆ ಆ ಗೌರಿಯು ಕುಲವನ್ನು ಬೆಳೆಸುವ ಗುಣಿಯಾದ ಉತ್ತಮೋತ್ತಮನಾದ ಮಗನನ್ನು ನಿನಗೆ ಕೊಡುತ್ತಾಳೆ.

॥ ಶಿವಶರ್ಮೋವಾಚ ॥

ಮುನಿರಿತಿ ಚರಿತಂ ದಿಲೀಪರಾಜ್ಞೋ
ಲಲಿತತರಂ ಶರಭಾಯ ಪುಣ್ಯಮುಕ್ತ್ವಾ ।
ಅಭಿಮತಗತಿಮಾತ್ಮನಃ ಪ್ರಪೇದೇ
ವಿಧಿಮುಪದಿಶ್ಯ ಚ ಪೂಜನೇಂಬಿಕಾಯಾಃ ॥ ೬೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ರಘೂತ್ಪತ್ತಿ ವರ್ಣನಂ ನಾಮ ನವನವತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೬೮. ಶಿವಶರ್ಮನು ಹೇಳಿದನು–ಆ ಋಷಿಯು ದಿಲೀಪನ ಚರಿತ್ರೆಯನ್ನು ಶರಭನಿಗೆ ಚೆನ್ನಾಗಿ ಹೇಳಿ ಗೌರಿಯನ್ನು ಪೂಜಿಸುವುದರಲ್ಲಿಯೂ ನಿಯಮವನ್ನು ಉಪದೇಶಿಸಿ ಅನಂತರ ತನಗೆ ಇಷ್ಟಬಂದಕಡೆಗೆ ಹೊರಟುಹೋದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದಿಯ ಮಹಿಮೆಯಲ್ಲಿ ರಘೂತ್ಪತ್ತಿ ವರ್ಣನ ಎಂಬ ನೂರ ತೊಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಿಶತತಮೋಽಧ್ಯಾಯಃ ॥



॥ ಶಿವಶರ್ಮೋವಾಚ ॥

ವಿಷ್ಣುಶರ್ಮಂಸ್ತತೋ ವೈಶ್ಯಃ ಶರಭಸ್ಸಹ ಭಾರ್ಯಯಾ ।
ನೀತ್ವಾ ಪೂಜೋಪಕರಣಂ ಯಯೌ ಶ್ರೀಚಂಡಿಕಾಲಯಂ ॥ ೧ ॥

ತತ್ರ ತೌ ವಿಧಿವತ್ಸ್ನಾತ್ವಾ ಸುಮನೋಧೂಪದೀಪಕೈಃ ।
ಆನರ್ಚತುರ್ಭಕ್ತಿಯುಕ್ತೌ ಚಂಡಿಕಾಂ ಪುತ್ರಕಾಮ್ಯಯಾ ॥ ೨ ॥

ಶ್ರದ್ಧಯಾ ಪೂಜಿತಾ ತಾಭ್ಯಾಂ ದಿನೈಸ್ಸಪ್ತಭಿರಂಬಿಕಾ ।
ಉವಾಚ ವಾಚಾ ಪ್ರತ್ಯಕ್ಷಂ ಭೂತ್ವಾ ವಿಶದಮಾನಸಾ ॥ ೩ ॥

---

## ಇನ್ನೂರನೆಯ ಅಧ್ಯಾಯವು



೧. ಶಿವಶರ್ಮನು ಹೇಳಿದನು-ಎಲೈ ವಿಷ್ಣುಶರ್ಮನೆ! ಅನಂತರ ಆ ವೈಶ್ಯನು ಹೆಂಡತಿಯೊಡನೆ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಚಂಡಿಕೆಯ ದೇವಾಲಯಕ್ಕೆ ಹೋದನು.

೨. ಅಲ್ಲಿ ಅವರು ಕ್ರಮವಾಗಿ ಸ್ನಾನಮಾಡಿ ಭಕ್ತಿಯಿಂದ ಹೂವು ಧೂಪ ದೀಪಗಳಿಂದ ಮಕ್ಕಳನ್ನು ಹೊಂದಲು ಆ ಚಂದಿಕೆಯನ್ನು ಪೂಜಿಸಿದರು.

೩. ಶ್ರದ್ಧೆಯಿಂದ ಏಳುದಿನಗಳವರೆಗೂ ಆ ಅಂಬಿಕೆಯರನ್ನು ದಂಪತಿಗಳು ಪೂಜಿಸಲು ಆಕೆಯು ಪ್ರಸನ್ನಳಾಗಿ ಒಳ್ಳೆಯ ಮನಸ್ಸಿನಿಂದ ಇಂತೆಂದಳು.

॥ ಪಾರ್ವತ್ಯುವಾಚ ॥

ಭೋ ಭೋ ವೈಶ್ಯ ಪ್ರಸನ್ನಾಸ್ಮಿ ಭಕ್ತ್ಯಾ ಸುದೃಢಯಾ ತವ ।
ದದಾಮಿ ಪುತ್ರಂ ತೇ ಸಾಧೋ ಯದರ್ಥಂ ಯತ್ನವಾನಸಿ ॥ ೪ ॥

ಗಚ್ಛ ತ್ವಂ ಮಾ ವಿಲಂಬಸ್ವ ವನಮೈಂದ್ರಂ ಚ ಖಾಂಡವಂ ।
ತತ್ರ ತೀರ್ಥಂ ಮಹಾಪುಣ್ಯಮಿಂದ್ರಪ್ರಸ್ಥಾಖ್ಯಮುತ್ತಮಂ ॥ ೫ ॥

ನಿಗಮೋದ್ಬೋಧಕಂ ತತ್ರ ತೀರ್ಥಂ ನಿಖಿಲಕಾಮದಂ ।
ಬೃಹಸ್ಪತಿಕೃತಂ ತತ್ರ ಸ್ನಾಹಿ ತ್ವಂ ಸುತವಾಂಛಯಾ ॥ ೬ ॥

ಭವಿಷ್ಯತಿ ಸುತಸ್ತಾತ ತವ ಸ್ನಾನೇನ ತತ್ರ ಹಿ ।
ತತ್ರ ಸ್ನಾತ್ವಾ ಮಯಾಪ್ಯಂಗ ಲಬ್ಧಃ ಸ್ಕಂದಸ್ಸುರಾರಿಹಾ ॥ ೭ ॥

---

೪. ಪಾರ್ವತಿಯು ಹೇಳಿದಳು-ಎಲೈ ವೈಶ್ಯನೆ! ನಿನ್ನ ದೃಢವಾದ ಭಕ್ತಿಗೆ ಮೆಚ್ಚಿ ಪ್ರಸನ್ನಳಾಗಿದ್ದೇನೆ. ನೀನು ಯಾವ ಮಗನನ್ನು ಹೊಂದಲು ಪ್ರಯತ್ನ ಪಡುತ್ತಿದ್ದೆಯೋ ಅಂತಹ ಮಗನನ್ನು ಕೊಡುತ್ತೇನೆ.

೫. ನೀನು ತಡಮಾಡದೆ ಇಂದ್ರನ ವನವಾದ ಖಾಂಡವವನಕ್ಕೆ ಹೋಗು. ಅಲ್ಲಿ ಇಂದ್ರಪ್ರಸ್ಥವೆಂಬ ಒಂದು ಮಹಾ ಪುಣ್ಯಕ್ಷೇತ್ರವಿರುವುದು.

೬. ಅಲ್ಲಿ ನಿಗಮೋದ್ಬೋಧಕವೆಂಬ ಒಂದು ತೀರ್ಥವಿರುವುದು. ಅದು ಎಲ್ಲಾ ಇಷ್ಟಗಳನ್ನೂ ಕೊಡತಕ್ಕದ್ದು. ಬೃಹಸ್ಪತಿಯು ಅದನ್ನು ಸೃಷ್ಟಿಸಿರುವನು. ಅಲ್ಲಿ ನೀನು ಸ್ನಾನಮಾಡಿದರೆ ಮಕ್ಕಳಾಗುತ್ತವೆ.

೭. ನೀನು ಅಲ್ಲಿ ಸ್ನಾನಮಾಡಿದರೇನೆ ಉತ್ತಮನಾದ ಮಗನು ಹುಟ್ಟುವನು. ನಾನೂ ಕೂಡ ಅಲ್ಲಿ ಸ್ನಾನಮಾಡಿದುದರಿಂದಲೇನೇ ದೈತ್ಯನಾಶಕ ನಾದ ಸ್ಕಂದನನ್ನು ಪಡೆದನು.

॥ ಶಿವಶರ್ಮೋವಾಚ ॥

ಇತ್ಯಾಕರ್ಣ್ಯ ವಚೋ ದೇವ್ಯಾಃ ಪಿತಾ ಮಮ ಸಹ ಸ್ತ್ರಿಯಾ ।
ಅತ್ರಾಜಗಾಮ ಸತ್ತೀರ್ಥೇ ಸಸ್ನೌ ಚ ಸುತವಾಂಛಯಾ ॥ ೮ ॥

ಉಪಸ್ಕರವತೀರ್ಧೇನೂರ್ದ್ವಿಜೇಭ್ಯಃ ಪ್ರದದೌ ಶತಂ ।
ದೇವಾನ್ ಪಿತ್ರ್ಯಾಂಶ್ಚ ಸಂತರ್ಪ್ಯ ಯಥಾವಿಧ್ಯತ್ರ ಬುದ್ಧಿಮಾನ್ ॥ ೯ ॥

ಸಪ್ತರಾತ್ರಮುಷಿತ್ವಾ ತು ದಂಪತೀ ಯತಮಾನಸೌ ।
ಜಗ್ಮತುಃ ಸ್ವಗೃಹಾಸಿಷ್ಟಲಾಭೋತ್ಫುಲ್ಲಮುಖಾಂಬುಜೌ ॥ ೧೦ ॥

ತಸ್ಮಿನ್ನೇವಾಭವದ್ಗರ್ಭೋ ಮಾಸಿ ಮಾತುರ್ಮಮಾನ್ವಹಂ ।
ವ್ಯತೀತೇ ನವಮೇ ಮಾಸಿ ಜಾತೋಹಂ ದಶಮೇ ಶುಭೇ ॥ ೧೧ ॥

ವಿಷ್ಣುಶರ್ಮನ್ಯದುಕ್ತಂ ತೇ ಪುರಾವೃತ್ತಮಿದಂ ಮಯಾ ।
ದಶಾಬ್ದದ್ವಯಸೇನೈತಚ್ಛ್ರುತಂ ಸರ್ವಂ ಪಿತುರ್ಮುಖಾತ್ ॥ ೧೨ ॥

---

೮. ಶಿವಶರ್ಮನು ಹೇಳಿದನು-ಇದನ್ನು ಕೇಳಿ ನನ್ನ ತಂದೆಯು ಹೆಂಡತಿಯೊಡನೆ ಇಲ್ಲಿಗೆ ಬಂದು ಈ ತೀರ್ಥದಲ್ಲಿ ಮಕ್ಕಳಿನ ಆಸೆಯಿಂದ ಸ್ನಾನಮಾಡಿದನು.

೯-೧೦. ಕರೆಯುವ ಪಾತ್ರೆ ಮುಂತಾದುವುಗಳಿಂದ ಕೂಡಿದ ನೂರು ಕರೆಯುವ ಹಸುವನ್ನು ಬ್ರಾಹ್ಮಣರಿಗೆ ದಾನಮಾಡಿದರು. ದೇವ ಪಿತೃಗಳನ್ನು ಬಹುವಾಗಿ ಸಂತೋಷಗೊಳಿಸಿದರು. ನಿಯಮದಿಂದ ಏಳುರಾತ್ರೆ ಅಲ್ಲಿ ವಾಸ ಮಾಡಿದರು. ಅನಂತರ ಇಷ್ಟವಾದ ಫಲವನ್ನು ಹೊಂದಿದವರಾಗಿ ತಮ್ಮ ಮನೆಗೆ ಹೋದರು.

೧೧. ಅದೇ ತಿಂಗಳಲ್ಲಿಯೇ ನನ್ನ ತಾಯಿಗೆ ಗರ್ಭವು ಆಯಿತು. ಒಂಭತ್ತು ತಿಂಗಳು ತುಂಬಿದಮೇಲೆ ಹತ್ತನೆಯ ತಿಂಗಳಲ್ಲಿ ನಾನು ಹುಟ್ಟಿದೆನು.

೧೨. ಎಲೈ ವಿಷ್ಣುಶರ್ಮನೆ! ನಾನು ನನ್ನ ಪೂರ್ವವಿಷಯಗಳನ್ನೆಲ್ಲಾ ಹೇಳಿದ್ದೇನೆ. ಹತ್ತುವರ್ಷ ವಯಸ್ಸಾಗಿದ್ದಾಗಲೇ ಇದೆಲ್ಲವನ್ನೂ ನಮ್ಮ ತಂದೆಯು ತಾನೇ ನನಗೆ ಹೇಳಿದ್ದನು.

ಏಕದಾ ಕ್ಷಮಮಾಲೋಕ್ಯ ಗೃಹಕರ್ಮಣಿ ಮಾಂ ಪಿತಾ |
ಗೃಹಂ ಸಮರ್ಪಯಾಮಾಸ ವಿಶ್ವಾದ್ವೈರಾಗ್ಯಮಾಪ್ನುಯಾತ್ || ೧೩ ||

ಮಾಂ ಚೋವಾಚ ಸ ಧರ್ಮಾತ್ಮಾ ಗೋವಿಂದಾಸಕ್ತಮಾನಸಃ |
ವಿನಿಂದನ್ವಿಷಯಾಸಕ್ತಿಂ ವಿಷ್ಣುಭಕ್ತಿಂ ಸ್ತುವನ್ ಮುಹುಃ || ೧೪ ||

|| ಪಿತೋವಾಚ ||

ಸುಮತೇ ವಾರ್ಧಕಂ ಪ್ರಾಪ್ತಂ ಪಲಿತಾಙ್ಕುರಾ ಮಮ |
ಗೋವಿಂದಚರಣಾಂಭೋಜಂ ಸೇವಿಷ್ಯೇ ಸಾಧುಸೇವಿತಂ || ೧೫ ||

ತತ್ಸೇವಯಾ ಭವೇತ್ ಸ್ವಚ್ಛಂ ಮನೋ ಯಸ್ಯ ಚ ಸುಸ್ಥಿರಂ |
ಸ ಪುಮಾನಾತ್ಮಸಂತುಷ್ಟೋ ನ ಕಿಂಚಿದಭಿವಾಂಛತಿ || ೧೬ ||

ನಿಷ್ಕಾಮಃ ಸುಖದುಃಖಾಭ್ಯಾಂ ಭುಂಜನ್ ಸುಕೃತದುಷ್ಕೃತೇ |
ಪ್ರಾಕ್ಕೃತೇ ತತ್ಸಮಾಪ್ತೌ ಚ ತ್ಯಜನ್ ದೇಹಂ ಭವತ್ಯಜಃ || ೧೭ ||

---

೧೩. ಹೀಗಿರುತ್ತಿರಲು ಮನೆಯ ಕೆಲಸದಲ್ಲಿ ಭಾರವನ್ನು ವಹಿಸಲು ನಾನು ಯೋಗ್ಯನಾದೆನೆಂದು ತಿಳಿದ ಮೇಲೆ ನನ್ನ ತಂದೆಯು ಎಲ್ಲವನ್ನೂ ನನಗೆ ವಹಿಸಿಬಿಟ್ಟು ಪೂರ್ತಿಯಾದ ವೈರಾಗ್ಯವನ್ನು ಹೊಂದಿದನು.

೧೪. ಗೋವಿಂದನಲ್ಲಿ ಮನಸ್ಸುಳ್ಳ ಆ ನನ್ನ ತಂದೆಯು ವಿಷಯಗಳನ್ನು ತಿರಸ್ಕರಿಸುತ್ತ ವಿಷ್ಣುಭಕ್ತಿಯನ್ನು ಹೊಗಳುತ್ತ ನನ್ನನ್ನು ಕುರಿತು ಇಂತೆಂದನು.

೧೫. ತಂದೆಯು ಹೇಳಿದನು–ಬುದ್ಧಿವಂತನಾದ ಮಗನೇ! ನನಗೆ ಮುಪ್ಪು ಬಂದಿತು. ನನ್ನ ಕೂದಲೆಲ್ಲವೂ ಬೆಳ್ಳಗಾದುವು. ಇನ್ನುಮೇಲೆ ಸಾಧುಗಳು ಸೇವಿಸುವ ಗೋವಿಂದನ ಪಾದಗಳನ್ನು ಸೇವಿಸುತ್ತೇನೆ.

೧೬. ಆ ಸ್ವಾಮಿಯ ಪಾದಸೇವೆಯಿಂದ ಮನಸ್ಸು ಸ್ವಚ್ಛವಾಗುತ್ತದೆ. ಮತ್ತು ಸ್ಥಿರವಾಗುತ್ತದೆ. ಅಂತಹವನಿಗೆ ಆತ್ಮತೃಪ್ತಿಯು ಉಂಟಾಗಿ ಏನನ್ನೂ ಅಪೇಕ್ಷಿಸುವುದಿಲ್ಲ.

೧೭ ಆ ಅಪೇಕ್ಷೆಯೆಲ್ಲವನ್ನೂ ಬಿಟ್ಟು ಹಿಂದಿನ ಜನ್ಮದ ಪುಣ್ಯಪಾಪ ಗಳಿಂದ ಸುಖದುಃಖಗಳನ್ನು ಅನುಭವಿಸುತ್ತಲಿದ್ದು ಈ ದೇಹವನ್ನು ಬಿಟ್ಟು ಕೊನೆ ಯಲ್ಲಿ ಮತ್ತೆ ಹುಟ್ಟದಿರುವ ಮೋಕ್ಷವನ್ನು ಹೊಂದುತ್ತಾನೆ.

ತಾವದ್ದ್ರವ್ಯಗುಣೇ ಸೌಖ್ಯಂ ಯಾವತ್ಪ್ರಾಪ್ತಂ ನ ಚಿತ್ಸುಖಂ |
ತತ್ಪ್ರಾಪ್ತೌ ತದ್ಭವೇತ್ತುಚ್ಛಂ ಸುಧಾಯಾ ಇವ ತಕ್ರಕಂ || ೧೮ ||

ಹರೇರ್ಮಾಯಾ ಬಲವತೀ ಯಾ ಮೋಹಯತಿ ದೇಹಿನಂ |
ಹಿತಾಹಿತಂ ನ ಜಾನಾತಿ ಸ ಯಥಾ ಮದಿರಾಮದಃ || ೧೯ ||

ಪ್ರವೃತ್ತಿಂ ಚ ನಿವೃತ್ತಿಂ ಚ ವಿದ್ಯಯಾಽವಿದ್ಯಯಾ ಚ ಸಃ |
ಕರೋತಿ ಸ್ವೇಚ್ಛಯಾ ಕಾಲೇ ಬಾಲಲೀಲೋ ಹಿ ಸ ಪ್ರಭುಃ || ೨೦ ||

ವೇದೋದಿತಂ ಯದಾ ಕರ್ಮ ಕ್ರಿಯತೇ ಫಲಮಿಚ್ಛತಾ |
ಪ್ರವೃತ್ತಿಸ್ಸಾಽಪರಾ ತಾತ ತೇಷಾಮರ್ಪಣಮೀಶ್ವರೇ || ೨೧ ||

---

೧೮. ಚಿತ್ಸುಖವನ್ನು ಹೊಂದುವವರೆಗೂ ದ್ರವ್ಯಗುಣಗಳಲ್ಲಿನ ಸುಖವು ಮನುಷ್ಯನಿಗಿರುತ್ತದೆ. ಆ ಚಿತ್ಸುಖವು ಸಿಕ್ಕಿದ ಮೇಲೆ ಹಾಲು ಸಿಕ್ಕಿದ ಮೇಲೆ ಮಜ್ಜಿಗೆಯು ತುಚ್ಛವಾಗಿ ಕಾಣುವಂತೆ ಮಿಕ್ಕ ಸುಖಗಳು ತುಚ್ಛವಾಗಿ ಕಾಣುತ್ತವೆ.

೧೯. ಹರಿಯ ಮಾಯೆಯು ಬಹು ಬಲವಾದುದು. ಅದು ಪ್ರಾಣಿಗಳೆಲ್ಲವನ್ನೂ ತನ್ನ ಮೋಹಕ್ಕೆ ಸಿಕ್ಕಿಸಿಕೊಳ್ಳುತ್ತದೆ. ಹೆಂಡವನ್ನು ಕುಡಿದವನು ಹಿತ ಅಹಿತಗಳನ್ನು ತಿಳಿಯದಿರುವಂತೆ ಆ ಮಾಯಾಮೋಹಿತನು ಹಿತ ಅಹಿತಗಳನ್ನು ತಿಳಿಯಲಾರನು.

೨೦. ಆ ಸ್ವಾಮಿಯು ಬಾಲಲೀಲೆಯನ್ನು ಹೊಂದಿ ಆಡುವವನಾದುದರಿಂದ ತನ್ನ ಇಷ್ಟ ಬಂದಂತೆ ಪ್ರವೃತ್ತಿ ನಿವೃತ್ತಿಗಳನ್ನೂ ವಿದ್ಯೆ ಅವಿದ್ಯೆಗಳನ್ನೂ ತಂದೊಡ್ಡುತ್ತಾನೆ.

೨೧. ವೇದದಲ್ಲಿ ಹೇಳಿರುವಂತೆ ಕರ್ಮಗಳನ್ನು ಮಾಡುತ್ತ ಅದರ ಫಲವು ತನಗೇ ಬರಬೇಕೆಂಬುದೇ ಪ್ರವೃತ್ತಿಯು. ಆ ಕರ್ಮವನ್ನು ಮಾಡಿ ಅದು ಈಶ್ವರಾರ್ಪಣವಾಗಲೆಂದು ಅರ್ಪಿಸುವುದೇ ನಿವೃತ್ತಿಯು.

**ಯಥಾ ನಿರ್ದಗ್ಧಬೀಜಾನಿ ನ ಪ್ರರೋಹನ್ತಿ ಯತ್ನತಃ ।**
**ತಥಾ ಕರ್ಮಾಣಿ ವಿಶ್ವೇಶೇ ನಿಷ್ಕಾಮೇಣಾರ್ಪಿತಾನಿ ತು ॥ ೨೨ ॥**

**ಕರ್ಮಣಾಂ ಹಿ ಲಯೋ ಮೋಕ್ಷಃ ಸುಖದುಃಖಪ್ರದಾಯಿನಾಂ ।**
**ತದುತ್ಪತ್ತಿಸ್ತು ಬಂಧಸ್ಸ್ಯಾದಿತ್ಯಸೌ ಶಾಸ್ತ್ರನಿರ್ಣಯಃ ॥ ೨೩ ॥**

**ಅತೋಽಹಂ ಕರ್ಮ ವೇದೋಕ್ತಂ ಕುರ್ವನ್ನಾಭಿಲಷೇ ಫಲಂ ।**
**ಪರ್ಯಟಿಷ್ಯಾಮಿ ತೀರ್ಥೇಷು ಹೃದಿ ಭಕ್ತಿಂ ದಧದ್ಧರೇಃ ॥ ೨೪ ॥**

**ಏವಂ ಪ್ರಾರಬ್ಧಕರ್ಮಾಣಿ ಭುಂಜನ್ನನ್ಯಾನ್ಯವರ್ಜಯನ್ ।**
**ಹನಿಷ್ಯಾಮಿ ಜಗದ್ರೋಗಂ ಪೀತ್ವಾ ಸತ್ಸಂಗಮೌಷಧಂ ॥ ೨೫ ॥**

---

೨೨. ಹುರಿದ ಕಾಳುಗಳನ್ನು ಭೂಮಿಯಲ್ಲಿ ಹಾಕಿ ಎಷ್ಟು ಪ್ರಯತ್ನಪಟ್ಟರೂ ಹೇಗೆ ಹುಟ್ಟುವುದಿಲ್ಲವೋ ಹಾಗೆ ನಾವು ಮಾಡಿದ ಕರ್ಮಗಳಲ್ಲಿ ಆಸೆಯನ್ನು ಬಿಟ್ಟು ಸ್ವಾಮಿಗೆ ಅರ್ಪಿಸಿದರೆ ನಮ್ಮ ಆ ಕರ್ಮಗಳು ಪ್ರವೃತ್ತಿ[illegible] ಫಲವನ್ನು ಕೊಡುವುದಿಲ್ಲ.

೨೩. ಸುಖವನ್ನಾಗಲಿ ದುಃಖವನ್ನಾಗಲಿ ಕೊಡುವ ಕರ್ಮಗಳ ನಾಶವೇ ಮೋಕ್ಷವು. ಆ ಕರ್ಮಗಳು ತಮ್ಮ ಫಲಗಳನ್ನು ಕೊಡಲು ತಲೆಯೆತ್ತಿ ಬಂದರ ಅದೇ ಬಂಧವೆನಿಸಿಕೊಳ್ಳುತ್ತದೆ. ಇದೇ ಶಾಸ್ತ್ರದ ತತ್ವವು. ನಿರ್ಣಯವು.

೨೪. ಆದ್ದರಿಂದಲೇ ನಾನು ವೇದೋಕ್ತವಾದ ಕರ್ಮಗಳನ್ನು ಮಾಡಿ ದರೂ ಅದರ ಫಲವನ್ನು ಅಪೇಕ್ಷಿಸುವುದಿಲ್ಲ. ಹೀಗೆ ಮಾಡುತ್ತ ಹರಿಯನ್ನು ಭಕ್ತಿಯನ್ನಿಟ್ಟುಕೊಂಡು ತೀರ್ಥಗಳ ಯಾತ್ರೆಯನ್ನು ಮಾಡುತ್ತೇನೆ.

೨೫. ಈ ರೀತಿಯಾಗಿ ನಾನು ಪ್ರಾರಬ್ಧ ಕರ್ಮಗಳ ಫಲವನ್ನು ಅನು ಭವಿಸುತ್ತ ಬೇರೆ ಕರ್ಮಗಳನ್ನು ಮಾಡದೆ ಸತ್ಸಂಗಮವೆಂಬ ಔಷಧವನ್ನು ಪಾನ ಮಾಡಿಕೊಂಡು ಈ ಜಗತ್ತಿನಲ್ಲಿ ಹುಟ್ಟಿ ಸಾಯುವ ದೊಡ್ಡ ರೋಗವನ್ನು ನಾಶಮಾಡಿಕೊಳ್ಳುತ್ತೇನೆ.

॥ ಶಿವಶರ್ಮೋವಾಚ ॥

ಏವಮಾಕರ್ಣ್ಯ ವಚನಂ ತಸ್ಯಾಹಂ ಪಿತುರಾತ್ಮನಃ ।
ಅವಹಂ ವಿಷ್ಣುಶರ್ಮಂಸ್ತ್ವಂ ತನ್ನಿಶಾಮಯ ತತ್ವತಃ ॥ ೨೬ ॥

॥ ವೈಶ್ಯಪುತ್ರ ಉವಾಚ ॥

ಅಯಂ ಜನೋ ದುರಾರಾಧ್ಯಃ ಕಥಯಿಷ್ಯತಿ ನೋಽಯಶಃ ।
ದುಷ್ಟಃ ಕುಟುಂಬಾದುದ್ವಿಜ್ಯ ನಿಸ್ಸೃತ್ಯ ಗತ ಇತ್ಯಯಂ ॥ ೨೭ ॥

ಇಯಂ ವಿಷ್ಣುಪದೀ ತಾತ ಭುವನತ್ರಯಪಾವನೀ ।
ಸ್ಮೃತಾ ಹರತ್ಯಘಂ ದೂರಾತ್ಕಸ್ಮಾದೇನಾಂ ವಿಮುಂಚಸಿ ॥ ೨೮ ॥

ಪಾಪಕಾರೀ ಜನಸ್ತಾತ ಮ್ರಿಯತೇ ಮಗಧೇ ತು ಯಃ ।
ಸೋಽಪ್ಯಸ್ಥಿಪಾತಾದ್ಗಂಗಾಯಾಂ ಸ್ವರ್ಯಾತಿ ತ್ಯಜ್ಯ ಚಾಶುಭಂ ॥ ೨೯ ॥

---

೨೬. ಶಿವಶರ್ಮನು ಹೇಳಿದನು- ಎಲೈ ವಿಷ್ಣುಶರ್ಮನೆ! ಆ ತಂದೆಯ ಮಾತನ್ನು ನಾನು ಕೇಳಿ ಅವನನ್ನು ಕುರಿತು ಇಂತೆಂದೆನು. ಅದನ್ನು ಕೇಳು.

೨೭. ವೈಶ್ಯಪುತ್ರನು ಹೇಳಿದನು- ಇವನಿಗೆ ಒಳ್ಳೆಯ ಮಾತನ್ನು ಹೇಳಿ ಒಪ್ಪಿಸಲು ಆಗುವುದಿಲ್ಲ. ಹೇಳಲು ಹೋದರೆ ನಮಗೆ ಕೆಟ್ಟದ್ದನ್ನೇ ಬಯಸುತ್ತಾನೆ. ದುಷ್ಟನು. ಇವನು ತನ್ನ ಸಂಸಾರದಿಂದ ವೈರಾಗ್ಯವನ್ನು ಹೊಂದಿ ಹೊರಟು ಇರತಕ್ಕವನು. ಎಂದು ನಾನು ತಿಳಿದೆನು.

೨೮. ಎಲೈ ತಂದೆಯೆ! ಈ ಗಂಗೆಯು ವಿಷ್ಣು ಪ್ರಸಾದದಿಂದ ಹುಟ್ಟಿದುದು. ಮೂರುಲೋಕವನ್ನೂ ಪಾವನವನ್ನಾಗಿ ಮಾಡುತ್ತದೆ. ದೂರದಿಂದ ಸ್ಮರಿಸಿದರೇನೇ ಪಾಪವನ್ನು ನಾಶಮಾಡುತ್ತದೆ. ಹೀಗಿರುವಲ್ಲಿ ಇದನ್ನು ನೀನು ಬಿಟ್ಟು ಹೋಗಲು ಕಾರಣವೇನು?

೨೯. ಪಾಪಿಯಾದರೂ ಕೂಡ ಮಗಧದಲ್ಲಿ ಯಾವನು ಪ್ರಾಣಬಿಡುತ್ತಾನೆಯೋ ಅವನ ಮೂಳೆಯನ್ನಾದರೂ ಗಂಗೆಯಲ್ಲಿ ಹಾಕಿದರೆ ಅವನು ಪಾಪಗಳನ್ನು ಕಳೆದುಕೊಂಡು ಸ್ವರ್ಗಕ್ಕೆ ಹೋಗುತ್ತಾನೆ.

ಪುತ್ರಾಃ ಷಷ್ಟಿಸಹಸ್ರಾಣಿ ಸಗರಸ್ಯ ಮಹಾತ್ಮನಃ ।
ಕಪಿಲಕ್ರೋಧನಿರ್ದಗ್ಧಾ ಗತಾ ಯತ್ ಸ್ಪರ್ಶನಾದ್ದಿವಂ ॥ ೩೦ ॥

ತಾಮಿಮಾಂ ತ್ರಿದಿವಶ್ರೇಣೀಂ ಮುಕ್ತೇರಪಿ ವಿಧಾಯಿನೀಂ ।
ಮುಮುಕ್ಷುಸೇವಿತಾಂ ತಾತ ಮುಕ್ತ್ವಾ ಮಾನ್ಯತ್ರ ಗಮ್ಯತಾಂ ॥ ೩೧ ॥

ಮಾವಜಾನೀಹಿ ಸಾಮೀಪ್ಯೇ ಗಂಗಾಂ ತ್ರಿದಶಮಾನಿತಾಂ ।
ಯದಿಚ್ಛಸಿ ಮಹಾಭಾಗ ಸೇವಿತೈಷಾ ಪ್ರದಾಸ್ಯತಿ ॥ ೩೨ ॥

ತಿರ್ಯಂಚೋಽಪಿ ವಿನಾ ಜ್ಞಾನಾತ್ ಜಲೇ ಚೇತ್ಸ್ವರ್ಗತಾಸವಃ ।
ಭವೇಯುಸ್ತರ್ಹಿ ತೇ ಬ್ರಹ್ಮ ಸಾ ಕಥಂ ತ್ಯಜ್ಯತೇ ತ್ವಯಾ ॥ ೩೩ ॥

॥ ಶಿವಶರ್ಮೋವಾಚ ॥

ನಿಶಮ್ಯೈತದ್ವಚಸ್ತಾತಸ್ತತೋ ಮಮ ಋತಪ್ರಿಯಂ ।
ಉವಾಸ ಸದನೇ ಸರ್ವವಿಷಯೇಭ್ಯಃ ಪರಾಙ್ಮುಖಃ ॥ ೩೪ ॥

---

೩೦. ಸಗರಚಕ್ರವರ್ತಿಯ ಅರವತ್ತು ಸಾವಿರ ಜನ ಮಕ್ಕಳು ಕಪಿಲ ಋಷಿಯ ಕೋಪದಿಂದ ಸುಟ್ಟುಹೋದರು. ಅವರೂ ಕೂಡ ಈ ಗಂಗಾ ನದಿಯ ನೀರನ್ನು ಮುಟ್ಟಿದುದರಿಂದಲೇ ಸ್ವರ್ಗವನ್ನು ಸೇರಿದರು

೩೧. ಆ ರೀತಿಯಾದ, ಸ್ವರ್ಗಕ್ಕೆ ಸೋಪಾನವಾದ, ಮುಕ್ತಿಯನ್ನು ಕೊಡುವ, ಮೋಕ್ಷವನ್ನು ಅಪೇಕ್ಷಿಸುವವರು ಸೇವಿಸುವಂತಹ ಈ ಕಾಶಿಯನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಡ.

೩೨. ಗಂಗಾ ನದಿಯು ಹತ್ತಿರವಿರುವುದೆಂದು ಅದನ್ನು ತಿರಸ್ಕರಿಸಬೇಡ. ಇದನ್ನು ದೇವತೆಗಳೂ ಗೌರವಿಸುತ್ತಾರೆ. ಇದನ್ನು ಸೇವಿಸಿದರೆ ನಿನಗೆ ಬೇಕಾದುದನ್ನು ಕೊಡುತ್ತದೆ.

೩೩. ಕೀಳು ಜಾತಿಯ ಪ್ರಾಣಿಗಳೂ ಕೂಡ ಬುದ್ಧಿಯಿಲ್ಲದಿದ್ದರೂ ಇದರ ನೀರಿನಲ್ಲಿ ಬಿದ್ದು ಸತ್ತರೆ ಅವುಗಳು ಆ ಬ್ರಹ್ಮನ ಲೋಕವನ್ನು ಹೊಂದುತ್ತವೆ. ಅಂತಹ ಗಂಗೆಯನ್ನು ನೀನು ಹೇಗೆ ಬಿಡುತ್ತೀಯೆ ?

೩೪. ಶಿವಶರ್ಮನು ಹೇಳಿದನು- ಅನಂತರ ಈ ಸತ್ಯಪ್ರಿಯನು ನನ್ನ ಈ ಮಾತನ್ನು ಕೇಳಿ ವಿಷಯ ಸುಖದಲ್ಲಿ ಆಸೆಯನ್ನು ಬಿಟ್ಟವನಾಗಿ ನಮ್ಮ ಮನೆಯಲ್ಲಿಯೇ ವಾಸವಾಗಿದ್ದನು.

ತ್ರಿಷು ಕಾಲೇಷು ಗಂಗಾಯಾಂ ಪ್ರತ್ಯಹಂ ಸ್ನಾನಮಾಚರನ್ ।
ಪುರಾಣಂ ಸ್ಯಾದ್ಗೃಹೇ ಯತ್ರ ತತ್ರ ಯಾತಿ ಸ ನಿತ್ಯಶಃ ॥ ೩೫ ॥

ಏಕದಾಕರ್ಣಯೋರ್ಧೀರೋ ಯಮುನಾತೀರ್ಥಗೌರವಂ ।
ತತ್ರ ಶುಶ್ರಾವ ಮಾಹಾತ್ಮ್ಯಮಸ್ಯ ತೀರ್ಥಸ್ಯ ಪುತ್ರ ಸಃ ॥ ೩೬ ॥

ಅವಿಮುಕ್ತಹರಿದ್ವಾರಪ್ರಯಾಗೇಭ್ಯಶ್ಚ ಪುಷ್ಕರಾತ್ ।
ಅಯೋಧ್ಯಾದ್ವಾರಕಾಕಾಂಚೀಮಧುರಾಭ್ಯಸ್ತಥಾನ್ಯತಃ ॥ ೩೭ ॥

ಸರ್ವತೀರ್ಥಮಯಸ್ಯಾಸ್ಯ ಪುಣ್ಯಂ ಶತಗುಣಾಧಿಕಂ ।
ಕಥಿತಂ ತೇನ ವಿದುಷಾ ಸೂತೇನಾಕರ್ಣ್ಯ ಮತ್ಪಿತಾ ॥ ೩೮ ॥

ತ್ಯಕ್ತ್ವಾ ಗೃಹಮಗಾತ್ತತ್ರ ತೀರ್ಥೇ ಸರ್ವೈರಲಕ್ಷಿತಃ ।
ಆವಾಮಿಹ ಮಹಾಭಾಗೋ ಗೋವಿಂದಪದಸೇವಕಃ ॥ ೩೯ ॥

---

೩೫. ಈತನು ಗಂಗೆಯಲ್ಲಿ ಪ್ರತಿದಿನವೂ ಮೂರು ಹೊತ್ತೂ ಸ್ನಾನವನ್ನು ಮಾಡುತ್ತ ಎಲ್ಲಿ ಎಲ್ಲಿ ಪುರಾಣವು ನಡೆಯುತ್ತದೆಯೋ ಅಲ್ಲಿಗೆಲ್ಲಾ ದಿನವೂ ಹೋಗುತ್ತಲಿದ್ದನು.

೩೬. ಎಲೈ ಮಗನೆ! ಒಂದು ಸಾರಿ ಈತನು ಆ ಪುರಾಣದಲ್ಲಿ ಯಮುನೆಯ ತೀರ್ಥದ ಮಹಿಮೆಯನ್ನು ಕೇಳಿದನು.

೩೭-೩೮. ಕಾಶಿ, ಹರಿದ್ವಾರ, ಪ್ರಯಾಗ, ಪುಷ್ಕರ, ಅಯೋಧ್ಯೆ, ದ್ವಾರಕೆ, ಕಾಂಚಿ, ಮಧುರೆ ಮತ್ತು ಯಾವ ಯಾವ ಉತ್ತಮ ತೀರ್ಥಗಳುಂಟೋ ಆ ಎಲ್ಲಾ ತೀರ್ಥಗಳಿಗಿಂತಲೂ ಈ ಯಮುನಾ ತೀರ್ಥವು ನೂರುಪಾಲು ಹೆಚ್ಚು ಎಂದು ಪುರಾಣಿಕನು ಹೇಳುತ್ತಿದ್ದುದನ್ನು ನನ್ನ ತಂದೆಯು ಕೇಳಿದನು.

೩೯. ಒಡನೆಯೇ ಅವನು ನಮ್ಮೊಬ್ಬರಿಗೂ ಕಾಣದಂತೆ ಆ ತೀರ್ಥದಲ್ಲಿದ್ದವರಿಗೂ ಕಾಣದಂತೆ ಮನೆಯನ್ನು ಬಿಟ್ಟು ನಾವಿಬ್ಬರೂ ಹೊರಟಂತೆಯೇ ಗೋವಿಂದನ ಪಾದಗಳನ್ನು ಸ್ಮರಿಸುತ್ತ ಹೊರಟನು

ಅತ್ರಾಗತ್ಯ ಮಹಾಭಾಗೋ ಮತ್ಪಿತಾ ಮೋಕ್ಷಕಾಂಕ್ಷಯಾ ।
ನಿಗಮೋದ್ಬೋಧಕೇ ತೀರ್ಥೇ ತ್ರಿಕಾಲಂ ಸ್ನಾನಮಾಚರನ್ ॥ ೪೦ ॥

ಉವಾಸ ಕತಿಚಿನ್ಮಾಸಾಂಸ್ತತ್ರ ತೀರ್ಥೋತ್ತಮೇ ಹಿ ಸಃ ।
ಕುರ್ವನ್ನಿತ್ಯಕ್ರಿಯಾಂ ಧೀಮಾನ್ ನಿಸ್ಪೃಹೋಪ್ಯಜವೇಶ್ಮನಿ ॥ ೪೧ ॥

ಏಕದಾ ಸಹಸಾ ತಸ್ಯ ಜ್ವರೋಭೂದತಿದಾರುಣಃ ।
ಮಹತ್ಯಾ ಪೀಡಯಾ ತಸ್ಯ ಮುಮೋಹ ಗತಚೇತನಃ ॥ ೪೨ ॥

ಮುಹೂರ್ತಂ ಸ ಪಿತಾ ಮುರ್ಛ್ಯ ತದವಸ್ಥೋ ವ್ಯತಿಷ್ಠತ ।
ಪಶ್ಚಾತ್ಸಮಾಗತಪ್ರಾಣೋ ವ್ಯಚಿಂತಯದಿದಂ ತದಾ ॥ ೪೩ ॥

ಅಹೋ ಮೇ ಕಷ್ಟಮಾಪನ್ನಂ ದೂರೇ ಪುತ್ರಸ್ಸ ಧಾರ್ಮಿಕಃ ।
ಯೋ ಮಾಂ ಜ್ವರವಿದಗ್ಧಾಂಗಮಾಶ್ವಾಸಯತಿ ಬುದ್ಧಿಮಾನ್ ॥ ೪೪ ॥

---

೪೦-೪೧. ನನ್ನ ತಂದೆಯು ಅನಂತರ ಈ ಇಂದ್ರಪ್ರಸ್ಥಕ್ಕೆ ಮೋಕ್ಷಾಪೇಕ್ಷೆಯಾಗಿ ಬಂದನು. ಈ ನಿಗಮೋದ್ಬೋಧಕ ತೀರ್ಥದಲ್ಲಿ ಮೂರು ಕಾಲವೂ ಸ್ನಾನಮಾಡುತ್ತ ಆ ತೀರ್ಥದಲ್ಲಿ ಕೆಲವು ತಿಂಗಳವರೆಗೆ ಇದ್ದನು. ಮತ್ತು ನಿತ್ಯಕ್ರಿಯೆಗಳನ್ನು ಮಾಡಿಕೊಂಡು ಆಸೆಯನ್ನು ಬಿಟ್ಟು ಇರುತ್ತಿದ್ದನು.

೪೨. ಇದ್ದಕ್ಕಿದ್ದಂತೆಯೇ ಅವನಿಗೆ ಒಂದು ಸಾರಿ ಬಹುವಾದ ಜ್ವರವು ಬಂದಿತು. ಅದರಿಂದ ಬಹು ಯಾತನೆಯುಂಟಾಗಿ ಜ್ಞಾನತಪ್ಪಿ ಬಿದ್ದನು.

೪೩. ಒಂದು ಮುಹೂರ್ತದ ಕಾಲ ಜ್ಞಾನತಪ್ಪಿ ಹಾಗೆಯೇ ಮಲಗಿದ್ದನು. ಅನಂತರ ಜ್ಞಾನ ಬರಲು ಈ ರೀತಿಯಾಗಿ ಯೋಚಿಸಿದನು.

೪೪. ಅಯ್ಯೋ ! ನನಗೆ ಕಷ್ಟವು ಪ್ರಾಪ್ತವಾಯಿತು. ಧರ್ಮವನ್ನು ಬಲ್ಲ ಆ ನನ್ನ ಮಗನು ದೂರದೇಶದಲ್ಲಿದ್ದಾನೆ. ಅವನು ಬುದ್ಧಿವಂತನಾದುದರಿಂದ ಜ್ವರದಿಂದ ಮಲಗಿರುವ ನನ್ನನ್ನು ಸಮಾಧಾನಪಡಿಸುತ್ತಿದ್ದನು.

ಅಗಮ್ಯಾಗಮನಂ ಪಾಪಂ ಕೃತಂ ಯನ್ಮೇ ಸುದಾರುಣಂ ।
ಪ್ರಾಯಶ್ಚಿತ್ತಂ ನ ತಸ್ಯಾಪಿ ಕೃತಂ ಕಾ ಮೇ ಗತಿರ್ಭವೇತ್ ॥ ೪೫ ॥

ಆಗಮಿಷ್ಯತಿ ಪುತ್ರೋ ಮೇ ತಸ್ಮೈ ದಾಸ್ಯಾಮಿ ವಸ್ವಿತಿ ।
ಯನ್ಮಯಾ ಗೋಪಿತಂ ಗೇಹೇ ನ ದೃಷ್ಟಂ ಚ ತದಸ್ಯಹಂ ॥ ೪೬ ॥

॥ ಶಿವಶರ್ಮೋವಾಚ ॥

ಇತಿ ಚಿಂತಯತಸ್ತಸ್ಯ ಪಾಂಥೋ ವರ್ಷೇಣ ಪೀಡಿತಃ ।
ಶೀತಾರ್ತಃ ಕಂಪಿತವಪುರುಟಜಂ ಪ್ರಾವಿಶತ್ತದಾ ॥ ೪೭ ॥

ಸ ತಂ ಸಂವಿಷ್ಟಮಾಲೋಕ್ಯ ಭೂಯೋ ಗತ್ವಾ ತದಂತಿಕೇ ।
ಮುನಿರೇಷ ಇತಿ ಜ್ಞಾತ್ವಾ ವವಂದೇ ಶಿರಸಾಧ್ವಗಃ ॥ ೪೮ ॥

ಊಚೇ ಚ ಕಸ್ಮಾತ್ಸುಪ್ತೋಽಸಿ ಮುನೇ ಸಂಧ್ಯಾ ಸಮಾಗತಾ ।
ರವಿರಸ್ತಂ ಪ್ರಯಾತ್ಯೇಷ ನ ಸುಪ್ತೇಃ ಕಾಲ ಏಷ ತೇ ॥ ೪೯ ॥

---

೪೫. ನಾನು ಅಗಮ್ಯಾಗಮನರೂಪವಾದ ಪಾಪವನ್ನು ಮಾಡಿದ್ದೇನೆ. ಅದು ಬಹು ಕ್ರೂರವಾದುದು. ಅದಕ್ಕೆ ನಾನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಿಲ್ಲ. ನನಗೆ ಯಾವ ಗತಿಯು ಬಂದೀತೋ ಕಾಣೆನಲ್ಲ!

೪೬. ನನ್ನ ಮಗನು ಬರುವನು. ಅವನಿಗೆ ಈ ಹಣವನ್ನು ಕೊಡುತ್ತೇನೆ. ಎಂಬದಾಗಿ ನಾನು ಈ ಮನೆಯಲ್ಲಿ ಹೂತಿಟ್ಟಿದ್ದ ಹಣವೂ ಕೂಡ ನನಗೆ ತಿಳಿಯದಾಗಿದೆ.

೪೭. ಶಿವಶರ್ಮನು ಹೇಳಿದನು- ಈತನು ಹೀಗೆಯೇ ಯೋಚಿಸುತ್ತಿರಲು ಒಬ್ಬ ಪ್ರಯಾಣಿಕನು ಮಳೆಯಿಂದ ತೊಂದರೆಗೊಂಡು ಚಳಿಯಿಂದ ನಡುಗುತ್ತಾ ಆತನಿದ್ದ ಗುಡಿಸಿಲಿನೊಳಕ್ಕೆ ಬಂದನು.

೪೮. ಒಳಗೆ ಹೋಗಿ ನೋಡಲು ಒಬ್ಬ ಯತಿಯು ಕುಳಿತಿರುವುದನ್ನು ನೋಡಿ ಇವನು ಯತಿಯೆಂದು ತಿಳಿದು ಅವನ ಹತ್ತಿರಕ್ಕೆ ಹೋಗಿ ತಲೆ ಬಗ್ಗಿಸಿ ನಮಸ್ಕರಿಸಿದನು.

೪೯. ಎಲೈ ಮುನಿಯೆ! ಏತಕ್ಕೆ ಮಲಗಿದ್ದೀಯೆ? ಸಂಧ್ಯಾಕಾಲವಾಯಿತು. ಸೂರ್ಯನು ಮುಳುಗುತ್ತಿದ್ದಾನೆ. ಇದು ಮಲಗಲು ನಿನಗೆ ಕಾಲವಲ್ಲ.

|| ಶಿವಶರ್ಮೋವಾಚ ||

ಇತ್ಯುಕ್ತಮಾತ್ರೇ ವಚಸಿ ಪಥಿಕೇನ ಪಿತಾ ಮಮ |
ಶರಭೋ ಜ್ವರತಪ್ತಾಂಗಸ್ತಮಾಹ ಕಥಮಪ್ಯಹೋ || ೫೦ ||

॥ ಶರಭ ಉವಾಚ ॥

ಶ್ರೂಯತಾಂ ವಚನಂ ಪಾಂಥ ಯದ್ವದಾಮಿ ಪುರಸ್ತವ ।
ಶ್ರುತ್ವಾ ಮದ್ಭಾಗ್ಯಯಾತೇನ ತ್ವಯಾ ಸಾಧೋ ವಿಧೀಯತಾಂ || ೫೧ ||

ವೈಶ್ಯೋಽಹಂ ಶರಭೋ ನಾಮ್ನಾ ಕಾನ್ಯಕುಬ್ಜೇ ಗೃಹಂ ಮಮ |
ಅತ್ರಾಗತೋ ನಿಷಿದ್ಧೋಽಪಿ ಜಾಯಾಮಿತ್ರಸುರ್ಹೈರಹಂ || ೫೨ ||

ಅಸ್ಯ ತೀರ್ಥಸ್ಯ ಮಾಹಾತ್ಮ್ಯಂ ಶ್ರುತ್ವಾ ಸೂತಮುಖೇರಿತಂ |
ಮಾಸಾಸ್ತು ಕತಿಚಿತ್ಸಾಧೋ ವ್ಯತೀತಾ ಮಯಿ ಚಾಗತೇ || ೫೩ ||

---

೫೦. ಶಿವಶರ್ಮನು ಹೇಳಿದನು- ಆ ಪ್ರಯಾಣಿಕನು ಇಂತೆನ್ನಲು ನನ್ನ ತಂದೆಯಾದ ಶರಭನು ಜ್ವರದಿಂದ ಬಹು ತೊಂದರೆಪಡುತ್ತ ಬಹು ಕಷ್ಟದಿಂದ ಅವನನ್ನು ಕುರಿತು ಇಂತೆಂದನು.

೫೧. ಶರಭನು ಹೇಳಿದನು- ಎಲೈ ಪ್ರಯಾಣಿಕನೆ! ನಾನು ಹೇಳುವುದನ್ನು ಕೇಳು. ನೀನು ನನ್ನ ಪುಣ್ಯಯೋಗದಿಂದ ಇಲ್ಲಿಗೆ ಬಂದಿದ್ದೀಯೆ. ನಾನು ಹೇಳುವುದನ್ನು ಕೇಳಿ ಅದರಂತೆ ಮಾಡು.

೫೨. ನನ್ನ ಹೆಸರು ಶರಭನು. ಜಾತಿಯಲ್ಲಿ ವೈಶ್ಯನು. ನನ್ನ ಊರು ಕಾನ್ಯಕುಬ್ಜವು. ಹೆಂಡತಿ, ಮಕ್ಕಳು, ಸ್ನೇಹಿತರು ಹೋಗಬೇಡವೆಂದು ತಡೆದರೂ ನಾನು ಇಲ್ಲಿಗೆ ಬಂದಿದ್ದೇನೆ.

೫೩. ಸೂತನು ಪುರಾಣದಲ್ಲಿ ಈ ತೀರ್ಥದ ಮಹಿಮೆಯನ್ನು ಹೇಳುತ್ತಿದ್ದು ದನ್ನು ಕೇಳಿದೆನು. ಆದ್ದರಿಂದ ಇಲ್ಲಿಗೆ ಬಂದೆನು. ಬಂದು ಕೆಲವು ತಿಂಗಳುಗಳು ಕಳೆದುವು.

ದಿನತ್ರಯಮತಿಕ್ರಾನ್ತಂ ಜ್ವರಿತಸ್ಯ ಮಮಾಧುನಾ ।
ಪ್ರಾಣಾ ಮೇ ವಿಗತಾ ಅರ್ಸ ತೇದ್ಯ ಭೂಯಸ್ಸಮಾಗತಾಃ ॥ ೫೪ ॥

ಕಿಯಾನಪ್ಯಾಯುಷಶ್ಶೇಷಃ ಸಾಧೋ ಮೇ ಖಲು ತಿಷ್ಠತಿ ।
ಶಮನಸ್ಯ ಗೃಹಂ ದೃಷ್ಟ್ವಾ ಯದಹಂ ಪುನರಾಗತಃ ॥ ೫೫ ॥

ಭಾಗ್ಯೋದಯೇನ ಕೇನಾಪಿ ಮಮಾತ್ರ ತ್ವಂ ಸಮಾಗತಃ ।
ನಯ ಮಾಂ ಮದ್ಗೃಹಂ ಮಿತ್ರ ದ್ರವ್ಯಂ ಬಹು ದದಾಮಿ ತೇ ॥ ೫೬ ॥

ದಾಸ್ಯಾಮ್ಯಪಿ ಗೃಹಂ ಗತ್ವಾ ಕೃಪಾಂ ಕುರು ಕೃಪಾನಿಧೇ ।
ಇಹ ಭೂಭಾಗ ಉತ್ಖಾಯ ಗೃಹ್ಯತಾಂ ಮಾಮಕಂ ಧನಂ ॥ ೫೭ ॥

॥ ಶಿವಶರ್ಮೋವಾಚ ॥

ಇತ್ಯಾಕರ್ಣ್ಯ ಸುದುರ್ಬುದ್ಧಿರ್ಗ್ರಾನ್ಯೋ ವಿಷಯಲಂಪಟಃ ।
ಉವಾಚ ಧನಲುಬ್ಧಸ್ತಂ ತ್ವದುಕ್ತಂ ಸಾಧಯಾಮ್ಯಹಂ ॥ ೫೮ ॥

---

೫೪. ನನಗೆ ಜ್ವರ ಬಂದು ಮೂರು ದಿನಗಳಾದುವು. ನನ್ನ ಪ್ರಾಣಗಳು ಹೊರಟೇ ಹೋಗಿದ್ದುವು. ಆದರೂ ಮತ್ತೆ ಬಂದಿವೆ.

೫೫. ಎಲೈ ಸಾಧುವೆ! ನನಗೆ ಆಯುಸ್ಸು ಸ್ವಲ್ಪ ಭಾಗ ಉಳಿದಿವೆ.. ಯಮನ ಪಟ್ಟಣಕ್ಕೆ ಹೋಗಿ ಅದನ್ನು ನೋಡಿ ಮತ್ತೆ ಇಲ್ಲಿಗೆ ಬಂದಿದ್ದೇನೆ.

೫೬. ನನ್ನ ಅದೃಷ್ಟ ವಿಶೇಷದಿಂದಲೇ ನೀನು ಬಂದಿದ್ದೀಯೆ. ಎಲೈ ಮಿತ್ರನೇ! ನೀನು ನನ್ನನ್ನು ನನ್ನ ಮನೆಗೆ ಕರೆದುಕೊಂಡು ಹೋಗು. ನಿನಗೆ ಬಹುವಾದ ದ್ರವ್ಯವನ್ನು ಕೊಡುತ್ತೇನೆ.

೫೭. ಎಲೈ ದಯಾಳುವೆ! ನನ್ನ ಮೇಲೆ ದಯೆಯಿಡು. ಮನೆಗೆ ಹೋದ ಮೇಲೆಯೂ ನಿನಗೆ ಬಹುವಾಗಿ ಧನವನ್ನು ಕೊಡುತ್ತೇನೆ. ಇಲ್ಲಿ ಈ ಭೂಮಿಯನ್ನು ಅಗೆದು ನಾನು ಹೂತಿರುವ ಹಣವನ್ನು ತೆಗೆದುಕೊ.

೫೮. ಶಿವಶರ್ಮನು ಹೇಳಿದನು-ದುಷ್ಟನೂ ವಿಷಯಾಸಕ್ತನೂ ಆದ ಆತನು ಈ ಮಾತನ್ನು ಕೇಳಿ ಹಣದಲ್ಲಿ ಆಸೆಯುಳ್ಳವನಾಗಿ ನೀನು ಹೇಳಿದಂತೆ ಮಾಡುತ್ತೇನೆ. ಎಂದು ಆತನಿಗೆ ಹೇಳಿದನು.

॥ ಶಿವಶರ್ಮೋವಾಚ ॥

ಇತ್ಯುಕ್ತ್ವಾ ಧನಮುತ್ಥಾಯ ತಸ್ಮಾದ್ಭೂಭಾಗತಸ್ತದಾ ।
ಅಗ್ರತಃ ಸ್ಥಾಪಯಾಮಾಸ ಶರಭಸ್ಯಾಹ ಚಾಧ್ವಗಃ ॥ ೫೯ ॥

॥ ಅಧ್ವಗ ಉವಾಚ ॥

ಧನಮೇತದ್ವಿಶಾಂ ನಾಥ ತವ ಭೂಭಾಗತೋ ಮಯಾ ।
ನಿಷ್ಕಾಸಿತಂ ಪ್ರಯಚ್ಛಾಶು ಶಿಬಿಕಾನಯನಾಯ ಮೇ ॥
ಯಾಮಾರೋಪ್ಯ ಜ್ವರಾರ್ತಂ ತ್ವಾಂ ನಯಾಮಿ ತವ ಕೇತನಂ ॥ ೬೦ ॥

॥ ಶಿವಶರ್ಮೋವಾಚ ॥

ಇತ್ಯುಕ್ತಸ್ತೇನ ಸ ತದಾ ದದೌ ಸ್ವರ್ಣಪಲತ್ರಯಂ ।
ಸೋಽಪಿ ನೀತ್ವಾಪಿ ತದ್ದ್ರವ್ಯಂ ಯಯೌ ಲವನಪತ್ತನಂ ॥ ೬೧ ॥

ಉಷಿತ್ವಾ ರಾತ್ರಿಮೇಕಾಂ ತು ಶಿಬಿಕಾಂ ಸಪರಿಚ್ಛದಾಂ ।
ಸ ವಾಹಾನಾನಯತ್ತತ್ರ ದತ್ವಾ ಸ್ವರ್ಣಪಲಂ ತಥಾ ॥ ೬೨ ॥

---

೫೯. ಶಿವಶರ್ಮನು ಹೇಳಿದನು-ಆಗ ಆ ಪ್ರಯಾಣಿಕನು ಆ ಭೂಮಿಯಿಂದ ಹಣವನ್ನು ತೆಗೆದು ಆ ಶರಭನ ಮುಂದೆ ಇರಿಸಿ ಇಂತೆಂದನು.

೬೦. ಪ್ರಯಾಣಿಕನು ಹೇಳಿದನು ಎಲೈ ವೈಶ್ಯನೆ! ಈ ಭೂಮಿಯಿಂದ ನಿನ್ನ ಹಣವನ್ನು ಕಿತ್ತು ತೆಗೆದೆನು. ನನಗೆ ಕೊಂಚ ಹಣವನ್ನು ಕೊಡು. ಒಂದು ಪಲ್ಲಕ್ಕಿಯನ್ನು ತರಿಸಬೇಕು. ಜ್ವರದಿಂದ ತೊಂದರೆ ಪಡುತ್ತಿರುವ ನಿನ್ನನ್ನು ಅದರಲ್ಲಿ ಕೂರಿಸಿಕೊಂಡು ನಿನ್ನ ಮನೆಗೆ ಕರೆದುಕೊಂಡು ಹೋಗುತ್ತೇನೆ.

೬೧. ಶಿವಶರ್ಮನು ಹೇಳಿದನು-ಪ್ರಯಾಣಿಕನು ಹೀಗೆಂದೆನ್ನುತ್ತಲೂ ಆ ಶರಭನು ಮೂರು ಪಲಗಳನ್ನು ತೆಗೆದುಕೊಟ್ಟನು. ಅವನು ಆ ಹಣವನ್ನು ತೆಗೆದುಕೊಂಡು ಆ ಲವನ ಪಟ್ಟಣಕ್ಕೆ ಹೋದನು.

೬೨. ಆ ಊರಿನಲ್ಲಿ ಒಂದು ರಾತ್ರೆಯಿದ್ದು ಒಂದು ಪಲ್ಲಕ್ಕಿಯನ್ನೂ ಅದಕ್ಕೆ ಬೇಕಾದ ಹಾಸಿಗೆ ಹೊದ್ದಿಕೆಗಳನ್ನೂ ಅದನ್ನು ಹೊರುವವರನ್ನೂ ಒಂದು ಪಲಂ ಚಿನ್ನವನ್ನು ಕೊಟ್ಟು ಕರೆತಂದನು.

ಪಲದ್ವಯಂ ಗೃಹೀತಂ ತತ್ತೇನೈವಾಧರ್ಮಬುದ್ಧಿನಾ ।
ಆರೋಪ್ಯ ಶಿಬಿಕಾಂ ತಂ ತು ಶರಭಂ ವೈಶ್ಯಸತ್ತಮಂ ॥ ೬೩ ॥

ಪಾಂಥಸ್ಸ ಚಲಿತೋ ವಾಹಾಂಸ್ತ್ವರಯನ್ಕಾನ್ಯಕುಬ್ಜಕಂ ।
ಅಸ್ಯ ತೀರ್ಥವರಸ್ಯಾಥ ಕಮಂಡಲುಧೃತಂ ಜಲಂ ॥ ೬೪ ॥

ಪಾಯಯನ್ನಲ್ಪಮಲ್ಪಂ ತಂ ತೃಷಾರ್ತಂ ಸೋಧ್ವಗೋ ಯಯೌ ।
ಅಥ ತೇ ಸರಸಸ್ತೀರ ಉತ್ತೀರ್ಣಾ ಭೋಕ್ತುಮಧ್ವನಿ ॥ ೬೫ ॥

ಸ್ನಾತ್ವಾ ಭುಕ್ತ್ವಾ ಪುನಸ್ತಸ್ಮಾತ್ ಸ್ಥಾನಾಚ್ಚೇಲುಸ್ತ್ವರಾನ್ವಿತಾಃ ।
ಕಿಯತೀಂ ಭೂಮಿಮುಲ್ಲಂಘ್ಯ ತೃಷಾರ್ತಾಸ್ತೇ ಕಮಂಡಲೋಃ ॥ ೬೬ ॥

ಜಲಂ ಪೀತ್ವಾ ತೃಷಾರ್ತಂ ತಂ ಶರಭಂ ಚಾಪ್ಯಪಾಯಯನ್ ।
ಅಥ ಕಶ್ಚಿನ್ಮಹಾಭೀಮೋ ವಿಕಟೋ ನಾಮ ರಾಕ್ಷಸಃ ॥ ೬೭ ॥

---

೬೩-೬೪. ಆ ಅಧರ್ಮಬುದ್ಧಿಯುಳ್ಳ ಪ್ರಯಾಣಿಕನು ಎರಡು ಪಲಗಳನ್ನು ತಾನು ತೆಗೆದುಕೊಂಡನು. ಅನಂತರ ಆ ಶರಭಕನನ್ನು ಆ ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಅವರನ್ನು ಅವಸರಪಡಿಸುತ್ತ ಕಾನ್ಯಕುಬ್ಜಕ್ಕೆ ಹೊರಟನು. ದಾರಿಯಲ್ಲಿ ಬೇಕಾಗುವುದೆಂದು ಆ ತೀರ್ಥದ ನೀರನ್ನು ಕಮಂಡಲುವಿನಲ್ಲಿ ತುಂಬಿಕೊಂಡನು.

೬೫. ಈ ದಾರಿಗನು ಆ ಶರಭನಿಗೆ ಬಾಯಾರಿಕೆಯಾದಾಗ ಸ್ವಲ್ಪ ಸ್ವಲ್ಪ ನೀರನ್ನು ಕುಡಿಸುತ್ತ ಹೊರಟನು. ಕೊನೆಗೆ ಕೊಂಚ ದೂರ ಹೋಗುತ್ತಲೂ ದಾರಿಯಲ್ಲಿ ಅವರೆಲ್ಲರೂ ಊಟಮಾಡಲು ಒಂದು ಕೊಳದ ಬಳಿಯಲ್ಲಿ ಇಳಿದರು.

೬೬-೭೫. ಅಲ್ಲಿ ಸ್ನಾನಮಾಡಿ ಊಟಮಾಡಿ ಮತ್ತೆ ಅಲ್ಲಿಂದ ಬೇಗ ಬೇಗನೆ ಹೊರಟರು. ಸ್ವಲ್ಪ ದೂರ ಹೋಗಲು ಅವರೆಲ್ಲರೂ ಬಾಯಾರಿದವರಾಗಿ ಆ ಕಮಂಡಲುವಿನ ನೀರನ್ನು ಕುಡಿದರು. ಶರಭನಿಗೂ ಕುಡಿಸಿದರು. ಆ ಮೇಲೆ ಆ ದಾರಿಯಲ್ಲಿ ಒಬ್ಬ ಮಹಾ ಭಯಂಕರನಾದ ವಿಕಟನೆಂಬ ರಾಕ್ಷಸನು ಸಂಚರಿಸುತ್ತ

ವಿಚರನ್ನಿರ್ಜನೇ ರಣ್ಯೇ ಗಚ್ಛತಸ್ತಾನವೈಕ್ಷತ ।
ತಾನ್ ದೃಷ್ಟ್ವಾ ಸ ಕ್ಷುಧಾಕ್ರಾನ್ತೋ ವೇಗವಾನ್ ವಿವೃತಾನನಃ ॥ ೬೮ ॥

ಅಭಿದುದ್ರಾವ ಚರಣಪಾತೇನಾಕಂಪಯನ್ಮಹೀಂ ।
ಆಗತ್ಯ ತರಸಾ ಪಾರ್ಶ್ವೇ ತಾನ್ಸ್ವಾಹಾನ್ಪಥಿಕಂ ಚ ತಂ ॥ ೬೯ ॥

ಸ ಕೇಶೇಷು ಸಮಾದಾಯ ಭ್ರಾಮಯಾಮಾಸ ಖೇಚರಃ ।
ಗತಾಸೂನ್ ಭ್ರಾಮಣೇನೈವ ಭೂತಲೇ ತಾನಪಾತಯತ್ ॥ ೭೦ ॥

ಚಖಾದ ಪಿಶಿತಂ ತೇಷಾಂ ಪಪೌ ಕೋಶಾಚ್ಚ ಶೋಣಿತಂ ।
ಕುತ್ರ ಯಾಸ್ಯತಿ ರೋಗಾರ್ತೋ ನರೋಯಂ ಪುರತೋ ಮಮ ॥ ೭೧ ॥

ಏನಂ ತು ಭಕ್ಷಯಿಷ್ಯಾಮಿ ಪಶ್ಚಾದಂಬು ಪಿಬಾಮ್ಯಹಂ ।
ಇತಿ ಕೃತ್ವಾ ಮತಿಂ ವಾರಿ ತೀರ್ಥಸ್ಯಾಸ್ಯ ಕಮಂಡಲೋಃ ॥ ೭೨ ॥

ಮುಖೇ ಚಿಕ್ಷೇಪ ಸ ತದಾ ರಜನೀಚರಪುಂಗವಃ ।
ಕ್ಷಿಪ್ತಮಾತ್ರೇ ಜಲೇ ತಸ್ಯ ಪೂರ್ವಜನ್ಮಭವಾ ಸ್ಮೃತಿಃ ॥ ೭೩ ॥

---

ಜನವಿಲ್ಲದ ಈ ಕಾಡಿನಲ್ಲಿ ಪ್ರಯಾಣ ಮಾಡುತ್ತಿರುವ ಈ ಜನಗಳನ್ನು ನೋಡಿದನು. ಹಸಿವುಗೊಂಡಿದ್ದ ಆ ರಾಕ್ಷಸನು ಇವರನ್ನು ನೋಡಿ ಬಾಯನ್ನು ತೆರೆದುಕೊಂಡು ಹೆಜ್ಜೆಗಳ ಹೊಡೆತದಿಂದ ಭೂಮಿಯನ್ನು ನಡುಗಿಸುತ್ತ ಜಾಗ್ರತೆಯಾಗಿ ಓಡಿಬಂದನು. ಅವನು ಬೇಗನೆ ಹತ್ತಿರಕ್ಕೆ ಬಂದು ಆ ಹೊತ್ತಿರುವವರನ್ನೂ ಪ್ರಯಾಣಿಕನನ್ನೂ ಹಿಡಿದುಕೊಂಡು ಅವರ ಜುಟ್ಟನ್ನು ಹಿಡಿದು ಗರ್ರನೆ ತಿರುಗಿಸಿದನು. ಹೀಗೆ ತಿರುಗಿಸುತ್ತಿರುವಾಗಲೇ ಅವರ ಪ್ರಾಣಗಳು ಹೋದುವು. ಅನಂತರ ಅವರನ್ನು ನೆಲಕ್ಕೆ ಅಪ್ಪಳಿಸಿದನು ಅವರ ಮಾಂಸಗಳನ್ನು ತಿಂದನು. ಅವರ ರಕ್ತಕೋಶದಲ್ಲಿರುವ ರಕ್ತವೆಲ್ಲವನ್ನೂ ಕುಡಿದನು. ಈ ರೋಗಿಷ್ಠನು ಎಲ್ಲಿ ಹೋಗುವನು ? ಇವನು ನನ್ನ ಮುಂದೆಯೇ ಇರುವನು. ಇವನನ್ನು ಆಮೇಲೆ ತಿನ್ನುತ್ತೇನೆ. ಮೊದಲು ನೀರನ್ನು ಕುಡಿಯಬೇಕು. ಎಂದು ತಿಳಿದು ಈ ಕಮಂಡಲುವಿನಲ್ಲಿ ತುಂಬಿದ್ದ ನೀರನ್ನು ಆ ರಾಕ್ಷಸನು ಬಾಯಿಯೊಳಕ್ಕೆ ಹಾಕಿಕೊಂಡನು. ಬಾಯಿಗೆ ನೀರನ್ನು ಹಾಕಿಕೊಂಡ ಒಡನೆಯೇ ಹಿಂದಿನ ಜನ್ಮದ ಸ್ಮರಣೆಯು

ಜಾತಾ ಸ ತು ವಧಾತ್ತಸ್ಯ ಶರಭಸ್ಯ ನ್ಯವರ್ತತ |
ಪೂರ್ವಜನ್ಮಕೃತಂ ಪಾಪಂ ತದಪಿ ಸ್ಮೃತಿಮಾಗಮಾತ್ ॥ ೭೪ ॥

ಯೇನ ರಾಕ್ಷಸಭಾವಸ್ತು ಭೂತೋ ವಿಪ್ರೋಽಪ್ಯವಾದಪಿ |
ಸ್ಮೃತ್ವಾ ಪಾಪಮುಪೇತ್ಯಾಶು ಸಮೀಪೇ ಶರಭಸ್ಯ ತು |
ಉವಾಚ ಜ್ಞಾನಮಾಪನ್ನೋ ರಾಕ್ಷಸಃ ಪಿತರಂ ಮಮ ॥ ೭೫ ॥

॥ ರಾಕ್ಷಸ ಉವಾಚ ॥

ಭೋ ಭೋ ಮನುಷ್ಯಶಾರ್ದೂಲ ಕಸ್ತ್ವಂ ಕೇ ಚ ಜನಾ ಅಮೀ |
ಭಕ್ಷಿತಾ ಯೇ ಮಯಾ ಘೋರರೂಪೇಣಾಧಮರಕ್ಷಸಾ ॥ ೭೬ ॥

ಕಸ್ಯ ತೀರ್ಥವರಸ್ಯೇದಂ ಜಲಂ ಯಸ್ಯ ಪ್ರಭಾವತಃ |
ಪಾಪಿನೋಽಪಿ ಸ್ಮೃತಿರ್ಜಾತಾ ಪೂರ್ವಜನ್ಮಭವಾ ಮಮ ॥ ೭೭ ॥

॥ ವೈಶ್ಯ ಉವಾಚ ॥

ವೈಶ್ಯೋಽಹಂ ರಾಕ್ಷಸಶ್ರೇಷ್ಠ ಕಾನ್ಯಕುಬ್ಜೇ ಗೃಹಂ ಮಮ |
ತೀರ್ಥಾನಿ ಪರ್ಯಟನ್ನಿಂದ್ರಪ್ರಸ್ಥೇಽಹಂ ಸಮುಪಾಗತಃ ॥ ೭೮ ॥

---

ಉಂಟಾಯಿತು. ಆಗ ಆ ಶರಭನನ್ನು ಕೊಲ್ಲಬಾರದೆಂದು ತಿಳಿದು ಸುಮ್ಮನಾದನು. ಒಡನೆಯೇ ತಾನು ಹಿಂದಿನ ಜನ್ಮದಲ್ಲಿ ಮಾಡಿದ ಪಾಪವೂ ಕೂಡ ಸ್ಮರಣೆಗೆ ಬಂದಿತು. ಆ ಪಾಪದಿಂದಲೇ ತಾನು ವಿಪ್ರನಾಗಿದ್ದರೂ ರಾಕ್ಷಸನಾಗಿದ್ದೇನೆ. ಎಂಬುದು ಜ್ಞಾಪಕಕ್ಕೆ ಬಂದೊಡನೆಯೇ ಆ ಪಾಪಕಾರ್ಯವನ್ನು ಸ್ಮರಿಸಿಕೊಳ್ಳುತ್ತ ಶರಭನ ಹತ್ತಿರಕ್ಕೆ ಬಂದು ಜ್ಞಾನದಿಂದ ಆ ರಾಕ್ಷಸನು ಇಂತೆಂದನು.

೭೬. ರಾಕ್ಷಸನು ಹೇಳಿದನು-ಎಲೈ ಮನುಷ್ಯಶ್ರೇಷ್ಠನೇ ! ನೀನಾರು ? ಘೋರವಾದ ಈ ರಾಕ್ಷಸ ರೂಪಿನಿಂದ ತಿಂದೆನಲ್ಲ! ಅವರುಗಳು ಯಾರು ?

೭೭. ಈ ನೀರು ಯಾವ ತೀರ್ಥದಿಂದ ತಂದುದು ? ಈ ತೀರ್ಥದ ಪ್ರಭಾವದಿಂದ ಪಾಪಿಯಾದ ನನಗೂ ಕೂಡ ಪೂರ್ವಜನ್ಮದ ಸ್ಮರಣೆಯುಂಟಾಗಿದೆಯಲ್ಲ ?

೭೮. ವೈಶ್ಯನು ಹೇಳಿದನು-ಎಲೈ ರಾಕ್ಷಸನೇ ! ನಾನು ವೈಶ್ಯನು. ನನ್ನ ಮನೆಯು ಕಾನ್ಯಕುಬ್ಜದಲ್ಲಿದೆ. ತೀರ್ಥಗಳನ್ನು ಸೇವಿಸುತ್ತ ಸುತ್ತುತ್ತ ಹಾಗೆಯೇ ಈ ಇಂದ್ರ ಪ್ರಸ್ಥಕ್ಕೆ ಬಂದೆನು.

ತತ್ರಾಹಮಭವಂ ದುಃಖೀ ಜ್ವರೇಣ ವಿಧಿಯೋಗತಃ ।
ತತೋ ಮೇ ಬುದ್ಧಿರುತ್ಪನ್ನಾ ಗಂತುಂ ಗೃಹಮಸತ್ಪಥಾ ॥ ೭೯ ॥

ತತ್ರ ಕಶ್ಚಿತ್ಸಮಾಯಾತಃ ಪಾಂಥೋ ವರ್ಷೇಣ ಪೀಡಿತಃ ।
ಪ್ರಾರ್ಥಿತಸ್ಸ ಮಯಾನೀಯ ಶಿಬಿಕಾಂ ಮಾಂ ಗೃಹಂ ನಯ ॥ ೮೦ ॥

ಸ ಚಾಯಂ ಶಿಬಿಕಾಂ ಪಾಂಥಃ ಸಮುಪಾನೀಯ ಸತ್ವರಃ ।
ಮಾಮಾರೋಪ್ಯ ಚ ತಾಂ ಧೀರಶ್ಚಲಿತೋ ಮದ್ಗೃಹಂ ಪ್ರತಿ ॥ ೮೧ ॥

ಸ ಪಾಂಥಸ್ತೇ ಚ ಶಿಬಿಕಾವಾಹಾಸ್ಸಂಪ್ರತಿಭಕ್ಷಿತಾಃ ।
ತ್ವಯಾ ಜಲಮಿದಂ ಯಸ್ಯ ತೀರ್ಥಸ್ಯಾಪಿ ಚ ತಚ್ಛೃಣು ॥ ೮೨ ॥

ಇಂದ್ರಸ್ಯ ಖಾಂಡವವನೇ ಯಮುನಾಸ್ತಿ ಸರಿದ್ವರಾ ।
ತತ್ತೀರೇಸ್ತಿ ಹರಿಪ್ರಸ್ಥಂ ತೀರ್ಥಂ ತೀರ್ಥೋತ್ತಮೋತ್ತಮಂ ॥ ೮೩ ॥

---

೭೯ ಅಲ್ಲಿ ನನ್ನ ದುರದೃಷ್ಟದಿಂದ ನನಗೆ ಜ್ವರವು ಬಂದು ಕಷ್ಟಕ್ಕೊಳಗಾದೆನು. ಆಗ ನನಗೆ ಮನೆಗೆ ಹೋಗಬೇಕೆಂಬ ಬುದ್ಧಿಯು ಹುಟ್ಟಿತು.

೮೦. ಆಗ ಅಲ್ಲಿಗೆ ಮಳೆಯಿಂದ ತೊಂದರೆಪಟ್ಟ ಒಬ್ಬ ಪ್ರಯಾಣಿಕನು ಬಂದನು. ಅವನನ್ನು ನಾನು ಅಯ್ಯಾ ನೀನು ಒಂದು ಪಲ್ಲಕ್ಕಿಯನ್ನು ತಂದು ನನ್ನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗೆಂದು ಕೇಳಿಕೊಂಡೆನು.

೮೧. ಆಗ ಆ ಪ್ರಯಾಣಿಕನು ಬೇಗನೆ ಒಂದು ಪಲ್ಲಕ್ಕಿಯನ್ನು ತಂದು ಅದರಲ್ಲಿ ನನ್ನನ್ನು ಕೂರಿಸಿಕೊಂಡು ನನ್ನ ಮನೆಯ ಕಡೆಗೆ ಹೊರಟನು.

೮೨. ಆ ಪ್ರಯಾಣಿಕನನ್ನೂ ಪಲ್ಲಕ್ಕಿ ಹೊರುವವರನ್ನೂ ನೀನು ತಿಂದುಬಿಟ್ಟೆ. ನೀರನ್ನು ಕುಡಿದುಬಿಟ್ಟೆ. ಈ ನೀರುಯಾವುದೆಂದು ಹೇಳುತ್ತೇನೆ. ಕೇಳು.

೮೩. ಇಂದ್ರನ ಖಾಂಡವ ವನದಲ್ಲಿ ಯಮುನೆಯೆಂಬ ಶ್ರೇಷ್ಠವಾದ ನದಿಯಿದೆ. ಆ ನದಿಯ ತೀರದಲ್ಲಿ ಇಂದ್ರ ಪ್ರಸ್ಥವೆಂಬ ಒಂದು ಉತ್ತಮ ತೀರ್ಥವಿದೆ.

ಸುರಾಚಾರ್ಯಸ್ಯ ತತ್ರಾಸ್ತಿ ತೀರ್ಥಂ ಸರ್ವಾರ್ಥಸಾಧಕಂ ।
ನಿಗಮೋದ್ಬೋಧಕಂ ಜಾತಾ ಸ್ಮೃತಿಸ್ತೇ ಯಜ್ಜಲಾಶ್ರಯಾತ್ ॥ ೮೪ ॥

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಹಮಿಹ ತ್ವಯಾ ।
ಪೃಚ್ಛಾಮಿ ತ್ವಾಮಹಂ ಕಿಂಚಿತ್ತದ್ವದಾಶು ನಿಶಾಚರ ॥ ೮೫ ॥

ಪೂರ್ವಜನ್ಮಕೃತಂ ಕರ್ಮ ಸ್ಮರಸಿ ತ್ವಮಿಹಾಧುನಾ ।
ವದ ಕಿಂ ತೇ ಕೃತಂ ಪಾಪಂ ಯೇನ ಜಾತೋಽಸಿ ರಾಕ್ಷಸಃ ॥ ೮೬ ॥

॥ ರಾಕ್ಷಸ ಉವಾಚ ॥

ಪುರಾಹಮಭವಂ ವಿಪ್ರಃ ಪುಣ್ಯೇ ವೇದವಿದಾಂ ಕುಲೇ ।
ದುರಾಚಾರೋ ಹ್ಯಧರ್ಮಾತ್ಮಾ ಶೃಣು ಸರ್ವಂ ವದಾಮಿ ತೇ ॥ ೮೭ ॥

ಕ್ರೀಡತಾ ಹಿ ಮಯಾ ನಿತ್ಯಂ ದ್ಯೂತೇನ ಸಹ ತದ್ವಿದೈಃ ।
ಹಾರಿತಂ ದ್ರವಿಣಂ ಭೂರಿ ಸ್ವಕೀಯಂ ಪಿತುರೇವ ಚ ॥ ೮೮ ॥

---

೮೪. ಅಲ್ಲಿ ಬೃಹಸ್ಪತಿಯು ಸೃಷ್ಟಿಸಿರುವ ತೀರ್ಥವೊಂದಿರುವುದು ಅದು ಎಲ್ಲಾ ಇಷ್ಟಾರ್ಥಗಳನ್ನೂ ಕೊಡುತ್ತದೆ. ಅದರ ಹೆಸರು ನಿಗಮೋದ್ಬೋಧಕ ವೆಂದು. ಅದರ ನೀರನ್ನು ಕುಡಿದುದರಿಂದಲೇ ನಿನಗೆ ಈ ರೀತಿಯಾದ ಜ್ಞಾನವು ಉಂಟಾಯಿತು.

೮೫. ಎಲೈ ರಾಕ್ಷಸನೆ ! ನೀನು ಕೇಳಿದುದನ್ನೆಲ್ಲಾ ನಾನು ಹೇಳಿದೆನು. ನಾನು ನಿನ್ನಲ್ಲಿ ಕೆಲವು ವಿಷಯಗಳನ್ನು ಕೇಳುತ್ತೇನೆ. ಅದನ್ನು ಜಾಗ್ರತೆ ಯಾಗಿ ಹೇಳು.

೮೬. ನೀನು ಈಗ ಪೂರ್ವಜನ್ಮದ ಪಾಪಗಳನ್ನು ಸ್ಮರಿಸಿಕೊಳ್ಳುತ್ತಿದ್ದೀಯೆ. ನೀನು ಪೂರ್ವಜನ್ಮದಲ್ಲಿ ಯಾವ ಪಾಪವನ್ನು ಮಾಡಿದ್ದೆ ? ಯಾತರಿಂದ ನಿನಗೆ ಈ ರಾಕ್ಷಸ ಜನ್ಮವು ಬಂದಿತು.

೮೭. ರಾಕ್ಷಸನು ಹೇಳಿದನು-ಪೂರ್ವದಲ್ಲಿ ವೇದವನ್ನು ಓದಿದ ಪುಣ್ಯಕರವಾದ ಬ್ರಾಹ್ಮಣರ ಒಂದು ವಂಶದಲ್ಲಿ ನಾನು ಹುಟ್ಟಿದೆನು. ಆದರೆ ನಾನು ದುರಾಚಾರಿಯೂ ದುಷ್ಟನೂ ಅಧರ್ಮದಲ್ಲಿ ನಿರತನೂ ಆದೆನು. ಅದೆಲ್ಲವನ್ನೂ ಹೇಳುತ್ತೇನೆ. ಕೇಳು.

೮೮. ನಾನು ಪ್ರತಿದಿನವೂ ಜೂಜುಗಾರರೊಡನೆ ಜೂಜಾಡುತ್ತ ನನ್ನ ಮತ್ತು ನನ್ನ ತಂದೆಯ ಹಣವೆಲ್ಲವನ್ನೂ ನಾಶಮಾಡಿದೆನು.

ಪಿತ್ರಾ ನಿವೇದ್ಯ ಭೂಪಾಯ ಮಾಮುಕಂ ಕರ್ಮ ತಜ್ಜನೈಃ ।
ಪುರಾನ್ನಿಸ್ಸಾರಿತೋ ನಿಸ್ವೋಽ ಗತೋಽಹಂ ಗ್ರಾಮಮಂತಿಕೇ ॥ ೮೯ ॥

ತತ್ರಾಸೀನ್ಮೇ ಸಖಾ ನಾಮ ದೇವಕೋ ಬ್ರಾಹ್ಮಣೋತ್ತಮಃ ।
ತೇನಾಹಂ ರಕ್ಷಿತೋ ಗೇಹೇ ಕುರ್ವತಾ ಚಿರಮಾದರಂ ॥ ೯೦ ॥

ವಸಂಸ್ತತ್ರ ಸುಖೇನಾಹಂ ತದ್ಭಾರ್ಯಾಂ ರೂಪಶಾಲಿನೀಂ ।
ಕಾಮಾತುರೋಽಹಮಭಜಂ ಬಲಾನ್ಮಿತ್ರೇ ಗತೇ ಕ್ವಚಿತ್ ॥ ೯೧ ॥

ಸಾ ಮೃತಾ ತತ್ಕ್ಷಣಾತ್ಸಾಧ್ವೀ ಭಕ್ಷಯಿತ್ವಾ ಮಹಾವಿಷಂ ।
ತಾಂ ದೃಷ್ಟ್ವಾ ತಮಸಾ ಯುಕ್ತೇ ನಿಶೀಥೇಽಹಂ ಪಲಾಯಿತಃ ॥ ೯೨ ॥

ಪಲಾಯಮಾನಸ್ತ್ವರಸಾ ಧೃತೋಽಹಂ ರಾಜಕಿಂಕರೈಃ ।
ಚೋರೋಽಯಮಿತಿ ಖಡ್ಗೇನ ಚಿಚ್ಛಿದುಸ್ತೇ ಶಿರೋ ಮಮ ॥ ೯೩ ॥

---

೮೯. ನನ್ನ ತಂದೆಯು ನನ್ನ ಆ ಕೆಟ್ಟ ಕೆಲಸವನ್ನು ರಾಜನಿಗೆ ತಿಳಿಸಿ ಅವನ ಕಡೆಯವರಿಂದ ನನ್ನ ಹತ್ತಿರ ಒಂದು ಕಾಸೂ ಇಲ್ಲದಂತೆ ಮಾಡಿಸಿ ಊರಿನಿಂದ ಹೊರಕ್ಕೆ ಓಡಿಸಿದನು. ಆಗ ನಾನು ಪಕ್ಕದಲ್ಲಿಯೇ ಇರುವ ಒಂದು ಊರಿಗೆ ಹೋದೆನು.

೯೦. ಅಲ್ಲಿ ನನಗೆ ದೇವಕನೆಂಬ ಬ್ರಾಹ್ಮಣನು ಸ್ನೇಹಿತನಾದವನು ಇದ್ದನು. ಅವನು ನನ್ನನ್ನು ಆದರಿಸಿ ಅಲ್ಲಿ ಬಹು ದಿನಗಳ ಕಾಲ ಇಟ್ಟು ಕೊಂಡಿದ್ದನು.

೯೧ ಅಲ್ಲಿಯೇ ಬಹುಕಾಲ ವಾಸಿಸುತ್ತಿರಲು ರೂಪವತಿಯಾದ ಆತನ ಹೆಂಡತಿಯ ಮೇಲೆ ಮನಸ್ಸು ಹುಟ್ಟಿ ಕಾಮಾತುರುತೆಯಿಂದ ಆ ಸ್ನೇಹಿತನು ಮನೆಯಲ್ಲಿಲ್ಲದಿರುವಾಗ ಬಲಾತ್ಕಾರದಿಂದ ಆಕೆಯನ್ನು ರಮಿಸಿದೆನು

೯೨. ಒಡನೆಯೇ ಮಹಾವಿಷವನ್ನು ಕುಡಿದು ಆಕೆಯು ಸತ್ತು ಹೋದಳು. ಅದನ್ನು ನೋಡಿ ನಾನು ರಾತ್ರಿ ಕತ್ತಲೆಯಾದ ಮೇಲೆ ಹೊರಟು ಹೋದೆನು.

೯೩. ಜಾಗ್ರತೆಯಾಗಿ ಓಡಿ ಹೋಗುತ್ತಿರಲು ರಾಜನ ಭಟರು ನನ್ನನ್ನು ಹಿಡಿದುಕೊಂಡರು. ಕಳ್ಳನೆಂಬದಾಗಿ ತಿಳಿದು ಕತ್ತಿಯಿಂದ ನನ್ನ ತಲೆಯನ್ನು ಕತ್ತರಿಸಿ ಹಾಕಿದರು.

ಮೃತಂ ಮಾಂ ಯಾತನಾದೇಹಮಾವೇಶ್ಯ ಯಮಕಿಂಕರಾಃ ।
ರೌರವೇ ನಿರಯೇ ಘೋರೇ ಚಿಕ್ಷಿಪುರ್ಯಮಶಾಸನಾತ್ ॥ ೯೪ ॥

ಷಷ್ಟಿವರ್ಷಸಹಸ್ರಾಣಿ ತತ್ರಾಹಂ ತೀವ್ರಯಾತನಾಂ ।
ಭುಕ್ತ್ವಾ ತೇನೈವ ಪಾಪೇನ ರಾಕ್ಷಸತ್ವಮುಪಾಗತಃ ॥ ೯೫ ॥

ಶತವರ್ಷಾಣ್ಯತೀತಾನಿ ರಾಕ್ಷಸತ್ವೇ ವಿಶಾಂ ಪತೇ ॥
ವದಾಮಿ ತಮುಪಾಯಂ ಮೇ ಯೇನಾಸ್ಮಾನ್ಮುಕ್ತಿಮಾಪ್ನುಯಾಂ ॥೯೬॥

ಪುಣ್ಯಂ ತದಪಿ ತೇ ಸಾಧೋ ವದಾಮಿ ಶೃಣು ಸಾದರಂ ।
ಯೇನ ತೀರ್ಥವರಸ್ಯೇದಂ ಜಲಂ ಮಮ ಮುಖೋದ್ಗತಂ ॥ ೯೭ ॥

ತತ್ರೈವ ಜನ್ಮನಿ ಮಯಾ ಕೃತ್ವಾ ಹರಿದಿನವ್ರತಂ ।
ಸಂಸರ್ಗಾನ್ನೇಚ್ಛಯಾ ವೈಶ್ಯ ರಾತ್ರೌ ಜಾಗರಣಂ ಕೃತಂ ॥ ೯೮ ॥

---

೯೪. ನಾನು ಸತ್ತಮೇಲೆ ನನ್ನ ಯಾತನಾ ದೇಹದಲ್ಲಿ ನನ್ನ ಜೀವವನ್ನು ನುಗ್ಗಿಸಿ ಯಮಕಿಂಕರರು ಯಮನ ಅಪ್ಪಣೆಯಂತೆ ಘೋರವಾದ ರೌರವ ನರಕಕ್ಕೆ ತಳ್ಳಿದರು.

೯೫. ಅರವತ್ತು ವರ್ಷಗಳವರೆಗೂ ಅತಿ ಆ ತೀವ್ರವಾದ ಯಾತನೆಯನ್ನು ಅನುಭವಿಸಿ ಅದೇ ಪಾಪದಿಂದಲೇ ರಾಕ್ಷಸ ಜಾತಿಯಲ್ಲಿ ಹುಟ್ಟಿದೆನು.

೯೬. ಎಲೈ ವೈಶ್ಯನೆ ! ಈ ರಾಕ್ಷಸ ಜನ್ಮದಲ್ಲಿಯೂ ನನಗೆ ನೂರು ವರ್ಷಗಳು ಕಳೆದುವು. ಆದರಿಂದ ಮುಕ್ತಿಹೊಂದುವ ಉಪಾಯವನ್ನು ಹೇಳುತ್ತೇನೆ. ಕೇಳು.

೯೭. ಈ ಉತ್ತಮವಾದ ತೀರ್ಥವು ನನ್ನ ಬಾಯಿಗೆ ಬಿದ್ದುದರಿಂದ ನನಗೆ ಸ್ಮೃತಿ ಬಂದು ನನ್ನ ವಿಷಯವನ್ನು ಹೇಳುತ್ತೇನೆ. ಆದರದಿಂದ ಕೇಳು.

೯೮. ಆ ಬ್ರಾಹ್ಮಣ ಜನ್ಮದಲ್ಲಿಯೇ ಒಂದು ದಿನ ಏಕಾದಶಿ ವ್ರತವನ್ನು ಮಾಡಿದೆನು. ಅದೂ ಮತ್ತೊಬ್ಬರ ಸಹವಾಸದಿಂದ ಮಾಡಿದೆನೇ ಹೊರತು ನನ್ನ ಇಚ್ಛೆಯಿಂದ ಮಾಡಲಿಲ್ಲ. ರಾತ್ರಿಯಲ್ಲಿ ಜಾಗರಣೆಯನ್ನೂ ಮಾಡಿದೆನು.

ದ್ವಾದಶ್ಯಾಮಥ ಸಂಸ್ನಾತ್ವಾ ಭೋಕ್ತುಂ ಮಯಿ ಸಮುದ್ಯತೇ ।
ಮದ್ಗೃಹೇ ಕಶ್ಚಿದಾಯಾತೋ ವೈಷ್ಣವೋ ವಿಷ್ಣುರೂಪಧೃಕ್ ॥ ೯೯ ॥

ಕುಪಿತೋಽಹಂ ತಮಾಲೋಕ್ಯ ದುರ್ವಚೋಽವದಮುಗ್ರತಃ ।
ಕ್ವ ಗಚ್ಛಸಿ ದುರಾಚಾರ ದಾಂಭಿಕ ಸ್ತ್ರೀಜನಾಂತರೇ ॥ ೧೦೦ ॥

ಇತ್ಯುಕ್ತಸ್ಸ ಮಯಾ ಧೀರಸ್ತುಲ್ಯೋ ಮಾನಾಪಮಾನಯೋಃ ।
ತೂಷ್ಣೀಮೇವ ನಿಕೇತಾನ್ಮೇ ನಿರ್ಗತ್ಯ ಚಲಿತೋ ಯದಾ ॥ ೧೦೧ ॥

ತದಾಭಿ ಮುಖಮಾಯಾನ್ತೀ ಪತ್ನೀ ಮಮ ಪತಿವ್ರತಾ ।
ಪತಿತ್ವಾ ಪಾದಯೋಸ್ತಸ್ಯ ತಂ ಸಾಧುಂ ಗೃಹಮಾನಯತ್ ॥ ೧೦೨ ॥

ಮಯಾಪಮಾನಿತಸ್ಯಾಪಿ ಸ ಕ್ರೋಧೋಭೂನ್ಮಹಾತ್ಮನಃ ।
ತಯಾದೃತಸ್ಯಾಪ್ಯಾನಂದೋ ಯತಸ್ಸೋಽರಿಸುಹೃತ್ಸಮಃ ॥ ೧೦೩ ॥

---

೯೯. ದ್ವಾದಶಿಯ ದಿನ ಸ್ನಾನಮಾಡಿ ಊಟಕ್ಕೆ ಕೂರುವ ಸಮಯದಲ್ಲಿ ನನ್ನ ಮನೆಗೆ ಒಬ್ಬ ವಿಷ್ಣುವಿನ ರೂಪವನ್ನು ಹೊಂದಿದ ವೈಷ್ಣವನು ಬಂದನು.

೧೦೦. ಆಗ ನಾನು ಕೋಪಗೊಂಡು ಅವನನ್ನು ಕುರಿತು ಕೆಟ್ಟ ಮಾತುಗಳನ್ನಾಡಿದೆನು. ಎಲೈ ದುರಾಚಾರವುಳ್ಳವನೇ ! ದಂಭಾಚಾರವುಳ್ಳವನೇ ! ಹೆಂಗಸರಿರುವಾಗ ಮಧ್ಯದಲ್ಲಿ ಎಲ್ಲಿ ಹೋಗುತ್ತೀಯೆ ?

೧೦೧. ನಾನು ಹೀಗೆಂದೆನ್ನಲು ಆ ಧೀರನು ಮಾನಾಪಮಾನಗಳನ್ನು ಲೆಕ್ಕಿಸದವನಾಗಿ ಮಾತನಾಡದೆ ನನ್ನ ಮನೆಯಿಂದ ಹೊರಕ್ಕೆ ಹೊರಟನು.

೧೦೨. ಅವನು ಹೊರಟಾಗ ಮಹಾ ಪತಿವ್ರತೆಯಾದ ನನ್ನ ಹೆಂಡತಿಯು ಅವನ ಎದುರಿಗೆ ಸಿಕ್ಕಿದಳು. ಇವನು ಹೊರಟು ಹೋಗುತ್ತಿರುವುದನ್ನು ನೋಡಿ ಅವನ ಪಾದಗಳ ಮೇಲೆ ಬಿದ್ದು ಕೇಳಿಕೊಂಡು ಮತ್ತೆ ಮನೆಗೆ ಕರೆತಂದಳು.

೧೦೩. ನಾನು ಅಪಮಾನ ಮಾಡಿದರೂ ಆತನಿಗೆ ಕೋಪವು ಬರಲಿಲ್ಲ. ನನ್ನ ಹೆಂಡತಿಯು ಗೌರವಿಸಿ ಕರೆತಂದರೂ ಆನಂದವೂ ಉಂಟಾಗಲಿಲ್ಲ. ಆ ರೀತಿಯಾಗಿ ಆತನು ಶತ್ರುಮಿತ್ರರಲ್ಲಿ ಒಂದೇ ಸಮನಾಗಿದ್ದನು.

ತಮರ್ಚಯಿತ್ವಾ ವಿಧಿವದ್ವಿಷ್ಟರೇ ಚೋಪವೇಶ್ಯ ಸಾ ।
ಭೋಜ್ಯಂ ಭೋಜಯ ಜೀವೇಶ ಜಯತಾಚ್ಛುವನದ್ವಯಂ ॥ ೧೦೪ ॥

ಇತ್ಯುಕ್ತೋಽಹಂ ತಯಾ ಸಾಧ್ವ್ಯಾ ನ್ಯಗದಂ ತಂ ಮಹಾಶಯಂ ।
ಮ್ಲಾನವಕ್ತ್ರಃ ಪ್ರಸನ್ನಾಸ್ಯಮುತ್ತಿಷ್ಠ ಶಮಯ ಕ್ಷುಧಾಂ ॥ ೧೦೫ ॥

ಇತ್ಯುಕ್ತ್ವಾ ತಸ್ಯ ಚರಣೌ ನೋದಿತಸ್ತನುಮಧ್ಯಯಾ ।
ಸಂಪ್ರಕ್ಷಾಲಯಂ ಪುನಸ್ತಂ ತು ನಿವೇಶ್ಯಾಸನಮುತ್ತಮಂ ॥ ೧೦೬ ॥

ಅದದಾಂ ಪಾತ್ರಮನ್ನೇನ ಪೂರ್ಣಂ ತಸ್ಮೈ ವಿವೇಕಿನೇ ।
ಜಲಂ ಚ ತತ್ಕರೇ ಸಾಧ್ವ್ಯಾ ಪ್ರೇರಿತೋಽಹಂ ತಯಾ ಮುಹುಃ ॥ ೧೦೭ ॥

ಉಪಭುಜ್ಯ ಸ ಧರ್ಮಾತ್ಮಾ ಸ್ವೈರಂ ವಿಗತವಿಕ್ರಿಯಃ ।
ರಾಮ ರಾಮ ಹರೇ ಕೃಷ್ಣ ಜಪನ್ನಿತಿ ಜಗಾಮ ಹ ॥ ೧೦೮ ॥

---

೧೦೪. ಆಕೆಯು ಅವನನ್ನು ಕ್ರಮವಾಗಿ ಪೂಜಿಸಿ ಮಣೆಯ ಮೇಲೆ ಕೂರಿಸಿ ನನ್ನನ್ನು ಕುರಿತು ಎಲೈ ಜೀವೇಶನೆ! ಊಟಮಾಡಿಸು. ಎರಡು ಲೋಕವೂ ನಮಗೆ ಶುಭವನ್ನುಂಟುಮಾಡಲಿ.

೧೦೫. ನನ್ನ ಹೆಂಡತಿಯು ಈ ರೀತಿಯಾಗಿ ನನಗೆ ಹೇಳಲು ಆಗ ನಾನು ಅವಮಾನದಿಂದ ಮುಖದಲ್ಲಿ ಕಾಂತಿಯಿಲ್ಲದವನಾಗಿ ಯಾವಾಗಲೂ ಸಂತೋಷ ದಿಂದಲೇ ಇರುವ ಆತನನ್ನು ಕುರಿತು ಎಲೈ ಮಹಾತ್ಮನೇ! ಏಳು. ಹಸಿವನ್ನು ಅಡಗಿಸಿಕೋ. ಎಂದೆನು.

೧೦೬-೧೦೭. ಅನಂತರ ನನ್ನ ಹೆಂಡತಿಯು ಹೇಳಿದಂತೆ ಆತನ ಕಾಲುಗಳನ್ನು ತೊಳೆದು ಒಳ್ಳೆಯ ಪೀಠವನ್ನು ಹಾಕಿ ಅದರಮೇಲೆ ಕೂರಿಸಿ ಅನ್ನದಿಂದ ತುಂಬಿದ ತಟ್ಟೆಯನ್ನು ಆತನ ಮುಂದಿಟ್ಟು ಮತ್ತೆ ನನ್ನ ಹೆಂಡತಿಯು ಹೇಳಿದಂತೆ ಆತನಿಗೆ ಆ ಪೋಶನವನ್ನು ಹಾಕಿದೆನು.

೧೦೮. ಆಗ ಆತನು ಮನಸ್ಸಿನಲ್ಲಿ ಯಾವ ವಿಕಾರವನ್ನು ಹೊಂದದೆ ತೃಪ್ತಿಯಾಗಿ ಊಟಮಾಡಿ ರಾಮ ರಾಮ ಕೃಷ್ಣ ಕೃಷ್ಣ ಎಂದು ಜಪಿಸುತ್ತ ಹೊರಟು ಹೋದನು.

ಕೃತಂ ಪುಣ್ಯಮಿದಂ ವೈಶ್ಯ ನೋದಿತೇನ ಮಯಾ ಸ್ತ್ರಿಯಾ ।
ಪೂರ್ವಜನ್ಮನಿ ಯೇನೇದಂ ಪ್ರಾಪಿತಂ ತೀರ್ಥವಾರಿ ಮೇ ॥ ೧೦೯ ॥

॥ ಶಿವಶರ್ಮೋವಾಚ ॥

ವಿಷ್ಣುಶರ್ಮನ್ನಿದಂ ವಾಕ್ಯಮುಕ್ತ್ವಾ ತಿಷ್ಠತಿ ರಾಕ್ಷಸೇ ।
ಪಥಿಕಃ ಸ ಚ ತೇ ವಾಹಾಃ ಪ್ರಾಹುಸ್ತೇ ದಿವ್ಯದೇಹಿನಃ ॥ ೧೧೦ ॥

॥ ಪಥಿಕವಾಹಾ ಊಚುಃ ॥

ಭೋ ಭೋ ವಿಶಾಂ ಪತೇ ಸಾಧೋ ಪ್ರಾಪ್ತಾ ಅಪ್ಯಪಮೃತ್ಯುತಾಂ ।
ತ್ವತ್ಪ್ರಸಾದಾದಿದಂ ವಾರಿ ಪೀತ್ವಾ ದೇವತ್ವಮಾಗತಾಃ ॥ ೧೧೧ ॥

ತ್ವತ್ಸಂಗೇ ಧನಲೋಭೇನ ವಿಟ್‌ಪತೇ ಚಲಿತಾ ಯತಃ ।
ವಿಗತಾ ನ ಧಾನಕಾಂಕ್ಷಾ ಮರಣಾವಸರೇಽಪ್ಯತಃ ॥ ೧೧೨ ॥

---

೧೦೯. ಎಲೈ ವೈಶ್ಯನೆ ! ಪೂರ್ವದಲ್ಲಿ ಈ ಪುಣ್ಯವನ್ನು ನನ್ನ ಹೆಂಡತಿಯಿಂದ ಪ್ರೇರಿಸಲ್ಪಟ್ಟವನಾಗಿ ಮಾಡಿದೆನು. ಆದ್ದರಿಂದಲೇ ನನಗೆ ಈ ತೀರ್ಥೋದಕವು ಸಿಕ್ಕಿತು.

೧೧೦. ಶಿವಶರ್ಮನು ಹೇಳಿದನು–ಎಲೈ, ವಿಷ್ಣುಶರ್ಮನೆ! ರಾಕ್ಷಸನು ನನ್ನ ತಂದೆಯೊಡನೆ ಹೀಗೆಂದು ಹೇಳಿ ನಿಂತಿರಲು ಅವನು ತಿಂದಿದ್ದ ಆ ಪ್ರಯಾಣಿಕನೂ ಪಲ್ಲಕ್ಕಿ ಹೊರುವವರೂ ದಿವ್ಯವಾದ ದೇಹವನ್ನು ಹೊಂದಿ ನಮ್ಮನ್ನು ಕುರಿತು ಇಂತೆಂದರು

೧೧೧. ಪ್ರಯಾಣಿಕನೂ ಪಲ್ಲಕ್ಕಿ ಹೊರುವವರೂ ಹೇಳಿದರು-ಎಲೈ ವೈಶ್ಯ ಪತಿಯಾದ ಸಾಧುವೆ! ನಾವುಗಳು ಅಪಮೃತ್ಯುವನ್ನು ಹೊಂದಿದರೂ ಕೂಡ ನಿನ್ನ ಅನುಗ್ರಹದಿಂದ ಕಮಂಡಲುವಿನಲ್ಲಿರುವ ಈ ತೀರ್ಥವನ್ನು ಕುಡಿದು ದೇವತ್ವವನ್ನು ಹೊಂದಿದೆವು.

೧೧೨. ಆದರೆ ನಾವು ನಿನ್ನೊಡನೆ ಹಣದ ಆಸೆಗೋಸ್ಕರ ಹೊರಟೆವು. ಆದ್ದರಿಂದ ನಮಗೆ ಈ ಧನದ ಆಸೆಯು ಸತ್ತಮೇಲೆಯೂ ತಪ್ಪಲಿಲ್ಲ.

ತೀರ್ಥರಾಜಜಲಸ್ಯಾಸ್ಯ ತಿಷ್ಠತೋ ಜಠರೇ ಹಿ ನಃ ।
ಮರಣೇ ಹ್ಯನುಭಾವಾತ್ತು ಮೈತ್ರೀ ಪ್ರಾಪ್ತಾ ಧನೇಶಿತುಃ ॥ ೧೧೩ ॥

ನಮಾಮಸ್ತ್ವಾಂ ವಯಂ ಯಾಮೋ ಧನೇಶನಗರೀಂ ಪ್ರಭೋ ।
ವಿಮಾನೈಸ್ತದ್ಗಣಾನೀತೈರ್ನಾನಾಮಣಿವಿಭೂಷಿತೈಃ ॥ ೧೧೪ ॥

ಪ್ರಯಾಹಿ ಮಾ ವಿಲಂಬಸ್ವ ತೀರ್ಥೇ ನಿಗಮಬೋಧಕೇ ।
ತ್ವಮನೇನ ಸಮಂ ಸಾಧೋ ತಾರಯೈನಮಪಿ ದ್ರುತಂ ॥ ೧೧೫ ॥

॥ ಶಿವಶರ್ಮೋವಾಚ ॥

ಇತ್ಯುಕ್ತ್ವಾ ತೇ ಗತಾಸ್ತಾತ ದಿಶ್ಯುದೀಚ್ಯಾಂ ಸಮಂತತಃ ।
ವಿಮಾನಕಿಂಕಿಣೀನಾದೈರ್ನಾದಯಂತೋಥ ರೋದಸೀ ।
ಅಥ ವೈಶ್ಯೋ ಮಮ ಪಿತಾ ತಮಾಹ ರಜನೀಚರಂ ॥ ೧೧೬ ॥

---

೧೧೩. ಆ ಹಣದ ಆಸೆ ಹೋಗದಿದ್ದುದರಿಂದಲೂ ತೀರ್ಥರಾಜನ ಈ ಸೇವು ನಮ್ಮ ಹೊಟ್ಟೆಯಲ್ಲಿರುವುದರಿಂದಲೂ ನಮಗೆ ಕುಬೇರನೊಡನೆ ಸ್ನೇಹವು ಬೆಳೆದಿದೆ

೧೧೪. ಎಲೈ ಸಾಧುವೇ! ನಿನ್ನನ್ನು ನಮಸ್ಕರಿಸುತ್ತೇವೆ. ನಾವು ಕುಬೇರನ ಪಟ್ಟಣಕ್ಕೆ ಹೋಗುತ್ತೇವೆ. ಅವನ ಗಣಗಳು ಅಲಂಕೃತವಾದ ವಿಮಾನಗಳನ್ನು ತಂದಿದ್ದಾರೆ. ಅದರಲ್ಲಿ ಕುಳಿತು ಹೋಗುತ್ತೇವೆ.

೧೧೫. ಎಲೈ ಸಾಧುವೆ! ನೀನು ಸಾವಕಾಶಮಾಡದೆ ನಿಗಮಬೋಧಕ ತೀರ್ಥಕ್ಕೆ ಈತನನ್ನು ಕರೆದುಕೊಂಡು ಹೋಗು. ಇವನು ಬೇಗನೆ ಮುಕ್ತಿಗೆ ಹೋಗುವಂತೆ ಮಾಡು.

೧೧೬. ಶಿವಶರ್ಮನು ಹೇಳಿದನು-ಹೀಗೆಂದು ಹೇಳಿ ಅವರು ಗೆಜ್ಜೆಗಳನ್ನು ಸದ್ದು ಮಾಡುತ್ತಿರುವ ವಿಮಾನವನ್ನು ಹತ್ತಿ ಉತ್ತರದಿಕ್ಕಿಗೆ ಪ್ರಯಾಣಮಾಡಿದರು. ಆಮೇಲೆ ಆ ವೈಶ್ಯನು ರಾಕ್ಷಸನನ್ನು ಕುರಿತು ಇಂತೆಂದನು.

|| ಶರಭ ಉವಾಚ ||

ಉತ್ತಿಷ್ಠ ನಯ ಮಾಮಾಶು ತೀರ್ಥೇ ನಿಗಮಬೋಧಕೇ ।
ಜ್ವರಾರ್ತೇನ ಮಯಾಪದ್ಭ್ಯಾಂ ತತ್ರ ಗಂತುಂ ನ ಶಕ್ಯತೇ ॥
ಯೋ ಮಾಂ ನಯತಿ ತತ್ತೀರ್ಥಂ ತ್ವದನ್ಯೋ ನಾಸ್ತಿ ಕಶ್ಚನ ॥ ೧೧೭ ॥

|| ಶಿವಶರ್ಮೋವಾಚ ||

ತಥೇತಿ ತಮಥಾಶ್ವಾಸ್ಯ ವೈಶ್ಯಂ ಸ ರಜನೀಚರಃ ।
ಸ್ಕಂಧಮಾರೋಪ್ಯ ವೇಗೇನ ತತ್ತೀರ್ಥಂ ಪಾವನಂ ಯಯೌ ॥ ೧೧೮ ॥

ಊಷತುಸ್ತಾವುಭೌ ತತ್ರ ವಿಟ್‌ಪತಿಃ ಸ ಚ ರಾಕ್ಷಸಃ ।
ಕುರ್ವಂತೌ ಸ್ನಾನಮಾತ್ರಂ ತು ಸರ್ವತೀರ್ಥೋತ್ತಮೋತ್ತಮೇ ॥ ೧೧೯ ॥

ಅಥಾಹಂ ಪಿತುರಾಕರ್ಣ್ಯ ಮಹತೀಂ ಗುರುವೇದನಾಂ ।
ತಂ ಪ್ರತಿ ಪ್ರೇರಿತೋ ಮಾತ್ರಾ ಚಲಿತೋ ನಿಜಸದ್ಮತಃ ॥ ೧೨೦ ॥

---

೧೧೭. ಶರಭನು ಹೇಳಿದನು-ಎಲೈ ನಿಶಾಚರನೆ ! ಏಳು. ನನ್ನನ್ನು ನಿಗಮಬೋಧಕ ತೀರ್ಥಕ್ಕೆ ಕರೆದುಕೊಂಡು ಹೋಗು. ನನಗೆ ಜ್ವರಬರುತ್ತಿರುವುದರಿಂದ ಅಶಕ್ತನಾಗಿ ಅಲ್ಲಿ ಹೋಗಲು ಒಬ್ಬನಿಗೇ ಕೈಲಾಗುವುದಿಲ್ಲ. ಆದರೆ ನಿನ್ನನ್ನು ಬಿಟ್ಟರೆ ಮತ್ತೊಬ್ಬನಿಲ್ಲ.

೧೧೮. ಶಿವಶರ್ಮನು ಹೇಳಿದನು-ಹಾಗೇ ಆಗಲೆಂದು ಅವನನ್ನು ಸಮಾಧಾನಪಡಿಸಿ ಆ ರಾಕ್ಷಸನು ಅವನನ್ನು ತನ್ನ ಹೆಗಲಿನ ಮೇಲೆ ಕೂರಿಸಿಕೊಂಡು ವೇಗದಿಂದ ಆ ತೀರ್ಥಕ್ಕೆ ಹೋದನು.

೧೧೯. ಆ ಶರಭನೂ ರಾಕ್ಷಸನೂ ಆ ಉತ್ತಮವಾದ ತೀರ್ಥದಲ್ಲಿ ಸ್ನಾನ ಮಾಡುತ್ತ ಇದ್ದುಕೊಂಡಿದ್ದರು.

೧೨೦. ನಾನು ಇಲ್ಲಿದ್ದುಕೊಂಡಿರಲು ಆ ನನ್ನ ತಂದೆಯ ಬಹುವಾದ ತೊಂದರೆಯು ನನಗೆ ತಿಳಿಯಬಂದಿತು. ನನ್ನ ತಾಯಿಯು ನೀನು ಹೋಗಿ ನೋಡಿಕೊಂಡು ಬಾ. ಎಂದು ಹೇಳಿದುದರಿಂದ ಮನೆಯಿಂದ ಹೊರಟೆನು.

**ಅತ್ರಾಗತ್ಯ ಮಯಾ ದೃಷ್ಟಃ ಸ ಮಹಾಜ್ವರಪೀಡಿತಃ ।**
**ಮೂರ್ಧ್ನಾ ಚ ವಂದಿತಸ್ತೇನ ದತ್ತಾಶೀರ್ನೋಽಭ್ಯಭಾಷತ ॥ ೧೨೧ ॥**

**॥ ಶರಭ ಉವಾಚ ॥**

**ಕಿಮರ್ಥಮಿಹ ಭೋಸ್ತಾತ ದೂರಮಾರ್ಗೇ ಸಮಾಗತಃ ।**
**ದಿನಾನಿ ಕತಿಚಿತ್ತಿಷ್ಠ ಕುರ್ವನ್ನತ್ರ ನಿಜಕ್ರಿಯಾಂ ॥ ೧೨೨ ॥**

**ವಿಕಟೋ ನಾಮ ಮೇ ಮಿತ್ರಂ ರಾಕ್ಷಸಃ ಸಮುಪೈತಿ ವೈ ।**
**ಉತ್ತಿಷ್ಠ ವಪುಷಾಮುಷ್ಯ ದಂಡವತ್ಪತ ಪಾದಯೋಃ ॥ ೧೨೩ ॥**

**ನ ಭೇತವ್ಯಂ ತ್ವಯಾಮುಷ್ಮಾತ್ತ್ಯಕ್ತಹಿಂಸಾದಿಕರ್ಮಣಃ ।**
**ಅಧುನಾ ತೀರ್ಥಮಾಸಾದ್ಯ ಸನ್ನಿಧೌ ಮಮ ತಿಷ್ಠತಿ ॥ ೧೨೪ ॥**

---

೧೨೧. ನಾನು ಇಲ್ಲಿಗೆ ಬಂದು ಜ್ವರದಿಂದ ತೊಂದರೆಪಡುತ್ತಿರುವ ನನ್ನ ತಂದೆಯನ್ನು ನೋಡಿದೆನು. ತಲೆಬಗ್ಗಿ ನಮಸ್ಕರಿಸಲು ಆತನು ಆಶೀರ್ವದಿಸಿ ನನ್ನನ್ನು ಕುರಿತು ಮಾತನಾಡಿದನು.

೧೨೨. ಶರಭನು ಹೇಳಿದನು-ಎಲೈ ಮಗನೆ! ಇಷ್ಟುದೂರದೇಶಕ್ಕೆ ಏಕೆ ಬಂದೆ ? ಚಿಂತೆಯಿಲ್ಲ. ನಿನ್ನ ದಿನಚರಿ ಕೆಲಸಗಳನ್ನು ಮಾಡಿಕೊಂಡು ಇಲ್ಲಿ ಕೆಲವು ದಿನಗಳವರೆಗೂ ಇರು.

೧೨೩. ರಾಕ್ಷಸನಾದ ವಿಕಟನೆಂಬ ಹೆಸರುಳ್ಳ ನನ್ನ ಮಿತ್ರನು ಬರುತ್ತಿರುವನು. ಏಳು. ಅವನಿಗೆ ದೀರ್ಘದಂಡವಾಗಿ ನಮಸ್ಕಾರವನ್ನು ಮಾಡು.

೧೨೪. ನೀನು ಇವನನ್ನು ನೋಡಿ ಹೆದರಿಕೊಳ್ಳಬೇಡ. ಪ್ರಾಣಿಗಳನ್ನು ಆತನು ಹಿಂಸಿಸುವುದನ್ನು ಬಿಟ್ಟು ಬಿಟ್ಟಿದ್ದಾನೆ. ಈಗ ಈ ತೀರ್ಥಕ್ಕೆ ಬಂದು ನನ್ನೊಡನೆ ಇದ್ದುಕೊಂಡಿರುತ್ತಾನೆ.

॥ ಶಿವಶರ್ಮೋವಾಚ ॥

ಇತ್ಯುಕ್ತೋಽಹಂ ತದಾ ಪಿತ್ರಾ ಶರಭೇಣ ಮಹಾತ್ಮನಾ ।
ಉತ್ಥಾಯ ಪತಿತಸ್ತಸ್ಯ ಪಾದಯೋರ್ದಂಡವದ್ಭುವಿ ॥ ೧೨೫ ॥

ದೋರ್ಭ್ಯಾ ಮುತ್ಥಾಪ್ಯ ಮಾಂ ಸೋಽಥ ಗಾಢಮಾಲಿಂಗ್ಯ ರಾಕ್ಷಸಃ ।
ಸ್ವಾಗತಂ ಮಿತ್ರಪುತ್ರೇತಿ ಜಗಾದಾಶಿಷಮೀರಯನ್ ॥ ೧೨೬ ॥

॥ ರಾಕ್ಷಸ ಉವಾಚ ॥

ಭಾಗ್ಯವಾನಸಿ ಭೋಸ್ತಾತ ಯತ್ತ್ವಮತ್ರ ಸಮಾಗತಃ ।
ಪಿತುರ್ಧರ್ಮಾತ್ಮನಶ್ಶ್ರುತ್ವಾ ಜ್ವರಪೀಡಾಂ ಸುದಾರುಣಾಂ ॥ ೧೨೭ ॥

ಪಿತುರಾನೃಣ್ಯಮಾಪ್ನೋಷಿ ತೀರ್ಥೇ ಕೃತ್ವಾ ತಿಲೋದಕಂ ।
ಸ್ನಾತ್ವಾ ಕುರು ಕ್ರಿಯಾಃ ಸ್ವೀಯಾಃ ಪೂರ್ವಜನ್ಮ ಸ್ಮರಿಷ್ಯಸಿ ॥ ೧೨೮ ॥

---

೧೨೫. ಶಿವಶರ್ಮನು ಹೇಳಿದನು-ಮಹಾತ್ಮನಾದ ನನ್ನ ತಂದೆಯಾದ ಶರಭನು ಇಂತೆನ್ನಲು ಒಡನೆಯೇ ಮೇಲಕ್ಕೆದ್ದು ನಾನು ಆತನ ಪಾದಗಳಲ್ಲಿ ಬಿದ್ದು ನಮಸ್ಕರಿಸಿದೆನು.

೧೨೬. ಆಗ ರಾಕ್ಷಸನು ನನ್ನನ್ನು ತೋಳುಗಳಿಂದ ಮೇಲಕ್ಕೆತ್ತಿ ಆಲಂಗಿಸಿ ಕೊಂಡು ಎಲೈ ಮಿತ್ರಪುತ್ರನೇ ! ನಿನಗೆ ಸ್ವಾಗತವೆ ? ಎಂದು ಕೇಳುತ್ತ ಆಶೀರ್ವದಿಸಿದನು. ಮತ್ತು ಇಂತೆಂದನು.

೧೨೭. ರಾಕ್ಷಸನು ಹೇಳಿದನು-ಎಲೈ ಪುಣ್ಯಾತ್ಮನೆ ! ನೀನೇ ಭಾಗ್ಯವಂತನು. ತಂದೆಯು ಜ್ವರದಿಂದ ತೊಂದರೆ ಪಡುತ್ತಿದ್ದಾನೆಂದು ತಿಳಿದ ಕೂಡಲೆ ಇಲ್ಲಿಗೆ ಬಂದಿರುವೆಯಲ್ಲ !

೧೨೮. ಈ ತೀರ್ಥದಲ್ಲಿ ತರ್ಪಣಾದಿಗಳನ್ನು ಮಾಡು. ಪಿತೃಋಣವು ತೀರುತ್ತದೆ. ಸ್ನಾನಮಾಡಿ ಮಾಡಬೇಕಾದ ಕೆಲಸಗಳನ್ನು ಮಾಡು. ಆ ಪೂರ್ವಜನ್ಮದ ಸ್ಮರಣೆಯು ಬರುತ್ತದೆ.

|| ಶಿವಶರ್ಮೋವಾಚ ||

ಏವಮುಕ್ತಸ್ತದಾ ತೇನ ಸ್ನಾತುಂ ತೀರ್ಥೇ ವರಾಂಭಸಿ ।
ಪ್ರವಿಷ್ಟೋಽಹಂ ಸ್ಮರೇ ತಾತ ಪೂರ್ವಜನ್ಮಶುಭಾಶುಭಂ || ೧೨೯ ||

ಸ್ನಾತ್ವಾ ವಿಧಿವದತ್ರೈವ ಪಿತುರಂತಿಕಮಾಗತಃ ।
ಅಪೃಚ್ಛಂ ರಕ್ಷಸೋ ವೃತ್ತಂ ಕುತೋಽಯಂ ಧರ್ಮಧೀರಿತಿ || ೧೩೦ ||

ಪಿತ್ರೋಕ್ತಂ ರಕ್ಷಸೋ ವೃತ್ತಂ ವಾಹಾನಾಂ ಪಥಿಕಸ್ಯ ಚ ।
ಶ್ರುತ್ವಾಹಂ ತೀರ್ಥರಾಜಸ್ಯ ಸ್ತುತಿಮಸ್ಯ ಚಕಾರ ವೈ || ೧೩೧ ||

ಪಿತಾ ಮೇ ರೋಗನಿರ್ಮುಕ್ತೋ ಭವಿಷ್ಯತಿ ಯದಾ ತದಾ ।
ಯಾಸ್ಯಾಮಿ ಗೃಹಮಿತ್ಯತ್ರ ದಶೋಷಿತಮಹಾನಿ ಮೇ || ೧೩೨ ||

ದಶಾಹಾಭ್ಯಂತರೇ ತಾತ ತಾತಸ್ಯ ಮರಣಂ ಮಮ ।
ಅಭೂದರ್ಧಜಲೇ ಹ್ಯಸ್ಯ ತೀರ್ಥರಾಜಸ್ಯ ಪಶ್ಯತಃ || ೧೩೩ ||

---

೧೨೯. ಶಿವಶರ್ಮನು ಹೇಳಿದನು-ಆತನು ಹೀಗೆ ಹೇಳುತ್ತಲೂ ಸ್ನಾನ ಮಾಡುವುದಕ್ಕೋಸ್ಕರ ಆ ಉತ್ತಮವಾದ ನೀರಿನಲ್ಲಿ ಇಳಿದೆನು. ಒಡನೆಯೇ ಹಿಂದಿನ ಜನ್ಮದ ಶುಭಾಶುಭಗಳು ಜ್ಞಾಪಕಕ್ಕೆ ಬಂದುವು.

೧೩೦. ನಿಯಮವನ್ನನುಸರಿಸಿ ಅಲ್ಲಿ ಸ್ನಾನಮಾಡಿ ತಂದೆಯ ಬಳಿಗೆ ಬಂದೆನು. ಅನಂತರ ಈ ರಾಕ್ಷಸನು ಯಾರು? ಎಲ್ಲಿಯವನು? ಇವನಿಗೆ ಈ ಧರ್ಮ ಬುದ್ಧಿ ಬರಲು ಕಾರಣವೇನು? ಎಂದು ಕೇಳಿದೆನು.

೧೩೧. ಆಗ ನನ್ನ ತಂದೆಯು ಆ ರಾಕ್ಷಸ ಪ್ರಯಾಣಿಕ ಪಲ್ಲಕ್ಕಿಯನ್ನು ಹೊತ್ತವರು ಇವರ ವಿಷಯಗಳನ್ನೆಲ್ಲಾ ಹೇಳಿದನು. ಆಗ ಆ ತೀರ್ಥದ ಮಹಿಮೆಯನ್ನು ಕೇಳಿ ಬಹುವಾಗಿ ಹೊಗಳಿದೆನು.

೧೩೨. ನನ್ನ ತಂದೆಗೆ ರೋಗ ವಾಸಿಯಾದಮೇಲೆ ಮನೆಗೆ ಹೋಗುತ್ತೇನೆ. ಎಂದು ಹತ್ತು ದಿನಗಳವರೆಗೆ ಅಲ್ಲಿಯೇ ಇರಬೇಕೆಂದು ಇದ್ದೆನು.

೧೩೩. ಈ ಹತ್ತು ದಿನಗಳೊಳಗೆ ನನ್ನ ತಂದೆಯು ಆ ತೀರ್ಥದಲ್ಲಿ ಸ್ನಾನಕ್ಕೆ ಹೋಗಿದ್ದಾಗ ಅರ್ಧನೀರಿನಲ್ಲಿಯೇ ಸತ್ತುಹೋದನು.

ಅಥೋ ಗರುಡಮಾರುಹ್ಯ ವಕ್ಷಸಾ ಧಾರಯನ್ ಶ್ರಿಯಂ ।
ಆಜಗಾಮ ಸ್ವಯಂ ವಿಷ್ಣುರ್ನವೀನಘನವಿಗ್ರಹಃ ॥ ೧೩೪ ॥

ಪೀತವಾಸಾಶ್ಚತುರ್ಬಾಹುಃ ಪಂಕಜಾರುಣಲೋಚನಃ ।
ಬ್ರಹ್ಮೇಂದ್ರಾದಿಭಿರಾದಿತ್ಯೈಃ ಸನಾಥೈರಂಧಕಾರಿಣಾ ॥ ೧೩೫ ॥

ಸೇವ್ಯಮಾನೋ ಗುಣಗ್ರಾಮಾನ್ ಗಾಯದ್ಭಿಃ ಕಿನ್ನರೇಶ್ವರೈಃ ।
ಹಾಹಾಹೂಹೂಪ್ರಭೃತಿಭಿಃ ಸ್ತೂಯಮಾನಶ್ಚ ಸರ್ವತಃ ॥ ೧೩೬ ॥

ದತ್ವಾ ಸ್ವಕೀಯಂ ಸಾರೂಪ್ಯಮಾರೋಪ್ಯ ಗರುಡಂ ತಥಾ ।
ಪಿತರಂ ಮಮ ಬ್ರಹ್ಮಾದ್ಯೈಃ ವೃತೋ ವೈಕುಂಠಮಾಗಮತ್ ॥ ೧೩೭ ॥

ಪಿತುಸ್ಸಾರೂಪ್ಯಮಾಲೋಕ್ಯ ವಿಷ್ಣೋರಹಮಚಿನ್ತಯಂ ।
ಇತಿ ಚಿತ್ತೇ ತದಾಲೋಕ್ಯ ಜಾತತತ್ತ್ವೋದಯೋ ತದಾ ॥ ೧೩೮ ॥

---

೧೩೪. ಅನಂತರ ವಿಷ್ಣುವು ಎದೆಯಲ್ಲಿ ಲಕ್ಷ್ಮಿಯನ್ನು ಧರಿಸಿಕೊಂಡು ಹೊಸಮೇಘದಂತೆ ಕಾಂತಿಯುಳ್ಳವನಾಗಿ ತಾನಾಗಿಯೇ ಅಲ್ಲಿಗೆ ಬಂದನು.

೧೩೫. ಆ ವಿಷ್ಣುವು ಹೊಂಬಣ್ಣದ ಬಟ್ಟೆಯನ್ನುಟ್ಟಿದ್ದನು. ನಾಲ್ಕು ತೋಳುಗಳಿದ್ದವು. ಕೆಂಪಗಿರುವ ಕಣ್ಣುಗಳಿದ್ದುವು. ಬ್ರಹ್ಮ ಇಂದ್ರ ಆದಿತ್ಯ ಶಿವರು ಅವನ ಜೊತೆಯಲ್ಲಿದ್ದರು.

೧೩೬. ರಾಗಾಲಾಪನೆಗಳನ್ನು ಮಾಡುತ್ತ ಗಾನಮಾಡುತ್ತಿರುವ ಕಿನ್ನರರಿಂದ ಸೇವಿಸಲ್ಪಡುತ್ತ ಹಾಹಾ ಹೂಹೂ ಮೊದಲಾದವರಿಂದ ಸ್ತುತಿಸಲ್ಪಡುತ್ತ ಇದ್ದನು.

೧೩೭. ಆಗ ನನ್ನತಂದೆಗೆ ತನ್ನ ಸಾರೂಪ್ಯವನ್ನು ಕೊಟ್ಟು ಅವನನ್ನು ಗರುಡನ ಮೇಲೆ ಕೂರಿಸಿಕೊಂಡು ಬ್ರಹ್ಮಾದಿಗಳೊಡನೆ ವೈಕುಂಠಕ್ಕೆ ಹೋದನು.

೧೩೮. ನನ್ನ ತಂದೆಯು ವಿಷ್ಣುವಿನ ಸಾರೂಪ್ಯವನ್ನು ಹೊಂದಿದ್ದನ್ನು ನೋಡಿ ನನ್ನ ಮನಸ್ಸಿನಲ್ಲಿ ತತ್ವವು ಮೂಡಿತು. ಆಗ ನಾನು ಹೀಗೆಂದು ಯೋಚಿಸಿದೆನು.

**ನ ಹಿ ವರ್ಣಯಿತುಂ ಶಕ್ಯೋ ಹ್ಯಸ್ಯ ತೀರ್ಥಶಿರೋಮಣೇಃ ।**
**ಮಹಿಮಾ ಯಜ್ಜಲಾರ್ಥೇ ಸ್ಯಾನ್ಮೃತೋ ಜಂತುಶ್ಚತುರ್ಭುಜಃ ॥ ೧೩೯ ॥**

**ನ ಮಯಾ ಸರ್ವಥಾ ತ್ಯಾಜ್ಯಂ ತೀರ್ಥರಾಜಮಿದಂ ನನು ।**
**ಅಂಜಸಾ ದೃಢಮಾಹಾತ್ಮ್ಯಂ ಧನಗೇಹಾದಿತೃಷ್ಣಯಾ ॥ ೧೪೦ ॥**

**ಪಿತುರತ್ರೋಟಜೇ ತಾವತ್ ಸ್ಥಾತವ್ಯಂ ಹಿ ಮಯಾ ಮಮ ।**
**ಯಾವತ್ತು ಕರ್ಮಣಾಂ ಭುಕ್ತಿಃ ಪ್ರಾರಬ್ಧಾನಾಂ ಮಹೀತಲೇ ॥ ೧೪೧ ॥**

**ಏವಂ ತು ಚಿಂತಯಿತ್ವಾ ಚ ಪಿತುಃ ಕೃತ್ವಾಂತಸತ್ಕ್ರಿಯಾಂ ।**
**ರಕ್ಷಸಾ ತೇನ ಸಹಿತಃ ಸ್ಥಿತೋಽಹಂ ಮೋಕ್ಷಕಾಂಕ್ಷಯಾ ॥ ೧೪೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಶರಭ ಮೋಕ್ಷ ಪ್ರಾಪ್ತಿ ವರ್ಣನಂ ನಾಮ ದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೧೩೯. ಈ ಉತ್ತಮವಾದ ತೀರ್ಥದ ಮಹಿಮೆಯನ್ನು ವರ್ಣಿಸಲು ಆಗುವುದೇ ಇಲ್ಲ. ಇದರ ಅರ್ಧನೀರಿನಲ್ಲಿ ಸತ್ತ ಜಂತುವು ನಾಲ್ಕು ತೋಳುಗಳನ್ನು ಹೊಂದಿ ವಿಷ್ಣುವಿನ ಸಾರೂಪ್ಯವನ್ನು ಹೊಂದಿದಸಲ್ಲ!

೧೪೦ ಈ ತೀರ್ಥರಾಜನನ್ನು ನಾನು ಖಂಡಿತವಾಗಿಯೂ ಬಿಡಲೇ ಕೂಡದು. ಹಣ ಮನೆ ಮುಂತಾದ ಆಸೆಗಳಿದ್ದರೂ ಕೂಡ ಮುಕ್ತಿಯನ್ನು ಕೊಡುವುದು. ಇದರ ಮಹಿಮೆಯು ಬಹು ಶ್ರೇಷ್ಠವಾದುದು.

೧೪೧. ನನ್ನ ಪ್ರಾರಬ್ಧ ಕರ್ಮಗಳನ್ನು ಈ ಭೂಮಿಯಲ್ಲಿ ಎಲ್ಲಿಯವರೆಗೆ ನಾನು ಅನುಭವಿಸಬೇಕೋ ಅಲ್ಲಿಯವರೆಗೆ ನಾನು ಈ ನನ್ನ ತಂದೆಯ ಪರ್ಣಶಾಲೆಯಲ್ಲಿಯೇ ಇದ್ದುಕೊಂಡು ಅನುಭವಿಸುತ್ತೇನೆ.

೧೪೨. ಹೀಗೆಯೇ ಯೋಚನೆ ಮಾಡಿ ನನ್ನ ತಂದೆಗೆ ಉತ್ತರಕ್ರಿಯೆಗಳನ್ನು ಮಾಡಿ ಆ ರಾಕ್ಷಸನೊಡನೆ ಮೋಕ್ಷವನ್ನು ಅಪೇಕ್ಷಿಸುತ್ತ ಅಲ್ಲಿಯೇ ಇದ್ದೆನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದಿಯ ಮಹಿಮೆಯಲ್ಲಿ ಶರಭನ ಮೋಕ್ಷ ಪ್ರಾಪ್ತಿಯ ವರ್ಣನ ಎಂಬ ಇನ್ನೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

### ॥ ಏಕಾಧಿಕದ್ವಿಶತತಮೋಽಧ್ಯಾಯಃ ॥



॥ ಶಿವಶರ್ಮೋವಾಚ ॥

ಏಕದಾತ್ರ ಮಹಾತೀರ್ಥೇ ಪಂಕೇ ಮಗ್ನಾಂ ಪಯಸ್ವಿನೀಂ ।
ದೃಷ್ಟ್ವಾ ಸ ರಾಕ್ಷಸಶ್ರೇಷ್ಠಃ ತಾಮುದ್ಧರ್ತುಂ ವಿವೇಶ ಹ ॥ ೧ ॥

ಗೋರಕ್ಷಣೇ ಮಹಾನ್ ಧರ್ಮೋ ರಕ್ಷಿತುಸ್ಸ್ವರ್ಗತಿರ್ಭವೇತ್ ।
ಚಿಂತಯನ್ನಿತಿ ಮಧ್ಯೇ ತು ಸ ಗೃಹೀತೋಂಬುಹಸ್ತಿನಾ ॥ ೨ ॥

ನೀತಸ್ತು ವಾರಿಣೋಧಸ್ತಾಜ್ಜಲಪೂರ್ಣೋದರಸ್ತದಾ ।
ತತ್ಯಾಜ ಜೀವಿತಂ ಸದ್ಯಸ್ತೇನ ಪೀಡಿತವಿಗ್ರಹಃ ॥ ೩ ॥

---

### ಇನ್ನೂರ ಒಂದನೆಯ ಅಧ್ಯಾಯವು



೧. ಶಿವಶರ್ಮನು ಹೇಳಿದನು-ಒಂದುಸಾರಿ ಒಂದು ಹಸುವು ಆ ಮಹಾ ತೀರ್ಥಕ್ಕೆ ನೀರು ಕುಡಿಯಲು ಹೋಗಿ ಕೆಸರಿನಲ್ಲಿ ಹೂತುಕೊಳ್ಳಲು ಅದನ್ನು ಮೇಲಕ್ಕೆ ತೆಗೆಯಬೇಕೆಂದು ಆ ರಾಕ್ಷಸನು ಅಲ್ಲಿಗೆ ಹೋದನು.

೨. ಗೋವನ್ನು ಕಾಪಾಡಿದರೆ ಬಹುವಾದ ಧರ್ಮ ಬರುತ್ತದೆ. ಮತ್ತು ಸ್ವರ್ಗವು ಸಿಗುತ್ತದೆ. ಹೀಗೆಂದು ಯೋಚಿಸಿ ಅವನು ನೀರಿನೊಳಕ್ಕೆ ಹೋಗಲು ಅಲ್ಲಿ ಒಂದು ನೀರಾನೆಯು ಅವನನ್ನು ಹಿಡಿದುಕೊಂಡಿತು

೩. ಆ ನೀರಾನೆಯು ಹಿಡಿದುಕೊಂಡು ನೀರಿನ ಒಳಕ್ಕೆ ಎಳೆದುಕೊಂಡು ಹೋಗಲು ಇವನೂ ನೀರನ್ನು ಕುಡಿದು ಹೊಟ್ಟೆಯೆಲ್ಲವೂ ನೀರಿನಿಂದ ಪೂರ್ತಿಯಾಯಿತು. ಮತ್ತು ಆ ಆನೆಯೂ ತೊಂದರೆಪಡಿಸಲು ಪ್ರಾಣವನ್ನು ಬಿಟ್ಟನು.

ದಿವ್ಯರೂಪಂ ಸಮಾಸ್ಥಾಯ ವಿಮಾನಮಪಿ ಚೌಕಿತಂ |
ಗಣೇನ ಪ್ರಹಿತೇನಾಥ ದೇವೈರಿಂದ್ರಪುರೋಗಮೈಃ || ೪ ||

ಗಚ್ಛನ್ನಿತಿ ಮಯಾ ಪೃಷ್ಟಃ ಸ ನಿಶಾಚರಪುಂಗವಃ |
ಮುಕ್ತಿದೇ ಕ್ಷೇತ್ರ ಮಹಾತೀರ್ಥೇ ಮೃತ್ಯುಂ ಪ್ರಾಪ್ಯ ಸುದುರ್ಲಭೇ || ೫ ||

ಕಥಂ ದೇವಪದಪ್ರಾಪ್ತಿರ್ಜಾತಾ ತವ ಮಹಾಮತೇ |
ಇತ್ಯುಕ್ತೋ ಮಾಮುವಾಚೇದಂ ವಾಂಛಾಸೀದತ್ರ ಮೇನಘ || ೬ ||

ತಸ್ಮಿನ್ ಗತೇ ಪುಣ್ಯಜನೇ ಸ್ವರ್ಗಂ ಪುಣ್ಯವತಾಂ ಪದಂ |
ಏಕಾಕಿನಾ ಮಯಾ ವಿಷ್ಣುಃ ಸದ್ಗತಿಃ ಪ್ರಾರ್ಥಿತಸ್ತದಾ || ೭ ||

ಗಚ್ಛನ್ ತಿಷ್ಠನ್ ಸ್ವಪನ್ ಜಾಗ್ರತ್ಸ್ನಾನಂ ಕುರ್ವಂಶ್ಚ ನಿತ್ಯಶಃ |
ತಮೇವ ಪುಂಡರೀಕಾಕ್ಷಮಹಂ ದಧ್ಯಾವನನ್ಯಧೀಃ || ೮ ||

---

೪. ಇವನಿಗೆ ಒಡನೆಯೇ ದಿವ್ಯರೂಪವು ಬಂದಿತು. ದಿವ್ಯವಾದ ಒಂದು ವಿಮಾನವೂ ಒಡನೆಯೇ ಬಂದಿತು. ಅದನ್ನು ಇಂದ್ರನೇ ಮುಂತಾದವರು ಗಣಗಳೊಡನೆ ಕಳುಹಿಸಿ ಕೊಟ್ಟಿದ್ದರು

೫-೬. ಅದರಲ್ಲಿ ಕುಳಿತು ಆ ರಾಕ್ಷಸನು ಹೋಗುತ್ತಿರಲು ಅವನನ್ನು ಕುರಿತು ನಾನು ಇಂತೆಂದು ಕೇಳಿದೆನು. ಎಲೈ ರಾಕ್ಷಸ ಶ್ರೇಷ್ಠನೆ ! ಮುಕ್ತಿಯನ್ನು ಕೊಡುವ ಈ ಕ್ಷೇತ್ರದಲ್ಲಿ ಪ್ರಾಣವನ್ನು ಬಿಟ್ಟುದರಿಂದ ನಿನಗೆ ಹೇಗೆ ದೇವಪದವು ಬಂದಿತು? ಎಂದು ಕೇಳಲು ಅಯ್ಯಾ ! ನನಗೆ ಈ ದೇವಪದದ ವಿಷಯದಲ್ಲಿಯೇ ಬಹು ಆಸೆಯಿದ್ದಿತು. ಎಂದನು.

೭. ಆ ರಾಕ್ಷಸನು ಪುಣ್ಯವಂತರು ಹೊಂದುವ ಸ್ವರ್ಗವನ್ನು ಹೊಂದಲು ನಾನೂ ಕೂಡ ಒಬ್ಬಂಟಿಗನಾಗಿ ವಿಷ್ಣುವನ್ನು ಕುರಿತು ಸದ್ಗತಿಯನ್ನು ಪ್ರಾರ್ಥಿಸಿದೆನು.

೮. ಓಡಿಯಾಡುವಾಗಲೂ ಕುಳಿತುಕೊಳ್ಳುವಾಗಲೂ ಮಲಗಿರುವಾಗಲೂ ಎಚ್ಚೆತ್ತಿರುವಾಗಲೂ ಸ್ನಾನಮಾಡುವಾಗಲೂ ಯಾವಾಗಲೂ ಕೂಡ ಆ ಪುಂಡರೀಕಾಕ್ಷನನ್ನೇ ಒಂದೇ ಮನಸ್ಸಿನಿಂದ ಧ್ಯಾನಿಸುತ್ತಿದೆನು.

ಹರೇ ತವ ಪದಾಂಭೋಜಮಹಂ ಶರಣಮಾಗತಃ |
ಬ್ರಹ್ಮತ್ವೇ ಚ ಮಹೇಶತ್ವೇ ನೇಂದ್ರತ್ವೇ ಮಮ ಮಾನಸಂ ॥ ೯ ॥

ಪ್ರಾರ್ಥಯನ್ನಿತ್ಯಹಂ ತಾತ ತಮೇವ ಪುರುಷೋತ್ತಮಂ ।
ಉಷಿತೋತ್ರ ಮಹಾತೀರ್ಥೇ ಕೃತ್ವಾ ನಿರ್ವಿಷಯಂ ಮನಃ ॥ ೧೦ ॥

॥ ವಿಷ್ಣುಶರ್ಮೋವಾಚ ॥

ವಸತೋತ್ರ ಮಹಾತೀರ್ಥೇ ಮರಣಂ ಚೇತ್ತವಾಭವತ್ |
ಕಥಂ ಜನ್ಮ ಪುನಃ ಪ್ರಾಪ್ತಂ ತ್ವಯೇತಿ ಮಮ ಸಂಶಯಃ ॥ ೧೧ ॥

ಮರ್ಯಾದಾಂ ಯಸ್ಯ ತೀರ್ಥಸ್ಯ ತ್ಯಕ್ತ್ವಾಪಿ ಧನಲೋಭತಃ |
ರಾಕ್ಷಸಾನ್ಮರಣಂ ಪ್ರಾಪ್ತಃ ಪಥಿಕಾಸ್ತೇ ಚ ವಾಹಕಾಃ ॥ ೧೨ ॥

ಯಸ್ಯ ತೀರ್ಥವರಸ್ಯಾಸ್ಯ ಜಲಪಾನಾದ್ದಿವಂ ಗತಾಃ |
ತಥೈವ ರಾಕ್ಷಸೋಸ್ಯಾಸ್ಮಿನ್ ಜಲೇ ಮೃತ್ಯುಮವಾಪ್ಯ ಸಃ ॥ ೧೩ ॥

---

೯. ಎಲೈ ಹರಿಯೆ ! ನಾನು ನಿನ್ನ ಪಾದಗಳನ್ನು ಶರಣು ಹೊಂದಿದ್ದೇನೆ. ನನಗೆ ಬ್ರಹ್ಮನಾಗುವಿಕೆಯಲ್ಲಾಗಲಿ ಮಹೇಶನಾಗುವಿಕೆಯಲ್ಲಾಗಲಿ ಇಂದ್ರ ನಾಗುವಿಕೆಯಲ್ಲಾಗಲಿ ಮನಸ್ಸಿಲ್ಲ.

೧೦. ಈ ರೀತಿಯಾಗಿ ನಿತ್ಯವೂ ಆ ಸ್ವಾಮಿಯನ್ನು ಪ್ರಾರ್ಥಿಸುತ್ತ ಮನಸ್ಸಿಗೆ ಒಂದು ಆಸೆಯನ್ನೂ ಅಂಟಿಸಿಕೊಳ್ಳದೆ ಆ ಮಹಾತೀರ್ಥದಲ್ಲಿ ಇದ್ದೆನು.

೧೧ ವಿಷ್ಣು ಶರ್ಮನು ಹೇಳಿದನು-ನೀನು ಆ ಮಹಾತೀರ್ಥದಲ್ಲಿಯೇ ಇದ್ದುಕೊಂಡು ಮರಣವನ್ನು ಹೊಂದಿದ್ದ ಪಕ್ಷದಲ್ಲಿ ಪುನರ್ಜನ್ಮವು ನಿನಗೆ ಹೇಗೆ ಬಂದಿತು ? ಎಂಬ ಸಂಶಯವು ನನಗೆ ಉಂಟಾಗಿದೆ.

೧೨-೧೩. ಹಣದ ಆಸೆಯಿಂದ ಆ ತೀರ್ಥದ ಎಲ್ಲೆ ಕಟ್ಟನ್ನೇ ಬಿಟ್ಟು ಹೋದರೂ ರಾಕ್ಷಸನಿಂದ ಮರಣವನ್ನು ಹೊಂದಿದ ಆ ಪ್ರಯಾಣಿಕನೂ ಪಲ್ಲಕ್ಕಿಯನ್ನು ಹೊರುವವರೂ ಈ ತೀರ್ಥದ ಮಹಿಮೆಯಿಂದ ಇದರ ನೀರನ್ನು ಕುಡಿದು ಸ್ವರ್ಗವನ್ನು ಹೊಂದಿದರು. ಅದೇ ರೀತಿಯಾಗಿ ರಾಕ್ಷಸನೂ ಕೂಡ ಈ ನೀರಿನಲ್ಲಿ ನೀರಾನೆಯಿಂದ ಮರಣವನ್ನು ಹೊಂದಿ ಸ್ವತಂತ್ರವಾಗಿ ಸ್ವರ್ಗವನ್ನು

ನಕ್ರತಃ ಸ್ವೇಚ್ಛಯಾ ಸ್ವರ್ಗಂ ಜಗಾಮ ತವ ಪಶ್ಯತಃ ।
ನ ನೂನಂ ತತ್ರ ಮರಣಂ ಜಾತಂ ಯಜ್ಜನ್ಮ ದೃಶ್ಯತೇ ॥ ೧೪ ॥

॥ ನಾರದ ಉವಾಚ ॥

ಶಿಬೇ ನಿಶಮ್ಯ ಪುತ್ರಸ್ಯ ಶಿವಶರ್ಮಾ ಶುಭಂ ವಚಃ
ಉವಾಚ ಪೂರ್ವವೃತ್ತಾಂತಕಾರಣಂ ನಿಜಜನ್ಮನಃ ॥ ೧೫ ॥

॥ ಶಿವಶರ್ಮೋವಾಚ ॥

ವಿಷ್ಣುಶರ್ಮನ್ ಶೃಣುಷ್ವೇದಂ ಕಾರಣಂ ಮಮ ಜನ್ಮನಃ ।
ಕಥಯಾಮಿ ತವಾಗ್ರೇಹಂ ಶ್ರುತ್ವಾ ನಿಸ್ಸಂಶಯೋ ಭವ ॥ ೧೬ ॥

ಏಕದಾ ವಿಷ್ಣುಪೂಜಾಯಾಂ ಮಯಿ ಧ್ಯಾನಂ ಸಮಾಸ್ಥಿತೇ ।
ದುರ್ವಾಸಾಃ ಪ್ರಕೃತಿಕ್ರೋಧೀ ಮಮಾಶ್ರಮಮುಪಾಗತಃ ॥ ೧೭ ॥

---

ಎಲ್ಲರೆದುರಿಗೂ ಹೊಂದಿದನು. ಆದರೆ ನಿನಗೆ ಜನ್ಮವು ಉಂಟಾಗಿರುವುದರಿಂದ ಖಂಡಿತವಾಗಿಯೂ ಆ ತೀರ್ಥದಲ್ಲಿ ಮರಣವು ಉಂಟಾಗಲಿಲ್ಲ. ಎಂದು ಹೇಳಬಹುದು.

೧೫. ನಾರದನು ಹೇಳಿದನು-ಎಲೈ ಶಿಬಿಯೆ ! ಶಿವಶರ್ಮನು ಮಗನು ಹೀಗೆ ಹೇಳಿದುದನ್ನು ಕೇಳಿ ತನ್ನ ಜನ್ಮಕ್ಕೆ ಕಾರಣವಾದ ಪೂರ್ವದ ವೃತಾಂತವನ್ನು ಹೇಳಿದನು.

೧೬. ಶಿವಶರ್ಮನು ಹೇಳಿದನು-ಎಲೈ ವಿಷ್ಣುಶರ್ಮನೆ ! ನಾನು ಜನ್ಮ ತಾಳುವುದಕ್ಕೆ ಕಾರಣವನ್ನು ಕೇಳು. ಈಗ ಹೇಳುತ್ತೇನೆ. ಅದನ್ನು ಕೇಳಿ ಸಂಶಯವನ್ನು ಹಾಳುಮಾಡಿಕೊ.

೧೭ ಒಂದುಸಾರಿ ನಾನು ವಿಷ್ಣುಪೂಜೆಮಾಡುತ್ತ ಧ್ಯಾನದಲ್ಲಿರುವಾಗ ಸ್ವಭಾವದಿಂದ ಕೋಪವುಳ್ಳ ದುರ್ವಾಸ ಋಷಿಯು ಅಲ್ಲಿಗೆ ಬಂದನು.

ತಮಾಗತಮವಿಜ್ಞಾಯ ವಿಷ್ಣುಧ್ಯಾನಪರಾಯಣಃ ।
ತಸ್ಥಿವಾಂಸ್ತದವಸ್ಥೋಽಹಂ ಚಿರಂ ತನ್ನಾಮ ಸಂಸ್ಮರನ್ || ೧೮ ||

ಸ ಮುಹೂರ್ತಂ ಮುನಿಃ ಸ್ಥಿತ್ವಾ ಮಮಾಗ್ರೇ ಕ್ರೋಧಮೂರ್ಛಿತಃ ।
ಆತ್ಮನಾತ್ಮಾನಮಾಹೇದಮುಚ್ಚೈರಾರಕ್ತಲೋಚನಃ || ೧೯ ||

|| ದುರ್ವಾಸಾ ಉವಾಚ ||

ಅಹೋ ಅತ್ರೇರಹಂ ಪುತ್ರೋಽನಸೂಯಾಗರ್ಭಸಂಭವಃ ।
ಶಿವಾಂಶೋ ಮಾನುಷೇಣಾಲಮವಜ್ಞಾತೋಽಮುನಾಽಭವಂ || ೨೦ ||

ತ್ರಿಲೋಕೀರಾಜ್ಯತಶ್ಶಕ್ರೋ ಮಯಾ ಯೇನ ಪ್ರಪಾತಿತಃ ।
ತಂ ಮಾಮಪಿ ಮನುಷ್ಯೋಽಯಮವಜಾನಾತಿ ದುರ್ಮತಿಃ || ೨೧ ||

---

೧೮. ವಿಷ್ಣುವಿನ ಧ್ಯಾನದಲ್ಲಿಯೇ ಮಗ್ನನಾಗಿದ್ದುದರಿಂದ ಆ ದುರ್ವಾಸನು ಬಂದುದು ಗೊತ್ತಾಗಲೇ ಇಲ್ಲ. ಈ ರೀತಿಯಲ್ಲಿ ಆ ಸ್ವಾಮಿಯ ನಾಮಗಳ ಸ್ಮರಣೆಮಾಡುತ್ತ ಬಹಳ ಹೊತ್ತಿನವರೆಗೂ ಇದ್ದೆನು.

೧೯. ಸ್ವಲ್ಪ ಹೊತ್ತು ಇದ್ದನಂತರ ಅವನಿಗೆ ಕೋಪ ಬಂದಿತು. ಆಗ ನನ್ನೆದುರಿಗೆ ನಿಂತುಕೊಂಡು ತನ್ನಷ್ಟಕ್ಕೆ ತಾನೇ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಇಂತೆಂದನು.

೨೦. ದುರ್ವಾಸನು ಹೇಳಿದನು–ಇದೇನು ! ಪ್ರಸಿದ್ಧನಾದ ಅತ್ರಿಮಹರ್ಷಿಯ ಮಗ. ಅನಸೂಯೆಯೆಂಬ ಪತಿವ್ರತೆಯ ಹೊಟ್ಟೆಯಲ್ಲಿ ಹುಟ್ಟಿರುವೆನು. ಅಲ್ಲದೆ ಶಿವನ ಅಂಶವನ್ನು ಹೊಂದಿ ಮನುಷ್ಯಾಕಾರದಿಂದ ಹುಟ್ಟಿದ್ದೇನೆ. ಇಂತಹ ನನ್ನನ್ನು ಈತನು ಮಾತನಾಡಿಸಿ ಸತ್ಕರಿಸದೆ ಅವಮಾನ ಮಾಡಿದನಲ್ಲ !

೨೧. ನನ್ನನ್ನು ಅವಮಾನ ಪಡಿಸಿದುದರಿಂದ ಇಂದ್ರನನ್ನೇ ಮೂರು ಲೋಕದ ರಾಜ್ಯದಿಂದಲೂ ಭ್ರಷ್ಟನಾಗುವಂತೆ ಮಾಡಿದೆನು. ಅಂತಹ ನನ್ನನ್ನು ಮನುಷ್ಯನಾದ ಈತನು ಬುದ್ಧಿಯಿಲ್ಲದೆ ಅವಮಾನ ಮಾಡುತ್ತಿರುವನಲ್ಲ !

ಯೋ ಬಿಭೇತಿ ನ ಕಸ್ಮೋऽಪಿ ಮತ್ತಃ ಕಾಲಾನಲಾದಿವ |
ಮುಕ್ತ್ವಾ ದೇವತ್ರಯೀಂ ಲೋಕೇ ಯತಃ ಸಾರ್ಹತಮಾ ಮಮ ॥ ೨೨ ॥

ಯಮಸೌ ಧ್ಯಾಯತೇ ಮೂಢೋ ದೇವತಾಂ ಧ್ಯಾನಮಾಸ್ಥಿತಃ |
ನ ಕಥಂ ಬೋಧಯತ್ಯೇನಂ ಸೇತಿ ಮೂರ್ಧ್ನಿ ಸ್ಥಿತೋ ಮಮ ॥ ೨೩ ॥

ನೂನಂ ನಾರಾಯಣಂ ದೇವಂ ಧ್ಯಾಯತ್ಯೇಷ ಜಗದ್ಗುರುಂ |
ಯದ್ಧ್ಯಾನಾಮೃತತೃಪ್ತೋ ಹಿ ನ ಬಾಹ್ಯಜ್ಞಾನವಾನಯಂ ॥ ೨೪ ॥

ಹರಿಂ ವಾ ಬ್ರಹ್ಮ ವಾ ಶಂಭುಮನ್ಯಂ ವಾ ಧ್ಯಾಯತಾಮಯಂ |
ಮಮಾಯಂ ಸರ್ವಥಾ ದಂಡ್ಯೋ ಮದವಜ್ಞಾಕರೋ ಹ್ಯಯಂ ॥ ೨೫ ॥

---

೨೨. ಕಾಲಾಗ್ನಿಯಂತಿರುವ ನನ್ನಿಂದ ಹೆದರದವನು ಲೋಕದಲ್ಲಿ ಒಬ್ಬನೂ ಇಲ್ಲವೇ ಇಲ್ಲ. ಆದರೆ ಬ್ರಹ್ಮ ವಿಷ್ಣು ಮಹೇಶ್ವರರು ಮಾತ್ರ ನನಗೆ ಹೆದರುವುದಿಲ್ಲ. ಅವರು ನನಗೆ ಪೂಜ್ಯರು. ಅವರನ್ನು ಬಿಟ್ಟು ಎಲ್ಲರೂ ಹೆದರುತ್ತಾರೆ.

೨೩. ಈತನು ಯಾವ ದೇವತೆಯನ್ನು ಧ್ಯಾನ ಮಾಡುತ್ತಿದ್ದಾನೆಯೊ ಆ ದೇವತೆಯು ತಾನೇ ಈತನ ಮನಸ್ಸಿನಲ್ಲಿದ್ದುಕೊಂಡು ಇಲ್ಲಿಗೆ ಬಂದಿರುವ ನನ್ನ ವಿಷಯದಲ್ಲಿ ಈತನಿಗೆ ಜ್ಞಾನವನ್ನು ಹೇಗೆ ಕೊಡಲಿಲ್ಲ ?

೨೪. ಇವನು ಜಗದ್ಗುರುವಾದ ನಾರಾಯಣನನ್ನು ಧ್ಯಾನಮಾಡುತ್ತಿರುವನು. ಅದು ನಿಶ್ಚಯವು. ಅವನ ಧ್ಯಾನದಲ್ಲಿದ್ದರೇನೇ ಪ್ರಾಣಿಯು ಆ ಧ್ಯಾನಾಮೃತದಲ್ಲಿ ತೃಪ್ತಿಯನ್ನು ಹೊಂದುತ್ತ ಹೊರಗಿನ ಪ್ರಪಂಚವನ್ನೇ ತಿಳಿಯುವುದಿಲ್ಲ.

೨೫. ಈತನು ಹರಿಯನ್ನಾಗಲಿ ಬ್ರಹ್ಮನನ್ನಾಗಲಿ ಶಂಭುವನ್ನೇ ಆಗಲಿ ಯಾರನ್ನು ಬೇಕಾದರೂ ಧ್ಯಾನಿಸಲಿ. ಈತನು ನನ್ನ ವಿಷಯದಲ್ಲಿ ಅವಮಾನ ಪಡಿಸಿದುದರಿಂದ ನಾನು ಈತನನ್ನು ಶಿಕ್ಷಿಸಲೇಬೇಕು.

॥ ಶಿವಶರ್ಮೋವಾಚ ॥

ಏವಂ ಹಿ ಚಿಂತಯಿತ್ವಾ ಸ ಸುಮತಿಂ ಮಾಮಬೋಧಯತ್ !
ಶಶಾಪ ಚ ವಿಬುದ್ಧಂ ಮಾಮಿತಿ ಕ್ರೋಧಾರುಣೇಕ್ಷಣಃ ॥ ೨೬ ॥

ಮಮಾವಜ್ಞಾಪರಶ್ಚಿತ್ತೇ ಧ್ಯಾನಕಾಲೇ ಮನೋರಥಃ ।
ಕೃತಸ್ತೇ ನ ಭವೇ ಹ್ಯಸ್ಮಿನ್ ಭವಿಷ್ಯತಿ ಹಿ ಸರ್ವಥಾ ॥ ೨೭ ॥

ಇತ್ಯುಕ್ತ್ವಾ ಸ ಯದಾ ತಾತ ಚಲಿತೋ ಮುನಿರತ್ರಿಜಃ ।
ತದಾ ಮಯಾ ಚರಣಯೋರ್ಗೃಹೀತೋ ಭಯಭೀರುಣಾ ॥ ೨೮ ॥

ಇತ್ಯುಕ್ತಶ್ಚ ಮುನಿಶ್ರೇಷ್ಠ ಕ್ಷಮ್ಯತಾಂ ರುಡ್ವಿಮುಚ್ಯತಾಂ ।
ಮಾದೃಶಾ ನ ವಿಜಾನಂತಿ ಸಮ್ಯಕ್ಕರ್ಮ ಭವಾದೃಶಾಂ ॥ ೨೯ ॥

ಶಾಪಂ ತ್ವಂ ದತ್ತವಾನ್ ಘೋರಂ ಸಾಂಪ್ರತಂ ಮೇ ನಿರೇನಸಃ ।
ಪ್ರಸೀದ ಮಮ ನಮ್ರಸ್ಯ ಶಾಪಾಂತೇ ಕುರ್ವನುಗ್ರಹಂ ॥ ೩೦ ॥

---

೨೬. ಶಿವಶರ್ಮನು ಹೇಳಿದನು–ಈ ರೀತಿಯಾಗಿ ಯೋಚಿಸಿ ನಾನು ಹೊರಗಿನ ಜ್ಞಾನವನ್ನು ಹೊಂದುವಂತೆ ಮಾಡಿದನು. ಅನಂತರ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಎಚ್ಚರಗೊಂಡಿದ್ದ ನನ್ನನ್ನು ಶಪಿಸಿದನು.

೨೭. ನೀನು ಮನಸ್ಸಿನಲ್ಲಿ ಧ್ಯಾನ ಮಾಡುತ್ತಲಿದ್ದರೂ ನನ್ನನ್ನು ತಿರಸ್ಕರಿಸಿ ಅವಮಾನ ಮಾಡಿದುದರಿಂದ ಈ ಜನ್ಮದಲ್ಲಿ ನಿನ್ನ ಇಷ್ಟಾರ್ಥವು ಖಂಡಿತವಾಗಿಯೂ ಕೈಗೂಡುವುದಿಲ್ಲ.

೨೮. ಹೀಗೆಂದು ಹೇಳಿ ಆ ದುರ್ವಾಸನು ಹೊರಡುತ್ತಿರಲು ಆಗ ನಾನು ಬಹು ಭಯಪಟ್ಟವನಾಗಿ ಆತನ ಪಾದಗಳನ್ನು ಹಿಡಿದುಕೊಂಡೆನು.

೨೯. ಎಲೈ ಋಷಿಶ್ರೇಷ್ಠನೆ ! ಕ್ಷಮಿಸು. ಕೋಪವನ್ನು ಬಿಡು. ನನ್ನಂತಹ ದಡ್ಡರು ತಮ್ಮಂತಹವರ ಅಗಾಧವಾದ ಕೆಲಸಗಳನ್ನು ತಿಳಿಯಲಾರರು.

೩೦. ನೀನಾದರೋ ಘೋರವಾದ ಶಾಪವನ್ನು ಕೊಟ್ಟುಬಿಟ್ಟೆ. ನನ್ನಲ್ಲಿ ಸ್ವಲ್ಪವೂ ತಪ್ಪಿರುವುದಿಲ್ಲ ! ಪ್ರಸನ್ನನಾಗು. ದೀನತೆಯಿಂದ ಕೇಳಿಕೊಳ್ಳುತ್ತೇನೆ. ಈ ಶಾಪಕ್ಕೆ ಕೊನೆಯನ್ನು ತೋರಿಸು. ಅನುಗ್ರಹಮಾಡು.

ಇತ್ಯುಕ್ತಃ ಕೋಪಮುತ್ಸೃಜ್ಯ ದುರ್ವಾಸಾಃ ಶೀತಲೋಭವತ್ ।
ತಸ್ಯೇತನ್ನೋಚಿತಂ ತಾತ ಸ ಯತಶ್ಚಂದ್ರಶೇಖರಃ ॥ ೩೧ ॥

ಉವಾಚೇತಿ ಸ ಮಾಂ ಧೀಮಾನ್ ತ್ವಂ ಭೂತ್ವಾ ಬ್ರಾಹ್ಮಣೋತ್ತಮಃ ।
ಅತ್ರೈವ ಮರಣಂ ಪ್ರಾಪ್ಯ ನ ಭೂಯೋ ಜನ್ಮ ಲಪ್ಸ್ಯಸೇ ॥ ೩೨ ॥

॥ ಶಿವಶರ್ಮೋವಾಚ ॥

ಇತಿ ಮಾಮನುಗೃಹ್ಯಾಥ ಸ ಜಗಾಮ ದಿಗಂಬರಃ ।
ಉಷಿತ್ವಾ ತದ್ದಿನಂ ತಾತ ಮಯಾ ಸತ್ಕಾರಪೂಜಿತಃ ॥ ೩೩ ॥

ನ ಮುನೇರ್ಭಾಷಿತಂ ಮಿಥ್ಯಾ ಚಿಂತಯಿತ್ವಾಹಮಿತ್ಯಪಿ ।
ಜಗಾಮ ಸ್ವಗೃಹಂ ಚಿತ್ತೇ ಪಶ್ಚಾತ್ತಾಪಂ ವಹನ್ನಿತಿ ॥ ೩೪ ॥

ಅಹೋ ಮೇ ಧ್ಯಾಯತೋ ನಿತ್ಯಂ ಸತ್ತೀರ್ಥಾಶ್ರಮಿಣಸ್ತಥಾ ।
ದರ್ಶನಂ ದುರ್ಲಭಂ ಜಾತಂ ಶ್ರೀಪತೇರಿಹ ಜನ್ಮನಿ ॥ ೩೫ ॥

---

೩೧. ನಾನು ಹೀಗೆಂದು ಕೇಳಿಕೊಳ್ಳಲು ಆತನು ಕೋಪವನ್ನು ಬಿಟ್ಟು ಬಿಟ್ಟು ಶಾಂತನಾದನು. ಅವನು ಚಂದ್ರಶೇಖರನ ಅವತಾರವಾಮದರಿಂದ ಅವನಿಗೆ ಶಾಂತಗುಣ ಬರುವುದು ಯುಕ್ತವಾಗಿಯೇ ಇದೆ.

೩೨. ಆಗ ಅವನು ನನ್ನನ್ನು ಕುರಿತು ನೀನು ಬ್ರಾಹ್ಮಣೋತ್ತಮನಾಗಿ ಹುಟ್ಟಿ ಈ ಕ್ಷೇತ್ರದಲ್ಲಿಯೇ ಮರಣವನ್ನು ಹೊಂದಿ ಮತ್ತೆ ಜನ್ಮವನ್ನು ಹೊಂದು ವುದಿಲ್ಲ. ಎಂದು ಹೇಳಿದನು.

೩೩. ಶಿವಶರ್ಮನು ಹೇಳಿದನು-ಆ ದಿಗಂಬರನಾದ ದುರ್ವಾಸನು ಈ ರೀತಿಯಾಗಿ ನನಗೆ ಅನುಗ್ರಹಿಸಿ ಆ ದಿನ ಅಲ್ಲಿಯೇ ಇದ್ದು ನನ್ನ ಸತ್ಕಾರವನ್ನೂ ತೆಗೆದುಕೊಂಡು ಹೊರಟು ಹೋದನು.

೩೪. ಋಷಿಯ ಮಾತು ಸುಳ್ಳಾಗುವುದಿಲ್ಲವೆಂದು ನಾನೂ ಮನಸ್ಸಿನ ಲ್ಲಿಯೇ ಯೋಚಿಸಿಕೊಂಡು ಪಶ್ಚಾತ್ತಾಪ ಪಡುತ್ತ ಮನೆಗೆ ಹೊರಟು ಹೋದೆನು.

೩೫. ಆ ಉತ್ತಮವಾದ ತೀರ್ಥವನ್ನೂ ಆ ಆಶ್ರಮದವರನ್ನೂ ನೋಡುವ ಯೋಗವು ದುರ್ಲಭವಾಗಿದ್ದರೂ ನಾನು ನಿತ್ಯವೂ ಧ್ಯಾನ ಮಾಡುತ್ತಲೇ ಇದ್ದೆನು. ಆದರೂ ಆ ಜನ್ಮದಲ್ಲಿ ಶ್ರೀಪತಿಯ ದರ್ಶನವು ದುರ್ಲಭವಾಯಿತು.

**ಚಾತಕಸ್ಯೇವ ಮೇಘಸ್ಯ ಶುಚೌ ಸಂತಾಪಕಾರಿಣಿ ।**
**ಕುತೋಽಯಮಾಗತೋ ಮಹ್ಯಂ ವೈಕುಂಠಗತಿರೋಧಕಃ ॥ ೩೬ ॥**

**ಜನಸ್ಯ ಪ್ರಸ್ಥಿತಸ್ಯೇವ ಜಲದೋಽಕಾಲವಾರಿಮುಕ್ ।**
**ನ ದೋಷೋಽಸ್ತಿ ಮುನೇರ್ನೂನಂ ತಸ್ಯೈವೇಚ್ಛಾ ಹರೇಃ ಖಲು ॥ ೩೭ ॥**

**ಸುದರ್ಶನಂ ಹಿ ದತ್ವಾಪಿ ಮಮ ಜನ್ಮಾಂತರಂ ಕೃತಂ ।**
**ಮಯಾ ಸಂಸಾರಭೀತೇನ ಗ್ರಾಹ್ಯಂ ಪಾದಾಂಬುಜಂ ಹರೇಃ ॥ ೩೮ ॥**

**ನಿದಾಘಾತಪತಪ್ತೇನ ಪಥಿಕೇನೇವ ಪಾದಪಃ ।**
**ಕಿಂ ಧನಾಪತ್ಯಯೋಷಿದ್ಭಿರನಿತ್ಯೈಶ್ಚಾನ್ಯಬಂಧುಭಿಃ ॥ ೩೯ ॥**

**ಗೋವಿಂದ ಪರಮಾನಂದ ರಾಮೇತಿ ಮಮ ಜಲ್ಪತಃ ।**
**ಉದಾಸೀನವದಾಸೀನಃ ಕುಟುಂಬೇಷು ಹರಿಂ ಭಜೇ ॥ ೪೦ ॥**

---

೩೬. ದೇಹಕ್ಕೂ ತೊಂದರೆಯನ್ನುಂಟುಮಾಡುವ ಪ್ರತಾಪ ಹಾಸವನ್ನ ಚಾತಕಕ್ಕೆ ಮೇಘವು ಹೇಗೆ ದುರ್ಲಭವೋ ಹಾಗೆ ನನಗೆ ಆ ವಿಷ್ಣುವಿನ ದರ್ಶನವು ದುರ್ಲಭವಾಯಿತು. ವೈಕುಂಠಕ್ಕೆ ಹೋಗಲು ತೊಂದರೆಯನ್ನುಂಟುಮಾಡುವ ಈತನು ನನಗೆ ಎಲ್ಲಿ ಬಂದೊದಗಿದನು ?

೩೭. ನಾನು ವೈಕುಂಠಗತಿಯನ್ನು ಹೊಂದುವುದಕ್ಕೆ ಹೋಗುತ್ತಿರಲು ಈ ಋಷಿಯು ಪ್ರಯಾಣ ಮಾಡಲುದ್ಯುಕ್ತನಾದವನಿಗೆ ಅಕಾಲದ ಮಳೆ ಬಂದಂತೆ ಅಡ್ಡಿಯಾದನು. ಇದರಲ್ಲಿ ನನ್ನ ದೋಷವೇನೂ ಇಲ್ಲ. ಆ ಹರಿಯ ಇಚ್ಛೆಯೇ ಹಾಗಿದ್ದಿತು.

೩೮-೪೨. ಆತನು ಋಷಿಯ ರೂಪದಿಂದ ದರ್ಶನವನ್ನು ಕೊಟ್ಟರೂ ಇನ್ನೂ ಒಂದು ಜನ್ಮವನ್ನು ಎತ್ತುವಂತೆ ಮಾಡಿದನು. ಬಿಸಿಲಿನಿಂದ ತೊಂದರೆಗೊಂಡ ಪ್ರಯಾಣಿಕನು ಮರಗಳ ಬುಡವನ್ನು ಹಿಡಿಯುವಂತೆ ಸಂಸಾರಭೀತನಾದ ನಾನು ಆ ಹರಿಯ ಪಾದಗಳನ್ನೇ ಹಿಡಿಯಬೇಕು. ಹಣ ಮಕ್ಕಳು ಹೆಂಡಿರು ಬಂಧುಗಳು ಈ ಅನಿತ್ಯವಾದ ಪದಾರ್ಥಗಳಿಂದ ನನಗೇನು ಪ್ರಯೋಜನ? ಗೋವಿಂದ ಪರಮಾನಂದ ರಾಮ ಎಂದೇ ಯಾವಾಗಲೂ ಜಪಿಸುತ್ತೇನು ಸಂಸಾರದಲ್ಲಿದ್ದುಕೊಂಡಿದ್ದರೂ ಉದಾಸೀನನಾಗಿರುತ್ತ ಹರಿಯನ್ನು ಭಜಿಸುತ್ತ

ಪ್ರಾರಬ್ಧಮೇವ ಭೋಕ್ಷ್ಯಾಮಿ ಕರ್ಮಾಣ್ಯನ್ಯಾನಿ ತರ್ಜಯನ್ ।
ಚಿಂತಯನ್ನಿತ್ಯಹಂ ತಾತ ಕಿಯದ್ಭಿರ್ವಾಸರೈರಹಂ ॥ ೪೧ ॥

ಪ್ರಾಪ್ತವಾನ್ ಸ್ವಗೃಹಂ ಸ್ನಾತ್ವಾ ಹರಿಪಾದೋದಕಾನ್ತರೇ ।
ಪಿತುರ್ಮರಣಮಾಖ್ಯಾತಂ ಮಾತ್ರೇ ಬಂಧುಭ್ಯ ಏವ ಚ ॥ ೪೨ ॥

ಶ್ರುತ್ವಾ ತೇಽಪಿ ಶುಚಂ ಚಕ್ರುಃ ನಾವಿದನ್ನಿಮಮಸ್ಥಿರಂ ।
ಸತ್ಯಲೋಕಾದಿಲೋಕೇಷು ನಿಸ್ಪೃಹೋಽಹಂ ಗೃಹೇ ವಸನ್ ॥ ೪೩ ॥

ಮರಣಂ ಪ್ರಾಪ್ತವಾನ್ ಕೂಲೇ ಗಂಗಾಯಾ ಮುನಿಸೇವಿತೇ ।
ಮುನೇರ್ದುರ್ವಾಸಸಶ್ಶಾಪಾಜ್ಜಾತೋಽಹಂ ವೈಷ್ಣವೇ ಕುಲೇ ॥
ಮರಣಂ ಚಾತ್ರ ಸತ್ತೀರ್ಥೇ ಲಬ್ಧ್ವಾ ಪ್ರಾಪ್ಸ್ಯೇ ಹರೇಃ ಪದಂ ॥ ೪೪ ॥

---

ಮಿಕ್ಕ ಕರ್ಮಗಳೆಲ್ಲವನ್ನೂ ಬಿಟ್ಟು ಪ್ರಾರಬ್ಧವನ್ನು ಭೋಗಿಸುತ್ತಿದ್ದೆನು. ನಾನು ಹೀಗೆ ಯೋಚಿಸುತ್ತ ಯಾವಾಗಲೂ ಹರಿಯ ಪಾದೋದಕದಲ್ಲಿಯೇ ಸ್ನಾನ ಮಾಡುತ್ತ ಕೆಲವು ದಿನಗಳ ಮೇಲೆ ನನ್ನ ಮನೆಗೆ ಹೋದೆನು. ಅಲ್ಲಿ ನನ್ನ ತಾಯಿಗೂ ಬಂಧುಗಳಿಗೂ ನನ್ನ ತಂದೆಯ ಮರಣದ ವಿಷಯವನ್ನು ಹೇಳಿದೆನು.

೪೩-೪೪. ಅವರೆಲ್ಲರೂ ನನ್ನ ತಂದೆಯ ಮರಣದ ವಿಷಯವನ್ನು ಕೇಳಿ ದುಃಖಪಟ್ಟರೇ ಹೊರತು ಈ ಸಂಸಾರವು ಅಸ್ಥಿರವೆಂಬುದನ್ನು ತಿಳಿಯಲಿಲ್ಲ. ನಾನು ಮನೆಯಲ್ಲಿಯೇ ವಾಸಮಾಡಿಕೊಂಡಿದ್ದೆನು. ಹಾಗಿದ್ದರೂ ಸತ್ಯಲೋಕವೇ ಮುಂತಾದುವುಗಳಲ್ಲಿಯೂ ಕೂಡ ನನಗೆ ಆಸೆಯೇ ಇರಲಿಲ್ಲ ಕೊನೆಗೆ ಮುನಿಗಳಿಂದ ಸೇವಿತವಾದ ಗಂಗೆಯ ದಡದಲ್ಲಿ ಮರಣವನ್ನು ಹೊಂದಿದೆನು. ಈ ರೀತಿಯಾಗಿ ಮರಣ ಹೊಂದಿ ಆ ದುರ್ವಾಸನ ಶಾಪದ ದೆಸೆಯಿಂದ ಒಂದು ಉತ್ತಮವಾದ ವೈಷ್ಣವರ ವಂಶದಲ್ಲಿ ಹುಟ್ಟಿದೆನು. ಈಗ ಈ ಉತ್ತಮ ತೀರ್ಥದಲ್ಲಿ ಮರಣವನ್ನು ಹೊಂದಿ ಹರಿಯ ಸ್ಥಾನವಾದ ವೈಕುಂಠವನ್ನು ಸೇರುತ್ತೇನೆ.

|| ನಾರದ ಉವಾಚ ||

ಏವಂ ಸುರಾಚಾರ್ಯವಿನಿರ್ಮಿತೇ ತದಾ |
ತೀರ್ಥೇ ಮಹಾಭಾಗ ಪುರಾಕೃತಾನಿ ತೌ |
ದ್ವಿಜೋತ್ತಮೌ ಪ್ರೋಕ್ಷ್ಯ ಮಿಥಸ್ತು |
ತಸ್ಥತುರ್ವಿಚಿಂತಯಂತೌ ಹರಿಪಾದಪಲ್ಲವಂ || ೪೫ ||

ವಿಚಿಂತಯಂತೌ ಹರಿಮಬ್ಜಲೋಚನಂ
ಚತುರ್ಭುಜಂ ನೀರದನೀಲವಿಗ್ರಹಂ |
ನಿಜಾಯುಧಾಲಂಕರಣಾವಭಾಸಿತಂ
ಸ್ಮೃತ್ವಾತ್ರ ಸಾರೂಪ್ಯಮವಾಪತುರ್ಹರೇಃ || ೪೬ ||

ಯಸ್ಯ ಕ್ಷೇತ್ರಮಿದಂ ಪುಣ್ಯಮಿಂದ್ರಪ್ರಸ್ಥಾಖ್ಯಮುತ್ತಮಂ |
ತಸ್ಯೋಪಾಖ್ಯಾನಮಾಖ್ಯಾತಂ ಫಲಮಸ್ಯ ಶಿಬೇ ಶೃಣು || ೪೭ ||

ಗಂಗಾಸ್ನಾನೇನ ಯತ್ಪುಣ್ಯಂ ಕನ್ಯಾದಾನೋದ್ಭವಂ ಚ ಯತ್ |
ಶ್ರವಣಾದಸ್ಯ ತತ್ಪುಣ್ಯಂ ಶ್ರದ್ಧಯಾ ಲಭತೇ ನರಃ || ೪೮ ||

---

೪೫. ನಾರದನು ಹೇಳಿದನು-ಈ ರೀತಿಯಾಗಿ ಬೃಹಸ್ಪತಿಯು ಮಾಡಿರುವ ನಿಗಮೋದ್ಬೋಧಕ ತೀರ್ಥದಲ್ಲಿ ಆ ಬ್ರಾಹ್ಮಣರಿಬ್ಬರೂ ಒಬ್ಬರಿಗೊಬ್ಬರು ಮಾತನಾಡುತ್ತ ಹರಿಯ ಪಾದವನ್ನು ಚಿಂತಿಸುತ್ತಿದ್ದರು.

೪೬. ಕಮಲಾಕ್ಷನೂ ಚತುರ್ಭುಜನೂ ನೀಲಮೇಘಶ್ಯಾಮನೂ ಆಯುಧಗಳನ್ನು ಧರಿಸಿ ಪ್ರಕಾಶಿಸುತ್ತಿರುವವನೂ ಆದ ಆ ಸ್ವಾಮಿಯನ್ನು ಸ್ಮರಿಸುತ್ತ ಅವನ ಸಾರೂಪ್ಯವನ್ನೇ ಅವರೂ ಹೊಂದಿದರು.

೪೭. ಇಂದ್ರಪ್ರಸ್ಥವೆಂಬ ಹೆಸರುಳ್ಳ ಕ್ಷೇತ್ರದ ಉತ್ತಮವಾದ ಕಥೆಯನ್ನು ಹೇಳಿದ್ದೇನೆ. ಈ ಕಥೆಯನ್ನು ಹೇಳಿರುವೆನಲ್ಲ ! ಇದರ ಫಲವನ್ನು ಕೇಳು.

೪೮. ಗಂಗಾ ಸ್ನಾನದ ಪುಣ್ಯವನ್ನೂ ಕನ್ಯಾದಾನದ ಪುಣ್ಯವನ್ನೂ ಇದನ್ನು ಶ್ರದ್ಧೆಯಿಂದ ಕೇಳಿದರೆ ಮನುಷ್ಯನು ಹೊಂದುತ್ತಾನೆ.

ಪುತ್ರೇ ಜಾತೇ ತು ಗೋದಾನಾತ್ ಸಿಂಹಗೇ ಚ ಬೃಹಸ್ಪತೌ ।
ಗೋದಾವರೀಜಲೇ ಸ್ನಾನಾತ್ ಯತ್ಫಲಂ ಭುವಿ ಜಾಯತೇ ॥ ೪೯ ॥

ತತ್ಫಲಂ ಶ್ರವಣಾದಸ್ಯ ಜಾಯತೇ ನಾತ್ರ ಸಂಶಯಃ ।
ಅತಸ್ತೀರ್ಥೋತ್ತಮಾದಸ್ಮಾತ್ತೀರ್ಥಂ ನಾಸ್ತ್ಯಖಿಲಾರ್ಥದಂ ।
ಯಸ್ಮಿನ್ಮರಣತೋ ನೂನಂ ತಿರ್ಯಂಚೋಽಪಿ ಚತುರ್ಭುಜಾಃ ॥ ೫೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ನಿಗಮೋದ್ಬೋಧಕತೀರ್ಥ ವರ್ಣನಂ ನಾಮ ಏಕಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೪೯. ಮಗನು ಹುಟ್ಟಿದಾಗ ಗೋದಾನ ಮಾಡುವುದರಿಂದಲೂ ಬೃಹಸ್ಪತಿಯು ಸಿಂಹದಲ್ಲಿರುವಾಗ ಗೋದಾವರಿಯಲ್ಲಿ ಸ್ನಾನ ಮಾಡುವುದರಿಂದಲೂ ಭೂಮಿಯಲ್ಲಿ ಯಾವ ಫಲವು ಬರುತ್ತದೆಯೋ ಆ ಫಲವನ್ನು ಈ ಕಥೆಯನ್ನು ಕೇಳುವುದರಿಂದ ಹೊಂದುತ್ತಾನೆ. ಸಂಶಯವಿಲ್ಲ.

೫೦. ಆದ್ದರಿಂದ ಇಷ್ಟಾರ್ಥವನ್ನು ಕೊಡುವ ತೀರ್ಥವು ಇವಕ್ಕಿಂತಲೂ ಬೇರೆ ಮತ್ತೊಂದಿಲ್ಲ. ಇದರಲ್ಲಿ ಮರಣ ಹೊಂದಿದರೆ ಹುಳು ಹಬಟೆಗಳೂ ಕೂಡ ವಿಷ್ಣು ಸಾರೂಪ್ಯವನ್ನು ಹೊಂದುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ನಿಗಮೋದ್ಬೋಧನತೀರ್ಥ ವರ್ಣನ ಎಂಬ ಇನ್ನೂರ ಒಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವ್ಯಧಿಕದ್ವಿಶತತಮೋಽಧ್ಯಾಯಃ ॥



॥ ಸೌಭರಿರುವಾಚ ॥

ಧರ್ಮರಾಜ ಶಿಬಿಶ್ಶ್ರೀಮಾನಾಕರ್ಣ್ಯತದ್ವಚೋ ಮುನೇಃ ।
ನಾರದಸ್ಯಾಬ್ರವೀತ್ಪ್ರೀತಮುನಾ ಇತಿ ತಮುತ್ತಮಂ ॥ ೧ ॥

॥ ಶಿಬಿರುವಾಚ ॥

ಮುನೇ ತೀರ್ಥವರಸ್ಯಾಸ್ಯ ನಿಗಮೋದ್ಬೋಧಕಸ್ಯ ತೇ ।
ಮಾಹಾತ್ಮ್ಯಂ ವರ್ಣಿತಂ ಸಮ್ಯಕ್ ಶ್ರುತಂ ಪಾಪಹರಂ ಮಯಾ ॥ ೨ ॥

ಇಂದ್ರಪ್ರಸ್ಥೇತ್ರ ಶತಶಃ ಸಂತಿ ತೀರ್ಥಾನಿ ವೈ ಮುನೇ ।
ಅನ್ಯಸ್ಯಾಪಿ ಸಮಾಚಕ್ಷ್ವ ಮಾಹಾತ್ಮ್ಯಂ ಯದಿ ವಿದ್ಯತೇ ॥ ೩ ॥

---

## ಇನ್ನೂರ ಎರಡನೆಯ ಅಧ್ಯಾಯವು



೧. ಸೌಭರಿಯು ಹೇಳಿದನು-ಎಲೈ ಧರ್ಮರಾಜನೇ ! ಶಿಬಿಯು ಆ ನಾರದನು ಹೇಳಿದ ಈ ಮಾತನ್ನು ಕೇಳಿ ಸಂತೋಷಗೊಂಡು ಆತನನ್ನು ಕುರಿತು ಇಂತೆಂದನು.

೨ ಶಿಬಿಯು ಹೇಳಿದನು-ಎಲೈ ಮುನಿಯೆ ! ಈ ತೀರ್ಥವಾದ ನಿಗಮೋದ್ಬೋಧಕದ ಮಹಿಮೆಯನ್ನು ಹೇಳಿದೆ. ಪಾಪಹರವಾದ ಅದನ್ನು ನಾನೂ ಕೇಳಿದೆನು.

೩. ಇಂದ್ರ ಪ್ರಸ್ಥದಲ್ಲಿ ಇನ್ನೂ ಅನೇಕವಾದ ತೀರ್ಥಗಳಿವೆ. ಇವುಗಳಲ್ಲಿ ಮತ್ತಾವುದಾದರೂ ತೀರ್ಥದ ಮಹಿಮೆಯನ್ನು ಹೇಳು.

॥ ನಾರದ ಉವಾಚ ॥

ಇಂದ್ರಪ್ರಸ್ಥಾಂತರಾವರ್ತಿನ್ಯೇಷಾ ಯಾ ದ್ವಾರಕಾ ನೃಪ ।
ಅಸ್ಯಾಂ ಪುರಾ ಹಿ ಯದ್ವೃತ್ತಂ ತತ್ತೇ ವಚ್ಮಿ ಶೃಣುಷ್ವ ಮೇ ॥ ೪ ॥

ಕಾಂಪಿಲ್ಯೇಥ ದ್ವಿಜಃ ಕಶ್ಚಿತ್ ಪುಷ್ಪೇಷುಮೂರ್ತಿಮಾನಿವ ।
ಸರ್ವಾಸಾಂ ಯೋಷಿತಾಂ ಚಿತ್ತಹಾರೀ ಹಾಸ್ಯಾದಿವಿಭ್ರಮೈಃ ॥ ೫ ॥

ಸಂಗೀತವಿದ್ಯಾಕುಶಲಃ ಕೋಕಿಲಾಮಧುರಧ್ವನಿಃ ।
ಏಕದಾ ಸ ಕರೇ ವೀಣಾಂ ಧಾರಯನ್ ನಾದಯನ್ ಮುಹುಃ ॥ ೬ ॥

ಕಂಠೇನ ಕೋಕಿಲಾಲಾಪಮಧುರೇಣ ನರಾಧಿಪ ।
ಗಾಯನ್ ಬಭ್ರಾಮ ನಗರೇ ಪ್ರತಿರಥ್ಯಂ ಮಹಾಮತಿಃ ॥ ೭ ॥

ತಸ್ಯ ಗೀತಧ್ವನಿಂ ಶ್ರುತ್ವಾ ಮೂರ್ಛನಾತಾನಸಂಯುತಂ ।
ಮುಕ್ತ್ವಾ ಸ್ವಗೃಹಕಾರ್ಯಾಣಿ ತಮೀಯುಃ ಪೌರಯೋಷಿತಃ ॥ ೮ ॥

---

೪. ನಾರದನು ಹೇಳಿದನು–ಎಲೈ ದೊರೆಯೆ ! ಈ ಇಂದ್ರ ಪ್ರಸ್ಥದ ಎಲ್ಲೆಗೆ ಸೇರಿದ ದ್ವಾರಕೆಯೆಂಬುದೊಂದಿರುವುದು. ಅದರಲ್ಲಿ ಪೂರ್ವದಲ್ಲಿ ನಡೆದ ವಿಷಯ ವನ್ನು ಹೇಳುತ್ತೇನೆ. ಕೇಳು.

೫. ಕಾಂಪಿಲ್ಯವೆಂಬ ಪಟ್ಟಣದಲ್ಲಿ ಒಬ್ಬನು ಬ್ರಾಹ್ಮಣನಿದ್ದನು. ಅವನು ಮೂರ್ತಿಮಂತನಾದ ಮನ್ಮಥನಂತಿದ್ದನು. ಅವನು ಆಕಾರದಿಂದಲೂ ಹಾಸ್ಯ ನಟನೆಗಳಿಂದಲೂ ಎಲ್ಲಾ ಹೆಂಗಸರ ಮನಸ್ಸನ್ನೂ ಎಳೆಯುತ್ತಿದ್ದನು.

೬-೭. ಅವನು ಸಂಗೀತ ವಿದ್ಯೆಯಲ್ಲಿ ನಿಪುಣನಾಗಿದ್ದನು. ಧ್ವನಿಯು ಕೋಗಿಲೆಯ ಧ್ವನಿಯಂತೆ ಮಧುರವಾಗಿದ್ದಿತು. ಒಂದುಸಾರಿ ಅವನು ವೀಣೆಯನ್ನು ಹಿಡಿದುಕೊಂಡು ಅದನ್ನು ನುಡಿಸುತ್ತ ಮಧುರವಾಗಿ ಹಾಡುತ್ತ ಆ ಊರಿನ ಒಂದೊಂದು ಬೀದಿಯಲ್ಲಿಯೂ ಸುತ್ತುತ್ತಿದ್ದನು.

೮. ತಾಳಕ್ಕೆ ಸರಿಯಾಗಿ ಹಾಡುತ್ತ ಆಲಾಪಮಾಡುತ್ತಿರುವ ಅವನ ಆ ಗಾನವನ್ನು ಕೇಳಿ ಆ ಊರಿನ ಹೆಂಗಸರೂ ತಮ್ಮ ಮನೆಯ ಕೆಲಸಗಳನ್ನೂ ಬಿಟ್ಟು ಅವನ ಬಳಿಗೆ ಬಂದು ಸಂಗೀತವನ್ನು ಕೇಳುತ್ತಿದ್ದರು.

**ಮೋಹಿತಾಸ್ತಸ್ಯ ರೂಪೇಣ ಕಾಮವೇಗಂ ನ ಸೇಹಿರೇ |**
**ಜಾತಾಃ ಸ್ಖಲಿತವೀರ್ಯಾಸ್ತಾಃ ಗೀತಂ ಶ್ರುತ್ವಾ ಸಮುತ್ಸುಕಾಃ || ೯ ||**

**ಬ್ರಹ್ಮಣೋ ಮಾನಸಂ ಯೇನಾಽಽಕರ್ಷಿತಂ ಭಾರತೀಂ ಪ್ರತಿ |**
**ಶಿವಸ್ಯಾರ್ಧಶರೀರಂ ಚ ಪಾರ್ವತ್ಯೈ ಯೇನ ದಾಪಿತಂ || ೧೦ ||**

**ತಾಭ್ಯಾಮನ್ಯೋ ಜನೋ ಲೋಕೇ ವಶೀ ವಾ ಜ್ಞಾನವಾನಪಿ |**
**ನ ಸ್ಮರಂ ತಂ ಕ್ಷಮೋ ಜೇತುಂ ಸ್ತ್ರಿಯಃ ಪ್ರಕೃತಿಚಂಚಲಾಃ || ೧೧ ||**

**ತಾಃ ಸ್ಮರಾವೇಶಮಾಸೋಢುಂ ನ ಸಾಧ್ವ್ಯೋಽಪಿ ವಿಷೇಹಿರೇ |**
**ವಕ್ತವ್ಯಮಿತಿ ಕಿಂ ರಾಜನ್ ಲೋಕೇ ಕಾಮೋ ಹಿ ದುರ್ಜಯಃ || ೧೨ ||**

**ಅತಸ್ತಾಸ್ತತ್ರ ತತ್ರೇಯುಃ ಯತ್ರ ಯತ್ರ ವ್ರಜತ್ಯಸೌ |**
**ಪ್ರಗಾಯನ್ ಕಂಠವೀಣಾಭ್ಯಾಂ ತದ್ರೂಪಸ್ವರಮೋಹಿತಾಃ || ೧೩ ||**

---

೯. ಅವನ ಸಂಗೀತವನ್ನೂ ಕೇಳುತ್ತ ರೂಪವನ್ನೂ ನೋಡುತ್ತ ಆ ಹೆಂಗಸರು ತಮಗುಂಟಾದ ಕಾಮಬಾಧೆಯನ್ನು ಸಹಿಸಲಾರದೆ ಹೋದುದರಿಂದ ಅವರಿಗೆ ವೀರ್ಯಸ್ಖಲನೆಯಾಯಿತು.

೧೦-೧೧. ಯಾವ ಬ್ರಹ್ಮನೂ ಕೂಡ ಮಗಳಾದ ಸರಸ್ವತಿಯನ್ನು ನೋಡಿ ಕಾಮವನ್ನು ಜಯಿಸಲಾರದೆ ಅವಳಲ್ಲಿಯೇ ರಮಿಸಿದನೋ ಶಿವನು ಕಾಮನ ಬಾಧೆಯನ್ನು ತಡೆಯಲಾರದೆ ಪಾರ್ವತಿಯನ್ನು ದೇಹದಲ್ಲಿಯೇ ಅರ್ಧಾಂಗವನ್ನಾಗಿ ಸೇರಿಸಿಕೊಂಡನೋ ಆ ಕಾಮವನ್ನು ಜಯಿಸಲು ಯಾರಿಗೆ ತಾನೇ ಸಾಧ್ಯ? ಆ ಶಿವಬ್ರಹ್ಮರಿಗಿಂತಲೂ ಜ್ಞಾನಿಗಳೂ ಇಂದ್ರಿಯನಿಗ್ರಹಿಗಳೂ ಲೋಕದಲ್ಲಿ ಇರುವರೆ! ಹೀಗಿರುವಲ್ಲಿ ಸ್ವಭಾವವಾಗಿ ಚಂಚಲೆಯರಾಗಿರುವ ಆ ಹೆಂಗಸರು ಕಾಮವನ್ನು ಹೇಗೆ ತಾನೆ ಜಯಿಸಿಯಾರು?

೧೨. ಆ ಹೆಂಗಸರೊಳಗೆ ಪತಿವ್ರತೆಯರೂ ಕೂಡ ಆಸ್ಮರನ ವೇಗವನ್ನು ತಡೆಯಲಾರದೆ ಹೋದರು. ಹೀಗೆಂದ ಮೇಲೆ ಎಷ್ಟೆ ದೊರೆಯೇ! ಲೋಕದಲ್ಲಿ ಕಾಮನು ದುರ್ಜಯನೆಂಬುದನ್ನು ಹೇಳಬೇಕೇನು?

೧೩. ವೀಣೆಯನ್ನು ನುಡಿಸುತ್ತ ಬಾಯಿಂದ ಹಾಡುತ್ತ ಅವನು ಎಲ್ಲೆಲ್ಲಿ ಹೋಗುವನೋ ಅಲ್ಲಲ್ಲೆಲ್ಲಾ ಈ ಹೆಂಗಸರು ಅವನ ರೂಪಗಾನಗಳಿಗೆ ಮನಸೋತು ಹೋಗುತ್ತಿದ್ದರು.

ತಾಸಾಂ ಪತಿಸುತಭ್ರಾತೃಪಿತರೋಥ ನರಾಧಿಪ ।
ಆಗತ್ಯ ಭರ್ತ್ಸಯಿತ್ವಾ ತಾಃ ನಿನ್ಯುಃ ಸ್ವಾನ್ ಸ್ವಾನ್ ಗೃಹಾನ್ ಪ್ರತಿ ‖ ೧೪ ‖

ತಮನ್ವಿಷ್ಯ ಪುನಸ್ತಾಸ್ತು ಜಗ್ಮುಸ್ಸರ್ವಾಸ್ತದಂತಿಕೇ ।
ಯದಾ ತದಾ ಪೌರಜನಾ ವೃತ್ತಂ ತತ್ಪ್ರಾಹುರೀಶ್ವರೇ ॥
ರಾಜಾಪಿ ತಂ ಸಮಾಹೂಯ ಪಪ್ರಚ್ಛ ರಹಸಿ ದ್ವಿಜಂ ‖ ೧೫ ‖

‖ ರಾಜೋವಾಚ ‖

ಕೇನ ಮಂತ್ರೇಣ ಭೋ ವಿಪ್ರ ಮೋಹಿತಾಸ್ತಾಃ ಪುರಸ್ತ್ರಿಯಃ ।
ತನ್ಮಮಾಚಕ್ಷ್ವ ವಿಪ್ರೇಂದ್ರ ದಾಸ್ಯಾಮಿ ಬಹು ತೇ ಧನಂ ॥
ನೋ ಚೇನ್ನಿಷ್ಕಾಸಯಾಮಿ ತ್ವಾಂ ನಿಜರಾಜ್ಯಾನ್ನ ಸಂಶಯಃ ‖ ೧೬ ‖

॥ ನಾರದ ಉವಾಚ ॥

ಶ್ರುತ್ವೇತಿ ನೃಪತೇರ್ವಾಕ್ಯಂ ನೃಪತಿಂ ಸ ದ್ವಿಜೋತ್ತಮಃ ।
ಉವಾಚ ಸತ್ಯಂ ತಸ್ಯಾಗ್ರೇ ವಚೋ ರೂಪಗುಣಾನ್ವಿತಃ ‖ ೧೭ ‖

---

೧೪. ಆಗ ಆ ಹೆಂಗಸರ ಅಣ್ಣತಮ್ಮಂದಿರೂ ಗಂಡಂದಿರೂ ತಂದೆಯವರೂ ಅವರವರ ಹತ್ತಿರದ ಗಂಡಸರೂ ಬಂದು ಹೆದರಿಸಿ ಅವರನ್ನು ತಮ್ಮ ತಮ್ಮ ಮನೆಗಳಿಗೆ ಕರೆದುಕೊಂಡು ಹೋದರು.

೧೫. ಹೆಂಗಸರೆಲ್ಲರನ್ನೂ ಮನೆಗೆ ಕರೆದುಕೊಂಡು ಬಂದರೂ ಕೂಡ ಅವರು ಮತ್ತೆ ಹುಡುಕಿಕೊಂಡು ಅವನ ಹತ್ತಿರಕ್ಕೇ ಹೋದರು ಹೀಗಾಗಲು ಜನರೆಲ್ಲರೂ ಹೋಗಿ ಆ ಊರಿನ ರಾಜನ ಹತ್ತಿರದಲ್ಲಿ ದೂರನ್ನು ಹೇಳಿದರು. ರಾಜನು ಆತನನ್ನು ಕರೆಸಿ ಒಬ್ಬನನ್ನೇ ಗುಟ್ಟಾಗಿ ಇಂತೆಂದು ಕೇಳಿದನು.

೧೬. ರಾಜನು ಹೇಳಿದನು-ಎಲೈ ಬ್ರಾಹ್ಮಣನೆ! ನೀನು ಯಾವ ಮಂತ್ರದಿಂದ ಈ ಊರಿನ ಹೆಂಗಸರೆಲ್ಲರೂ ನಿನ್ನನ್ನು ಮೋಹಿಸುವಂತೆ ಮಾಡಿಕೊಂಡಿದ್ದೀಯೆ? ಅದನ್ನು ನನಗೆ ಹೇಳಿದರೆ ನಿನಗೆ ಬೇಕಾದ ಹಾಗೆ ಹಣವನ್ನು ಕೊಡುತ್ತೇನೆ. ಹೇಳದಿದ್ದರೆ ನಿನ್ನನ್ನು ನನ್ನ ರಾಜ್ಯದಿಂದಲೇ ಓಡಿಸುತ್ತೇನೆ. ಇದು ಖಂಡಿತ.

೧೭. ನಾರದನು ಹೇಳಿದನು—ಆ ಬ್ರಾಹ್ಮಣನು ರಾಜನ ಈ ಮಾತನ್ನು ಕೇಳಿ ಅವನ ಹತ್ತಿರ ತನ್ನ ರೂಪಗುಣಗಳಿಗೆ ಯೋಗ್ಯವಾದ ಮಾತನ್ನು ಇಂತೆಂದು ಹೇಳಿದನು.

|| ದ್ವಿಜ ಉವಾಚ ||

ನ ಮಂತ್ರೋ ನೌಷಧಂ ರಾಜನ್ ವಿದ್ಯತೇ ಮಯಿ ಭಿಕ್ಷುಕೇ |
ಕಿಂ ತು ತ್ವನ್ನಗರೇ ಸರ್ವಾ ಯೋಷಿತೋ ಹ್ಯಜಿತೇಂದ್ರಿಯಾಃ || ೧೮ ||

ರೂಪಂ ಮಮ ಸಮಾಲೋಕ್ಯ ಶ್ರುತ್ವಾ ಗೀತಧ್ವನಿಂ ತಥಾ |
ಸ್ಮರವೇಗಂ ಸಹನ್ತೇ ನ ರಾಜನ್ ತವ ಪುರಸ್ತ್ರಿಯಃ || ೧೯ ||

ಕಿಂ ಕರೋಮಿ ಮಹಾರಾಜ ಕೋಽಪರಾಧೋಽಸ್ತಿ ಮೇ ವಿಭೋ |
ಪುರಾಕೃತಮಿವೋಲ್ಲಂಘ್ಯಂ ಶಾಸನಂ ನ ಮಹೀಪತೇಃ || ೨೦ ||

|| ನಾರದ ಉವಾಚ ||

ಔಶೀನರ ಶಿಬೇ ರಾಜನ್ನೇವಂ ಕಥಯತಿ ದ್ವಿಜೇ |
ಸರ್ವೇ ಪೌರಾಸ್ಸಮೇತ್ಯಾಥ ಪ್ರಾವದನ್ನಿತಿ ಭೂಪತಿಂ || ೨೧ ||

---

೧೮. ದ್ವಿಜನು ಹೇಳಿದನು-ಎಲೈ ರಾಜನೆ ! ಭಿಕ್ಷುಕನಾದ ನನ್ನ ಬಳಿಯಲ್ಲಿ ಮಂತ್ರವಾಗಲಿ ಔಷಧಿಯಾಗಲಿ ಯಾವುದೂ ಇಲ್ಲ ಆದರೆ ನಿನ್ನ ಪಟ್ಟಣದಲ್ಲಿರುವ ಹೆಂಗಸರೊಬ್ಬರೂ ಜಿತೇಂದ್ರಿಯರಲ್ಲ.

೧೯. ಅವರು ನನ್ನ ರೂಪವನ್ನು ನೋಡಿಯೂ ನನ್ನ ಗೀತದ ಧ್ವನಿಯನ್ನು ಕೇಳಿಯೂ ತಮಗುಂಟಾದ ಸ್ಮರಬಾಧೆಯ ವೇಗವನು ತಡೆಯಲಾರದೆ ಹೀಗೆ ಬರುತ್ತಿರುವರು.

೨೦. ಎಲೈ ದೊರೆಯೆ ! ನಾನೇನು ಮಾಡಲಿ ? ನನ್ನ ತಪ್ಪು ತಾನೇ ಇದರಲ್ಲಿ ಏನಿರುವುದು ? ರಾಜನ ಅಪ್ಪಣೆಯು ಪೂರ್ವಜನ್ಮದ ಪಾಪಪುಣ್ಯಗಳಂತೆ ಮೀರಲು ಸಾಧ್ಯವಾಗತಕ್ಕದ್ದಲ್ಲ. ಅದರಂತೆ ಇದ್ದುದನ್ನು ಹೇಳಿದ್ದೇನೆ.

೨೧. ನಾರದನು ಹೇಳಿದನು-ಎಲೈ ಔಶೀನರಶಿಬಿಯೆ ! ಆ ಬ್ರಾಹ್ಮಣನು ಹೀಗೆ ಹೇಳುತ್ತಿದ್ದಾಗ ಆ ಪಟ್ಟಣದ ಜನಗಳೆಲ್ಲರೂ ಒಟ್ಟಾಗಿ ಬಂದು ರಾಜನಿಗೆ ಇಂತೆಂದು ಹೇಳಿದರು.

|| ಪೌರಾ ಊಚುಃ ||

ರಾಜನ್ನನೇನ ವಿಪ್ರೇಣ ಮೋಹಿತಾಃ ಪೌರಯೋಷಿತಃ ।
ಗೃಹೇಷು ನ ಹಿ ತಿಷ್ಠಂತಿ ಹ್ಯಸ್ಮಾಭಿರತಿವಾರಿತಾಃ || ೨೨ ||

ಯದ್ಯಯಂ ಮೋಹನಃ ಸ್ತ್ರೀಣಾಂ ನಗರೇ ವತ್ಸ್ಯತಿ ಪ್ರಭೋ ।
ತದಾ ದೇಶಾಂತರಾಣ್ಯೇವ ಯಾಸ್ಯಾಮೋ ವಯಮದ್ಯ ವೈ || ೨೩ ||

ಗತೋಽಸ್ಮಾಕಂ ವೃಷೋ ದೇವೋ ಹವ್ಯಕವ್ಯಕ್ರಿಯಾತ್ಮಕಃ ।
ತಮನುಪ್ರಸ್ಥಿತಾ ಕ್ಷೇತ್ರಾದ್ಗೌರಿಯಂ ಪಾಪಿನಾಮಿವ || ೨೪ ||

ವಿನಾ ತಂ ಶರಣಂ ಯಾತಂ ತ್ಯಕ್ತಂ ಶ್ರೀಭಿರ್ನರೇಶ್ವರ ।
ಅಥೈನಮನುಯಾಸ್ಯಂತಿ ವಾಸಿತಾಭೀಷ್ಟಪಂ ಪಥಾ || ೨೫ ||

---

೨೨. ಪಟ್ಟಣಿಗರು ಹೇಳಿದರು-ಎಲೈ ದೊರೆಯೆ ! ಈ ಬ್ರಾಹ್ಮಣನು ಬುದ್ಧಿಭ್ರಮಣೆಯನ್ನುಂಟುಮಾಡಿರುವುದರಿಂದ ನಮ್ಮ ಪಟ್ಟಣದ ಹೆಂಗಸರು ನಾವೆಷ್ಟು ತಡೆದರೂ ಮನೆಯಲ್ಲಿ ನಿಲ್ಲದೆ ಇವನ ಬಳಿಗೆ ಓಡಿಬರುತ್ತಿರುವರು.

೨೩. ಹೆಂಗಸರಿಗೆ ಮೋಹವನ್ನುಂಟುಮಾಡುವ ಇವನು ಈ ಊರಿನಲ್ಲಿ ಇದ್ದುಕೊಂಡಿದ್ದರೆ ನಾವೊಬ್ಬರೂ ಇಲ್ಲಿರದೆ ಬೇರೆ ಬೇರೆ ದೇಶಕ್ಕೆ ಹೋಗುತ್ತೇವೆ.

೨೪. ಪಾಪಿಯಾದವನು ಪ್ರವೇಶಿಸಿದ ಕೂಡಲೆ ಅವನ ಕ್ಷೇತ್ರ (ಹೊಗಲದ್ದೆ) ಗಳಿಂದ ಗೂಳಿಯು ಓಡಿಹೋಗುವಂತೆಯೂ ಆ ಗೂಳಿಯನ್ನನುಸರಿಸಿ ಉಳಿದ ಹಸುಗಳೂ ಓಡಿಹೋಗುವಂತೆಯೂ ನಮ್ಮ ಹವ್ಯಕವ್ಯಸ್ವರೂಪವಾದ ದೇವರು ಹೊರಟುಹೋಯಿತು. ಆ ದೇವರನ್ನು ಅನುಸರಿಸಿಕೊಂಡು ಧರ್ಮವೂ ಹೊರಟುಹೋಯಿತು.

೨೫. ಮನೆಗೆ ಬಂದು ಆ ದ್ವಿಜನು ಮನೆಯನ್ನು ಬಿಟ್ಟುಹೋದಾಗ ಅವನಿಲ್ಲದೆ ಹೋದುದರಿಂದ ಆ ಹೆಂಗಸರೂ ಮನೆಯನ್ನು ಬಿಟ್ಟುಹೋದರು. ಹಾಗೆ ಹೊರಟ ಆ ಹೆಂಗಸರು ಇಷ್ಟವನ್ನು ಸಲ್ಲಿಸುವ ಆತನನ್ನು ದಾರಿಯುದ್ದಕ್ಕೂ ಹಿಂದೆಯೇ ದಾರಿಯಲ್ಲಿ ಹೋಗುತ್ತ ಅನುಸರಿಸುತ್ತಿದ್ದಾರೆ.

ಶೂನ್ಯಾಲಯೇ ಕಥಂ ಲಕ್ಷ್ಮೀಃ ಯತ್ನತೋಽಪ್ಯವತಿಷ್ಠತೇ |
ಧರ್ಮೋಽರ್ಥಶ್ಚ ಗೃಹಂ ಚೈತತ್ತ್ರಯಂ ಸ್ತ್ರೀವಶಗಂ ಯತಃ |
ಕಾಸ್ತಾ ಧರ್ಮಧನಾಧೀನಾ ತಯೋರ್ನಾಶೇ ನ ತಿಷ್ಠತಿ || ೨೬ ||

॥ ನಾರದ ಉವಾಚ ॥

ಏವಂ ವದತ್ಸು ಪೌರೇಷು ಸ್ತ್ರಿಯಸ್ತೇಷಾಂ ಸಮಾಗತಾಃ |
ರಾಜಾಂತಿಕಂ ಸಮಾವಿಷ್ಟಾ ಇತ್ಯೂಚುಸ್ತಾಃ ಪರಸ್ಪರಂ ॥ ೨೭ ॥

|| ಪೌರಸ್ತ್ರಿಯ ಊಚುಃ ||

ಕಾಮಂ ವಾಮಾಕೃತಿಂ ವಿಪ್ರಮೇನಂ ಪ್ರಾಪ್ಯ ಮನಾಂಸಿ ನಃ |
ಉಲ್ಲಸಂತಿ ದಿವಾಧೀಶಂ ಕಮಲಾನೀವ ವಾರಿಣಿ ॥ ೨೮ ॥

ಸಂಕುಚಂತಿ ವಿನಾ ತೇನ ಕುಮುದಾನಿ ಯಥೇಂದುನಾ |
ಆಗಚ್ಛತ ಮಿಳಿತ್ವೈನಂ ಧಾರಯಾಮೋ ನೃಪಾಗ್ರತಃ |
ಅವಧ್ಯೋಽಯಂ ವಯಂ ಚಾಸ್ಯ ಕಿಂ ಕರಿಷ್ಯತಿ ಭೂಪತಿಃ || ೨೯ ||

---

೨೬. ಪಾಳು ಗುಡಿಯಲ್ಲಿ ಲಕ್ಷ್ಮಿಯು ಎಷ್ಟು ಕಷ್ಟಪಟ್ಟರೆ ತಾನೆ ನಿಲ್ಲುವಳು! ಧರ್ಮ ಅರ್ಥ ಮನೆ ಇವು ಮೂರು ಹೆಂಗಸರ ಅಧೀನವಾದುದು. ಆ ಹೆಂಗಸು ಧರ್ಮ ಧನಗಳಿಗೆ ಅಧೀನಳು. ಧರ್ಮವೂ ಧನವೂ ಇಲ್ಲದಮೇಲೆ ಆಕೆಯು ನಿಲ್ಲುವುದೇ ಇಲ್ಲ.

೨೭. ನಾರದನು ಹೇಳಿದನು-ಪಟ್ಟಣದವರು ಆ ರಾಜನಲ್ಲಿ ಹೀಗೆಂದು ಹೇಳುತ್ತಿರುವಾಗಲೇ ಆ ಊರಿನ ಹೆಂಗಸರೆಲ್ಲರೂ ಆ ರಾಜನಿರುವಲ್ಲಿಗೆ ಬಂದು ಒಬ್ಬರಿಗೊಬ್ಬರು ಹೀಗೆಂದು ಮಾತನಾಡಿಕೊಳ್ಳುತ್ತಿದ್ದರು.

೨೮-೨೯. ಪಟ್ಟಣದ ಹೆಂಗಸರು ಹೇಳಿದರು-ಹೆಂಗಸರಂತೆ ಸುಂದರವಾಗಿರುವ ಈ ಬ್ರಾಹ್ಮಣನನ್ನು ನೋಡಿದರೆ ನಮ್ಮ ಮನಸ್ಸು ಸೂರ್ಯನನ್ನು ನೋಡಿದರೆ ನೀರಿನಲ್ಲಿರುವ ಕಮಲಗಳು ಅರಳುವಂತೆ ಅರಳುತ್ತದೆ. ಅವನಿಲ್ಲದಿದ್ದರೆ ಚಂದ್ರನಿಲ್ಲದಿದ್ದರೆ ನೈದಿಲೆಯು ಮುಚ್ಚಿಕೊಳ್ಳುವಂತೆ ಆ ಮನಸ್ಸು ಸಂತೋಷವಿಲ್ಲದ ಖೇದಗೊಳ್ಳುತ್ತದೆ. ಬನ್ನಿರಿ ನಾವೆಲ್ಲರೂ ಸೇರಿ ರಾಜನ ಎದುರಿಗೇನೆ ಇವನನ್ನು ಹಿಡಿದುಕೊಳ್ಳೋಣ. ಶಾಸ್ತ್ರದ ರೀತಿಯಿಂದ ಬ್ರಾಹ್ಮಣನಾದ ಅವನನ್ನು ರಾಜನು ಕೊಲ್ಲಿಸಕೂಡದು ನಾವು ಹೆಂಗಸರಾದುದರಿಂದ ನಮ್ಮನ್ನೂ ಕೊಲ್ಲಿಸಕೂಡದು. ಮತ್ತೇನು ಮಾಡಿಯಾನು? ನೋಡೋಣ.

|| ನಾರದ ಉವಾಚ ||

ಇತ್ಯುಕ್ತ್ವಾ ತಾಸ್ತ್ವರಾವತ್ಯೋ ಜಗೃಹುಸ್ತಂ ದ್ವಿಜೋತ್ತಮಂ |
ಪಶ್ಯತಾಂ ನಿಜಭರ್ತೄಣಾಂ ರಾಜ್ಞಶ್ಚೈವ ಪುರಸ್ತದಾ || ೩೦ ||

ಊಚುಶ್ಚೈನಂ ಮನೋನಾಥ ಗೃಹಾನಾಗಚ್ಛ ಹೃಚ್ಛಯಂ ।
ಶಮಯಾಶು ವಿನಾದ್ಯ ತ್ವಾಂ ಸ್ಥಾತುಂ ನೈವ ಚ ಶಕ್ನುಮಃ || ೩೧ ||

|| ನಾರದ ಉವಾಚ ||

ಇತ್ಯಾಕರ್ಣ್ಯ ವಚಸ್ತಾಸಾಂ ಸ ವಿಪ್ರಃ ಪ್ರತ್ಯುವಾಚ ಹ || ೩೨ ||

|| ವಿಪ್ರ ಉವಾಚ ||

ಭವತೀನಾಮಹಂ ಪುತ್ರೋ ಭವತ್ಯೋ ಮಾತರೋ ಮಮ |
ಗೃಹಾನ್ ಕಿಮರ್ಥಮುತ್ಸೃಜ್ಯ ಭವತ್ಯಃ ಪರ್ಯಟಂತಿ ಹಿ || ೩೩ ||

---

೩೦. ನಾರದನು ಹೇಳಿದನು-ಹೀಗೆಂದು ಮಾತನಾಡಿಕೊಂಡು ಅವರೆಲ್ಲರೂ ಬೇಗನೆ ಹೋಗಿ ಗಂಡಂದಿರೂ ರಾಜನೂ ನೋಡುತ್ತಿರವಂತೆಯೇ ಅವರನ್ನು ಲೆಕ್ಕಿಸದೆ ಅವರೆದುರಿಗೇ ಆ ಬ್ರಾಹ್ಮಣನನ್ನು ಹಿಡಿದುಕೊಂಡರು.

೩೧. ಆಗ ಅವರೆಲ್ಲರೂ ಎಲೈ ಮನೋನಾಥನೇ ! ನಮ್ಮ ಮನೆಗಳಿಗೆ ಬಾ. ನಮ್ಮಲ್ಲಿರುವ ಕಾಮನನ್ನು ಶಾಂತಿಗೊಳಿಸು ನಿನ್ನನ್ನು ಬಿಟ್ಟು ನಿಲ್ಲಲು ನಮಗೆ ಆಗುವುದೇ ಇಲ್ಲ.

೩೨. ನಾರದನು ಹೇಳಿದನು-ಆ ಹೆಂಗಸರ ಈ ರೀತಿಯಾದ ಮಾತನ್ನು ಕೇಳಿ ಆ ಬ್ರಾಹ್ಮಣನು ಅವರನ್ನು ಕುರಿತು ಇಂತೆಂದನು.

೩೩. ಬ್ರಾಹ್ಮಣನು ಹೇಳಿದನು–ನಿಮ್ಮಗಳಿಗೆ ನಾನು ಮಗನು. ನನಗೆ ನೀವು ತಾಯಂದಿರು. ನೀವೇಕೆ ಮನೆಯನ್ನು ಬಿಟ್ಟು ಈ ರೀತಿಯಾಗಿ ಓಡಾಡುತ್ತಿದ್ದೀರಿ ?

ಆರಾಧಯತ ನಾಥರ್ಾ ಸ್ವಾರ್ ಯತೋ ಲೋಕದ್ವಯಂ ಧ್ರುವಂ ।
ಆರಾಧಿತೇಷು ಪತಿಷು ವಿಷ್ಣುಃ ಸರ್ವಸುರೇಶ್ವರಃ ॥ ೩೪ ॥

ಪ್ರಸನ್ನೋ ಭವತಿ ತ್ವತ್ರ ಪ್ರಸನ್ನೇ ಕಿಮು ದುರ್ಲಭಂ ।
ಯಾ ಸ್ತ್ರೀ ಸ್ವಪತಿಮುತ್ಸೃಜ್ಯ ಸೇವತೇನ್ಯಂ ಸುಖೇಚ್ಛಯಾ ॥ ೩೫ ॥

ಸಾಪವಾದಮವಾಪ್ನೋತಿ ಯಾತಿ ಘೋರಾಂ ಚ ದುರ್ಗತಿಂ ।
ಉಷಿತ್ವಾ ತತ್ರ ಕಲ್ಪಾಂತೇ ಯಾವತ್ಸಾ ಪತಿವಂಚನಾ ॥ ೩೬ ॥

ಪುನಸ್ತಸ್ಮಾದ್ವಿನಿರ್ಗತ್ಯ ಸ್ಥಾವರತ್ವಂ ಪ್ರಪದ್ಯತೇ ।
ತಸ್ಮಾದಪಿ ಪಶುತ್ವಂ ಸಾ ಲಭತೇ ಬಹುಜನ್ಮಸು ॥ ೩೭ ॥

ತತೋ ಮುಕ್ತ್ವಾ ಮನುಷ್ಯತ್ವೇ ವ್ಯಂಗಾ ಭವತಿ ತತ್ರ ಸಾ ।
ಏವಂ ಪಾಪಗತಿಂ ಜ್ಞಾತ್ವಾ ನಿವರ್ತಧ್ವಂ ಮನೋಜವಾತ್ ॥ ೩೮ ॥

---

೩೪-೩೭. ನೀವು ನಿಮ್ಮ ನಿಮ್ಮ ಗಂಡಂದಿರನ್ನು ಓಲೈಸಿಕೊಳ್ಳಿರಿ ಅದರಿಂದ ಇಹಪರಲೋಕಗಳಲ್ಲಿ ಸುಖವುಂಟು. ಗಂಡಂದಿರನ್ನು ಸೇವಿಸುತ್ತಿದ್ದರೆ ದೇವತೆಗಳ ಒಡೆಯನಾದ ವಿಷ್ಣುವು ಪ್ರಸನ್ನನಾಗುತ್ತಾನೆ. ಆ ವಿಷ್ಣುವು ಪ್ರಸನ್ನನಾದರೆ ಯಾವುದು ತಾನೇ ಸಿಕ್ಕುವುದಿಲ್ಲ! ಯಾವ ಹೆಂಗಸು ತನ್ನ ಗಂಡನನ್ನು ಬಿಟ್ಟು ಸುಖಾಪೇಕ್ಷೆಯಿಂದ ಪರನನ್ನು ಸೇವಿಸುವಳೋ ಅವಳು ಅಪವಾದವನ್ನು ಹೊಂದಿ ಬಹು ಘೋರವಾದ ನರಕವನ್ನೂ ಹೊಂದುತ್ತಾಳೆ. ಅವಳು ಎಷ್ಟು ದಿನಗಳು ಪತಿಗೆ ವಂಚಿಸಿರುವಳೋ ಅಷ್ಟು ಕಲ್ಪಗಳವರೆಗೂ ಆ ನರಕದಲ್ಲಿದ್ದು ಕೊನೆಗೆ ಭೂಮಿಯಲ್ಲಿ ಸ್ಥಾವರ ರೂಪವಾದ ಮರಗಳಾಗಿ ಹುಟ್ಟುತ್ತಾಳೆ. ಅದಾದ ಮೇಲೆ ಪಶುವಾಗಿ ಬಹಳ ಜನ್ಮಗಳವರೆಗೆ ಹುಟ್ಟುತ್ತಾಳೆ.

೩೮. ಆ ಜನ್ಮವಾದ ಮೇಲೆ ಮನುಷ್ಯ ಜನ್ಮವನ್ನು ಹೊಂದಿ ಅದರಲ್ಲಿಯೂ ಅವಯವದಿಂದ ಊನಗಳಾಗಿ ಹುಟ್ಟುತ್ತಾಳೆ. ಈ ರೀತಿಯಾಗಿ ಪಾಪದ ಗತಿಯನ್ನು ತಿಳಿದುಕೊಂಡು ಮನಸ್ಸಿನ ವೇಗವನ್ನು ತಡೆಯಿರಿ.

ನೋ ವಾ ಯಾಸ್ಯಥ ದೇಹಾನ್ತೇ ನರಕಂ ಭೃಶದಾರುಣಂ ।
ಯದಿಚ್ಛಂತಿ ಭವತ್ಯೋ ಮೇ ಸುಖಂ ತನ್ನೇಹ ಲಪ್ಸ್ಯಥ ॥
ಪಾಪಮೇವ ಹಿ ಯುಷ್ಮಾಕಂ ತತೋಽಧಃಪತನಂ ನೃಣಾಂ ॥ ೩೯ ॥

॥ ನಾರದ ಉವಾಚ ॥

ಶ್ರುತ್ವೈವಂ ವಚನಂ ತಸ್ಯ ದೃಷ್ಟ್ವಾ ಭರ್ತುರ್ಮುಖಾನಿ ತಾಃ ।
ಲಜ್ಜಯಾ ನತಮುಖ್ಯಸ್ತಾ ಲತಾ ವಾತಹತಾ ಇವ ॥ ೪೦ ॥

ತಾಸಾಂ ತು ಪುರನಾರೀಣಾಂ ಸ್ಮರಾಗ್ನಿರ್ಭೃಶದಾರುಣಃ ।
ಶಶಾಮ ತಸ್ಯ ಶೀತೇನ ವಟೋರ್ವಚನವಾರಿಣಾ ॥ ೪೧ ॥

ಉತ್ಥಾಯ ಚೇಲುಸ್ಸರ್ವಾಸ್ತಾ ವಿನಿಂದಂತ್ಯ ಇತಿ ಸ್ಮರಂ ।
ಬ್ರಹ್ಮಶಕ್ರಾದಿದೇವಾನಾಮಪಿ ಮೋಹಕರಂ ನೃಪ ॥ ೪೨ ॥

---

೩೯. ನೀವು ಹಾಗೆ ಹೋಗದಿದ್ದರೆ ಸತ್ತಮೇಲೆ ಬಹು ಕೆಟ್ಟ ನರಕವನ್ನು ಹೊಂದುತ್ತೀರಿ. ನೀವು ನನ್ನಿಂದ ಸುಖವನ್ನು ಅಪೇಕ್ಷಿಸುವಿರೆಂದರೆ ಆ ಸುಖವು ನನ್ನಿಂದ ನಿಮಗೆ ಸಿಕ್ಕುವುದಿಲ್ಲ. ಅಲ್ಲದೆ ನಿಮಗೆ ಪಾಪವೇ ಬರುತ್ತದೆ. ಅನಂತರವೂ ನಿಮಗೆ ನರಕ ಪ್ರಾಪ್ತಿಯೇ ನಿಶ್ಚಯವು.

೪೦. ನಾರದನು ಹೇಳಿದನು-ಅವನು ಹೀಗೆ ಹೇಳಿದುದನ್ನು ಕೇಳಿ ಹಿಂತಿರುಗಿ ನೋಡಲು ಅಲ್ಲಿ ತಮ್ಮ ಗಂಡಂದಿರಿರಲು ಅವರ ಮುಖವನ್ನು ನೋಡಿದರು. ಆಗ ನಾಚಿಕೆಯುಂಟಾಗಿ ತಲೆ ತಗ್ಗಿಸಿಕೊಂಡು ಗಾಳಿಯಿಂದ ಏಟು ತಿಂದ ಬಳ್ಳಿಗಳಂತೆ ಕಾಂತಿಗುಂದಿದರು.

೪೧. ಆಗ ಆ ಊರಿನ ಹೆಂಗಸರಿಗೆ ಬಹಳ ವೇಗದಿಂದಿದ್ದ ಸ್ಮರಾಗ್ನಿಯು ಆ ಬ್ರಹ್ಮಚಾರಿಯ ಮಾತೆಂಬ ನೀರಿನಿಂದ ಶಾಂತವಾಯಿತು.

೪೨. ಆಗ ಆ ಹೆಂಗಸರು ನಿರಾಶರಾಗಿ ಅಲ್ಲಿಂದೆದ್ದು ಬ್ರಹ್ಮ ಶಂಕರ ಇಂದ್ರರಿಗೂ ಮೋಹವನ್ನುಂಟುಮಾಡುವ ಸ್ಮರನನ್ನು ನಿಂದಿಸುತ್ತ ಹೊರಟರು.

॥ ಸ್ತ್ರೀಯ ಊಚುಃ ॥

ಧಿಗಿಮಂ ಪಾಪಕರ್ಮಾಣಂ ಶೀಲದಾರುಕುಠಾರಕಂ ।
ಕಾಮಂ ವಾಮದೃಶಾಂ ಪ್ರೀತ್ಯೈ ಧನ್ಯೋ ಯೇನ ಹತಃ ಸ್ಮರಃ ॥ ೪೩ ॥

ಕಿಂ ವದೇಮ ಜಗತ್ಪೂಜ್ಯಾಂ ರುಕ್ಮಿಣೀಂ ಜಠರೇ ಯಯಾ ।
ಧೃತಃ ಪ್ರದ್ಯುಮ್ನನಾಮ್ನಾಸೌ ರಾಹುಃ ಸ್ತ್ರೀಶೀಲಚಂದ್ರಭುಕ್ ॥ ೪೪ ॥

ಸ ದೇವಾಧಮ ಆಯಾತಿ ಯದಿ ನೋ ದೃಷ್ಟಿಗೋಚರಂ ।
ಭೂಯೋ ಧ್ಯಾನದೃಗೇಶಾನದೃಗಗ್ನೌ ತಂ ಕ್ಷಿಪಾಮಹೇ ॥ ೪೫ ॥

ಯೇನಾಯಂ ಜನಿತಃ ಪಾಪೋ ಹ್ಯಾತ್ಮಾರಾಮೇಣ ವಿಷ್ಣುನಾ ।
ಕೃತಃ ಷೋಡಶಸಾಹಸ್ರಸ್ತ್ರೀಪ್ರಿಯಃ ಕಾ ಹಿ ನಃ ಕಥಾ ॥ ೪೬ ॥

---

೪೩. ಹೆಂಗಸರು ಹೇಳಿದರು-ಶೀಲತನವೆಂಬ ಮರಕ್ಕೆ ಕೊಡಲಿಯಾಗಿರುವ ಪಾಪಿಯಾದ ಈ ಕಾಮುವನ್ನು ನಿಂದಿಸು. ಅವನಿಗೆ ನಿಂದೆಯಿರಲಿ ಹೆಂಗಸರಿಗೆ ಸಂತೋಷವಾಗಲು ಯಾವನು ಕಾಮನನ್ನು ಕೊಂದನೋ ಅವನೇ ಧನ್ಯನು.

೪೪. ಹೆಂಗಸರ ಶೀಲವೆಂಬ ಚಂದ್ರನನ್ನು ತಿಂದುಹಾಕುವ ರಾಹು ರೂಪನಾದ ಮನ್ಮಥನನ್ನು ಪ್ರದ್ಯುಮ್ನನೆಂಬ ಹೆಸರಿನಿಂದ ಹೊಟ್ಟೆಯಲ್ಲಿ ಧರಿಸಿಕೊಂಡಿದ್ದ ಜಗತ್ತಿಗೇ ಪೂಜ್ಯಳಾದ ಆ ರುಕ್ಮಿಣಿಯನ್ನು ಕುರಿತು ನಿಂದಿಸೋಣವೇ ?

೪೫. ದೇವತೆಗಳಲ್ಲಿ ನಿಂದ್ಯನಾದ ಆ ಕಾಮನು ನಮ್ಮ ಕಣ್ಣಿಗೆ ಬಿದ್ದರೆ ಅವನನ್ನು ಮತ್ತೆ ಧ್ಯಾನಮಾಡುತ್ತಿರುವ ಆ ಈಶ್ವರನ ಫಾಲನೇತ್ರದ ಬೆಂಕಿಯಲ್ಲಿ ಎಸೆಯುತ್ತೇವೆ.

೪೬. ತನ್ನಲ್ಲಿಯೇ ತಾನು ಸುಖಪಟ್ಟುಕೊಳ್ಳುವ ವಿಷ್ಣುವು ಈ ಪಾಪಿಯಾದ ಕಾಮನನ್ನು ಸೃಷ್ಟಿಸಿದನು. ಈ ಪಾಪಿಯು ಅಂತಹ ತಂದೆಯನ್ನೂ ಬಿಡದೆ ಅವನು ಹದಿನಾರು ಸಾವಿರ ಜನ ಹೆಂಗಸರನ್ನು ಕಟ್ಟಿಕೊಳ್ಳುವಂತೆ ಮಾಡಿರುವನಲ್ಲ ! ಅವನಿಗೇ ಹೀಗಾಗಿರುವಲ್ಲಿ ನಮ್ಮಗಳ ಪಾಡೇನು ?

॥ ನಾರದ ಉವಾಚ ॥

ಏವಂ ವಿನಿಂದ್ಯ ತಂ ಕಾಮಂ ತುಷ್ಟುವುಸ್ತಂ ದ್ವಿಜೋತ್ತಮಂ ॥ ೪೭ ॥

॥ ಸ್ತ್ರಿಯ ಊಚುಃ ॥

ಶೀಲಂ ಸ್ವಸ್ಯ ಚ ತಾಸಾಂ ಚ ರಕ್ಷಿತಂ ಯೇನ ಭೂಪತೇ ।
ಧನ್ಯಾ ಸಾಮುಷ್ಯ ಜನನೀ ಯಥಾಯಂ ಬ್ರಾಹ್ಮಣೋತ್ತಮಃ ॥ ೪೮ ॥

ಸ್ಮರಜಿನ್ನಿರ್ಮಿತೋ ಲೋಕೇ ಪರಧರ್ಮಸ್ಯ ರಕ್ಷಕಃ ।
ಧಿಗಸ್ತು ನೋ ರಾಜಲೋಕೈರ್ಹಸಿತಾಃ ಸ್ಮರನಿರ್ಜಿತಾಃ ।
ಯಾಭಿರ್ವಾಕ್ಯಮನೋಭ್ಯಾಂ ಚ ಜನಿತಂ ಪಾಪಮುಲ್ಬಣಂ ॥ ೪೯ ॥

॥ ನಾರದ ಉವಾಚ ॥

ಏವಂ ವಿಚಿಂತಯಂತ್ಯಸ್ತಾ ಏಕಮತ್ಯಯುತಾಃ ಸ್ತ್ರಿಯಃ ।
ಜಗ್ಮುಃ ಸ್ವಂ ಸ್ವಂ ಗೃಹಂ ಸರ್ವಾ ದ್ವಿಜವಾಕ್ಯೇನ ಬೋಧಿತಾಃ ॥ ೫೦ ॥

---

೪೭. ನಾರದನು ಹೇಳಿದನು-ಅವರು ಆ ಕಾಮನನ್ನು ಹೀಗೆ ನಿಂದಿಸುತ್ತ ಆ ಬ್ರಾಹ್ಮಣನನ್ನು ಹೊಗಳಿದರು.

೪೮. ಹೆಂಗಸರು ಹೇಳಿದರು-ಎಲೈ ದೊರೆಯೆ! ತನ್ನ ಶೀಲವನ್ನೂ ಈ ಹೆಂಗಸರ ಶೀಲವನ್ನೂ ಕಾಪಾಡಿದ ಆ ಬ್ರಾಹ್ಮಣನ ತಾಯಿಯು ಈ ಬ್ರಾಹ್ಮಣೋತ್ತಮನಂತೆಯೇ ಧನ್ಯಳು.

೪೯. ಈತನು ಸ್ಮರನನ್ನು ಜಯಿಸಿದವನಾಗಿಯೂ ಪರರ ಧರ್ಮವನ್ನು ರಕ್ಷಿಸುವವನಾಗಿಯೂ ಹುಟ್ಟಿದ್ದಾನೆ. ನಾವು ಸ್ಮರನಿಗೆ ಸೋತವರಾಗಿ ರಾಜನೂ ಜನರೂ ನೋಡಿ ನಗುವಂತೆ ಆದೆವು. ನಮ್ಮಗಳಿಗೆ ನಿಂದೆಯಿರಲಿ. ನಮ್ಮ ಜನ್ಮವು ಸಾರ್ಥಕವಲ್ಲ. ನಾವುಗಳು ಮನಸ್ಸಿನಿಂದಲೂ ಮಾತಿನಿಂದಲೂ ಹೆಚ್ಚು ಪಾಪವನ್ನು ಸಂಪಾದಿಸಿಕೊಂಡೆವು.

೫೦. ನಾರದನು ಹೇಳಿದನು–ಈ ರೀತಿಯಾಗಿ ಆ ಹೆಂಗಸರು ಯೋಚಿಸಿಕೊಂಡು ಎಲ್ಲರೂ ಒಟ್ಟಿಗೆ ಮಾತನಾಡಿಕೊಂಡು ಹೊರಟು ಆ ಬ್ರಾಹ್ಮಣನ ಮಾತಿನಿಂದ ಎಚ್ಚೆತ್ತವರಾಗಿ ಅವರವರ ಮನೆಗೆ ಹೊರಟು ಹೋದರು.

ಅಥ ರಾಜಾಪಿ ಕಾಂಪಿಲ್ಯಸ್ತಂ ದ್ವಿಜಂ ವಸ್ತ್ರಭೂಷಣೈಃ ।
ಸಂಪೂಜ್ಯ ಪ್ರೇಷಯಾಮಾಸ ತದ್ಗೃಹಂ ಸಂಯತೇಂದ್ರಿಯಂ ॥ ೫೧ ॥

ಅಥೋ ಗಚ್ಛತಿ ಕಾಲೇ ತು ಕಾರೂಷಾಧಿಪತಿರ್ಬಲೀ ।
ಕಾಂಪಿಲ್ಯಾಧಿಪತೇಃ ಸೈನ್ಯೈಃ ನಗರಂ ರುರುಧೇ ತದಾ ॥ ೫೨ ॥

ತಯೋರ್ಯುದ್ಧಮಭೂದ್ಘೋರಂ ತೇನ ಯುದ್ಧೇ ಸ ಘಾತಿತಃ ।
ನಗರಂ ಲುಂಠಿತಂ ಸರ್ವಂ ಹತಾಃ ಶೂರಾಶ್ಚ ಸರ್ವಶಃ ॥ ೫೩

ತಾಸ್ತ್ರಿಯಃ ಕಾಲಕೂಟಂ ತು ಖಾದಿತ್ವಾ ಮರಣಂ ಗತಾಃ ।
ಪ್ರಾಯಶ್ಚಿತ್ತಂ ತು ನ ಕೃತಂ ತಾಭಿಃ ಪಾಪಸ್ಯ ತಸ್ಯ ತು ॥ ೫೪ ॥

ಯೇನ ಪಾಪೇನ ತಾಸ್ಸರ್ವಾ ಭೀಷಣಾಖ್ಯಸ್ಯ ರಕ್ಷಸಃ ।
ರಾಕ್ಷಸ್ಯೋ ನಗರೇ ಜಾತಾ ಮಹಾಕಾಯಾ ಭಯಾನಕಾಃ ॥ ೫೫ ॥

---

೫೧ ಆ ಕಾಂಪಿಲ್ಯ ದೊರೆಯು ಆ ಬ್ರಾಹ್ಮಣನಿಗೆ ಒಡವೆ ಬಟ್ಟೆಗಳನ್ನು ಕೊಟ್ಟು ಗೌರವಿಸಿ ಜಿತೇಂದ್ರಿಯನೆಂದು ತಿಳಿದು ಅವನ ಮನೆಗೆ ಕಳುಹಿದನು.

೫೨. ಹೀಗಿರುತ್ತಿರಲು ಕೆಲವು ಕಾಲದಮೇಲೆ ಆ ಕಾಂಪಿಲ್ಯದೇಶದ ದೊರೆಯ ಪಟ್ಟಣವನ್ನು ಬಲಿಷ್ಠನಾದ ಕಾರೂಷಾಧಿಪತಿಯು ಸೈನ್ಯವನ್ನು ತಂದು ಮುತ್ತಿಗೆ ಹಾಕಿದನು.

೫೩. ಅವರಿಬ್ಬರಿಗೂ ಪ್ರಬಲವಾದ ಯುದ್ಧವು ನಡೆದು ಕಾರೂಪದ ದೊರೆಯು ಕಾಂಪಿಲ್ಯದ ದೊರೆಯನ್ನು ಕೊಂದನು. ಆಗ ಪಟ್ಟಣವನ್ನೆಲ್ಲಾ ಕೊಳ್ಳೆ ಹೊಡೆಯುತ್ತಾ ಭಟರನ್ನೆಲ್ಲಾ ಕೊಂದು ಹಾಕಿದರು.

೫೪. ಆಗ ಆ ಪಟ್ಟಣದ ಹೆಂಗಸರು ಕಾಲಕೂಟ ವಿಷವನ್ನು ತಿಂದು ಸತ್ತರು. ಆದರೆ ಆ ಆತ್ಮಹತ್ಯಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಿಲ್ಲ.

೫೫. ಆ ಪಾಪದಿಂದ ಅವರೆಲ್ಲರೂ ಭೀಷಣನೆಂಬ ರಾಕ್ಷಸನ ಪಟ್ಟಣದಲ್ಲಿ ರಾಕ್ಷಸಿಯರಾಗಿ ಹುಟ್ಟಿ ಭಯಂಕರರಾದರು.

ತತ್ರ ತಾ ನಿಹತಾಸ್ಸರ್ವಾಃ ಪುರಾ ನಾರ್ಯೋ ಹನೂಮತಾ ।
ಯುಜ್ಞಾಂಶ್ಚರಿಷ್ಯತೋ ವಿಷ್ಣೋಃ ತಿಷ್ಠತಾ ರಥಕೇತನೇ ॥ ೫೬ ॥

ಪುನಸ್ತಾ ಏವ ರಾಕ್ಷಸ್ಯೋ ಬಭೂವುರ್ಮಾರವೇಧ್ವನಿ ।
ಕ್ಷುಧಾರ್ತಾಶ್ಚ ತೃಷಾರ್ತಾಶ್ಚ ದರ್ಶನೇನ ಭಯಪ್ರದಾಃ ॥ ೫೭ ॥

ಏವಂ ತೇನ ತು ಪಾಪೇನ ವಾಙ್ಮನೋ ವಿಹಿತೇನ ತು ।
ತಾಭಿರ್ಜನ್ಮದ್ವಯಂ ಪ್ರಾಪ್ತಂ ರಾಕ್ಷಸೀಯೋನಿಮಿಶ್ರಿತಂ ॥ ೫೮ ॥

ಪಾಪೇನ ನಾಶಿತಂ ತಾಸಾಂ ಸನೃಪಂ ನಗರದ್ವಯಂ ।
ಅತ ಏವ ನ ಕರ್ತವ್ಯಂ ಪರಕಾಂತನಿಷೇವಣಂ ॥ ೫೯ ॥

ನಾರೀಭಿಃ ಪಾಪಭೀತಾಭಿರ್ವಾಙ್ಮನೋಭ್ಯಾಮಪಿ ಪ್ರಭೋ ।
ರೋಗೀ ಜಡೋ ದರಿದ್ರೋ ವಾ ನೇತ್ರಾಭ್ಯಾಂ ವರ್ಜಿತೋಽಪಿ ವಾ ॥
ನ ತ್ಯಾಜ್ಯಃ ಸ್ವಪತಿಃ ಸ್ತ್ರೀಭಿರಿಚ್ಛಂತೀಭಿಸ್ತು ಸದ್ಗತಿಂ ॥ ೬೦ ॥

---

೫೬. ಹಿಂದೆ ಯಾಗಾದಿಗಳನ್ನು ಮಾಡಲು ಅವತರಿಸಿದ ವಿಷ್ಣುವಿಗೆ ಸಹಾಯಕನಾಗಿದ್ದ ಹನುಮಂತನು ಆ ಭೀಷಣನ ಪಟ್ಟಣದಲ್ಲಿ ಅವರೆಲ್ಲರನ್ನೂ ಕೊಂದನು.

೫೭. ಆ ಹೆಂಗಸರೇ ಮತ್ತೆ ಒಂದು ಮರುಭೂಮಿಯ ದಾರಿಯಲ್ಲಿ ರಾಕ್ಷಸಿಯರಾಗಿಯೇ ಹುಟ್ಟಿ ಹಸಿವು ಬಾಯಾರಿಕೆಗಳಿಂದ ತೊಂದರೆ ಪಡುತ್ತಲೂ ಭಯಂಕರರಾಗಿರುತ್ತಲೂ ಇದ್ದರು.

೫೮. ಹೀಗೆ ಆ ಹೆಂಗಸರು ಕಾಂಪಿಲ್ಯ ನಗರದಲ್ಲಿ ಮಾಡಿದ ಮನೋವಾಕ್ಕಾಯಗಳ ಕರ್ಮದಿಂದ ರಾಕ್ಷಸಿಯರಾಗಿ ಎರಡು ಜನ್ಮಗಳನ್ನು ಹೊಂದಿದರು.

೫೯. ಈ ರೀತಿಯಾಗಿ ಅವರು ಮಾಡಿದ ಪಾಪದಿಂದ ಎರಡು ಪಟ್ಟಣಗಳು ದೊರೆಯೊಡನೆ ನಾಶವಾದುವು. ಆದ್ದರಿಂದಲೇ ನಾರಿಯರು ಪಾಪಕ್ಕೆ ಹೆದರುತ್ತ ಮನೋವಾಕ್ಕಾಯಗಳಿಂದಲೂ ಪರಪುರುಷನನ್ನು ಸೇವಿಸಬಾರದು.

೬೦. ತನ್ನ ಗಂಡನು ರೋಗಿಯಾಗಲಿ ದಡ್ಡನಾಗಲಿ ದರಿದ್ರನಾಗಲಿ ಕುರುಡನಾಗಲಿ ಕುಂಟನಾಗಲಿ ಹೇಗೇ ಇರಲಿ ಅವನನ್ನು ಹೆಂಗಸರು ಬಿಡಬಾರದು. ಬಿಟ್ಟರೆ ಅವರಿಗೆ ಸದ್ಗತಿಯು ಬರುವುದಿಲ್ಲ.

ಕಥಿತಮಿದಂ ಮಯಾ ಮನೋವಚೋಭ್ಯಾಂ
ಜನಿತಮಘಂ ಚ ಯದನ್ಯಕಾಂತಭಕ್ತ್ಯಾ ।
ಫಲಮಪಿ ಚ ಯದೇವ ಲಬ್ಧಮಾಭಿಃ
ತದಪಿ ಶಿವೇ ಬಹುವಿಸ್ತರೇಣ ತುಭ್ಯಂ ॥ ೬೧ ॥

ಇಂದ್ರಪ್ರಸ್ಥಗತಾ ಹಿ ಚೇಯಮನಘಾ ಯಾ ದ್ವಾರಕಾ ದೃಶ್ಯತೇ
ತಾ ಹ್ಯಸ್ಯಾ ಜಲಬಿಂದುದೇಹಪತನಾತ್ ಪೌರಸ್ತ್ರಿಯೋ ರೇಮಿರೇ ।
ಸ್ವರ್ಗೇ ಚಿತ್ತವಚೋನ್ಯಕಾಂತಭಜನಾಜ್ಜಾತಂ ವಿಮುಚ್ಯೋಲ್ಬಣಂ
ಕ್ರವ್ಯಾದತ್ವಮವಾಪ್ಯ ದೇವವನಿತಾಭಾವಂ ಸುರಾಹ್ಲಾದದಂ ॥ ೬೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ದ್ವಾರಕಾ ಮಾಹಾತ್ಮ್ಯ ವರ್ಣನಂ ನಾಮ ದ್ವ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೬೧. ಎಲೈ ಪಾರ್ವತಿಯೆ ! ಹೆಂಗಸರು ಪರಪುರುಷನಲ್ಲಿ ಮನಸ್ಸು ಮಾತುಗಳಿಂದ ಭಕ್ತಿಯಿಟ್ಟುದರಿಂದ ಬಂದ ಪಾಪವನ್ನು ಹೇಳಿದೆನು. ಮತ್ತು ಅವರು ಅದಕ್ಕೆ ಹೊಂದಿದ ಕೆಟ್ಟ ಫಲವನ್ನೂ ವಿಸ್ತಾರವಾಗಿ ಹೇಳಿದೆನು.

೬೨. ಇಂದ್ರಪ್ರಸ್ಥನಗರದಲ್ಲಿ ಎಲ್ಲಿಗೆ ಸೇರಿದಂತೆ ಕಾಣುವ ಈ ದ್ವಾರಕೆಯಲ್ಲಿ ಈ ಹೆಂಗಸರು ಕಾಳಿಂದೀ ನದಿಯ ನೀರು ಮೈಮೇಲೆ ಬೀಳುವಂತೆ ಅಲ್ಲಿನ ಪುರದ ಹೆಂಗಸರಾಗಿ ರಮಿಸಿದರು ಅದರಿಂದ ಅವರಿಗೆ ಸ್ವರ್ಗವು ಪ್ರಾಪ್ತವಾಯಿತು ಅದರಿಂದಲೇ ಅವರು ಬೇರೆಯ ಪತಿಯನ್ನು ಮನಸ್ಸಿನಲ್ಲಿಟ್ಟುಕೊಂಡುದರಿಂದ ಬಂದ ಪಾಪವನ್ನೂ ಆ ರಾಕ್ಷಸತನವನ್ನೂ ಕಳೆದುಕೊಂಡು ದೇವತಾಸ್ತ್ರೀಯರಾಗಿ ಹುಟ್ಟಿದರು. ಆಗ ಅವರೆಲ್ಲರೂ ದೇವತೆಗಳಿಗೆ ಸಂತೋಷಜನಕರಾಗಿದ್ದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದಿಯ ಮಹಿಮೆಯಲ್ಲಿ ದ್ವಾರಕಾ ಮಹಾತ್ಮ್ಯೆಯ ವರ್ಣನ ಎಂಬ ಇನ್ನೂರ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರ್ಯಧಿಕದ್ವಿಶತತಮೋಽಧ್ಯಾಯಃ ॥



॥ ಸೌಭರಿರುವಾಚ ॥

ಧರ್ಮಾತ್ಮಜ ನಿಶಮ್ಯೈತದ್ವಚಸ್ತಸ್ಯ ಮಹಾತ್ಮನಃ ।
ನಾರದಸ್ಯ ಶಿಬೀ ರಾಜಾ ಪ್ರೋವಾಚೇದಂ ವಿನೀತವತ್ ॥ ೧ ॥

॥ ಶಿಬಿರುವಾಚ ॥

ತಿಷ್ಠಂತ್ಯೋಮರುಮಾರ್ಗೇ ತಾ ರಾಕ್ಷಸ್ಯೋ ಮುನಿಪುಂಗವ ।
ಏತಸ್ಯಾ ದ್ವಾರಕಾಯಾಸ್ತು ಲೇಭಿರೇ ಸಲಿಲಂ ಕುತಃ ॥ ೨ ॥

---

## ಇನ್ನೂರ ಮೂರನೆಯ ಅಧ್ಯಾಯವು



೧. ಸೌಭರಿಯು ಹೇಳಿದನು-ಎಲೈ ಧರ್ಮಜನೆ ! ರಾಜನಾದ ಶಿಬಿಯು ಮಹಾತ್ಮನಾದ ನಾರದನ ಆ ಮಾತನ್ನು ಕೇಳಿ ವಿನಯದಿಂದ ಇಂತೆಂದನು.

೨. ಶಿಬಿಯು ಹೇಳಿದನು-ಎಲೈ ಋಷಿಯೆ ! ಮರುಪ್ರದೇಶದಲ್ಲಿದ್ದ ೩ ಹೆಂಗಸರು ರಾಕ್ಷಸಿಯರಾಗಿ ವಿಹರಿಸುತ್ತಲಿದ್ದರಷ್ಟೆ ! ಅವರು ಈ ದ್ವಾರಕೆಯ ನೀರನ್ನು ಹೊಂದಿದುದು ಹೇಗೆ ?

॥ ನಾರದ ಉವಾಚ ॥

ಶೃಣು ರಾಜನ್ ಕಥಾಂ ದಿವ್ಯಾಂ ಪೂತಾಂ ಪಾಪಪ್ರಣಾಶಿನೀಂ ।
ವಿಮಲಾಖ್ಯಸ್ಯ ವಿಪ್ರಸ್ಯ ಹಿಮವದ್ದ್ರೋಣಿವಾಸಿನಃ ॥ ೩ ॥

ಏಕಸ್ತು ಹಿಮವದ್ದ್ರೋಣ್ಯಾಂ ವಿಮಲೋ ನಾಮ ಭೂಸುರಃ ।
ದೇವರ್ಷಿಪಿತೃವಹ್ನೀನಾಂ ಪೂಜಕೋಽತಿಥಿಪೂಜಕಃ ॥ ೪ ॥

ಹರಿಪಾದಾರ್ಚನರತೋ ವೇದವೇದಾಂಗಧರ್ಮವಿತ್ ।
ವಾಸುದೇವಗುಣಗ್ರಾಮಪುರಾಣಶ್ರುತಿಮಾನಸಃ ॥ ೫ ॥

ವಾರ್ಧಕೇ ತಸ್ಯ ಪುತ್ರೋಽಭೂತ್ ಪ್ರಸಾದಾಚ್ಚಕ್ರಪಾಣಿನಃ ।
ಚಕಾರ ಹರಿದತ್ತೇತಿ ನಾಮ್ನಾ ತಂ ಜನಕಸ್ತಥಾ ॥ ೬ ॥

ವಿಧಿವದ್ವಿದಧೇ ಚಾಸ್ಯ ಕ್ಷೌರಕರ್ಮಾದಿಕಂ ಚ ತತ್ ।
ಗುರೋಃ ಸಕಾಶಾಜ್ಜಗ್ರಾಹ ಛಂದಾಂಸಿ ಹರಿದತ್ತಕಃ ॥ ೭ ॥

---

೩. ನಾರದನು ಹೇಳಿದನು-ಎಲೈ ದೊರೆಯೆ! ಪವಿತ್ರವೂ ಪಾಪನಾಶಕವೂ ಆದ ಹಿಮವತ್ಪರ್ವತದ ತಪ್ಪಲಿನಲ್ಲಿ ವಾಸಿಸುವ ವಿಮಲನೆಂಬ ಬ್ರಾಹ್ಮಣನ ಕಥೆಯನ್ನು ಕೇಳು.

೪. ಆ ವಿಮಲನೆಂಬ ಬ್ರಾಹ್ಮಣನು ಹಿಮವತ್ಪರ್ವತದ ತಪ್ಪಲಿನಲ್ಲಿ ದೇವತೆಗಳ ಋಷಿಗಳ ಅತಿಥಿಗಳ ಪೂಜೆಯನ್ನು ಮಾಡಿಕೊಂಡು ಒಬ್ಬಂಟಿಗನಾಗಿದ್ದನು.

೫. ಅವನು ವೇದವೇದಾಂಗಗಳನ್ನು ಅಧ್ಯಯನ ಮಾಡಿಕೊಂಡು ಹರಿಯ ಪಾದಗಳನ್ನು ಪೂಜಿಸುತ್ತ ವಾಸುದೇವನ ಗುಣಗಳನ್ನು ಹೊಗಳುತ್ತ ಪುರಾಣ ಶ್ರುತಿಗಳನ್ನೇ ಅವಲೋಕಿಸುತ್ತಿದ್ದನು.

೬. ಆತನಿಗೆ ಮುಪ್ಪಿನಲ್ಲಿ ಶ್ರೀಹರಿಯ ಅನುಗ್ರಹದಿಂದ ಒಂದು ಗಂಡು ಮಗುವು ಹುಟ್ಟಿತು. ಅದಕ್ಕೆ ಹರಿದತ್ತನೆಂದು ಹೆಸರಿಟ್ಟನು.

೭. ಅನಂತರ ತಂದೆಯು ಆಯಾಯ ಕಾಲಗಳಲ್ಲಿ ಚೌಲವೇ ಮುಂತಾದ ಕರ್ಮಗಳನ್ನು ಮಾಡಿದನು. ಉಪನಯನವಾದಮೇಲೆ ಆ ಹರಿದತ್ತನು ಗುರುವಿನಿಂದ ವೇದಾದಿಗಳನ್ನು ಅಧ್ಯಯನ ಮಾಡಿದನು.

ಅಧೀತ್ಯ ವಿಧಿವದ್ವೇದಾನ್ ದತ್ವಾ ಚ ಗುರುದಕ್ಷಿಣಾಂ ।
ಪ್ರವವ್ರಾಜ ವಿರಕ್ತಃ ಸನ್ ಸಮುಲ್ಲಂಘ್ಯಾಶ್ರಮದ್ವಯಂ ॥ ೮ ॥

ಜ್ಞಾತ್ವಾ ತತ್ಕರ್ಮ ತನ್ಮಾತಾ ವ್ಯಲಪತ್ಪುತ್ರವತ್ಸಲಾ ।
ಸ್ನಾಪಯಂತೀ ಕುಚದ್ವಂದ್ವಂ ಪುತ್ರವಿಶ್ಲೇಷಜಾಶ್ರುಭಿಃ ॥ ೯ ॥

॥ ಮಾತೋವಾಚ ॥

ಮಾಮನಾಥಾಂ ಪರಿತ್ಯಜ್ಯ ತಾತ ಯಾತೋಸಿ ಕುತ್ರ ವೈ ।
ಪಿತರಂ ಚ ಜರಾಗ್ರಸ್ತಂ ಷಟ್ಪದೋ ಬಲ್ವಜಾವಿವ ॥ ೧೦ ॥

ವಾರ್ಧಕೇ ತ್ವಂ ಮಯಾ ಪ್ರಾಪ್ತಃ ಶ್ರೀಪತೇಃ ಪಾದಸೇವಯಾ ।
ಮಾಂ ವಿಹಾಯಾಭಜಸ್ತ್ವಂ ವೈ ಚರಣಂ ತಸ್ಯ ಮುಕ್ತಯೇ ॥ ೧೧ ॥

---

೮. ವೇದಗಳನ್ನು ನಿಯಮದಿಂದ ಅಧ್ಯಯನಮಾಡಿ ಗುರುವಿಗೆ ಗುರುದಕ್ಷಿಣೆಯನ್ನು ಕೊಟ್ಟು ವೈರಾಗ್ಯವನ್ನು ಹೊಂದಿ ಗೃಹಸ್ಥ ವಾನಪ್ರಸ್ಥಗಳನ್ನು ಬಿಟ್ಟು ಸನ್ಯಾಸವನ್ನು ಹೊಂದಿದನು.

೯. ಅವನ ತಾಯಿಯು ಮಗನ ಈ ಕೆಲಸವನ್ನು ತಿಳಿದು ಬಹು ಪ್ರೀತಿಯಿದ್ದುದರಿಂದ ಆ ಮಗನ ಅಗಲುವಿಕೆಯ ದುಃಖದಿಂದ ಬಹುವಾಗಿ ಕಣ್ಣೀರು ಸುರಿಸಿದಳು.

೧೦. ತಾಯಿಯು ಹೇಳಿದಳು-ಅಪ್ಪ ! ಅನಾಥೆಯಾಗಿರುವ ನನ್ನನ್ನು ಬಿಟ್ಟು ನೀನು ಎಲ್ಲಿ ಹೋದೆ ? ತಂದೆಯೂ ಕೂಡ ಮುದುಕನಾಗಿದ್ದಾನೆ. ನಮ್ಮಿಬ್ಬರನ್ನೂ ನೀನು ದುಂಬಿಯು ಹುಲ್ಲನ್ನು ಬಿಟ್ಟು ಹೋಗುವಂತೆ ಹೋದೆಯಲ್ಲ ?

೧೧. ಮುಪ್ಪಿನಲ್ಲಿ ನಾನು ಶ್ರೀಪತಿಯ ಪಾದಸೇವೆ ಮಾಡಿ ನಿನ್ನನ್ನು ಪಡೆದೆನು. ನೀನು ಮುದುಕಿಯಾದ ನನ್ನನ್ನು ಬಿಟ್ಟು ಮುಕ್ತಿಗೋಸ್ಕರ ಆ ಸ್ವಾಮಿಯ ಪಾದಗಳನ್ನು ಭಜಿಸಲು ಹೋದೆಯಲ್ಲ ? ನನ್ನನ್ನು ಹರಿಸೇವೆಗೇಕೆ ಜೊತೆಯಲ್ಲಿ ಕರೆದುಕೊಂಡು ಹೋಗಲಿಲ್ಲ ?

ಅಹಂ ಮೂಢಾ ಧ್ರುವಂ ತಾತ ಧ್ರುವಮಾರಾಧ್ಯ ಯದ್ಧರಿಂ ।
ಅಧ್ರುವಂ ವಾಂಛಿತವತೀ ಭವಂತಂ ಸುಖಲಬ್ಧಯೇ ॥ ೧೨ ॥

ತ್ವಂ ಸುಧೀರ್ವತ್ಸ ಸರ್ವಾರ್ಥಂ ಯದ್ವಿಷ್ಣುಂ ಭಜಸೇ ಸ್ವಯಂ ।
ಅಧ್ರುವಂ ಜಗದೇತದ್ವೈ ಮತ್ವಾಸೀಸ್ತ್ವಮಪಿ ಧ್ರುವಃ ॥ ೧೩ ॥

ಕಿಂ ಕರೋಮಿ ಕ್ವ ಗಚ್ಛಾಮಿ ಮಾಯಯಾ ಜ್ಞಾನಂ ಛಿನತ್ತಿ ಮೇ ।
ಸುಫಲೋತ್ಪಾದಕಂ ಶಸ್ತ್ರೀ ರಂಭಾಮೂಲಮಿವೋಲ್ಬಣಂ ॥ ೧೪ ॥

ಧನ್ಯೋ ದಶರಥೋ ರಾಜಾ ಯೋ ಮೃತೋ ರಾಮಶೋಕತಃ ।
ಧಿಙ್ಮಾಂ ಪುತ್ರಸ್ಯ ವಿಶ್ಲೇಷಾದ್ಧಾರಯಂತೀಂ ಸ್ವಜೀವಿತಂ ॥ ೧೫ ॥

ಆಗಚ್ಛ ದರ್ಶನಂ ದೇಹಿ ತಾತ ಮಾಂ ಪರಿತಾರಯ ।
ವದ ವೇದಮಯೀಂ ವಾಣೀಂ ಪಿತುರಗ್ರೇ ಗುಣಾರ್ಣವ ॥ ೧೬ ॥

---

೧೨. ಎಲೈ ಮಗನೆ! ನಾನು ಬುದ್ಧಿಯಿಲ್ಲದವಳು. ಆ ಹರಿಯನ್ನು ಪೂಜಿಸಿ ಶಾಶ್ವತವಾದುವುಗಳನ್ನು ಕೇಳಿಕೊಂಡು ಅವನ್ನು ಹೊಂದದೆ ಅಸ್ಥಿರನಾದ ನಿನ್ನನ್ನು ಹೊಂದಿದೆನಲ್ಲ !

೧೩. ಎಲೈ ಮಗನೆ! ನೀನೇ ಬುದ್ಧಿವಂತನು. ಸರ್ವಸ್ವರೂಪಿಯಾದ ಆ ಸ್ವಾಮಿಯನ್ನು ಭಜಿಸುತ್ತೀಯೆ. ಹಾಗೆ ಭಜಿಸಿ ಈ ಪ್ರಪಂಚವನ್ನು ಅಧ್ರುವವನ್ನಾಗಿ ತಿಳಿದುದರಿಂದ ನೀನೇ ಧ್ರುವನಾಗಿ (ಶಾಶ್ವತನಾಗಿ) ಆದೆ.

೧೪. ಏನು ಮಾಡಲಿ? ಎಲ್ಲಿ ಹೋಗಲಿ? ಮಾಯೆಯು ನನ್ನ ಜ್ಞಾನವನ್ನು ನಾಶಮಾಡುತ್ತಿರುವುದು. ಶಸ್ತ್ರಧಾರಿಯು ಒಳ್ಳೆಯ ಫಲವನ್ನು ಬಿಡುವ ಬಾಳೆಯ ಬುಡವನ್ನೇ ಕತ್ತರಿಸುವಂತೆ ಕತ್ತರಿಸುತ್ತಿದೆಯಲ್ಲ.

೧೫. ರಾಮನ ಅಗಲುವಿಕೆಯಿಂದುಂಟಾದ ದುಃಖದಿಂದ ಮೃತಪಟ್ಟ ದಶರಥನೇ ಧನ್ಯನು. ಮಗನು ಹೊರಟುಹೋದರೂ ನಾನು ಜೀವಧಾರಣೆಯನ್ನು ಮಾಡಿಕೊಂಡಿರುವೆನಲ್ಲ ! ನನಗೆ ಧಿಕ್ಕಾರವಿರಲಿ.

೧೬. ಎಲೈ ಮಗನೆ! ಬಾ. ದರ್ಶನವನ್ನು ಕೊಡು. ನನ್ನನ್ನು ಉದ್ಧಾರಮಾಡು. ನಿನ್ನ ತಂದೆಯ ಎದುರಿನಲ್ಲಿ ವೇದದ ರೂಪವಾದ ಮಾತುಗಳನ್ನು ಉಚ್ಚರಿಸು.

|| ನಾರದ ಉವಾಚ ||

ಏವಂ ವಿಲಪ್ಯ ತನ್ಮಾತಾ ರಾಜರ್ಷೇ ಸಾ ಪತಿತಾ ಭುವಿ ।
ದಲನಾದ್ರಾಹುದಂತಾನಾಂ ಲೇಖಾ ಚಾಂದ್ರಮಸೀ ಯಥಾ ॥ ೧೭ ॥

ಅಥಾಜಗಾಮ ವಿಪ್ರರ್ಷಿಃ ವಿಮಲೋ ನೃಪಸತ್ತಮಃ ।
ದೃಷ್ಟ್ವಾ ತಾಂ ಪತಿತಾಂ ಭೂಮೌ ಕಿಂ ಕಿಮಿತ್ಯಭ್ಯಭಾಷತ ॥ ೧೮ ॥

ಕಸ್ಮಾದಿಯಂ ಕೀರ್ಣಕೇಶಾ ವ್ಯಸ್ತವಸ್ತ್ರವಿಭೂಷಣಾ ।
ಪತಿತಾ ಭುವಿ ಕಲ್ಯಾಣಂ ಹರಿದತ್ತಸ್ಯ ವಿದ್ಯತೇ ॥
ತಸ್ಯಾ ವಯಸ್ಯಸ್ತಾಸ್ಸರ್ವಾಃ ಪ್ರೋಚುಸ್ತಂ ವಿಮಲಂ ನೃಪ ॥ ೧೯ ॥

|| ವಯಸ್ಯಾ ಊಚುಃ ||

ಅಧೀತ್ಯ ವೇದಾಂಸ್ತೇ ಪುತ್ರೋ ದತ್ವಾ ಚ ಗುರುದಕ್ಷಿಣಾಂ ।
ನಾರಾಯಣಪರೋ ಭೂತ್ವಾ ಪ್ರಾವ್ರಾಜದ್ಧರಿದತ್ತಕಃ ॥
ತಸ್ಯ ವಿಶ್ಲೇಷಶೋಕೇನ ಪತಿತೇಯಂ ಧರಾತಲೇ ॥ ೨೦ ॥

---

೧೭. ನಾರದನು ಹೇಳಿದನು-ಅವನ ತಾಯಿಯು ಈ ರೀತಿಯಾಗಿ ಅಳುತ್ತ ರಾಹುವಿನ ಹಲ್ಲುಗಳ ಅಗಿತದಿಂದ ಚಂದ್ರನಲೇಖೆಗಳು ಬೀಳುವಂತೆ ಬಿದ್ದು ಬಿಟ್ಟಳು.

೧೮. ಅನಂತರ ಆಕೆಯ ಗಂಡನಾದ ವಿಮಲನೆಂಬ ಬ್ರಾಹ್ಮಣನು ಬಂದನು. ಹಾಗೆ ಅಳುತ್ತ ಬಿದ್ದಿರುವ ಆಕೆಯನ್ನು ನೋಡಿ ಇದೇನು ? ಎಂದು ಕೇಳಿದನು.

೧೯. ಈಕೆಯು ಏತಕ್ಕೆ ತಲೆಯನ್ನು ಕೆದರಿಕೊಂಡು ಬಟ್ಟೆಗಳನ್ನೂ ಒಡವೆಗಳನ್ನೂ ಚೆಲ್ಲಾಡಿಸುತ್ತ ಬಿದ್ದಿರುವಳು ? ಹರಿದತ್ತನು ಕ್ಷೇಮವಾಗಿರುವನಷ್ಟೆ ? ಎಂದನು. ಆಗ ಆಕೆಯ ಸಖಿಯರು ವಿಮಲನಿಗೆ ಎಲ್ಲವನ್ನೂ ತಿಳಿಸಿದರು.

೨೦. ಸಖಿಯರು ಹೇಳಿದರು-ಎಲೈ ವಿಮಲನೆ ! ನಿನ್ನಮಗನು ವೇದಗಳನ್ನು ಓದಿ ಗುರುದಕ್ಷಿಣೆಯನ್ನು ಕೊಟ್ಟು ನಾರಾಯಣನಲ್ಲಿ ಮನಸ್ಸನ್ನಿಟ್ಟವನಾಗಿ ಸನ್ಯಾಸವನ್ನು ಹೊಂದಿದನು. ಆತನ ಅಗಲಿಕೆಯಿಂದ ಈಕೆಯು ದುಃಖಿಸುತ್ತ ನೆಲದ ಮೇಲೆ ಬಿದ್ದಳು.

|| ನಾರದ ಉವಾಚ ||

ಇತ್ಯಾಕರ್ಣ್ಯ ವಚಸ್ತಾಸಾಂ ವಿಮಲೋ ಬುದ್ಧಿಮತ್ತರಃ ।
ಪ್ರಾಬೋಧಯನ್ನಿಜಾಂ ಭಾರ್ಯಾಮಿತಿ ವಾಗಮೃತೇನ ಸಃ || ೨೧ ||

ಉತ್ತಿಷ್ಠ ಭಾರ್ಯೇ ಶೃಣು ವಾಕ್ಯಮೀರಿತಂ
ಮಯಾ ಕಿಮರ್ಥಂ ಪತಿತಾ ವಿಷೀದಸಿ ।
ಧನ್ಯಃ ಸುತಸ್ತೇ ಯ ಇಮಂ ವಿನಶ್ವರಂ
ವಿಜ್ಞಾಯ ಭೇಜೇ ಹರಿಪಾದಪಲ್ಲವಂ || ೨೨ ||

ಧನ್ಯಾ ತ್ವಮಪ್ಯಸ್ಯ ಜನಿಪ್ರದಾಯಿನೀ
ಯಸ್ಯಾಸ್ಸುತಸ್ತೇ ಹರಿಪಾದಭಾಗಭೂತ್ ।
ಸಂತಾರಯಿಷ್ಯತ್ಯಪಿ ಮಾಮಸಂಶಯಂ
ಕುಲಂ ಕುಲೋತ್ಥಾನಪಿ ಪೂರುಷಾನ್ ಶುಭೇ || ೨೩ ||

---

೨೧. ನಾರದನು ಹೇಳಿದನು-ಅವರು ಹೀಗೆ ಹೇಳಿದುದನ್ನು ಕೇಳಿ ಬುದ್ಧಿವಂತನಾದ ವಿಮಲನು ತನ್ನ ಒಳ್ಳೆಯ ಮಾತುಗಳಿಂದ ಹೆಂಡತಿಯನ್ನು ಸಮಾಧಾನಪಡಿಸಿ ಎಬ್ಬಿಸಿದನು.

೨೨. ಎಲೈ ಹೆಂಡತಿಯೆ! ನಾನು ಹೇಳುವುದನ್ನು ಕೇಳು. ಏತಕ್ಕೆ ಬಿದ್ದುಕೊಂಡು ದುಃಖಪಡುತ್ತೀಯೆ? ನಿನ್ನ ಮಗನು ಧನ್ಯನು. ಅವನು ಈ ವಿನಶ್ವರವಾದ ಸಂಸಾರವನ್ನು ಕೆಟ್ಟದ್ದು ಎಂದು ತಿಳಿದು ಹರಿಯ ಪಾದಪಲ್ಲವವನ್ನು ಸೇವಿಸಲು ಹೋಗಿರುವನು.

೨೩. ನಿನ್ನ ಮಗನು ಹರಿಯ ಪಾದವನ್ನು ಭಜಿಸಲು ಹೋದುದರಿಂದ ಅವನಿಗೆ ಜನನವನ್ನು ಕೊಟ್ಟ ನೀನೇ ಧನ್ಯಳು. ಅವನು ನನ್ನನ್ನೂ ನನ್ನ ಕುಲದಲ್ಲಿ ಹುಟ್ಟಿದವರನ್ನೂ ಸಂಶಯವಿಲ್ಲದೇ ಉದ್ಧರಿಸುತ್ತಾನೆ.

ಕ್ವ ವಿಶ್ವಮೇತಚ್ಚ ಪತಚ್ಚ ಚಂಚಲಂ
ಕ್ವ ಸೇವನಂ ಶಾಶ್ವತಲೋಕದಂ ಹರೇಃ ।
ಮತ್ವೇತಿ ಭೇಜುರ್ಭರತಾದಯೋಽಮಲಾ
ಯಥಾ ಹರಿಂ ಸಾಧ್ವಿ ತಥಾ ಚ ತೇ ಸುತಃ || ೨೪ ||

ದಾರಾಧನಾಗಾರಶರೀರಬಾಂಧವಾ ಏತೇ ಭವಂತಿ ಪ್ರತಿಜನ್ಮದುಃಖದಾಃ ।
ತಾವನ್ನ ಯಾವದ್ಧರಿಪಾದಪಲ್ಲವಂ ಭಜೇತ ಧೀರೋಽಖಿಲಕಾಮವರ್ಜಿತಃ ॥

|| ನಾರದ ಉವಾಚ ||

ಏವಂ ಪ್ರಬೋಧಿತಾ ತೇನ ಧೀರೇಣ ಧರಣೀತಲಾತ್ ।
ಉತ್ಥಾಯ ನಿಜಭರ್ತಾರಮಬ್ರವಿದ್ದೀನಯಾ ಗಿರಾ || ೨೬ ||

|| ಭಾರ್ಯೋವಾಚ ||

ಸರ್ವಂ ಜಾನಾಮ್ಯಹಂ ಕಾನ್ತ ಯತ್ತ್ವಯಾ ಸಾಧುಭಾಷಿತಂ ।
ಕುಲಧುರ್ಯಂ ನ ಪಶ್ಯಾಮಿ ಯತಸ್ತಪ್ಯಾಮಿ ವೈ ಭೃಶಂ || ೨೭ ||

---

೨೪. ಚಂಚಲವಾದ ನಾಶವಾಗುವ ಈ ಪ್ರಪಂಚವೆಲ್ಲಿ? ಶಾಶ್ವತವಾದ ಲೋಕವನ್ನು ಕೊಡುವ ಆ ಹರಿಯ ಸೇವೆಯಲ್ಲಿ? ಭರತಾದಿಗಳು ಇದನ್ನು ತಿಳಿದು ಹೇಗೆ ಶಾಶ್ವತನಾದ ಹರಿಯನ್ನು ಭಜಿಸಿದರೋ ಹಾಗೆ ನನ್ನ ಮಗನೂ ಕೂಡ ಭಜಿಸುವನು.

೨೫. ಹೆಂಡತಿ ಹಣ ದೇಹ ಬಂಧುಗಳು ಇವರೇ ಮುಂತಾದವರು ಪ್ರತಿಜನ್ಮದಲ್ಲಿಯೂ ದುಃಖವನ್ನು ಕೊಡುತ್ತಾರೆ. ಆಸೆಗಳೆಲ್ಲವನ್ನೂ ಬಿಟ್ಟು ಧೀರನಾಗಿ ಎಲ್ಲಿಯವರಿಗೆ ಹರಿಯ ಪಾದವನ್ನು ಭಜಿಸುವುದಿಲ್ಲವೋ ಅಲ್ಲಿಯ ವರೆಗೂ ಈತನಿಗೆ ದುಃಖವು ತಪ್ಪಿದುದಲ್ಲ!

೨೬. ನಾರದನು ಹೇಳಿದನು-ಆ ವಿದ್ವಾಂಸನಾದ ವಿಮಲನು ಹೀಗೆ ಜ್ಞಾನ ಬೋಧನೆಯನ್ನುಂಟುಮಾಡುತ್ತಲೂ ಆಕೆಯು ಒಡನೆಯೇ ಭೂಮಿಯಿಂದ ಮೇಲಕ್ಕೆದ್ದಳು. ಮತ್ತು ಗಂಡನನ್ನು ಕುರಿತು ದೀನತೆಯಿಂದ ಇಂತೆಂದಳು.

೨೭. ಹೆಂಡತಿಯು ಹೇಳಿದಳು-ಎಲೈ ಕಾಂತನೇ! ನೀನು ಹೇಳಿದ ಒಳ್ಳೆಯ ವಿಷಯಗಳೆಲ್ಲವನ್ನೂ ತಿಳಿದಿದ್ದೇನೆ. ಆದರೆ ವಂಶೋದ್ಧಾರಕನು ಇಲ್ಲವಲ್ಲ! ಎಂದು ಬಹು ದುಃಖವಾಗುತ್ತದೆ.

ಪುತ್ರೇ ಸತಿ ಮಹಾತೀರ್ಥೇ ಕಿಂ ನಾ ಕೇಶವಸೇವಯಾ ।
ಗೃಹ ಏವಾವಯೋರ್ಮೃತ್ಯುಶ್ಚೇತ್ಸ್ಯಾಲ್ಲೋಕದ್ವಯಂ ತದಾ ॥ ೨೮ ॥

ಸತ್ಪುತ್ರೋತ್ಪಾದನೇ ಯತ್ನಃ ಕರ್ತವ್ಯಃ ಖಲು ವೈ ಭೃಶಂ ।
ತಾರಯಂತಿ ಪಿತ್ಯೄನ್ ಪುತ್ರಾ ಯತಸ್ಸಂಸಾರವಾರಿಧೇಃ ॥ ೨೯ ॥

ಸ್ರಷ್ಟಾರಂ ಸರ್ವಜಂತೂನಾಂ ಧಾತಾರಂ ಪುತ್ರಕಾಮ್ಯಯಾ ।
ಭಜ ವಾಂಛಸಿ ಚೇತ್ಪುತ್ರಂ ಕುಲಧುರ್ಯಂ ಮಹಾಮತೇ ॥ ೩೦ ॥

॥ ನಾರದ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯಾಃ ಪ್ರತ್ಯಾಹ ವಿಮಲೋ ದ್ವಿಜಃ ।
ಬ್ರಹ್ಮಕ್ಷೇತ್ರಂ ಪ್ರಯಾಗಂ ಹಿ ಯಾಮ್ಯಹಂ ಪುತ್ರಕಾಮ್ಯಯಾ ॥ ೩೧ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ಚಲಿತಸ್ಸೋಥ ಹರಿದ್ವಾರಮುಗಾದ್ದ್ವಿಜಃ ।
ಸ್ನಾತ್ವಾ ತತ್ರಾಪಿ ವಿಧಿವದಿಂದ್ರಪ್ರಸ್ಥಮಥಾಗಮತ್ ॥ ೩೨ ॥

---

೨೮. ತೀರ್ಥರೂಪವಾದ ಪುತ್ರನಿರುವಾಗ ಕೇಶವನ ಸೇವೆಯೇ ಬೇಕಾಗಿರುವುದಿಲ್ಲ. ನಾವಿಬ್ಬರೂ ಮನೆಯಲ್ಲಿಯೇ ಪ್ರಾಣಬಿಟ್ಟಿದ್ದರೆ ಆಗ ನಮಗೆ ಮಗನಿದ್ದಿದ್ದರೆ ಇಹಪರಗಳೆರಡೂ ಸಿಕ್ಕುತ್ತಿದ್ದುವು.

೨೯. ಒಳ್ಳೆಯ ಗುಣವಂತನಾದ ಮಗನನ್ನು ಹೊಂದುವುದಕ್ಕೆ ಎಷ್ಟು ಬೇಕಾದರೂ ಪ್ರಯತ್ನವನ್ನು ಮಾಡಬೇಕು. ಆ ಮಕ್ಕಳು ಸಂಸಾರವೆಂಬ ಸಮುದ್ರದಿಂದ ಪಿತೃಗಳನ್ನು ಉದ್ಧಾರ ಮಾಡುತ್ತಾರೆ.

೩೦. ಆದ್ದರಿಂದ ಸರ್ವರನ್ನೂ ಸೃಷ್ಟಿಸುವ ಆ ಸ್ವಾಮಿಯನ್ನು ಭಜಿಸಿ ಮಕ್ಕಳನ್ನು ಹೊಂದು. ಕುಲವನ್ನು ಉದ್ಧರಿಸುವ ಮಗನು ಹುಟ್ಟಲಿ.

೩೧. ನಾರದನು ಹೇಳಿದನು-ಆಕೆಯು ಹೇಳಿದ ಮಾತನ್ನು ಕೇಳಿ ಆ ಪರಮಪವಿತ್ರನಾದ ವಿಮಲನೆಂಬ ಬ್ರಾಹ್ಮಣನು ಮಗನನ್ನು ಹೊಂದಲು ಬ್ರಹ್ಮ ಕ್ಷೇತ್ರವಾದ ಪ್ರಯಾಗಕ್ಕೆ ಹೋಗುತ್ತೇನೆ. ಎಂದನು

೩೨. ನಾರದನು ಹೇಳಿದನು-ಹೀಗೆಂದು ಹೇಳಿ ಆತನು ಹೊರಟು ಹರಿದ್ವಾರಕ್ಕೆ ಹೋದನು. ಅಲ್ಲಿ ಸ್ನಾನ ಮುಂತಾದುವನ್ನು ವಿಧಿಯಂತೆ ಮಾಡಿ ಮುಂದೆ ಇಂದ್ರಪ್ರಸ್ಥಕ್ಕೆ ಹೋದನು.

ಕತಿಭಿರ್ವಾಸರೈರ್ವಾರಿ ಸಾಯಂ ಕಾಲೇಽಖಿಲಾರ್ಥದಂ ।
ಸ್ನಾತ್ವಾ ಭುಕ್ತ್ವಾ ನಿಶಾಯಾಂ ಸಃ ಸುಷ್ವಾಪ ಯಮುನಾತಟೇ ॥ ೩೩ ॥

ನಿಶೀಥೇ ಸ್ವಪತಸ್ತಸ್ಯ ವಿಮಲಸ್ಯಾಂತಿಕೇ ವಿಧಿಃ ।
ಹಂಸಮಾರುಹ್ಯ ದೇವೇಶಃ ತೀರ್ಥೈಸ್ಸರ್ವೈರನುದ್ರುತಃ ॥ ೩೪ ॥

ಆಗತ್ಯೋತ್ಥಾಪಯಾಮಾಸ ವಿಮಲಂ ಪುತ್ರವಾಂಛಕಂ ।
ಉವಾಚ ಚ ಸುರಶ್ರೇಷ್ಠೋ ವಚನಂ ಮಧುರಾಕ್ಷರಂ ॥ ೩೫ ॥

॥ ಶ್ರೀ ಬ್ರಹ್ಮೋವಾಚ ॥

ಜಾನೇ ಸಮೀಹಿತಂ ಚಿತ್ತಂ ತ್ವದೀಯೇ ಮನಸಿ ಸ್ಥಿತಂ ।
ನ ತತ್ಪೂರಯಿತುಂ ಕಲ್ಪೋ ಯತಸ್ತತ್ಕಾರಣಂ ಶೃಣು ॥ ೩೬ ॥

ಏಕದಾ ಮೇರುಶಿಖರೇ ಮಿಳಿತಾಸ್ಸರ್ವದೇವತಾಃ ।
ತುಷ್ಟುವುರ್ಮದ್ಭವಮುಖಾ ಮಾಧವಂ ಕಾರ್ಯಸಿದ್ಧಯೇ ॥ ೩೭ ॥

---

೩೩. ಅಲ್ಲಿರುವ ತೀರ್ಥದ ನೀರು ಕೆಲವು ದಿನಗಳು ಸೇವಿಸಿದ ಮೇಲೆ ಇಷ್ಟಾರ್ಥವನ್ನು ಕೊಡುತ್ತದೆ. ಆತನು ಅಲ್ಲಿ ಸ್ನಾನಮಾಡಿ ಊಟಮಾಡಿ ಆದಿನ ರಾತ್ರಿಯಲ್ಲಿ ಆ ಯಮುನೆಯ ದಡದಲ್ಲಿಯೇ ಮಲಗಿಕೊಂಡನು.

೩೪-೩೫. ಆ ರಾತ್ರಿ ವಿಮಲನು ಮಲಗಿರಲು ಬ್ರಹ್ಮನು ಹಂಸದಮೇಲೆ ಕುಳಿತುಕೊಂಡು ಎಲ್ಲಾ ತೀರ್ಥಗಳನ್ನು ಜೊತೆಯಲ್ಲಿ ಕರೆದುಕೊಂಡು ಇವನ ಬಳಿಗೆ ಬಂದು ಈ ಪುತ್ರಾಪೇಕ್ಷಿಯಾದ ವಿಮಲನನ್ನು ಎಬ್ಬಿಸಿ ಮೃದುವಾದ ಮಾತಿನಿಂದ ಇಂತೆಂದನು.

೩೬. ಶ್ರೀ ಬ್ರಹ್ಮನು ಹೇಳಿದನು-ನಿನ್ನ ಮನಸ್ಸನ್ನೂ ನಿನ್ನ ಮನಸ್ಸಿನಲ್ಲಿರು ವುದನ್ನೂ ಬಲ್ಲೆನು. ಅದರಂತೆ ಈಡೇರಿಸಲು ಸಾಧ್ಯವಿಲ್ಲ. ಯಾಕೆಂದರೆ ಕಾರಣವನ್ನು ಹೇಳುತ್ತೇನೆ. ಕೇಳು.

೩೭. ಒಂದುಸಾರಿ ಮೇರುಪರ್ವತದ ಶಿಖರದಲ್ಲಿ ಎಲ್ಲಾ ದೇವತೆಗಳೂ ಸೇರಿದ್ದರು. ಆಗ ನಾನೂ ಶಿವನೂ ಮೊದಲಾದವರೆಲ್ಲರೂ ವಿಷ್ಣುವನು ಸ್ತುತಿಸಿದೆವು.

ಸ್ತುತೋಽಸ್ಮದಾದಿವಿಬುಧೈಃ ಕೃಪಯಾ ಭಗವಾನ್ ಹರಿಃ ।
ಪ್ರಸನ್ನೋಽಭೂತ್ತದಾ ವಿಷ್ಣುಃ ವೃಣೀಧ್ವಮಿತಿ ಚಾಬ್ರವೀತ್ ॥ ೩೮ ॥

ಇತ್ಯುಕ್ತಾ ಸ್ತೇನ ತೇ ದೇವಾ ಯಥಾಭಿಲಷಿತಂ ವರಂ ।
ಶ್ರೀಪತೇಃ ಪ್ರಾಪ್ಯ ತೇ ಜಗ್ಮುಃ ಸರ್ವೇ ಸ್ವಂ ಸ್ವಂ ನಿಕೇತನಂ ॥ ೩೯ ॥

ಮಯೋಕ್ತಮಿತಿ ದೇವೇಶ ದೇಹಿ ಮೇ ವರಮುತ್ತಮಂ ।
ಪ್ರಯಾಗಂ ನಾಮ ಮೇ ಕ್ಷೇತ್ರಂ ಭವತ್ವಖಿಲಕಾಮದಂ ॥ ೪೦ ॥

ತತಶ್ಶತಗುಣಂ ಭೂಯಾದ್ದ್ವಿತೀಯಂ ಕ್ಷೇತ್ರಕಂ ಮಮ ।
ಇಂದ್ರಪ್ರಸ್ಥಗತಂ ಸಮ್ಯಗ್ವೃತ್ತಂ ತ್ವತ್ತೋ ಮಯಾನಘ ॥ ೪೧ ॥

ಇತ್ಯಾಕರ್ಣ್ಯ ವಚೋ ಮಹ್ಯಂ ಭಗವಾನಾಹ ಮಾಂ ತದಾ ।
ತಥಾಸ್ತ್ವಿತಿ ಪುನರ್ವಾಚಮುವಾಚ ಶ್ರೂಯತಾಂ ವಚಃ ॥ ೪೨ ॥

---

೩೮. ನಾವೆಲ್ಲರೂ ಸ್ತೋತ್ರಮಾಡಲು ಅದರಿಂದ ಕೃಪೆಬಂದು ಆ ಹರಿಯು ನಮಗೆ ಪ್ರಸನ್ನನಾದನು. ಮತ್ತು ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿರಿ. ಎಂದನು.

೩೯. ಹೀಗೆಂದು ಸ್ವಾಮಿಯು ಹೇಳಲು ಆ ದೇವತೆಗಳು ತಮಗೆ ಬೇಕಾದ ವರವನ್ನು ಕೇಳಿ ತೆಗೆದುಕೊಂಡು ಅವರವರ ಸ್ಥಳಕ್ಕೆ ಹೊರಟುಹೋದರು.

೪೦. ಆಗ ನಾನು ಎಲೈ ಸ್ವಾಮಿಯೆ ! ನನ್ನ ಕ್ಷೇತ್ರವಾದ ಪ್ರಯಾಗವು ಎಲ್ಲಾ ಇಷ್ಟಗಳನ್ನೂ ಕೊಡುವಂತಾಗಲಿ. ಎಂಬುದಾಗಿ ನನಗೆ ವರವನ್ನು ಕೊಡು. ಎಂದೆನು.

೪೧. ಮತ್ತು ಇಂದ್ರಪ್ರಸ್ಥದಲ್ಲಿರುವ ಈ ನನ್ನ ಕ್ಷೇತ್ರವು ಆ ಪ್ರಯಾಗಕ್ಕಿಂತಲೂ ನೂರರಷ್ಟು ಹೆಚ್ಚು ಫಲವನ್ನು ಕೊಡಲಿ. ಎಂಬುದಾಗಿಯೂ ನಾನು ವರವನ್ನು ಕೇಳಿಕೊಳ್ಳುತ್ತೇನೆ. ಎಂದೆನು.

೪೨. ಈ ಮಾತನ್ನು ಕೇಳಿ ಭಗವಂತನು ನನ್ನನ್ನು ಕುರಿತು ಹಾಗೇ ಆಗಲೆಂದು ಹೇಳಿ ಮತ್ತೂ ಇಂತೆಂದನು ಅದನ್ನು ಕೇಳು.

॥ ಶ್ರೀ ಭಗವಾನುವಾಚ ॥

**ಇಂದ್ರಸ್ಯ ಖಾಂಡವಾರಣ್ಯ ಇಂದ್ರಪ್ರಸ್ಥಾಭಿದಂ ಶುಭಂ ।**
**ಕ್ಷೇತ್ರಂ ಕಲಿಂದಜಾತೀರೇ ಮತ್ತುಲ್ಯಾಸ್ತತ್ರ ಯೇ ಮೃತಾಃ ॥ ೪೩ ॥**

**ವಿರಿಂಚೇ ರಚಿತಾ ತತ್ರ ಸ್ವಕೀಯಾ ದ್ವಾರಕಾ ಪುರೀ ।**
**ಮಯಾ ಶತಗುಣಾಂಭೋಧಿನೀರಸ್ಥಾಯಾಃ ಪರಾ ಗುಣೈಃ ॥ ೪೪ ॥**

**ತಾಮುಲ್ಲಂಘ್ಯ ನರೋ ಯಸ್ತು ತೀರ್ಥಮನ್ಯನ್ನಿಷೇವತೇ ।**
**ನ ತೀರ್ಥಫಲಮಾಪ್ನೋತಿ ಸ ಪುಮಾನ್ನ ಮೃಷೋದಿತಂ ॥ ೪೫ ॥**

**ಸರ್ವತೀರ್ಥೋದಿತಂ ಪುಣ್ಯಂ ಶಕ್ರತೀರ್ಥೇ ಲಭೇನ್ನರಃ ।**
**ದ್ವಾರಕಾ ಚ ಪುರೀ ಮಾಯಾ ತೀರ್ಥಮನ್ಯಚ್ಚ ರಕ್ಷತಿ ॥ ೪೬ ॥**

**ಯೋ ನಿಮಜ್ಜ್ಯಾನ್ಯತೀರ್ಥೇಷು ಕೃತ್ವಾ ಚ ವಿವಿಧಾಂ ಕ್ರಿಯಾಂ ।**
**ಅತ್ರೈಷ್ಯತಿ ಫಲಂ ತೇಭ್ಯಃ ಫಲಂ ಪ್ರಾಪ್ಸ್ಯತಿ ಸ ಧ್ರುವಂ ॥ ೪೭ ॥**

---

೪೩-೪೫. ಶ್ರೀ ಭಗವಂತನು ಹೇಳಿದನು–ಇಂದ್ರನ ಖಾಂಡವವೆಂಬ ಆರಣ್ಯದಲ್ಲಿ ಇಂದ್ರಪ್ರಸ್ಥವೆಂಬ ಒಂದು ಉತ್ತಮವಾದ ಪಟ್ಟಣವುಂಟು. ಆ ಕ್ಷೇತ್ರವು ಕಾಳಿಂದೀ ನದಿಯ ದಡದಲ್ಲಿದೆ. ಅಲ್ಲಿ ಸತ್ತವರೆಲ್ಲರೂ ನನ್ನ ಸಾರೂಪ್ಯವನ್ನು ಹೊಂದುತ್ತಾರೆ. ಎಲೈ ಬ್ರಹ್ಮನೆ ! ಅಲ್ಲಿ ನಾನು ದ್ವಾರಕಾಪುರವನ್ನೇ ರಚಿಸಿಕೊಂಡಿದ್ದೇನೆ. ಆ ದ್ವಾರಕೆಯಲ್ಲಿ ನಾನೂ ಕ್ಷೀರಸಮುದ್ರ ಕನ್ಯೆಯೂ ಇರುವುದರಿಂದ ಆ ದ್ವಾರಕೆಯ ಗುಣವು ಮತ್ತೂ ನೂರರಷ್ಟು ಹೆಚ್ಚಿದೆ. ಅಂತಹ ತೀರ್ಥವನ್ನು ಬಿಟ್ಟು ಯಾವನು ಬೇರೆ ತೀರ್ಥವನ್ನು ಸೇವಿಸುತ್ತಾನೆಯೋ ಅವನಿಗೆ ತೀರ್ಥವನ್ನು ಸೇವಿಸಿದ ಫಲಗಳು ಬರುವುದಿಲ್ಲ. ನಾನು ಹೇಳುವುದು ಸುಳ್ಳಾಗುವುದಿಲ್ಲ.

೪೬. ಎಲ್ಲಾ ತೀರ್ಥಗಳನ್ನೂ ಸೇವಿಸಿದರೆ ಬರುವ ಪುಣ್ಯವನ್ನು ಈ ಶಕ್ರತೀರ್ಥದಲ್ಲಿ ಸ್ನಾನಮಾಡುವುದರಿಂದ ಹೊಂದುತ್ತಾನೆ. ದ್ವಾರಕಾಪುರಿ ಮಾಯಾತೀರ್ಥಗಳು ಆ ಫಲವನ್ನು ಪೋಷಿಸುತ್ತವೆ.

೪೭. ಯಾವನು ಅನೇಕ ತೀರ್ಥಗಳಲ್ಲಿ ಸ್ನಾನಮಾಡಿ ಸೇವಿಸಿಕೊಂಡು ಅಲ್ಲಿ ಮಾಡಬೇಕಾದ ಕ್ರಿಯೆಗಳೆಲ್ಲವನ್ನೂ ಮಾಡಿ ಇಲ್ಲಿಗೆ ಬಂದು ಸ್ನಾನ ಮಾಡುವನೋ ಅವನಿಗೆ ಹಿಂದಿನ ಫಲವೂ ಇದರ ಫಲವೂ ಬರುತ್ತವೆ. ಅದು ನಿಶ್ಚಯವು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾಂತರ್ದಧೇ ವಿಷ್ಣುರಹಮಪ್ಯಗಮಂ ಸ್ವಕಂ ।
ಲೋಕಂ ದ್ವಿಜೇಂದ್ರ ವೈಕುಂಠಾದಧೋಭಾಗೇ ವ್ಯವಸ್ಥಿತಂ ॥ ೪೮ ॥

ಪ್ರಯಾಗಾನ್ಮಾಮಕಕ್ಷೇತ್ರಾತ್ಕಾಶೀ ಶತಗುಣಾ ಸ್ಮೃತಾ ।
ಕಾಶ್ಯಾಶ್ಶತಗುಣಂ ತೀರ್ಥಂ ನಿಗಮೋದ್ಬೋಧಕಂ ತಥಾ ॥ ೪೯ ॥

ತೀರ್ಥಸಪ್ತಕಮೇತತ್ತು ತ್ರಯಂ ತುಲ್ಯಫಲಂ ಸ್ಮೃತಂ ।
ಏತತ್ತ್ರಯಮನುಲ್ಲಂಘ್ಯ ಯೋ ಗಚ್ಛತಿ ಸಿತಾಸಿತಂ ॥ ೫೦ ॥

ತಸ್ಯಾಹಂ ವಾಂಛಿತಂ ವಿಪ್ರ ದದಾಮಿ ಖಲು ನಾನ್ಯಥಾ ।
ಕೇಚಿದಾಹುಸ್ಸಪ್ತ ಪುರೀಃ ಸಮಪುಣ್ಯಾ ಮಹರ್ಷಯಃ ॥ ೫೧ ॥

ಅಯೋಧ್ಯಾಯಾಶ್ಶತಂ ತಾಭ್ಯಃ ಇಂದ್ರಪ್ರಸ್ಥಂ ಪ್ರಚಕ್ಷತೇ ।
ತ್ವಮತ್ರಾಗತ್ಯ ವಿಪ್ರೇಂದ್ರ ಸರ್ವಕಾಮಫಲಪ್ರದೇ ॥ ೫೨ ॥

---

೪೮. ಬ್ರಹ್ಮನು ಹೇಳಿದನು-ಹೀಗೆಂದು ಹೇಳಿ ವಿಷ್ಣುವು ಅಂತರ್ಧಾನನಾದನು. ನಾನೂ ಹಂಸದಮೇಲೆ ಕುಳಿತು ವೈಕುಂಠಕ್ಕಿಂತಲೂ ಕೆಳಗಿರುವ ನನ್ನ ಲೋಕಕ್ಕೆ ಹೋದೆನು

೪೯-೫೨. ನನ್ನ ಕ್ಷೇತ್ರವಾದ ಪ್ರಯಾಗಕ್ಕಿಂತಲೂ ಕಾಶಿಯು ನೂರರಷ್ಟು ಹೆಚ್ಚುಫಲವನ್ನು ಕೊಡುತ್ತದೆ. ಕಾಶಿಗಿಂತಲೂ ನಿಗಮೋದ್ಬೋಧಕ ತೀರ್ಥವು ನೂರರಷ್ಟು ಹೆಚ್ಚುಫಲವನ್ನು ಕೊಡುತ್ತದೆ ಕಾಶಿಯಲ್ಲಿರುವ ಏಳು ತೀರ್ಥಗಳೂ ಇಲ್ಲಿರುವ ಈ ಮೂರು ತೀರ್ಥಗಳೂ ಸಮವಾದ ಫಲವನ್ನು ಕೊಡುತ್ತವೆ. ಈ ಮೂರು ತೀರ್ಥಗಳನ್ನು ಯಾವನು ಸೇವಿಸಿ ಗಂಗೆ ಯಮುನೆಗಳನ್ನು ಸೇವಿಸುತ್ತಾನೆಯೋ ಅವನಿಗೆ ನಾನು ಫಲವನ್ನು ಕೊಡುತ್ತೇನೆ. ಇಲ್ಲದಿದ್ದರೆ ಇಲ್ಲ. ಕೆಲವು ಋಷಿಗಳು ಅಯೋಧ್ಯೆ ಮಧುರೆ ಮಾಯೆ ಕಾಶೀ ಕಂಚಿ ಅವಂತಿಕಾ ದ್ವಾರವತೀ ಎಂಬ ಏಳುಪಟ್ಟಣಗಳು ಸಮಪುಣ್ಯಾಗಳುಳ್ಳವೆಂದು ಹೇಳುತ್ತಾರೆ ಅಯೋಧ್ಯೆಯೇ ಮೊದಲಾದ ಅವುಗಳಿಗಿಂತಲೂ ಈ ಇಂದ್ರಪ್ರಸ್ಥವು ನೂರರಷ್ಟು ಹೆಚ್ಚು ಪುಣ್ಯವುಳ್ಳದ್ದು. ಎಲೈ ವಿಪ್ರನೆ! ನೀನು ಇಷ್ಟಾರ್ಥವನ್ನು ಕೊಡುವ ಈ

ತೀರ್ಥೇ ಶ್ರೀದ್ವಾರಕಾಖ್ಯೇ ಹಿ ಕುರು ಸ್ನಾನಂ ಸುತೇಚ್ಛಯಾ ।
ಯಾವಂತಿ ಸರ್ವತೀರ್ಥಾನಿ ಬ್ರಹ್ಮಾಂಡಕುಲಸೋದರೇ ॥ ೫೩ ॥

ತೇಭ್ಯೋಽಪರಿಮಿತಂ ಪುಣ್ಯಂ ಶತನಾಮನಿ ಕೀರ್ತಿತೇ ।
ಸುತಂ ತೇ ಕುಲಧೌರೇಯಂ ತೀರ್ಥಮೇತತ್ಪ್ರದಾಸ್ಯತಿ ॥
ಸ್ನಾನಾಚ್ಚ ತವ ಗೋವಿಂದಃ ಪ್ರಸನ್ನಾತ್ಮಾ ಭವಿಷ್ಯತಿ ॥ ೫೪ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ದೇವದೇವೇಶೋ ಬ್ರಹ್ಮಾ ತತ್ರ ತಿರೋದಧೇ ।
ವಿಮಲೋಽಪಿ ತದಾ ಸ್ನಾತ್ವಾ ದೇವಾದೀನಪ್ಯತರ್ಪಯತ್ ॥ ೫೫ ॥

ಇತ್ಯುವಾಚ ಸ ಧರ್ಮಾತ್ಮಾ ದ್ವಾರಕೇ ಕೃಷ್ಣವಲ್ಲಭೇ ।
ಸುತಂ ವಂಶಕರಂ ದೇಹಿ ಮಹ್ಯಂ ಭಕ್ತಾಯ ತೇ ನಮಃ ॥ ೫೬ ॥

---

ದ್ವಾರಕಾತೀರ್ಥದಲ್ಲಿ ಸುತನನ್ನು ಹೊಂದುವ ಇಚ್ಛೆಯಿಂದ ಸ್ನಾನವನ್ನು ಮಾಡು. ಈ ಬ್ರಹ್ಮಾಂಡದ ಮಧ್ಯದಲ್ಲಿ ಎಷ್ಟು ತೀರ್ಥಗಳಿವೆಯೋ ಅವೆಲ್ಲಕ್ಕಿಂತಲೂ ಅಸಂಖ್ಯಾತವಾದ ಪುಣ್ಯವನ್ನು ಈ ದ್ವಾರಕೆಯ ತೀರ್ಥದಲ್ಲಿ ಅದರ ನೂರು ಹೆಸರುಗಳನ್ನು ಹೇಳಿ ಸ್ನಾನಮಾಡಿದರೆ ಅದು ಕೊಡುತ್ತದೆ. ಈ ತೀರ್ಥವು ನಿನಗೆ ಕುಲೋದ್ಧಾರಕನಾದ ಮಗನನ್ನು ಕೊಡುತ್ತದೆ. ಈ ಸ್ನಾನದಿಂದ ಗೋವಿಂದನೂ ಪ್ರಸನ್ನನಾಗಿ ಆಗುತ್ತಾನೆ.

೫೫. ನಾರದನು ಹೇಳಿದನು-ಹೀಗೆಂದು ಹೇಳಿ ಆ ಬ್ರಹ್ಮನು ಹೊರಟು ಹೋದನು. ವಿಮಲನೂ ಕೂಡ ಆಗ ಅಲ್ಲಿ ಸ್ನಾನಮಾಡಿ ದೇವಾದಿಗಳಿಗೆ ತರ್ಪಣವನ್ನು ಕೊಟ್ಟನು.

೫೬. ಆ ವಿಮಲನು ಎಲೈ ವಿಷ್ಣುವಲ್ಲಭೆಯಾದ ದ್ವಾರಕೆಯೇ! ನನಗೆ ವಂಶವನ್ನು ಬೆಳೆಯಿಸುವ ಮಗನನ್ನು ಕೊಡು. ನಿನ್ನನ್ನು ಕೇಳಿಕೊಳ್ಳುತ್ತೇನೆ. ನಿನಗೆ ನಮಸ್ಕಾರವು. ಎಂದು ಪ್ರಾರ್ಥಿಸಿದನು.

॥ ನಾರದ ಉವಾಚ ॥

ಇತ್ಯುಕ್ತೇ ತೇನ ವಿಪ್ರೇಣ ದೇವವಾಗಭವತ್ತದಾ ॥ ೫೭ ॥

॥ ದೇವವಾಗುವಾಚ ॥

ಪುತ್ರಸ್ತೇ ಧರ್ಮತತ್ವಜ್ಞೋ ವಂಶಕರ್ತಾ ಭವಿಷ್ಯತಿ ।
ಪ್ರಸಾದಾದಸ್ಯ ತೀರ್ಥಸ್ಯ ಸರ್ವತೀರ್ಥಶಿರೋಮಣೇಃ ॥
ಯಾಹಿ ಗೇಹಂ ವಿಲಂಬೋ ಮಾ ಸುಕೃತಂ ತೇ ನಿಮಜ್ಜನಂ ॥ ೫೮ ॥

॥ ನಾರದ ಉವಾಚ ॥

ಇತ್ಯಾಕರ್ಣ್ಯ ಸ ತಾಂ ವಾಣೀಂ ವಿಶ್ವಸ್ತಃ ಪುತ್ರಜನ್ಮನಿ ।
ಚಚಾಲ ಜಲಮಾದಾಯ ದ್ವಾರಕಾಯಾಃ ಕಮಂಡಲೌ ॥ ೫೯ ॥

ಮಾರ್ಗೇ ತಸ್ಯ ಸಖಾ ವಿಪ್ರೋ ಮಲಯಾಚಲಕೇತನಃ ।
ಮಿಲಿತಶ್ಚಲಿತೋ ಗೇಹಂ ಕೃತ್ವಾ ತೀರ್ಥಾನಿ ಸರ್ವತಃ ॥ ೬೦ ॥

---

೫೭. ನಾರದನು ಹೇಳಿದನು-ಆ ಬ್ರಾಹ್ಮಣನು ಇಂತೆಂದು ಹೇಳಲು ಆಗ ದೇವವಾಣಿಯು ಇಂತೆಂದಿತು.

೫೮. ದೇವ ವಾಣಿಯು ಹೇಳಿತು-ಎಲೈ ಬ್ರಾಹ್ಮಣನೇ ! ಸರ್ವೋತ್ತಮ ವಾದ ಈ ತೀರ್ಥದ ಅನುಗ್ರಹದಿಂದ ನಿನಗೆ ವಂಶೋದ್ಧಾರಕನಾದ ಮಗನು ಹುಟ್ಟುವನು. ಮತ್ತು ಧರ್ಮತತ್ವಗಳನ್ನು ತಿಳಿದವನೂ ಆಗಿರುತ್ತಾನೆ. ಮನೆಗೆ ಬೇಗನೆ ಹೋಗು ನೀನು ಮಾಡಿದ ಸ್ನಾನವು ಸಾರ್ಥಕವು. ಎಂದಿತು

೫೯. ನಾರದನು ಹೇಳಿದನು-ಆತನು ಈ ಮಾತನ್ನು ಕೇಳಿ ಮಕ್ಕಳು ಹುಟ್ಟುವುದರಲ್ಲಿ ನಂಬಿಕೆಯನ್ನು ಹೊಂದಿ ಆ ದ್ವಾರಕಾತೀರ್ಥದಿಂದ ನೀರನ್ನು ಕಮಂಡಲುವಿನಲ್ಲ ತುಂಬಿಕೊಂಡು ಮನೆಗೆ ಹೊರಟನು.

೬೦. ಈ ವಿಮಲನು ಹೋಗುತ್ತಿರಲು ದಾರಿಯಲ್ಲಿ ಮಲಯಾ ಚಲಕೇತನನೆಂಬ ಅವನ ಸ್ನೇಹಿತನು ಸಿಕ್ಕಿದನು. ಅವರಿಬ್ಬರೂ ಜೊತೆಯಾಗಿ ಅಲ್ಲಲ್ಲಿರುವ ತೀರ್ಥಗಳನ್ನು ಸೇವಿಸುತ್ತ ಮನೆಗೆ ಹೋದರು

ತಸ್ಮೈ ಸ್ವವೃತ್ತಮಾಖ್ಯಾತಂ ಬ್ರಹ್ಮಸಂವಾದಕಾತ್ಮಕಂ ।
ಯದ್ಭೂತಂ ದ್ವಾರಕಾತೀರ್ಥೇ ಶ್ರುತ್ವಾ ಸೋಽಪಿ ವಿಸಿಷ್ಮಿಯೇ ॥ ೬೧ ॥

ಉವಾಚ ಸ ಚ ಧರ್ಮಾತ್ಮಾ ಸಖೇ ಮಮ ವಚಶ್ಶೃಣು ।
ಯಾವಂತಿ ಭಾರತೇ ಕ್ಷೇತ್ರೇ ತೀರ್ಥಾನಿ ವಿಹಿತಾನಿ ಮೇ ॥ ೬೨ ॥

ತಾವಂತಿ ಕರ್ತುಮಿಚ್ಛಾಮಿ ತ್ವದುಕ್ತಂ ತೀರ್ಥಮುತ್ತಮಂ ।
ನೀತ್ವಾ ಮಾಂ ದರ್ಶಯ ಸಖೇ ತತ್ತೀರ್ಥಂ ಸರ್ವಕಾಮದಂ ॥ ೬೩ ॥

ಸಖಾಯಸ್ತೇ ವರಾ ಭೂಮಾವುಪಕುರ್ವಂತಿ ಯೇ ಸಖೀನ್ ।
ನ ತೈರ್ನನು ಸಮಾ ಲೋಕೇ ಪಿತಾ ಮಾತಾಥವಾ ಸುತಃ ॥ ೬೪ ॥

ನಿರ್ಧನಂ ಪುರುಷಂ ಲೋಕೇ ಸರ್ವೇ ಮುಂಚಂತಿ ಬಾಂಧವಾಃ ।
ನ ಮುಂಚತಿ ಸಖಾ ಯಸ್ತು ತಸ್ಯ ದುಃಖೇನ ದುಃಖಿತಃ ॥ ೬೫ ॥

---

೬೧. ಆ ಸ್ನೇಹಿತನಿಗೆ ಬ್ರಹ್ಮನು ಬಂದು ತನಗೆ ಹೇಳಿದುದೆಲ್ಲವನ್ನೂ ಹೇಳಿದನು. ದ್ವಾರಕೆಯ ವಿಷಯವನ್ನೂ ಬ್ರಹ್ಮನು ಹೇಳಿದುದೆಲ್ಲವನ್ನೂ ಕೇಳಿ ಈ ಸ್ನೇಹಿತನು ಆಶ್ಚರ್ಯಪಟ್ಟನು.

೬೨-೬೩. ಆಗ ಆ ಸ್ನೇಹಿತನು ಎಲೈ ವಿಮಲನೆ! ನನ್ನ ಮಾತನ್ನು ಕೇಳು. ಈ ಭರತಕ್ಷೇತ್ರದಲ್ಲಿ ಎಷ್ಟು ತೀರ್ಥಗಳಿವೆಯೋ ಅವೆಲ್ಲವನ್ನೂ ಸೇವಿಸಬೇಕು. ಆದರೆ ನೀನು ಹೇಳಿದ ತೀರ್ಥವು ಶ್ರೇಷ್ಠವಾದುದು. ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗಿ ತೋರಿಸು. ಅದು ಇಷ್ಟಾರ್ಥಗಳನ್ನು ಕೊಡುತ್ತದಷ್ಟೆ !

೬೪. ಯಾವನು ಸ್ನೇಹಿತನಿಗೆ ಉಪಕಾರಮಾಡುತ್ತಾನೆಯೋ ಅವನೇ ಭೂಮಿಯಲ್ಲಿ ಉತ್ತಮ ಸ್ನೇಹಿತನು. ಲೋಕದಲ್ಲಿ ತಾಯಿಯಾಗಲಿ ತಂದೆಯಾಗಲಿ ಮಗನೇ ಆಗಲಿ ಅವನಿಗೆ ಸಮರಾಗುವುದಿಲ್ಲ.

೬೫. ಹಣವಿಲ್ಲದಿರುವ ಮನುಷ್ಯನನ್ನು ಲೋಕದಲ್ಲಿ ಬಂಧುಗಳು ಎಲ್ಲರೂ ಬಿಟ್ಟು ಬಿಡುತ್ತಾರೆ. ಆದರೆ ಸ್ನೇಹಿತನಾದವನು ಅವನ ದುಃಖದಿಂದ ದುಃಖಗೊಂಡು ಅವನನ್ನು ಬಿಡುವುದಿಲ್ಲ.

ಸಂಸಾರಾರ್ಣವನಿರ್ಮಗ್ನಾನ್ ಸಖೀನುದ್ಧರತೇ ಸಖಾ ।
ಉಪದಿಶ್ಯ ಹರೇರ್ಭಕ್ತಿಮಾರ್ಗಂ ಜನ್ಮೇಂಧನಾನಲಂ ॥ ೬೬ ॥

ಅತಸ್ತ್ವಂ ಮೇ ಸಖಾ ಶ್ರೇಷ್ಠ ಉಪಕಾರಂ ವಿಧೇಹಿ ಮೇ ।
ದರ್ಶಯೈತದ್ವರಶ್ರೇಷ್ಠಂ ತೀರ್ಥಾಖ್ಯಂ ದ್ವಾರಕಾಂ ದ್ವಿಜ ॥ ೬೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ದ್ವಾರಕಾ ಮಹಾತ್ಮ್ಯ ವರ್ಣನಂ ನಾಮ ತ್ರ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೬೬. ಸ್ನೇಹಿತನಾದವನು ಜನ್ಮವೆಂಬ ಸೌದೆಗೆ ಬೆಂಕಿಯಂತಿರುವ ಹರಿಯಭಕ್ತಿಯ ಮಾರ್ಗವನ್ನು ಉಪದೇಶಿಸಿ ಸಂಸಾರವೆಂಬ ಸಮುದ್ರದಲ್ಲಿ ಬಿದ್ದು ತೊಂದರೆ ಪಡುತ್ತಿರುವ ಸ್ನೇಹಿತನನ್ನು ಉದ್ಧಾರ ಮಾಡುತ್ತಾನೆ.

೬೭. ನೀನು ನನಗೆ ಉತ್ತಮನಾದ ಸ್ನೇಹಿತನು. ನನಗೆ ಉಪಕಾರವನ್ನು ಮಾಡ ಈ ಉತ್ತಮವಾದ ದ್ವಾರಕೆಯೆಂಬ ತೀರ್ಥವನ್ನು ತೋರಿಸು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ದ್ವಾರಕಾ ಮಹಿಮೆಯ ವರ್ಣನ ಎಂಬ ಇನ್ನೂರ ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

॥ ಚತುರಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ನಾರದ ಉವಾಚ ॥

ವಿಮಲಸ್ತಂ ದ್ವಿಜಂ ನೀತ್ವಾ ದ್ವಾರಕಾಯಾಮಿಹಾಗತಃ ।
ಪುನಸ್ತೌ ಸಸ್ನತುರ್ಧೀರೌ ಶ್ರೀಪತೇರ್ಭಕ್ತಿಕಾಮ್ಯಯಾ ॥
ಭೂಯಃ ಖೇ ಮೇಘಗಂಭೀರಾ ವಾಗಾಸೀದಿತಿ ಭೂಪತೇ ॥ ೧ ॥

॥ ಆಕಾಶವಾಗುವಾಚ ॥

ಶೃಣುತಂ ದ್ವಿಜಶಾರ್ದೂಲೌ ಹರೇಸ್ತೀರ್ಥಮಿದಂ ಶುಭಂ ।
ಏತತ್ತೀರ್ಥಪ್ರಸಾದಾದ್ವಾಂ ವಿಷ್ಣುಭಕ್ತಿರ್ಭವಿಷ್ಯತಿ ॥
ಯಯಾ ಜಹಾತಿ ಲೋಕೋಽಯಮವಿದ್ಯಾಮೋಹಮುಲ್ಬಣಂ ॥ ೨ ॥

---

ಇನ್ನೂರ ನಾಲ್ಕನೆಯ ಅಧ್ಯಾಯವು.



೧. ಶ್ರೀ ನಾರದನು ಹೇಳಿದನು-ವಿಮಲನು ಆ ಬ್ರಾಹ್ಮಣನನ್ನು ಕರೆದುಕೊಂಡು ದ್ವಾರಕೆಗೆ ಬಂದನು. ಶ್ರೀಪತಿಯಲ್ಲಿ ಭಕ್ತಿಯನ್ನಿಟ್ಟುಕೊಂಡು ಆ ಸ್ಥಳದಲ್ಲಿ ಅವರಿಬ್ಬರೂ ಸ್ನಾನಮಾಡಿದರು. ಆಗ ಮತ್ತೆ ಮೇಘದ ಧ್ವನಿಯಂತೆ ಆಕಾಶವಾಣಿಯು ನುಡಿಯಿತು.

೨ ಆಕಾಶವಾಣಿಯು ಹೇಳಿತು-ಎಲೈ ವಿಪ್ರಶ್ರೇಷ್ಠರಿರಾ! ಕೇಳಿರಿ. ಈ ಹರಿಯ ತೀರ್ಥವು ಶುಭವಾದುದು. ಈ ತೀರ್ಥದ ಪ್ರಸಾದದಿಂದ ನಿಮಗೆ ವಿಷ್ಣುವಿನಲ್ಲಿ ಭಕ್ತಿಯು ಹುಟ್ಟುತ್ತದೆ. ಇದರಿಂದಲೇ ನೀವು ಈ ಮಾಯೆಯ ಬಂಧನವನ್ನು ಕಳೆದುಕೊಳ್ಳುತ್ತೀರಿ.

॥ ನಾರದ ಉವಾಚ ॥

ನಿಶಮ್ಯೇತಿ ದ್ವಿಜಶ್ರೇಷ್ಠೌ ತಾಂ ವಾಚಮಶರೀರಿಣೀಂ ।
ಪ್ರಸಾದೋಽಯಂ ಹರೇರಾಸೀದಿತ್ಯೂಚಾತೇ ಪರಸ್ಪರಂ ॥ ೩ ॥

ಸ್ನಾತ್ವಾ ತೌ ವಿಧವತ್ತತ್ರ ಲಬ್ಧ್ವಾ ಭಕ್ತಿಂ ಹರೇಃ ಪರಾಂ ।
ಚೇಲತುಃ ಪ್ರಣಿಪತ್ಯೇದಂ ಭಾಷಮಾಣೌ ಮಿಥಸ್ತಥಾ ॥ ೪ ॥

॥ ದ್ವಿಜಾ ಊಚುತುಃ ॥

ಯಥಾವಯೋರ್ಹಿ ಸಂಯೋಗಃ ಪಥಿ ಜಾತೋ ವಿಚಾರತಃ ।
ತಥಾ ಗೃಹಕಲತ್ರಾದಿ ಸಂಯೋಗೋ ಭುವಿ ಜಾಯತೇ ॥ ೫ ॥

ಸಾಂಪ್ರತಂ ವಿರಹೋ ಭಾವೀ ಯಥಾಸೌ ಮಾರ್ಗವರ್ತಿನೋಃ ।
ತಥಾ ದಾರಸುತಾದೀನಾಂ ಕಾಲವ್ಯಾಲಾಸ್ಯ ವರ್ತಿನಾಂ ॥ ೬ ॥

---

೩. ನಾರದನು ಹೇಳಿದನು-ಅವರಿಬ್ಬರೂ ಆಕಾಶವಾಣಿಯನ್ನು ಕೇಳಿ ಹರಿಯ ಅನುಗ್ರಹವಾಯಿತೆಂದು ಒಬ್ಬರಿಗೊಬ್ಬರು ಮಾತನಾಡಿಕೊಂಡರು.

೪. ಅವರಿಬ್ಬರೂ ವಿಧಿಯಂತೆ ಅಲ್ಲಿ ಸ್ನಾನಮಾಡಿ ಹರಿಯಲ್ಲಿ ಭಕ್ತಿಯನ್ನು ಹೊಂದಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತ ಹೊರಟರು.

೫. ಬ್ರಾಹ್ಮಣರು ಹೇಳಿದರು_ಸಂಚರಿಸುತ್ತ ಇರುವ ನಮ್ಮಿಬ್ಬರಿಗೂ ದಾರಿಯಲ್ಲಿ ಹೇಗೆ ಸೇರುವಿಕೆಯುಂಟಾಯಿತೋ ಹಾಗೆಯೇ ಲೋಕದಲ್ಲಿ ಮನೆ ಮಠ ಹೆಂಡಿರ ಸಂಯೋಗವೂ ಉಂಟಾಗುತ್ತದೆ.

೬. ದಾರಿಯಲ್ಲಿರುವ ನಮ್ಮಿಬ್ಬರಿಗೆ ಅಗಲುವಿಕೆಯುಂಟಾಗುವಂತೆ ಕಾಲವೆಂಬ ಕ್ರೂರಸರ್ಪದ ಬಾಯಲ್ಲಿರುವ ನಮಗೆ ಹೆಂಡತಿ ಮಕ್ಕಳ ವಿಯೋಗವೂ ಉಂಟಾಗುತ್ತದೆ.

ಧನ್ಯಃ ಸ ಪುರುಷೋ ಲೋಕೇ ಯೋ ದಾರಸುತಸಂಗಮಂ ।
ವಿಜ್ಞಾಯ ಕ್ಷಣಿಕಂ ನಿತ್ಯಂ ಸಂಶ್ರಯೇಚ್ಛ್ರೀಪತಿಂ ಭಜೇತ್ ॥ ೭ ॥

॥ ನಾರದ ಉವಾಚ ॥

ಸ್ಮರಣಂ ಕರಣೀಯಂ ಮೇ ದಾಸೋಽಹಂ ತ್ವತ್ಪದಾಶ್ರಯಃ ।
ಸಂದೇಶಃ ಪ್ರೇಷಣೀಯೋ ಮಾಮಿತ್ಯುಕ್ತ್ವಾ ಸ್ವಗೃಹಂ ಗತೌ ॥ ೮ ॥

ಶೃಣು ರಾಜನ್ ಯಥಾ ತೇನ ಮಿತ್ರೇಣ ವಿಮಲಸ್ಯ ತು ।
ಮೋಕ್ಷಣಂ ರಾಕ್ಷಸಾನಾಂ ತು ವಿಹಿತಂ ಪಥಿ ಗಚ್ಛತಾ ॥ ೯ ॥

ವ್ರಜನ್ ಸ ಬ್ರಾಹ್ಮಣಃ ಪ್ರಾಪ್ತಃ ತಂ ದೇಶಂ ಜಲವರ್ಜಿತಂ ।
ಯತ್ರ ತಾಃ ಪಾಪವಿಪ್ಲುಷ್ಟಾ ರಾಕ್ಷಸ್ಯಃ ಕ್ಷುತ್ತೃಷಾಕುಲಾಃ ॥ ೧೦ ॥

ಅಥ ತಾಃ ಪಥಿ ಗಚ್ಛನ್ತಂ ದೂರಾದ್ದೃಷ್ಟ್ವಾ ದ್ವಿಜೋತ್ತಮಂ ।
ಸಜಲಾಮತ್ರಹಸ್ತಂ ತಂ ಮಿಥಸ್ತ್ವಿತಿ ಬಭಾಷಿರೇ ॥ ೧೧ ॥

---

೭. ಯಾವನು ಹೆಂಡತಿ ಮಕ್ಕಳ ಸಂಗಮವನ್ನು ಕ್ಷಣಿಕವನ್ನಾಗಿ ತಿಳಿದುಕೊಂಡು ನಿತ್ಯಸುಖದಾತನಾದ ಶ್ರೀಪತಿಯನ್ನು ಶರಣು ಹೊಂದು ತ್ತಾನೆಯೋ ಅವನೇ ಧನ್ಯನು.

೮. ನಾರದನು ಹೇಳಿದನು-ಆಗ ಒಬ್ಬರಿಗೊಬ್ಬರು ನನ್ನ ಜ್ಞಾಪಕವಿರಲಿ. ನಾನು ನಿನ್ನದಾಸನು. ನಿನ್ನ ಪಾದಗಳನ್ನು ಸೇವಿಸುತ್ತಿರುವವನು. ಯೋಗಕ್ಷೇ ಮಕ್ಕೆ ಹೇಳಿ ಕಳುಹಿಸು. ಎಂಬುದಾಗಿ ಹೇಳಿಕೊಳ್ಳುತ್ತ ತಮ್ಮ ತಮ್ಮ ಮನೆಗೆ ಹೋದರು.

೯. ಎಲೈ ರಾಜನೇ ! ಆ ವಿಮಲನ ಮಿತ್ರನು ದಾರಿಯಲ್ಲಿ ಹೋಗುತ್ತಾ ರಾಕ್ಷಸರಿಗೆ ಮೋಕ್ಷವನ್ನುಂಟುಮಾಡಿದ ಬಗೆಯನ್ನು ಹೇಳುತ್ತೇನೆ. ಕೇಳು.

೧೦. ಈ ಬ್ರಾಹ್ಮಣನು ಹೋಗುತ್ತ ನೀರಿಲ್ಲದಿರುವ ರಾಕ್ಷಸರಿರುವ ಒಂದು ಮರುಭೂಮಿಯನ್ನು ಹೊಂದಿದನು. ಆ ರಾಕ್ಷಸಿಯರು ಅಲ್ಲಿ ಹಸಿವು ಬಾಯಾ ರಿಕೆಯಿಂದ ಬಳಲಿ ಬೆಂಡಾಗುತ್ತಿದ್ದರು.

೧೧. ಆಗ ಆ ರಾಕ್ಷಸಿಯರು ದಾರಿಯಲ್ಲಿ ಹೋಗುತ್ತಿರುವ ಬ್ರಾಹ್ಮಣನನ್ನೂ ಆತನು ಕೈಯ್ಯಲ್ಲಿ ನೀರಿನ ಪಾತ್ರೆಯನ್ನು ಹಿಡಿದಿರುವುದನ್ನೂ ನೋಡಿ ಒಂದ ಕ್ಕೊಂದಕ್ಕೆ ಇಂತು ಮಾತನಾಡಿಕೊಂಡುವು.

॥ ರಾಕ್ಷಸ್ಯ ಊಚುಃ ॥

ಆಯಾತಿ ಪಥಿಕಃ ಕಶ್ಚಿಜ್ಜಲಪಾತ್ರಂ ಕರೇ ದಧತ್ ।
ಅಸ್ಮಾಕಂ ಕ್ಷುತ್ತೃಷೋಶ್ಶಾಂತಿರ್ಮನಾಗಪಿ ಭವಿಷ್ಯತಿ ॥ ೧೨ ॥

ಏನಂ ಸಂಭಕ್ಷಯಿಷ್ಯಾಮಃ ಪಾಸ್ಯಾಮೋಽಸ್ಯ ಕರೇ ಸ್ಥಿತಂ ।
ಪಾತ್ರಂ ಜಲಂ ವಯಂ ತೃಷ್ಣಾಕ್ಷುಧಾರ್ತಾಃ ಶತವರ್ಷತಃ ॥ ೧೩ ॥

॥ ನಾರದ ಉವಾಚ ॥

ಕಾಚಿದಾಹೇತ್ಯಹಂ ಪೂರ್ವಮಸ್ಯೋಷ್ಠಂ ಕಾಲಖಂಡಕಂ ।
ಭಕ್ಷಯಿತ್ವಾ ತತೋ ರಕ್ತಂ ಪೀತ್ವಾ ಯಾಸ್ಯಾಮಿ ಜೀವಿತಂ ॥ ೧೪ ॥

ಅನ್ಯಾ ಪ್ರಾಹ ಕಿಯದ್ದ್ರವ್ಯಂ ವಿದ್ಯತೇಽಸ್ಯ ಗಜಾನನೇ ।
ಮಮ ವ್ಯಾಘ್ರಾನನಾಯಾಸ್ತು ಪಾನಾಯಾಪಿ ನ ದೃಶ್ಯತೇ ॥ ೧೫ ॥

---

೧೨. ರಾಕ್ಷಸಿಯರು ಹೇಳಿದರು-ಈ ದಾರಿಯಲ್ಲಿ ಒಬ್ಬ ಪ್ರಯಾಣಿಕನು ಕೈಯ್ಯಲ್ಲಿ ನೀರಿನ ಪಾತ್ರೆಯನ್ನು ಹಿಡಿದುಕೊಂಡು ಬರುತ್ತಿದ್ದಾನೆ. ಅವನಿಂದ ನಮಗೆ ಹಸಿವು ಬಾಯಾರಿಕೆಗಳು ಸ್ವಲ್ಪ ಮಟ್ಟಿಗೆ ಶಾಂತವಾಗಬಹುದು.

೧೩. ನಾವು ಈತನನ್ನು ಕೊಂದು ತಿಂದುಬಿಡೋಣ. ಇವನ ಕೈಯ್ಯಲ್ಲಿರುವ ನೀರಿನ ಪಾತ್ರೆಯಲ್ಲಿರುವ ನೀರನ್ನು ಕುಡಿಯೋಣ. ಇಲ್ಲಿರುವುದಾದರೋ ಒಂದು ಪಾತ್ರೆ ನೀರು. ನೂರು ವರ್ಷಗಳಿಂದಲೂ ನಮಗೆ ಹಸಿವು ಬಾಯಾರಿಕೆಗಳು ತೊಂದರೆ ಪಡಿಸುತ್ತಿವೆ.

೧೪. ನಾರದನು ಹೇಳಿದನು-ಅವರಲ್ಲಿ ಒಬ್ಬಳು ನಾನು ಮೊದಲು ಈತನ ವಫೆಯನ್ನು ತಿಂದು ಅನಂತರ ರಕ್ತವನ್ನು ಕುಡಿದು ಸದ್ಯವಲ್ಲಿ ಬದುಕಿಕೊಳ್ಳುತ್ತೇನೆ.

೧೫. ಅವರಲ್ಲಿ ಮತ್ತೊಬ್ಬಳು ಗಜಾನನೆಯೆ! ಇವನಲ್ಲಿ ಎಷ್ಟು ಮಾಂಸವಿದೆ? ಹುಲಿಯ ಮುಖವುಳ್ಳ ನನಗೆ ನೆಕ್ಕಲು ಕೂಡ ಸಾಕಾವಷ್ಟಿಲ್ಲವಲ್ಲ!

ಅನ್ಯಾ ವೈ ರಥಚಕ್ರಾಖ್ಯಾ ಶ್ರೂಯತಾಂ ವಚನಂ ಮಮ ।
ಕರಿಷ್ಯೇ ಕುಂಡಲಮಹಂ ತೇನಾನ್ತ್ರೈರಸ್ಯ ಮೇಖಲಾಂ ॥ ೧೬ ॥

ಅನ್ಯಾವದದಹಂ ದಂತೈರೇಕತಶ್ಯಾಮಲೀಕೃತೈಃ ।
ರಮೇ ಷೋಡಶಭಿರ್ದ್ಯೂತಶಾಲಾಯಾಂ ತದ್ವಿಶಾರದಾ ॥ ೧೭ ॥

ಇತ್ಯುಕ್ತ್ವಾ ತಾ ಮಿಥಃ ಸರ್ವಾಸ್ತಂ ದ್ವಿಜಂ ಪ್ರತಿ ದುದ್ರುವುಃ ।
ವಿವೃತಾಸ್ಯಾ ಲಲಜ್ಜಿಹ್ವಾಃ ಪ್ರೋದ್ಧೃತೈಕಮಹಾಭುಜಾಃ ॥ ೧೮ ॥

ಆಯಾನ್ತೀಸ್ತಾಸ್ಸಮಾಲೋಕ್ಯ ಬ್ರಾಹ್ಮಣೋ ಭಯವಿಹ್ವಲಃ ।
ಆತ್ಮಾನಮಭಿತಶ್ಚಕ್ರೇ ರಕ್ಷಾಂ ವೇದೋದಿತಾಂ ನೃಪ ॥ ೧೯ ॥

ತಾ ಆಗತ್ಯ ಸ್ಥಿತಾ ದೂರಂ ರಾಕ್ಷಸ್ಯೋ ಭೀಮವಿಕ್ರಮಾಃ ।
ತೇಜಸಾ ತಸ್ಯ ಮಂತ್ರೈಶ್ಚ ಪ್ರತ್ಯಾದಿಷ್ಟಾ ನರಾಧಿಪ ॥ ೨೦ ॥

---

೧೬. ರಥಚಕ್ರೆಯೆಂಬ ಮತ್ತೊಬ್ಬಳು ನಾನು ಹೇಳುವುದನ್ನು ಕೇಳು. ಈತನ ತಲೆಬುರುಡೆಯಿಂದ ಕಿವಿಗೆ ಕುಂಡಲಗಳನ್ನೂ ನರಗಳಿಂದ ಸಡುವಿಗೆ ಕಟ್ಟಿಕೊಳ್ಳುವ ಡಗ್ಗವನ್ನೂ ಮಾಡಿಕೊಳ್ಳುತ್ತೇನೆ.

೧೭. ಮತ್ತೊಬ್ಬಳು ನಾನು ಇವನ ಒಂದು ಕಪ್ಪಾಗಿರುವ ಹದಿನಾರು ಹಲ್ಲುಗಳಿಂದ ಆಟದ ಮನೆಯಲ್ಲಿ ಆಟವಾಡುತ್ತೇನೆ. ಎಂದಳು.

೧೮. ಹೀಗೆಂದು ಹೇಳುತ್ತ ಆ ರಾಕ್ಷಸಿಯರು ಆ ಬ್ರಾಹ್ಮಣನ ಕಡೆಗೆ ಬಾಯನ್ನು ತೆರೆದುಕೊಂಡು ನಾಲಗೆಯನ್ನು ಅಲ್ಲಾಡಿಸುತ್ತ ಕೈಗಳನ್ನು ಎತ್ತಿಕೊಂಡು ಓಡಿದರು.

೧೯. ಅವರು ಹಾಗೆ ಓಡಿ ಬರುತ್ತಿರುವುದನ್ನು ನೋಡಿ ಆ ಬ್ರಾಹ್ಮಣನು ಭಯಪಟ್ಟು ವೇದದಲ್ಲಿ ಹೇಳಿರುವಂತೆ ತನ್ನ ಸುತ್ತಲೂ ದಿಗ್ಬಂಧವನ್ನು ಮಾಡಿಕೊಂಡನು.

೨೦. ಆ ಭಯಂಕರರಾದ ರಾಕ್ಷಸಿಯರು ಅವನ ಬಳಿಗೆ ಬಂದು ಅವನ ತೇಜಸ್ಸಿನಿಂದಲೂ ಮಂತ್ರದಿಂದಲೂ ಅವನನ್ನು ಮುಟ್ಟಲಾರದವರಾಗಿ ದೂರದಲ್ಲಿಯೇ ನಿಂತುಕೊಂಡರು.

ಊಚುಶ್ಚ ಕೋ ಭವಾನತ್ರ ಕುತಃ ಪ್ರಾಪ್ತೋಽಸಿ ತದ್ವದ |
ತ್ವದ್ದರ್ಶನಾನ್ಮನೋಽಸ್ಮಾಕಂ ಪ್ರಸಾದಮಧಿಗಚ್ಛತಿ || ೨೧ ||

ತ್ವತ್ಪಾದಸ್ಪರ್ಶನಾತ್ಕಿನ್ನೋ ಸ ವಿದ್ಮೋ ಭವಿತಾ ಫಲಂ |
ಅಥೋ ಮೂರ್ಧಸು ನೋ ಧೇಹಿ ಸ್ವಕೀಯಂ ಪಾದಪಂಕಜಂ || ೨೨ ||

|| ನಾರದ ಉವಾಚ ||

ಇತ್ಯಾಕರ್ಣ್ಯ ವಚಸ್ತಾಸಾಂ ಜಗಾದ ಹರಿದತ್ತಜಃ || ೨೩ ||

|| ದ್ವಿಜ ಉವಾಚ ||

ಕೃತ್ವಾ ಪವಿತ್ರತೀರ್ಥಾನಿ ಬ್ರಾಹ್ಮಣೋಽಹಂ ಸಮಾಗತಃ |
ಸಾಂಪ್ರತಂ ಪುಷ್ಕರಂ ಯಾಮಿ ಭವತೀಭಿಃ ಕಿಮಿಷ್ಯತೇ |
ಯತಸ್ತತ್ಪ್ರಾರ್ಥ್ಯತಾಂ ದಾತುಂ ಶಕ್ತೋ ದಾಸ್ಯಾಮಿ ಚೇತ್ತದಾ || ೨೪ ||

---

೨೧. ಆಗ ಅವರೆಲ್ಲರೂ ಎಲೈ ಬ್ರಾಹ್ಮಣನೆ? ನೀನಾರು? ಎಲ್ಲಿಂದ ಬಂದೆ? ಎಂಬುದನ್ನು ಹೇಳು. ನಿನ್ನ ದರ್ಶನದಿಂದ ನಮ್ಮಗಳ ಮನಸ್ಸು ನಿರ್ಮಲವಾಗುತ್ತಿದೆ.

೨೨. ನಿನ್ನ ಪಾದಗಳನ್ನು ಮುಟ್ಟಿದರೆ ನಮಗೆ ಯಾವ ಫಲ ಬರುತ್ತ ದೆಂಬುದು ನಮಗೆ ತಿಳಿಯದು. ಆದ್ದರಿಂದ ನಿನ್ನ ಪಾದಕಮಲವನ್ನು ನಮ್ಮ ತಲೆಯಮೇಲಿಡು.

೨೩. ನಾರದನು ಹೇಳಿದನು-ಅವರ ಮಾತನ್ನು ಕೇಳಿ ಹರಿದತ್ತನು ಇಂತೆಂದನು.

೨೪. ಬ್ರಾಹ್ಮಣನು ಹೇಳಿದನು-ಪವಿತ್ರವಾದ ತೀರ್ಥಗಳ ಸೇವೆಯನ್ನು ಮಾಡಿಕೊಂಡು ಬರುತ್ತಿದ್ದೇನೆ. ನಾನು ಬ್ರಾಹ್ಮಣನು. ಈಗ ಪುಷ್ಕರಕ್ಕೆ ಹೋಗುತ್ತಿದ್ದೇನೆ. ನಿಮಗೆ ಈಗ ಏನು ಬೇಕು? ಅದನ್ನು ನೀವು ಕೇಳಿಕೊಳ್ಳಿ. ಕೊಡಲು ಶಕ್ತಿಯಿದ್ದರೆ ಕೊಡುತ್ತೇನೆ.

॥ ರಾಕ್ಷಸ್ಯ ಊಚುಃ ॥

ಯೇಷು ತೀರ್ಥೇಷು ವಿಪ್ರೇಂದ್ರ ತ್ವಯಾ ಸ್ನಾತಂ ವದಸ್ವ ನಃ ।
ತಾನಿ ಸರ್ವಾಣಿ ಪುಣ್ಯಾನಿ ಮೋಚಯಾತಃ ಕುಜನ್ಮನಃ ।
ಅಸ್ಮಾನತಿತರಾಂ ತೃಷ್ಣಾಕ್ಷುದ್ಭ್ಯಾಂ ದಾರುಣದುಃಖದಾತ್ ॥ ೨೫ ॥

॥ ಬ್ರಾಹ್ಮಣ ಉವಾಚ ॥

ಅವಂತೀಮಾಶ್ರಮಾತ್ಪೂರ್ವಮಹಂ ಹರಿಪುರೀಮಿತಃ ।
ಗತೋಽಹಂ ದ್ವಾರಕಾಂ ತಸ್ಮಾತ್ ಸ್ನಾತ್ವಾ ಸೋಮೋದ್ಭವಾಜಲೇ ॥ ೨೬ ॥

ತತಃ ಪ್ರಾಪ್ತಃ ಪ್ರಭಾಸಾಖ್ಯಂ ತೀರ್ಥಂ ನೀರಧಿ ತೀರಗಾಂ ।
ತಸ್ಮಾತ್ಸೇತುನಿಬಂಧೇಽಹಂ ಸ್ನಾತಃ ಪರಮಪಾವನೇ ॥ ೨೭ ॥

ತಸ್ಮಾದಹಂ ಮಹಾಪುಣ್ಯಾಂ ಕಿಷ್ಕಿಂಧಾಂ ಸಮುಪಾಗತಃ ।
ಹತೋ ಯತ್ರ ತು ರಾಮೇಣ ವಾಲೀ ಕಪಿಗಣೇಶ್ವರಃ ॥ ೨೮ ॥

---

೨೫. ರಾಕ್ಷಸಿಯರು ಹೇಳಿದರು-ಎಲೈ ಬ್ರಾಹ್ಮಣನೇ! ನೀನು ಯಾವ ತೀರ್ಥಗಳಲ್ಲಿ ಸ್ನಾನಮಾಡಿದೆ? ಅದನ್ನು ನಮಗೆ ಹೇಳು? ಆ ಪುಣ್ಯ ತೀರ್ಥಗಳ ಹೆಸರನ್ನು ಹೇಳಿ ಈ ಕೆಟ್ಟ ಜನ್ಮದಿಂದ ಪಾರುಮಾಡು. ನಾವು ಹಸಿವು ಬಾಯಾರಿಕೆಗಳಿಂದ ಬಹುವಾಗಿ ತೊಂದರೆ ಪಡುತ್ತಿದ್ದೇವೆ. ಅದನ್ನು ತಪ್ಪಿಸು.

೨೬. ಬ್ರಾಹ್ಮಣನು ಹೇಳಿದನು-ನಾನು ಅವಂತಿಯ ಆಶ್ರಮದಿಂದ ಹರಿಪುರಿಯಾದ ದ್ವಾರಕೆಗೆ ಹೋದೆನು. ಅಲ್ಲಿ ಯಮುನೆಯ ನೀರಿನಲ್ಲಿ ಸ್ನಾನಮಾಡಿದೆನು.

೨೭-೨೮. ಅಲ್ಲಿಂದ ಪ್ರಭಾಸ ಕ್ಷೇತ್ರಕ್ಕೆ ಹೋದೆನು. ಅದು ಸಮುದ್ರದ ದಡದಲ್ಲಿದೆ. ಅಲ್ಲಿಂದ ಸೇತುಬಂಧಕ್ಕೆ ಹೋದೆನು. ಅಲ್ಲಿ ಸ್ನಾನಮಾಡಿ ಅಲ್ಲಿಂದ ಮಹಾಪುಣ್ಯವನ್ನು ಕೊಡುವ ಕಿಷ್ಕಿಂಧೆಗೆ ಹೋದೆನು. ಅಲ್ಲಿಯೇ ರಾಮನು ಕಪಿರಾಜನಾದ ವಾಲಿಯನ್ನು ಕೊಂದುದು.

ತಸ್ಮಾನ್ಮಠಂ ಸರಸ್ವತ್ಯಾ ನರ್ಮದಾತೀರಸಂಸ್ಥಿತಂ ।
ಸಮಾಗತೋಽಹಂ ಯತ್ರಾಸ್ತಿ ಭಾರತೀ ಸರ್ವಸೇವಿತಾ ॥ ೨೯ ॥

ತತೋಽಹಮಭಿವಂದ್ಯ ವಾಣೀಂ ತಾಂ ನತ್ವಾ ದಕ್ಷಿಣಾಪಥೇ ।
ಶಿವಕಾಂಚೀ ವಿಷ್ಣುಕಾಂಚ್ಯೌ ದೃಷ್ಟೇ ತತ್ರ ಮಯಾ ಪುರೇ ॥ ೩೦ ॥

ಯಯೋರ್ಮರಣತೋ ಜನ್ತುಃ ಶಿವೋ ವಿಷ್ಣುಶ್ಚ ಜಾಯತೇ ।
ತತೋಽಹಮುತ್ಕಲಂ ಪ್ರಾಪ್ತೋ ಯತ್ರಾಸ್ತಿ ಹರಿರೀಶ್ವರಃ ॥ ೩೧ ॥

ಚತುರ್ವರ್ಗಪ್ರದಸ್ಸಾಕ್ಷಾತ್ ಭಕ್ತಾನಾಮಭಿಕಾಂಕ್ಷತಾಂ ।
ತಮರ್ಚಯಿತ್ವಾ ವಿಧಿವತ್ ಭಕ್ಷಯಿತ್ವಾ ನಿವೇದಿತಂ ॥ ೩೨ ॥

ಪ್ರಸಾದಭೂತಮಗಮಂ ಗಂಗಾಸಾಗರಸಂಗಮಂ ।
ತತ್ರ ದೇವಾನೃಷೀನ್ ಪಿತ್ರೀನ್ ತರ್ಪಯಿತ್ವಾ ಯಥಾವಿಧಿ ॥ ೩೩ ॥

---

೨೯-೩೧. ಅಲ್ಲಿಂದ ನರ್ಮದೆಯ ದಡದಲ್ಲಿರುವ ಸರಸ್ವತೀ ಮಠಕ್ಕೆ ಹೋದೆನು ಅಲ್ಲಿ ಸರಸ್ವತಿಯು ಎಲ್ಲರಿಂದಲೂ ಸೇವಿಸಲ್ಪಟ್ಟವಳಾಗಿದ್ದಾಳೆ. ಅಲ್ಲಿ ಆಕೆಯನ್ನು ಸೇವಿಸಿ ನಮಸ್ಕರಿಸಿ ಅಲ್ಲಿಂದ ದಕ್ಷಿಣ ದೇಶಕ್ಕೆ ಹೋದೆನು. ಅಲ್ಲಿ ಶಿವಕಂಚಿ ವಿಷ್ಣುಕಂಚಿ ಎಂಬ ಪಟ್ಟಣಗಳಿವೆ. ಅವುಗಳಲ್ಲಿ ಶಿವನೂ ವಿಷ್ಣುವೂ ಇದ್ದಾರೆ. ಅಲ್ಲಿ ಮರಣ ಹೊಂದಿದರೆ ಶಿವವಿಷ್ಣುಗಳ ಸಾರೂಪ್ಯವನ್ನು ಹೊಂದುತ್ತಾರೆ. ಅಲ್ಲಿಂದ ಮುಂದೆ ಉತ್ಕಲ ದೇಶಕ್ಕೆ ಹೋದೆನು. ಅದು ಹರಿಯು ಇರುವ ಜಾಗವು.

೩೨. ಮತ್ತು ಆತನನ್ನು ಸೇವಿಸಿ ಅಪೇಕ್ಷಿಸುವ ಭಕ್ತರಿಗೆ ಧರ್ಮಾರ್ಥ ಕಾಮ ಮೋಕ್ಷಗಳನ್ನು ಕೊಡುವನು. ಅವನನ್ನು ಅಲ್ಲಿ ಸೇವಿಸಿ ಅವನಿಗೆ ನಿವೇದನ ಮಾಡಿದ ಪ್ರಸಾದವನ್ನು ತಿಂದೆನು.

೩೩. ಗಂಗಾ ಸಾಗರದ ಸಂಗಮಕ್ಕೆ ಅಲ್ಲಿಂದ ಹೋದೆನು. ಅಲ್ಲಿ ದೇವತೆಗಳಿಗೂ ಋಷಿಗಳಿಗೂ ಪಿತೃಗಳಿಗೂ ತರ್ಪಣವನ್ನು ಕೊಟ್ಟು ಅನಂತರ ಗಂಗೆಯು ನೂರಾರು ಭಾಗವಾಗಿ ಒಡೆದಿರುವ ಜಾಗಕ್ಕೆ ಬಂದೆನು.

ಯತ್ರ ಗಂಗಾ ಶತಮುಖೀ ಜಾತಾ ತತ್ರಾಹಮಾಗಮಂ ।
ತತೋ ಗಯಾಮುಪಾಗಮ್ಯ ಪಿಂಡಾನ್ ದತ್ವಾ ಯಥಾವಿಧಿ । ॥ ೩೪ ॥

ಪಿತೃಭ್ಯಸ್ತುಲಸೀಪುಷ್ಪಚಂದನೋದಕಪೂಜಿತಾನ್
ಕೋಶಲಾಂ ಸರಯೂ ವಾರಿ ಕರ್ಣಧಾರಸಭಸ್ವತಃ । ॥ ೩೫ ॥

ಪವಿತ್ರಿತಾಖಿಲಜನಾಂ ಸ್ಪರ್ಶನೇನಾಹಮಾಗಮಂ
ತತ್ರಾಸ್ತಿ ಗೋಪ್ರತಾರಾಖ್ಯಂ ತೀರ್ಥಂ ತ್ರಿದಶದುರ್ಲಭಂ ॥ ೩೬ ॥

ತತ್ರ ಸ್ನಾನಾದಿಕಂ ಸರ್ವಂ ನಿಶಿಚರ್ಯಃ ಕೃತಂ ಮಯಾ ।
ತತಃ ಕಾಶೀಮಹಂ ಪ್ರಾಪ್ತೋ ರಾಜಧಾನೀಮುಮಾಪತೇಃ ॥ ೩೭ ॥

ನತ್ವಾ ವಿಶ್ವೇಶ್ವರಂ ದೇವಂ ಬಿಂದುಮಾಧವಮೇವ ಚ ।
ಸ್ನಾತಂ ಮಣಿಕರ್ಣಿಕಾಯಾಂ ಜ್ಞಾನವಾಪ್ಯಾಂ ಚ ಭಕ್ತಿತಃ ॥ ೩೮ ॥

ತ್ರಿರಾತ್ರಮುಷಿತಸ್ತತ್ರ ಪ್ರಯಾಗಂ ಪುನರಾಗಮಂ ।
ಪೌಷಶುಕ್ಲಚತುರ್ದಶ್ಯಾಂ ಸಾಕ್ಷಾದ್ಯತ್ರ ಪ್ರಜಾಪತಿಃ ॥ ೩೯ ॥

---

೩೪-೩೬. ಆ ಮೇಲೆ ಗಂಗೆಯು ಒಂದೇ ರೀತಿಯಾಗಿ ಹರಿಯುವ ಗಯೆಗೆ ಬಂದು ಅಲ್ಲಿ ಪಿತೃಗಳಿಗೆ ಪಿಂಡವನ್ನು ಕೊಟ್ಟು ಅವನ್ನು ತುಲಸೀ ಪುಷ್ಪ ಚಂದನಗಳಿಂದ ಪೂಜಿಸಿ ಮುಂದೆ ಕೋಸಲ ದೇಶಕ್ಕೆ ಹೋದೆನು. ಅಲ್ಲಿ ಸರಯೂ ನದಿಯು ಹರಿಯುತ್ತಿರುವುದು. ಮತ್ತು ತನ್ನನ್ನು ಮುಟ್ಟುವುದರಿಂದ ಅದು ಜನಗಳನ್ನು ಪವಿತ್ರರನ್ನಾಗಿ ಮಾಡುವುದು. ಅಲ್ಲಿ ಗೋಪ್ರತಾರವೆಂಬ ತೀರ್ಥವಿರುವುದು ಅದು ದೇವತೆಗಳಿಗೂ ದುರ್ಲಭವಾದುದು.

೩೭. ಆ ಗೋಪ್ರತಾರಕ ತೀರ್ಥದಲ್ಲಿ ಸ್ನಾನಾದಿಗಳನ್ನು ಮಾಡಿ ಅಲ್ಲಿಂದ ಮುಂದಕ್ಕೆ ಶಿವನ ರಾಜಧಾನಿಯಾದ ಕಾಶಿಗೆ ಹೋದೆನು.

೩೮. ಅಲ್ಲಿ ವಿಶ್ವೇಶ್ವರನನ್ನೂ ಬಿಂದುಮಾಧವನನ್ನೂ ನಮಸ್ಕರಿಸಿ ಮಣಿಕರ್ಣಿಕೆಯಲ್ಲಿಯೂ ಜ್ಞಾನವಾಪಿಯಲ್ಲಿಯೂ ಸ್ನಾನಮಾಡಿದೆನು.

೩೯. ಆ ಕಾಶಿಯಲ್ಲಿ ಮೂರು ದಿವಸಗಳಿದ್ದು ಆ ಮೇಲೆ ಪುಷ್ಯ ಶುಕ್ಲ ಚತುರ್ದಶಿಯ ದಿವಸ ಸಾಕ್ಷಾದ್ಬ್ರಹ್ಮನಿರುವ ಪ್ರಯಾಗಕ್ಕೆ ಬಂದೆನು.

ಏಕಸ್ಮಿನ್ ಮಾಘಮಾಸೇ ತು ಸ್ನಾನಂ ಕೃತ್ವಾರುಣೋದಯೇ |
ಪುನಸ್ತಸ್ಮಾತ್ಸಮಾಯಾತೋ ನೈಮಿಷಂ ಗೋಮತೀತಟೇ || ೪೦ ||

ತತ್ರ ತೀರ್ಥಾನಿ ಸರ್ವಾಣಿ ವಸಂತಿ ಚ ಸ್ವಮಾಯಯಾ |
ತತೋಽಹಂ ಮಧುರಾಂ ಪ್ರಾಪ್ತೋ ಯತ್ರ ವಿಶ್ರಾನ್ತಿಸಂಜ್ಞಕಂ || ೪೧ ||

ತೀರ್ಥಂ ತತ್ಸನ್ನಿಧೌ ಪುಣ್ಯಮಸಿಕುಂಡಾಖ್ಯಮುತ್ತಮಂ |
ಕೃಷ್ಣಗಂಗೋದ್ಧವಾಕ್ರೂರಕೇಶಿಕಾಲೀಯತೀರ್ಥಭೃತ್ || ೪೨ ||

ಯಮುನಾಸ್ತಿ ಮಹಾಪುಣ್ಯಾ ಯತ್ರ ಸರ್ವಾರ್ಥದಾಯಿನೀ
ಉಭಯೋಃ ಕೂಲಯೋಸ್ತಸ್ಯಾ ವನಾನಿ ದ್ವಾದಶ ಶ್ರಿಯಾ || ೪೩ ||

ರಾಜಮಾನಾನಿ ಖೇಚರ್ಯೈಃ ಸಮಸ್ತಾರ್ಥಕರಾಣಿ ಚ |
ಸಂತಿ ತೇಷು ನರಸ್ಸ್ನಾತ್ವಾ ಪೀತ್ವಾ ಭೂಯೋ ನ ಜಾಯತೇ || ೪೪ ||

---

೪೦. ಅಲ್ಲಿ ಮಾಘಮಾಸದ ಒಂದು ದಿನ ಅರುಣೋದಯದಲ್ಲಿ ಸ್ನಾನಮಾಡಿ ಅಲ್ಲಿಂದ ಗೋಮತಿಯ ದಡದಲ್ಲಿರುವ ನೈಮಿಷಾರಣ್ಯಕ್ಕೆ ಬಂದೆನು.

೪೧. ಆ ನೈಮಿಷದಲ್ಲಿ ತೀರ್ಥಗಳೆಲ್ಲವೂ ತಮ್ಮ ಮಾಯೆಯಿಂದಲೇ ಬಂದು ವಾಸಿಸುತ್ತವೆ ಅನಂತರ ಮಧುರೆಗೂ ಬಂದೆನು ಅಲ್ಲಿ ವಿಶ್ರಾಂತಿ ಎಂಬ ಹೆಸರುಳ್ಳ ತೀರ್ಥವಿರುವುದು. ಅದರ ಹತ್ತಿರ ಅಸಿಕುಂಡವೆಂಬ ಭಾವಿಯಿರುವುದು.

೪೨ ಕೃಷ್ಣ ಗಂಗಾ ಉದ್ಧವ ಅಕ್ರೂರ ಕೇಶಿ ಕಾಳೀಯ ಇವರ ತೀರ್ಥಗಳನ್ನು ಹೊಂದಿರುವ ಯಮುನೆಯು ಅಲ್ಲಿರುವುದು. ಅದು ಮಹಾಪುಣ್ಯವು. ಇಷ್ಟಾರ್ಥಗಳನ್ನೆಲ್ಲಾ ಕೊಡುತ್ತದೆ.

೪೩-೪೪. ಆ ಯಮುನೆಯ ಎರಡು ದಡಗಳಲ್ಲಿಯೂ ಹನ್ನೆರಡು ವನಗಳಿವೆ. ಅವು ಸರ್ವ ಸಂಪತ್ತುಗಳಿಂದಲೂ ಕೂಡಿವೆ. ಕೇಳಿದುದನ್ನು ಕೊಡುತ್ತವೆ. ಅಲ್ಲಿ ಸ್ನಾನಮಾಡಿ ನೀರನ್ನು ಕುಡಿದರೆ ಪುನರ್ಜನ್ಮವಿರುವುದಿಲ್ಲ.

ತತೋಽಹಮಾಗಮಂ ಪುಣ್ಯಂ ಹಸ್ತಿನಾಪುರಮುತ್ತಮಂ ।
ಯತ್ರ ಶ್ರೀಪತಿಪಾದಾಬ್ಜಜಾತಾ ಗಂಗಾ ಸರಿದ್ವರಾ ॥ ೪೫ ॥

ತತೋ ನಾರಾಯಣಂ ಸ್ಥಾನಂ ಹಿಮವದ್ಭೂಮಿಸಂಸ್ಥಿತಂ ।
ಆಗತ್ಯ ಮಾಧವಂ ದೃಷ್ಟ್ವಾ ಕೇದಾರಮಹಮಾಗಮಂ ॥ ೪೬ ॥

ತತ್ರ ಸಂಪೂಜ್ಯ ವಿಶ್ವೇಶಂ ಪೀತ್ವಾ ಹಂಸೋದಕಂ ಪುನಃ ।
ಹರಿದ್ವಾರಂ ಮಹಾಪುಣ್ಯಮಾಗಮಂ ಜಾಹ್ನವೀತಟೇ ॥ ೪೭ ॥

ತತ್ರ ಸ್ನಾತ್ವಾ ಪಿತೄನ್ ದೇವಾನ್ ಋಷೀನ್ ಸಂತರ್ಪ್ಯ ಚಾಪ್ಯಹಂ ।
ಸಮಾಯಾತಃ ಕುರುಕ್ಷೇತ್ರೇ ಯತ್ರ ಪ್ರಾಚೀ ಸರಸ್ವತೀ ॥ ೪೮ ॥

ತತ್ರಾಪ್ಯಹಂ ಕ್ರಿಯಾಸ್ಸರ್ವಾಃ ಕೃತವಾನ್ನಿಯತೇಂದ್ರಿಯಃ ।
ಅರ್ಚಯಿತ್ವಾ ಚ ಪಾದಾಬ್ಜಂ ಶ್ರೀಪತೇಃ ಪುಷ್ಕರಂ ಪ್ರತಿ ॥ ೪೯ ॥

---

೪೫-೪೬. ಅಲ್ಲಿಂದ ಹೊರಟು ಹಸ್ತಿನಾಪಟ್ಟಣಕ್ಕೆ ಬಂದೆನು. ಅಲ್ಲಿ ವಿಷ್ಣುವಿನ ಪಾದದಿಂದ ಹುಟ್ಟಿದ ಗಂಗೆಯು ಹರಿಯುತ್ತಿದೆ. ಅನಂತರ ಹಿಮವತ್ಪರ್ವತದ ತಪ್ಪಲಲ್ಲಿರುವ ಬದರಿ ನಾರಾಯಣಸ್ಥಾನಕ್ಕೆ ಬಂದೆನು. ಅಲ್ಲಿ ಮಾಧವನ ದರ್ಶನವನ್ನು ಮಾಡಿಕೊಂಡು ಕೇದಾರಕ್ಕೆ ಹೋದೆನು.

೪೭. ಅಲ್ಲಿ ವಿಶ್ವೇಶ್ವರನನ್ನು ಪೂಜಿಸಿ ಹಂಸೋದಕವನ್ನು ಪಾನಮಾಡಿ ಅಲ್ಲಿಂದ ಮುಂದೆ ಅದೇ ಗಂಗಾದಡದಲ್ಲಿರುವ ಹರಿದ್ವಾರಕ್ಕೆ ಹೋದೆನು.

೪೮. ಆ ಹರಿದ್ವಾರದಲ್ಲಿ ಸ್ನಾನಮಾಡಿ ದೇವರ್ಷಿಪಿತೃಗಳಿಗೆ ತರ್ಪಣವನ್ನು ಮಾಡಿ ಕುರುಕ್ಷೇತ್ರಕ್ಕೆ ಬಂದೆನು. ಅಲ್ಲಿ ಸರಸ್ವತಿ ನದಿಯು ಪೂರ್ವದಿಕ್ಕಿಗೆ ಹರಿಯುತ್ತದೆ.

೪೯. ಅಲ್ಲಿಯೂ ನಾನು ಜಿತೇಂದ್ರಿಯನಾಗಿ ಎಲ್ಲಾ ಕೆಲಸಗಳನ್ನೂ ಮಾಡಿಕೊಂಡೆನು. ಆ ಪುಷ್ಕರದಲ್ಲಿ ವಿಷ್ಣುಪಾದವನ್ನು ಪೂಜಿಸಿದೆನು.

**ಚಲಿತೋ ಮಾರ್ಗಮಧ್ಯೇ ತು ವಿಮಲೋ ನಾಮ ಮೇ ಸಖಾ ।**
**ಮಿಲಿತೋ ಮಾಂ ವ್ರಜನ್ ಗೇಹಮಿಂದ್ರಪ್ರಸ್ಥಾತ್ತು ತೀರ್ಥತಃ ॥ ೫೦ ॥**

**ನೀತೋಽಹಂ ತೇನ ರಾಕ್ಷಸ್ಯಃ ಪುನಸ್ತೇನ ದ್ವಿಜನ್ಮನಾ ।**
**ತೀರ್ಥೋತ್ತಮೇ ಪರಾವೃತ್ಯ ಶಕ್ರಪ್ರಸ್ಥೇಽಖಿಲಾರ್ಥದೇ ॥ ೫೧ ॥**

**ತತ್ರಾಸ್ತಿ ದ್ವಾರಕಾ ಪುಣ್ಯಾ ನಿರ್ಮಿತಾ ವಿಷ್ಣುನಾ ಸ್ವಯಂ ।**
**ತತ್ರಾವಲೋಕಿತಸ್ಸಾಕ್ಷಾತ್ ವಿಷ್ಣುರ್ವಾಕ್ಯಾನ್ನ ರೂಪತಃ ॥ ೫೨ ॥**

**ತತ್ರಾಹಂ ಸ ಚ ಸ ಸ್ನಾತೌ ವಿಷ್ಣುಭಕ್ತಿಪ್ರಲಬ್ಧಯೇ ।**
**ದತ್ತಾ ಸಾ ವಿಷ್ಣುನಾ ಮಹ್ಯಂ ತಸ್ಮೈ ಚ ಕೃಷ್ಣಮೂರ್ತಿನಾ ॥ ೫೩ ॥**

**ಶ್ರುತಾ ತತ್ರ ಹರೇರ್ವಾಣೀ ನ ರೂಪಂ ನೌ ವಿಲೋಕಿತಂ ।**
**ಭಕ್ತಿರ್ಲಬ್ಧಾ ತತಸ್ಥಾನಾದ್ಯಾಮ್ಯಹಂ ಪುಷ್ಕರಂ ಪ್ರತಿ ॥ ೫೪ ॥**

---

೫೦. ಅಲ್ಲಿಂದ ಮುಂದೆ ಹೊರಡಲು ದಾರಿಯಲ್ಲಿ ನನ್ನ ಸ್ನೇಹಿತನಾದ ವಿಮಲನೆಂಬುವನು ಸಿಕ್ಕಿದನು. ಅವನು ಇಂದ್ರಪ್ರಸ್ಥದಿಂದ ಮನೆಗೆ ಹೋಗುತ್ತಿದ್ದನು.

೫೧. ಎಲೈ ರಾಕ್ಷಸಿಯರಿರಾ ! ಆ ಬ್ರಾಹ್ಮಣನು ಮತ್ತೆ ನನ್ನನ್ನು ಹಿಂತಿರುಗಿಸಿಕೊಂಡು ಆ ಇಂದ್ರಪ್ರಸ್ಥದಲ್ಲಿರುವ ಇಷ್ಟಾರ್ಥವನ್ನು ಕೊಡುವ ಒಂದು ಉತ್ತಮವಾದ ತೀರ್ಥಕ್ಕೆ ಕರೆದುಕೊಂಡು ಹೋದನು.

೫೨. ಆ ಇಂದ್ರಪ್ರಸ್ಥಕ್ಕೆ ಸೇರಿದಂತೆ ಪುಣ್ಯಕರವಾದ ದ್ವಾರಕೆಯಿರುವುದು. ಅಲ್ಲಿ ವಿಷ್ಣುವಿನ ಮಾತನ್ನು ಕೇಳಿ ಅವನ ಸಾಕ್ಷಾತ್ಕಾರವು ನಮಗಾಯಿತೇ ಹೊರತು ಅವನ ಆಕಾರವನ್ನು ನಾವು ನೋಡಲಿಲ್ಲ.

೫೩. ವಿಷ್ಣುವಿನಲ್ಲಿ ಭಕ್ತಿಯುಂಟಾಗುವುದಕ್ಕೋಸ್ಕರ ಅಲ್ಲಿ ನಾನೂ ಅವನೂ ಸ್ನಾನಮಾಡಿದೆವು. ಆ ವಿಷ್ಣುವು ಅವನಿಗೂ ನನಗೂ ಭಕ್ತಿಯನ್ನು ಕೊಟ್ಟನು.

೫೪. ಅಲ್ಲಿ ಹರಿಯ ಮಾತನ್ನು ಮಾತ್ರ ಕೇಳಿದೆವು. ಅವನ ರೂಪವು ಕಾಣಲಿಲ್ಲ. ಭಕ್ತಿಯು ಸಿಕ್ಕಿತು. ಅಲ್ಲಿಂದ ಮುಂದೆ ಪುಷ್ಕರಕ್ಕೆ ಹೋಗುತ್ತಿದ್ದೇನೆ.

ತತ್ರ ತೀರ್ಥಾಧಿಪಸ್ಯೇದಂ ದ್ವಾರಕಾಖ್ಯಸ್ಯ ವೈ ಜಲಂ |
ಕಮಂಡಲುಗತಂ ಪುಣ್ಯಂ ನಿಶಾಚರ್ಯೋ ವಹಾಮ್ಯಹಂ ॥ ೫೫ ॥

ಭವತೀಭಿರಹಂ ಪೃಷ್ಟೋ ಯತ್ತದಾಖ್ಯಾನಮೇವ ಮೇ |
ದೃಷ್ಟ್ವಾ ವೋ ದುರ್ದಶಾಮೇತಾಂ ಕೃಪಾ ಮೇ ಜಾಯತೇ ಹೃದಿ ॥
ಉಚ್ಯತಾಂ ಹಿ ಕರೋಮ್ಯದ್ಯ ಭವತೀನಾಂ ವಶೋಹ್ಯಹಂ ॥ ೫೬ ॥

॥ ನಾರದ ಉವಾಚ ॥

ಜ್ಞಾನಂ ಭವತು ಯುಷ್ಮಾಕಮಿತಿ ತಾಸ್ಸಿಷಿಚೇಂಭಸಾ |
ತಾಸ್ತಜ್ಜಲಾಭಿಮರ್ಶಾತ್ತು ಸರ್ವಾಸಾಂ ಜನ್ಮಕಾರಣಂ ॥ ೫೭ ॥

ಸಂಸ್ಮೃತ್ಯ ತತ್ಯಜುಶ್ಚೈವ ರಾಕ್ಷಸಂ ದೇಹಮುಲ್ಬಣಂ |
ಆಸಾದ್ಯ ದೇವತಾದೇಹಂ ವಿಮಾನಶತಮಾಗತಂ ॥ ೫೮ ॥

ಆರುಹ್ಯಾಪ್ಸರಸೋ ಭೂತ್ವಾ ತಾಃ ಪ್ರಣೇಮುರ್ದ್ವಿಜನ್ಮನೇ |
ಊಚುಶ್ಚ ಭೋ ದ್ವಿಜಶ್ರೇಷ್ಠ ದ್ವಾರಕಾಜಲಸಂಗಮಾತ್ ॥ ೫೯ ॥

---

೫೫. ಅಲ್ಲಿರುವ ದ್ವಾರಕೆಯ ತೀರ್ಥದ ನೀರು. ಇದನ್ನು ಕಮಂಡಲುವಿನಲ್ಲಿ ಇಟ್ಟುಕೊಂಡು ಹೋಗುತ್ತಿದ್ದೇನೆ.

೫೬. ನೀವುಗಳು ಇಲ್ಲಿ ನನ್ನನ್ನು ತೀರ್ಥಗಳ ವಿಷಯವನ್ನು ಕೇಳಿದುದರಿಂದ ಹೇಳಿದೆನು. ನಿಮ್ಮಗಳ ಈ ಕಷ್ಟಸ್ಥಿತಿಯನ್ನು ನೋಡಿ ನನಗೆ ಮನಸ್ಸಿನಲ್ಲಿ ಬಹುವಾಗಿ ಕನಿಕರ ಉಂಟಾಗಿದೆ. ನಿಮ್ಮಗಳಿಗೆ ಏನು ಉಪಕಾರವನ್ನು ಮಾಡಬೇಕೆಂಬುದನ್ನು ಹೇಳಿ. ಮಾಡುತ್ತೇನೆ.

೫೭-೬೦ ನಾರದನು ಹೇಳಿದನು–ಆಗ ಆ ಬ್ರಾಹ್ಮಣನು ನಿಮಗೆ ಜ್ಞಾನವುಂಟಾಗಲಿ. ಎಂದು ಆ ಕಮಂಡಲುವಿನ ತೀರ್ಥವನ್ನು ಅವರ ಮೇಲೆ ಚುಮುಕಿಸಿದನು. ಆ ನೀರಿನ ಸ್ಪರ್ಶದಿಂದ ಅವರು ತಮ್ಮಗಳ ಜನ್ಮಕ್ಕೆ ಕಾರಣವನ್ನು ಸ್ಮರಿಸಿಕೊಂಡು ಆ ಕ್ರೂರವಾದ ದೇಹವನ್ನು ಬಿಟ್ಟು ಬಿಟ್ಟರು. ಒಡನೆಯೇ ದೇವತೆಗಳ ಶರೀರವನ್ನು ಹೊಂದಿದರು. ಅಲ್ಲಿಗೆ ಅನೇಕ ವಿಮಾನಗಳು ಬರಲು, ಅಪ್ಸರರಾಗಿದ್ದ ಆ ಹೆಂಗಸರು ಅವನ್ನು ಹತ್ತಿ ಆ ಬ್ರಾಹ್ಮಣನಿಗೆ ನಮಸ್ಕರಿಸಿದರು. ಎಲೈ ಬ್ರಾಹ್ಮಣೋತ್ತಮನೆ! ಈ ದ್ವಾರಕೆಯ ನೀರನ್ನು

ರಾಕ್ಷಸತ್ವಾದ್ದ್ವಯಂ ಮುಕ್ತ್ವಾ ಗಚ್ಛಾಮಸ್ತ್ರಿದಶಾಲಯಂ ।
ಇಂದ್ರಪ್ರಸ್ಥಾನ್ತರಾವರ್ತಿನ್ಯೇಷಾ ಯಾ ದ್ವಾರಕಾ ದ್ವಿಜ ॥
ನಾತಃ ಪರತರಂ ಮರ್ತ್ಯೇ ತೀರ್ಥಮಸ್ತ್ಯಖಿಲಾರ್ಥದಂ ॥ ೬೦ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ತಾಸ್ಸಮಾರೂಢಾ ವಿಮಾನೇಷು ಮಹೀಪತೇ
ಜಗ್ಮುಃ ಪ್ರಾಚೀಂ ದಿಶಂ ತೇನ ದತ್ತಾಜ್ಞಾ ನ್ವೈ ದ್ವಿಜನ್ಮನಾ ॥ ೬೧ ॥

ಯಮುನಾತೀರವರ್ತಿನ್ಯಾ ದ್ವಾರಕಾಯಾ ಮಹೀಪತೇ ।
ಶೃಣ್ವನ್ಮಾಹಾತ್ಮ್ಯಮೇತಸ್ಯಾ ನರಃ ಪಾಪೈಃ ಪ್ರಮುಚ್ಯತೇ ॥ ೬೨ ॥

ವೇದಜ್ಞಾನಾಂ ಬ್ರಾಹ್ಮಣಾನಾಂ ಶತಸ್ಯೇಚ್ಛಾಸುಭೋಜನಾತ್
ಯತ್ಫಲಂ ಶ್ರವಣಾದಸ್ಯಾತ್ ಮಹಿಮ್ನಸ್ತತ್ಪ್ರಜಾಯತೇ ॥ ೬೩ ॥

---

ಮುಟ್ಟಿದುದರಿಂದ ನಮಗೆ ರಾಕ್ಷಸಭಾವವೂ ಶರೀರವೂ ಹೋಗಿ ದೇವತಾ ದೇಹವನ್ನು ಹೊಂದಿ ಸ್ವರ್ಗಕ್ಕೆ ಹೋಗುತ್ತಿದ್ದೇವೆ. ಎಂದರು. ಇಂದ್ರಪ್ರಸ್ಥದ ಎಲ್ಲೆಯಲ್ಲಿರುವ ಈ ದ್ವಾರಕೆಯು ಬಹು ಉತ್ತಮವಾದ ಇಷ್ಟಾರ್ಥಗಳನ್ನು ಕೊಡುವ ತೀರ್ಥವು. ಇದಕ್ಕಿಂತಲೂ ಬೇರೆಯಾದ ಉತ್ತಮತೀರ್ಥವೇ ಇಲ್ಲ.

೬೧. ನಾರದನು ಹೇಳಿದನು-ಹೀಗೆಂದು ಹೇಳಿ ಅವರು ವಿಮಾನವನ್ನು ಹತ್ತಿ ಕುಳಿತುಕೊಂಡು ಅವನ ಅಪ್ಪಣೆಯನ್ನು ಹೊಂದಿ ಪೂರ್ವದಿಕ್ಕಿಗೆ ಹೊರಟು ಹೋದರು.

೬೨. ಯಮುನಾ ತೀರದಲ್ಲಿರುವ ಈ ದ್ವಾರಕೆಯ ಮಹಿಮೆಯನ್ನು ಕೇಳಿದವನು ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುತ್ತಾನೆ.

೬೩. ವೇದಜ್ಞರಾದ ನೂರು ಜನ ಬ್ರಾಹ್ಮಣರನ್ನು ಕರೆದು ಅವರಿಗೆ ಇಚ್ಛೆಯಾದ ಉತ್ತಮವಾದ ಭೋಜನವನ್ನು ಮಾಡಿಸಿದರೆ ಯಾವ ಪುಣ್ಯವು ಬರುವುದೋ ಆ ಪುಣ್ಯವನ್ನು ಇದನ್ನು ಕೇಳಿದರೆ ಹೊಂದುತ್ತಾನೆ.

ಗೋವಿಂದಾರಾಧನೇ ಸಮ್ಯಕ್ ಯಥಾ ವೈ ಸೌಖ್ಯಮಿಂದ್ರಿಯೇ |
ಮಾಹಾತ್ಮ್ಯಶ್ರವಣಾದಸ್ಯಾ ದ್ವಾರಕಾಯಾಸ್ತಥಾ ನೃಪ ॥ ೬೪ ॥

ಸೂರ್ಯೇಂದುಗ್ರಹಣೇ ದಾನಾತ್ ಸುವರ್ಣಫಲವಿಂಶತೇಃ |
ಯತ್ಫಲಂ ಶೃಣ್ವತೈತಸ್ಯಾ ಮಾಹಾತ್ಮ್ಯಂ ತದವಾಪ್ಯತೇ ॥ ೬೫ ॥

ವಿಮಲಸ್ಯ ಸುತಪ್ರಾಪ್ತಿಂ ಶ್ರುತ್ವಾ ಸುತ ಇಹಾಪ್ಯತೇ |
ತತ್ಸಖ್ಯುರ್ಭಕ್ತಿಲಾಭಂ ಚ ಲಭ್ಯತೇ ಭಕ್ತಿರುತ್ತಮಾ ॥ ೬೬ ॥

ರಾಕ್ಷಸೀನಾಂ ವಿಮೋಕ್ಷಂ ಯಃ ಶೃಣೋತಿ ಶ್ರದ್ಧಯಾನ್ವಿತಃ |
ಸ ಯಾತಿ ತಾ ಇವ ಶ್ರೇಷ್ಠಂ ವಿಮಾನೇನ ಸುರಾಲಯಂ ॥ ೬೭ ॥

---

೬೪. ಗೋವಿಂದನ ಪೂಜೆಮಾಡಿದರೆ ಇಂದ್ರಿಯಗಳು ಸಂತೋಷದಿಂದ ಹೇಗೆ ತೃಪ್ತವಾಗಿರುವುವೋ ಅವನ ಸ್ಥಾನವಾದ ಈ ದ್ವಾರಕೆಯ ಮಹಿಮೆಯನ್ನು ಕೇಳಿದರೂ ಅದೇ ರೀತಿಯಾಗಿ ಸುಖದಿಂದ ಇರುತ್ತವೆ

೬೫. ಸೂರ್ಯ ಚಂದ್ರರ ಗ್ರಹಣದಲ್ಲಿ ಇಪ್ಪತ್ತು ಫಲಗಳ ಚಿನ್ನವನ್ನು ದಾನಮಾಡುವುದರಿಂದ ಯಾವ ಫಲವು ಬರುವುದೋ ಆ ಫಲವು ಈ ದ್ವಾರಕೆಯ ಮಹಿಮೆಯನ್ನು ಕೇಳುವುದರಿಂದ ಬರುತ್ತದೆ.

೬೬. ವಿಮಲನು ಮಗನನ್ನು ಹೊಂದಿದುದನ್ನು ಕೇಳಿದರೆ ಅವನಿಗೆ ಇಹದಲ್ಲಿ ಮಗನು ಹುಟ್ಟುತ್ತಾನೆ. ಅವನ ಸ್ನೇಹಿತನಿಗೆ ಉತ್ತಮವಾದ ಭಕ್ತಿಯು ಉಂಟಾಗುತ್ತದೆ.

೬೭. ಯಾವನು ಶ್ರದ್ಧೆಯಿಂದ ರಾಕ್ಷಸಿಯರ ಈ ಮೋಕ್ಷವನ್ನು ಕೇಳುತ್ತಾನೆಯೋ ಅವನು ಆ ರಾಕ್ಷಸಿಯರು ಉತ್ತಮ ದೇಹವನ್ನು ಹೊಂದಿ ದೇವಲೋಕಕ್ಕೆ ಹೋದಂತೆ ಹೋಗುತ್ತಾನೆ.

**ನೃಪವರ ಮಹಿಮಾ ತೇ ವರ್ಣಿತೋ ದ್ವಾರಕಾಯಾಃ ।**
**ತ್ರಿಭುವನಜನಸೇವ್ಯೇ ಶಕ್ರತೀರ್ಥೇ ಸ್ಥಿತಾಯಾಃ ॥**
**ಕಿಮಪರಮತಿಪುಣ್ಯಂ ವರ್ಣಯಾಮಿ ತ್ವದಗ್ರೇ ॥**
**ಕಥಯ ನ ಹಿ ವಿಧೇಯಃ ಶ್ರೇಯಸಿ ಸ್ವೇ ವಿಲಂಬಃ ॥ ೬೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ದ್ವಾರಕೋಪಾಖ್ಯಾನಂ ನಾಮ ಚತುರಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೬೮. ಎಲೈ ದೊರೆಯೆ ! ಮೂರುಲೋಕದ ಜನರೂ ಸೇವಿಸತಕ್ಕ ಶಕ್ರತೀರ್ಥದಲ್ಲಿರುವ ದ್ವಾರಕೆಯ ಮಹಿಮೆಯನ್ನು ವರ್ಣಿಸಿದೆನು. ಮತ್ತೆ ಯಾವ ಅತಿಪುಣ್ಯಪ್ರದವಾದ ವಿಷಯವನ್ನು ನಿನಗೆ ಹೇಳಲಿ ? ಹೇಳು. ನಿನ್ನ ಶ್ರೇಯಸ್ಸಿನ ವಿಷಯದಲ್ಲಿ ಸಾವಕಾಶವನ್ನು ಮಾಡದೆ ಕೇಳು. ಹೇಳುತ್ತೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದಿಯ ಮಹಿಮೆಯಲ್ಲಿ ದ್ವಾರಕೋಪಾಖ್ಯಾನ ಎಂಬ ಇನ್ನೂರ ನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಾಧಿಕದ್ವಿಶತತಮೋಽಧ್ಯಾಯಃ ||



|| ಯುಧಿಷ್ಠಿರ ಉವಾಚ ||

**ಸೌಭರೇ ಕಸ್ಯ ತೀರ್ಥಸ್ಯ ಮಹಾತ್ಮ್ಯಂ ನಾರದೋ ಮುನಿಃ |**
**ವರ್ಣಯಾಮಾಸ ಶಿಬಯೇ ಶಕ್ರತೀರ್ಥಗತಸ್ಯ ಚ || ೧ ||**

**ಅತಸ್ತು ಮಮ ಶುಶ್ರೂಷಾ ಜಾಯತೇ ಮುನಿಪುಂಗವ |**
**ಶಿಬಿನಾರದಸಂವಾದಂ ಬ್ರೂಹಿ ಪುಣ್ಯಂ ನತಾಯ ಮೇ || ೨ ||**

|| ಸೌಭರಿರುವಾಚ ||

**ಧರ್ಮರಾಟ್ ಶಿಬಿರಾಜಾ ಚ ಶ್ರುತ್ವಾ ನಾರದವರ್ಣಿತಂ |**
**ದ್ವಾರಕಾಯಾಸ್ತು ಮಾಹಾತ್ಮ್ಯಂ ತಮೇವಾಪೃಚ್ಛದಾದರಾತ್ || ೩ ||**

---

## ಇನ್ನೂರ ಐದನೆಯ ಅಧ್ಯಾಯವು



೧-೨. ಯುಧಿಷ್ಠಿರನು ಹೇಳಿದನು-ಎಲೈ ಸೌಭರಿಯೆ! ನಾರದನು ಯಾವ ತೀರ್ಥದ ಮಹಿಮೆಯನ್ನು ಶಕ್ರತೀರ್ಥದಲ್ಲಿರುವ ಶಿಬಿಗೆ ಹೇಳಿದನು? ಅದನ್ನು ಕೇಳುವ ಆಸೆಯು ನನಗುಂಟಾಗಿದೆ. ಆ ಶಿಬಿ ನಾರದರ ಸಂವಾದವನ್ನು ನನಗೆ ಹೇಳು. ಅದೇ ಪುಣ್ಯಪ್ರದವಾಗಿದೆ.

೩. ಸೌಭರಿಯು ಹೇಳಿದನು-ಎಲೈ ಧರ್ಮಜನೆ! ಶಿಬಿಯು ಆ ನಾರದನು ಹೇಳಿದ ಆ ದ್ವಾರಕೆಯ ಮಹಿಮೆಯನ್ನು ಕೇಳಿ ಮತ್ತೆ ಅವನನ್ನೇ ಕುರಿತು ಇಂತೆಂದು ಕೇಳಿದನು.

॥ ಶಿಬಿರುವಾಚ ॥

ಬ್ರಹ್ಮಾಂಗಜ ಸುರಶ್ರೇಷ್ಠ ಶ್ರುತಂ ಮಾಹಾತ್ಮ್ಯಮುತ್ತಮಂ ।
ಇಂದ್ರಪ್ರಸ್ಥತಟಿಸ್ಥಾಯಾ ದ್ವಾರಕಾಯಾ ತಥಾದ್ಭುತಂ ॥ ೪ ॥

ಅಯೋಧ್ಯಾಯಾಂ ಯದಿ ಮುನೇ ಕಿಂಚಿದಸ್ತಿ ಪವಿತ್ರಕಂ ।
ಚರಿತಂ ಮಮ ತದ್ಬ್ರೂಹಿ ಪಿಪಾಸೋಸ್ತ್ವದ್ವಚೋಮೃತಂ ॥ ೫ ॥

॥ ನಾರದ ಉವಾಚ ॥

ಅಸ್ತ್ಯತ್ರ ಚರಿತಂ ಪುಣ್ಯಂ ಮಹಾಪಾತಕನಾಶನಂ ।
ನಾಪಿತಸ್ಯಾಘಯುಕ್ತಸ್ಯ ಮುಕುಂದಸ್ಯ ದ್ವಿಜಸ್ಯ ಚ ॥ ೬ ॥

ಬ್ರಹ್ಮಹಾ ನಾಪಿತೋ ರಾಜನ್ ಅಪಮೃತ್ಯುಗತೋ ದ್ವಿಜಃ ।
ಪ್ರಸಾದಾತ್ಕೋಸಲಾಯಾಸ್ತು ದ್ವಾವಪಿ ಸ್ವರ್ಗತಿಂ ಗತೌ ॥ ೭ ॥

ಚಂದ್ರಭಾಗಾನದೀತೀರೇ ಪುರೀ ಸಾ ಚ ನಿವೇಶಿತಾ ।
ತತ್ರಾಸ್ತಿ ನಾಪಿತಃ ಪಾಪಶ್ಚಂಡಕೋ ನಾಮ ಗರ್ಹಿತಃ ॥ ೮ ॥

---

೪-೫. ಶಿಬಿಯು ಹೇಳಿದನು-ಎಲೈ ಬ್ರಹ್ಮನ ಮಗನೂ ಸುರಶ್ರೇಷ್ಠನೂ ಆದ ನಾರದನೆ! ಇಂದ್ರಪ್ರಸ್ಥದ ಎಲ್ಲೆಯ ಕೊನೆಯಲ್ಲಿರುವ ದ್ವಾರಕೆಯು ಅದ್ಭುತವಾದ ಮಹಿಮೆಯನ್ನು ಕೇಳಿದೆನು. ಅಯೋಧ್ಯೆಯಲ್ಲಿ ಪವಿತ್ರವಾದ ಯಾವುದಾದರೂ ವಿಷಯವಿದ್ದರೆ ಅದನ್ನು ಹೇಳು. ನಿನ್ನ ವಾಗಮೃತವು ಬಹು ಚೆನ್ನಾಗಿದೆ.

೬. ನಾರದನು ಹೇಳಿದನು-ಇಲ್ಲಿ ಒಂದು ಪುಣ್ಯಕರವಾದ ಮಹಾಪಾಪವನ್ನು ನಾಶಮಾಡುವ ಒಂದು ಕಥೆಯಿರುವುದು. ಅದು ಒಬ್ಬ ಪಾಪಿಯಾದ ಕ್ಷೌರಕನಿಗೂ ಮುಕುಂದನೆಂಬ ಬ್ರಾಹ್ಮಣನಿಗೂ ಸಂಬಂಧಪಟ್ಟುದು.

೭. ಒಬ್ಬ ಬ್ರಹ್ಮಹತ್ಯೆಯನ್ನು ಮಾಡಿದ ಕ್ಷೌರಕನೂ ಅಪಮೃತ್ಯುವನ್ನು ಹೊಂದಿದ ಬ್ರಾಹ್ಮಣನೂ ಈ ಕೋಸಲೆಯ ಮಹಿಮೆಯಿಂದ ಅವರಿಬ್ಬರೂ ಸ್ವರ್ಗವನ್ನು ಹೊಂದಿದರು.

೮. ಆ ಕೋಸಲ ಪಟ್ಟಣವು ಚಂದ್ರಭಾಗಾ ನದಿಯ ದಡದಲ್ಲಿದೆ. ಅದರಲ್ಲಿ ಒಬ್ಬ ಪಾಪಿಯಾದ ಚಂಡಕನೆಂಬ ನೀಚನಾದ ಕ್ಷೌರಕನಿದ್ದನು.

ಚೌರ್ಯೇಣ ಪರವಿತ್ತಾನಾಮುಪಹರ್ತಾ ಸುಪಾಪಕೃತ್ |
ಘಾತಕಃ ಶಸ್ತ್ರಪಾಶಾದ್ಯೈಃ ಪಾಂಥಾನಾಮುಪಲುಂಠಕಃ || ೯ ||

ದ್ಯೂತಮದ್ಯರತೋ ನಿತ್ಯಂ ಪರಸ್ತ್ರೀಲಂಪಟೇಂದ್ರಿಯಃ |
ಭಿತ್ತ್ವಾ ದೇವಾಲಯಂ ಭಿತ್ತಿಮಿಷ್ಟಕಾಯಾಶ್ಚ ವಿಕ್ರಯೀ || ೧೦ ||

ತಸ್ಯೋದವಸಿತಾಭ್ಯಾಶೇ ಬ್ರಾಹ್ಮಣೋ ವಸತಿ ಶ್ರಿಯಾ |
ಸಂಯುಕ್ತೋ ಬ್ರಹ್ಮಕರ್ಮಜ್ಞೋ ಮುಕುಂದೋ ನಾಮತೋ ನೃಪ||೧೧||

ಸ ಏಕದಾ ಸಮಾಲಿಂಗ್ಯ ತರುಣೀಮಾತ್ಮಯೋಷಿತಂ |
ಸುಷ್ವಾಪ ಸುರತಾಯಾಸಶ್ಲಥಾಂಗೋ ನಿಶಿ ನಿರ್ಭಯಂ || ೧೨ ||

ಸ ಚಂಡಕೋ ನಿಶೀಥೇಽಥ ಪ್ರವಿವೇಶ ತದಾಲಯಂ |
ಮುಕುಂದಸ್ಯ ಸಮಾಹರ್ತುಂ ಹರ್ಮ್ಯೇ ಭೂಷಾದಿವಸ್ತು ಯತ್ || ೧೩ ||

---

೯. ಅವನು ಪರರ ವಸ್ತುಗಳನ್ನು ಕದಿಯುತ್ತಾ ಕತ್ತಿ ಮೊದಲಾದ ಆಯುಧಗಳಿಂದ ಪ್ರಯಾಣಿಕರನ್ನು ಕೊಂದು ಅವರ ಪದಾರ್ಥಗಳನ್ನು ದೋಚಿ ಕೊಳ್ಳುತ್ತಲೂ ಇದ್ದನು.

೧೦. ಯಾವಾಗಲೂ ಜೂಜಾಡುತ್ತಲೂ ಹೆಂಡವನ್ನು ಕುಡಿಯುತ್ತಲೂ ಪರರ ಹೆಂಗಸರಲ್ಲಿ ರಮಿಸುತ್ತಲೂ ಇದ್ದನು. ಅಲ್ಲದೆ ದೇವಸ್ಥಾನಗಳನ್ನು ಒಡೆದು ಅದರಲ್ಲಿರುವ ಇಟ್ಟಿಗೆಗಳನ್ನು ಮಾರುತ್ತಲೂ ಇದ್ದನು.

೧೧. ಅವನ ಮನೆಯ ಹತ್ತಿರ ಒಬ್ಬ ಸಂಪತ್ತುಳ್ಳ ಬ್ರಾಹ್ಮಣನು ವಾಸಿಸುತ್ತಿದ್ದನು. ಅವನ ಹೆಸರು ಮುಕುಂದನು. ಅವನು ಜಿತೇಂದ್ರಿಯನಾಗಿಯೂ ಬ್ರಾಹ್ಮಣ ಕರ್ಮಗಳನ್ನು ತಿಳಿದು ಅದರಂತೆ ಮಾಡುತ್ತಲೂ ಇದ್ದನು.

೧೨. ಅವನು ಒಂದುಸಾರಿ ತನ್ನ ಹೆಂಡತಿಯನ್ನು ಆಲಿಂಗಿಸಿಕೊಂಡು ಅವಳಲ್ಲಿ ರಮಿಸಿದ ಆಯಾಸದಿಂದ ಬಳಲಿದವನಾಗಿ ಭಯವಿಲ್ಲದೆ ರಾತ್ರಿಯಲ್ಲಿ ಮಲಗಿದ್ದನು.

೧೩. ಆದಿನ ರಾತ್ರಿಯಲ್ಲಿ ಆ ಚಂಡಕನು ಮುಕುಂದನ ಮನೆಯಲ್ಲಿರುವ ಒಡವೆಯೇ ಮುಂತಾದುವುಗಳನ್ನು ಕದಿಯಲು ಒಳಕ್ಕೆ ನುಗ್ಗಿದನು.

**ಉಪಕಾರ್ಯಾ ಬಹಿಸ್ಸ್ಥಂ ಯತ್ತದ್ಗೃಹೀತ್ವಾಗಮದ್ಗೃಹಂ ।**
**ಸ್ವಕೀಯಂ ಚ ಪುನಸ್ತಸ್ಯ ಬ್ರಾಹ್ಮಣಸ್ಯಾವಿಶದ್ಗೃಹಂ　　　॥ ೧೪ ॥**

**ಕಪಾಟೋದ್ಘಾಟನಾರ್ಥೀ ತು ಯತ್ನೇನ ಮಹತಾಭವತ್ ।**
**ಲೋಹಯಂತ್ರಾವರುದ್ಧಶ್ಚ ಸ ನೋದ್ಘಾಟಯಿತುಂ ಕ್ಷಮಃ　　　॥ ೧೫ ॥**

**ಆರುರೋಹ ತದಾ ತಸ್ಯ ಬ್ರಾಹ್ಮಣಸ್ಯಾವಿಶದ್ಗೃಹಂ ।**
**ಪ್ರವಿಶ್ಯ ತದ್ಗೃಹಂ ಕ್ರೂರಃ ಕೃಪಾಣಂ ಪಾಣಿನಾ ದಧತ್　　　॥ ೧೬ ॥**

**ಅಟ್ಟಾಲಕಂ ಸಮಾವಿಷ್ಟೋ ನಾಪಿತಸ್ತಸ್ಕರಕ್ರಿಯಃ ।**
**ತತ್ರಾಪಶ್ಯತ್ಪ್ರಸುಪ್ತೌ ತೌ ದಂಪತೀ ರತಿವಿಹ್ವಲೌ　　　॥ ೧೭ ॥**

**ಜಗಾಮ ಚ ತಯೋಃ ಪಾರ್ಶ್ವೇ ಹೇಮಭೂಷಾಜಿಘೃಕ್ಷಯಾ ।**
**ಶಯ್ಯಾಯಾ ಏಕದೇಶಸ್ಥಂ ಗೃಹೀತ್ವಾ ಭೂಷಣಂ ಬಹು　　　॥ ೧೮ ॥**

---

೧೪. ಆ ಬ್ರಾಹ್ಮಣನು ಮಲಗಿದ್ದ ಮನೆಯ ಮಹಡಿಯ ಹೊರಗಿರುವುದನ್ನೆಲ್ಲಾ ತೆಗೆದುಕೊಂಡು ಮನೆಗೆ ಹೋಗಿಟ್ಟನು. ಮತ್ತೆ ಬಂದು ಆ ಬ್ರಾಹ್ಮಣನಿರುವ ಮನೆಯನ್ನು ನುಗ್ಗಲು ಪ್ರಯತ್ನಿಸಿದನು.

೧೫. ಬಾಗಿಲನ್ನು ತೆಗೆಯುವುದಕ್ಕೆ ಬಹುವಾಗಿ ಪ್ರಯತ್ನಪಟ್ಟನು. ಆ ಬಾಗಿಲಿಗೆ ಕಬ್ಬಿಣದ ಸಲಾಕೆಯಿಂದ ಕೂಡಿಸಿ ಬಾಗಿಲು ಹಾಕಿದ್ದುದರಿಂದ ಅದನ್ನು ತೆಗೆಯಲು ಆಗಲಿಲ್ಲ.

೧೬. ಬಾಗಿಲು ತೆಗೆಯುವುದಕ್ಕೆ ಬಾರದಿರಲು ಮಹಡಿಯ ಮೇಲಕ್ಕೆ ಬೇರೆ ಕಡೆಯಿಂದ ಹತ್ತಿ ಆ ಬ್ರಾಹ್ಮಣನಿರುವ ಮನೆಗೆ ನುಗ್ಗಿದನು ಮತ್ತು ಒಳಕ್ಕೆ ನುಗ್ಗುವಾಗ ಕೈಯ್ಯಲ್ಲಿ ಕತ್ತಿಯನ್ನು ಹಿಡಿದುಕೊಂಡಿದ್ದನು.

೧೭. ಕಳ್ಳತನದಲ್ಲಿ ನಿಪುಣನಾದ ಈ ಕ್ಷೌರಕನು ಅವರು ಮಲಗಿರುವ ಅಟ್ಟವನ್ನು ಹತ್ತಿದನು. ಆ ಮನೆಯಲ್ಲಿ ರಮಿಸಿ ಆಯಾಸಗೊಂಡು ಮಲಗಿರುವ ಆ ದಂಪತಿಗಳನ್ನು ನೋಡಿದನು.

೧೮. ಚಿನ್ನದ ಒಡವೆಗಳನ್ನು ತೆಗೆದುಕೊಳ್ಳಲು ಅವರ ಪಕ್ಕಕ್ಕೆ ಹೋದನು. ಅಲ್ಲಿ ಹಾಸಿಗೆಯ ಮೇಲೆ ಒಂದು ಪಕ್ಕದಲ್ಲಿಟ್ಟಿದ್ದ ಅನೇಕ ಒಡವೆಗಳನ್ನು ತೆಗೆದುಕೊಂಡನು.

ಪರ್ತುಂ ತದಂಗತೋ ಹಸ್ತಂ ಪ್ರಸಸಾರ ಸ ನಾಪಿತಃ ।
ತಸ್ಕರಸ್ಪರ್ಶತೋ ವಿಪ್ರೋ ಜಜಾಗಾರ ಭಯಾತುರಃ ॥ ೧೯ ॥

ಸ ಕಿಂಚಿದೂಚೇ ಸಮ್ಮೀಲ್ಯ ನೇತ್ರೇ ತತ್ರೈವ ಸಂಸ್ಥಿತಃ ।
ಯದಾ ಸ ತಸ್ಕರಃ ಪಾಪೋ ಗೃಹೀತ್ವಾ ದೇಹಭೂಷಣಂ ॥ ೨೦ ॥

ಚಲಿತಸ್ತ ತದಾ ತೇನ ದೌರ್ಭಾಗ್ಯವತಾತ್ತೋ ದ್ವಿಜೇನ ಹಿ ।
ಪಶ್ಚಾದಾಗತ್ಯ ವಿತ್ತಸ್ಯ ಸಹಮಾನೇನ ಸಂಕ್ಷಯಂ ॥ ೨೧ ॥

ತೇನಾಪಿ ನೃಪ ಚೌರೇಣ ಕೃಪಾಣೇನ ಹತೋ ದ್ವಿಜಃ ।
ವಿದೀರ್ಣೋದರಮಧ್ಯಸ್ತು ತಾತ ಮಾತರಿತೀರಯನ್ ॥ ೨೨ ॥

ವದಂತಃ ಕಿಂ ಕಿಮಿತ್ಯೇತತ್ಪಾರ್ಶ್ವಗಂ ತಸ್ಯಾಯಯುರ್ಜನಾಃ ।
ದದೃಶುಸ್ತಂ ನಿಸ್ಸೃತಾಸ್ರಂ ರುಧಿರಾಲಿಪ್ತವಿಗ್ರಹಂ ॥ ೨೩ ॥

---

೧೯. ಅದನ್ನು ತೆಗೆದುಕೊಂಡುದಲ್ಲದೆ ಆ ದಂಪತಿಗಳ ಮೈಮೇಲಿರುವ ಒಡವೆಯನ್ನು ತೆಗೆದುಕೊಳ್ಳಲು ಆ ಕ್ಷೌರಕನು ಕೈಹಾಕಿದನು. ಆ ಕಳ್ಳನ ಕೈಯ್ಯಿನ ಸ್ಪರ್ಶದಿಂದ ಆ ಬ್ರಾಹ್ಮಣನು ಭಯಪಟ್ಟು ಎಚ್ಚತ್ತನು.

೨೦-೨೧. ಅವನು ಎಚ್ಚರಗೊಂಡು ಕಣ್ಣುಬಿಟ್ಟು ನೋಡಿಯೂ ಕೂಡ ಏನೂ ಹೇಳದೆ ಅಲ್ಲಿಯೇ ಇದ್ದನು ಆ ಕಳ್ಳನು ಆ ಮೈಮೇಲಿನ ಒಡವೆಯನ್ನೆಲ್ಲಾ ತೆಗೆದುಕೊಂಡು ಹೊರಡಲು ಒಡವೆಗಳ ನಷ್ಟವನ್ನು ಸಹಿಸಲಾರದೆ ಈ ಬ್ರಾಹ್ಮಣನು ಹಿಂದಿನಿಂದ ಹೋಗಿ ತೋಳುಗಳಿಂದ ಆ ಕಳ್ಳನನ್ನು ತಬ್ಬಿಕೊಂಡು ಹಿಡಿದುಕೊಂಡನು.

೨೨. ಆ ಕಳ್ಳನೂ ಕೂಡ ಕೈಯ್ಯಲ್ಲಿದ್ದ ಕತ್ತಿಯಿಂದ ಆ ಬ್ರಾಹ್ಮಣನನ್ನು ಇರಿದನು. ಆ ಬ್ರಾಹ್ಮಣನಿಗೆ ಹೊಟ್ಟೆಯ ಮೇಲೆ ಏಟು ಬೀಳಲು ಹೊಟ್ಟೆಯು ಸೀಳಿ ಹೋದುದರಿಂದ ಅಮ್ಮ ಅಪ್ಪ ಎಂದು ಕೂಗಿಕೊಳ್ಳುತ್ತ ಬಿದ್ದು ಬಿಟ್ಟನು.

೨೩. ಆಗ ಅಕ್ಕಪಕ್ಕದಲ್ಲಿರುವ ಜನರು ಏನು ? ಏನು ? ಎಂದೆನ್ನುತ್ತಾ ಈ ಬ್ರಾಹ್ಮಣನ ಬಳಿಗೆ ಬಂದರು. ಅವನು ರಕ್ತದಿಂದ ನೆನೆದಿರುವುದನ್ನೂ ಕರುಳು ಹೊರಗೆ ಬಂದಿರುವುದನ್ನೂ ನೋಡಿದರು.

ಪಪ್ರಚ್ಛುಶ್ಚ ಮುಕುಂದೇದಂ ಕರ್ಮ ಕೇನೇದೃಶಂ ಕೃತಂ ।
ಸೋಪಿ ಕೃಚ್ಛ್ರೇಣ ಮಹತಾ ಪ್ರೋವಾಚೇದಂ ಸ್ವಬಾಂಧವಾನ್ ॥ ೨೪ ॥

॥ ಮುಕುಂದ ಉವಾಚ ॥

ಮಮೈವ ಪರಿಪಾಕೋಯಂ ಪೂರ್ವೋಪಾರ್ಜಿತಕರ್ಮಣಾಂ ।
ನ ಕಶ್ಚಿತ್ಸುಖದುಃಖಾನಾಂ ದಾತಾ ಕಸ್ಯಾಪಿ ದೇಹಿನಃ ॥
ಧರ್ಮೋಽಧರ್ಮಶ್ಚ ತಾವೇವ ತೇಷಾಂ ಮೂಲಂ ಪುರಾ ಕೃತೌ ॥ ೨೫ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ಸ ತು ಭೂಯಸ್ಯಾ ಪೀಡಯಾ ಗಾಢಪೀಡಿತಃ ।
ತತ್ಯಾಜ ಭೂಪತೇ ಪ್ರಾಣಾನ್ ಪಶ್ಯತಾಂ ಸುಹೃದಾಂ ತದಾ ॥ ೨೬ ॥

ವಿಲಲಾಪ ತದಾ ತಸ್ಯ ಮಾತಾ ದ್ವಿಜಸತೀ ನೃಪ ।
ನಿಧಾಯ ತಚ್ಛಿರಸ್ಸ್ವಾಂಕೇ ಕುಂಡಲಾಭ್ಯಾಮಲಂಕೃತಂ ॥ ೨೭ ॥

---

೨೪. ಅವರೆಲ್ಲರೂ ಈ ಮುಕುಂದನನ್ನು ಕುರಿತು ಈ ಕೆಲಸವನ್ನು ಯಾರು ಮಾಡಿದರು ? ಎಂದು ಕೇಳಿದರು. ಅದಕ್ಕೆ ಆ ಮುಕುಂದನು ಬಹು ಕಷ್ಟಪಟ್ಟು ಇಂತೆಂದನು.

೨೫. ಮುಕುಂದನು ಹೇಳಿದನು-ಅಯ್ಯಾ ! ನಾನು ಪೂರ್ವಜನ್ಮದಲ್ಲಿ ಮಾಡಿದ್ದ ಕರ್ಮಗಳ ಪರಿಪಾಕವೇ ಇದು. ಯಾವ ಪ್ರಾಣಿಗೂ ಯಾವನೂ ಸುಖವನ್ನಾಗಲಿ ದುಃಖವನ್ನಾಗಲಿ ಕೊಡಲಾರನು. ಪೂರ್ವಜನ್ಮದಲ್ಲಿ ಮಾಡಿದ ಧರ್ಮ ಅಧರ್ಮಗಳೇ ಇವುಗಳಿಗೆ ಕಾರಣವು.

೨೬. ನಾರದನು ಹೇಳಿದನು-ಆ ಬ್ರಾಹ್ಮಣನು ಹೀಗೆಂದು ಹೇಳಿ ಬಹುವಾದ ನೋವಿನಿಂದ ತುಂಬ ತೊಂದರೆಪಡುತ್ತ ಎಲ್ಲರೂ ಇದ್ದುಕೊಂಡು ಇರುವಾಗ ಅವರೆದುರಿಗೇ ಪ್ರಾಣವನ್ನು ಬಿಟ್ಟನು.

೨೭ ಬ್ರಾಹ್ಮಣನ ಹೆಂಡತಿಯೂ ಈ ಮುಕುಂದನ ತಾಯಿಯೂ ಆದ ಮುದುಕಿಯು ಅವನ ತಲೆಯನ್ನು ತೊಡೆಯಮೇಲಿಟ್ಟುಕೊಂಡು ಅತ್ತಳು.

॥ ಮಾತೋವಾಚ ॥

ಹಾ ಹತಾಸ್ಮಿ ತ್ವಯಾ ವತ್ಸ ದಶಾಮಂತ್ಯಾಂ ಚ ಗಚ್ಛತಾ ।
ದಿನಶ್ರೀರಿವ ಸೂರ್ಯೇಣ ಪಶ್ಚಿಮಾಚಲಲಂಬಿನಾ ॥ ೨೮ ॥

ಯದಂಗಂ ಚಂದನಾಲೇಪಯೋಗ್ಯಂ ತವ ಮಹಾಮತೇ ।
ಮಾಂ ಮಜ್ಜಯತಿ ಶೋಕಾಬ್ಧೌ ತದಿದಂ ಧೂಳಿಧೂಸರಂ ॥ ೨೯ ॥

ತಾಂಬೂಲಚರ್ವಣಾಭ್ಯಾಸೋ ಯಸ್ತ್ವಯಾ ವಿಹಿತಸ್ತ್ವಸೌ ।
ಸ ಏವ ರುಧಿತೋದ್ಗಾರಮಿಷೇಣ ಕ್ರಿಯತೇ ಧ್ರುವಂ ॥ ೩೦ ॥

ತವ ಯೇ ಲೋಚನೇ ಪೂರ್ವಂ ಜಿಗ್ಯತುಃ ಕಮಲಶ್ರಿಯಂ ।
ತೇ ಏವ ಸಾಂಪ್ರತಂ ಜಾತೇ ತಿಮಿರೌಘಾವೃತೇ ಇವ ॥ ೩೧ ॥

ಉತ್ತಿಷ್ಠೋತ್ತಿಷ್ಠ ವತ್ಸ ತ್ವಂ ಶಿಷ್ಯಾನಧ್ಯಾಪಯಾತ್ಮನಃ ।
ಯಥಾವದ್ವೈಶ್ವದೇವಾಂತೇ ಪೂಜಯಾತಿಥಿಮಾಗತಂ ॥ ೩೨ ॥

---

೨೮. ತಾಯಿಯು ಹೇಳಿದಳು-ಅಯ್ಯೋ ಮಗನೆ! ನಾನು ಕೆಟ್ಟುಹೋದೆನು. ಮುದುಕಿಯಾಗಿ ಸಾಯುವ ಸ್ಥಿತಿಯಲ್ಲಿರುವೆನಲ್ಲ! ನನಗೆ ಯಾರು ಗತಿ? ಹಾ ಅಸ್ತಪರ್ವತವನ್ನು ಹೊಂದಿರುವ ಸೂರ್ಯನು ಹೊರಟು ಹೋಗುವುದರಿಂದ ಹಗಲಿನ ಕಾಂತಿಯು ನಾಶವಾಗಿ ಹೋಗುವಂತೆ ನಾನು ನಾಶವಾಗಿ ಹೋದೆನಲ್ಲ?

೨೯. ಚಂದನವನ್ನು ಲೇಪಿಸಿಕೊಳ್ಳಲು ಯೋಗ್ಯವಾದ ನಿನ್ನ ಈ ಅವಯವಗಳು ಧೂಳಿನಿಂದ ಕೊಳೆಯಾಗಿವೆಯಲ್ಲ! ಇದನ್ನು ನೋಡಿ ನನಗೆ ಬಹು ದುಃಖವಾಗುತ್ತಿದೆಯಲ್ಲ! ಅಯ್ಯೋ! ಏನುಮಾಡಲಿ?

೩೦. ನೀನು ತಾಂಬೂಲವನ್ನು ಹಾಕಿಕೊಳ್ಳುವುದರಲ್ಲಿ ಮಾಡಿಕೊಂಡ ಅಭ್ಯಾಸವೇನೇ ಕೆಂಪಗೆ ಈ ರಕ್ತದ ವಾಂತಿ ಎಂಬ ನೆವದಿಂದ ಹೊರಗೆ ಬರುತ್ತಿರುವಂತಿದೆಯಲ್ಲ!

೩೧. ನೀನು ಬದುಕಿದ್ದಾಗ ನಿನ್ನ ಈ ಕಣ್ಣುಗಳು ಕಮಲದಂತಿದ್ದುವು. ಅವುಗಳನ್ನು ಈಗ ನೋಡಿದರೆ ತಿಮಿರವೆಂಬ ಪರೆ ಬಂದಿರುವಂತೆ ಕಾಣುತ್ತಿವೆಯಲ್ಲ!

೩೨. ಎಲೈ ವತ್ಸನೆ! ಏಳು. ಮೇಲಕ್ಕೆ ಏಳು. ಶಿಷ್ಯರಿಗೆ ಅಧ್ಯಯನವನ್ನು ಹೇಳಿಕೊಡು. ವೈಶ್ವದೇವವನ್ನು ಮಾಡಿ ಬಂದಿರುವ ಅತಿಥಿಗಳನ್ನು ಶಾಸ್ತ್ರರೀತಿಯಿಂದ ಪೂಜಿಸು.

ದ್ವಾರಿ ಸ್ಥಿತಾ ವಯಸ್ಯಾಸ್ತೇ ತ್ವಾಹ್ವಯಂತಿ ಪ್ರಯಾಹಿ ತಾನ್ |
ದಾತವ್ಯಂ ಯದ್ದದಸ್ವೈಭ್ಯೋ ಗೃಹೀತವ್ಯಂ ಗೃಹಾಣ ತತ್ || ೩೩ ||

ಹಾ ಹಾ ದೇಹಿ ಪ್ರತಿವಚಃ ಪತಾಮಿ ತವ ಪಾದಯೋಃ |
ನೋ ಚೇದಹಂ ವಿಮೋಕ್ಷ್ಯಾಮಿ ಪ್ರಾಣಾಂಸ್ತವ ಸಮೀಪತಃ || ೩೪ ||

॥ ನಾರದ ಉವಾಚ ॥

ಇತ್ಯುಕ್ತ್ವಾ ಮೂರ್ಛಿತಾ ತಸ್ಯ ಮುಕುಂದಸ್ಯ ಪ್ರಸೂಸ್ತದಾ |
ಭಾರ್ಯಾ ತಸ್ಯ ಶಿರಸ್ಸ್ವಾಂಕೇ ವಿಧಾಯ ವ್ಯಲಪಚ್ಚ ಸಾ || ೩೫ ||

ನಾಥ ಭೋ ಗುಣಪಾಥೋಧೇ ಮದೀಯಂ ವಚನಂ ಶೃಣು |
ರುಷ್ಟೋಽಸಿ ತ್ವಂ ಸಮಂ ಮಾತ್ರಾ ಕುತೋ ವದ ಮಮಾಗ್ರತಃ || ೩೬ ||

ನ ಕದಾ ಚಿತ್ತ್ವಯಾ ಸಾಧೋ ಮೌನಮೀದೃಕ್ಕೃತಂ ಪುರಾ |
ಕೇನಾಪಿ ಲಘುನಾ ಭ್ರಾತ್ರಾ ಹ್ಯಪಮಾನಃ ಕೃತಸ್ತವ || ೩೭ ||

---

೩೩. ನಿನ್ನ ಸ್ನೇಹಿತರು ಬಾಗಿಲಿನಲ್ಲಿ ನಿಂತುಕೊಂಡು ಕರೆಯುತ್ತಿದ್ದಾರೆ. ಅವರ ಬಳಿಗೆ ಹೋಗು. ಅವರಿಗೆ ಕೊಡತಕ್ಕದ್ದನ್ನು ಕೊಡು. ಅವರಿಂದ ಬರ ಬೇಕಾದುದನ್ನು ತೆಗೆದುಕೊ

೩೪. ಅಯ್ಯೋ ವತ್ಸನೆ! ನನಗೆ ಉತ್ತರವನ್ನು ಕೊಡು. ನಿನ್ನ ಕಾಲು ಗಳಿಗೆ ನಮಸ್ಕರಿಸುತ್ತೇನೆ. ಹಾಗೆ ಮಾತಾಡದಿದ್ದರೆ ನಿನ್ನ ಹತ್ತಿರದಲ್ಲಿಯೇ ನಾನೂ ಪ್ರಾಣಗಳನ್ನು ಕಳೆದುಕೊಳ್ಳುತ್ತೇನೆ.

೩೫. ನಾರದನು ಹೇಳಿದನು–ಹೀಗೆಂದು ಹೇಳಿ ಅಳುತ್ತಾ ಆತನ ತಾಯಿಯು ಮೂರ್ಛೆಗೊಂಡಳು. ಅನಂತರ ಆತನ ಹೆಂಡತಿಯು ಆತನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಅಳಲು ಮೊದಲು ಮಾಡಿದಳು.

೩೬. ಎಲೈ ಗುಣಗಳಿಗೆ ನಿಧಿಯಾದ ಗಂಡನೆ! ನನ್ನ ಮಾತನ್ನು ಕೇಳು ನೀನು ನಿನ್ನ ತಾಯಿಯ ಕೈಯ್ಯಲ್ಲಿ ಕೋಪ ಮಾಡಿಕೊಂಡಿರುವೆಯಲ್ಲ! ಅದೇಕೆ ಎಂಬುದನ್ನು ಹೇಳು.

೩೭. ಎಲೈ ಸಾಧುವೆ! ನೀನು ಹಿಂದೆ ಯಾವಾಗಲೂ ಆಚರಿಸದ ಈ ರೀತಿಯಾದ ಮೌನವನ್ನು ಆಚರಿಸಿರುವೆಯಲ್ಲ! ಯಾವನಾದರೂ ಬುದ್ಧಿಯಿಲ್ಲದ ತಮ್ಮನು ನಿನಗೆ ಅಪಮಾನವನ್ನು ಮಾಡಿದನೆ?

**ಶುಕೋಽಯಂ ಪಂಜರಸ್ಥಸ್ತೇ ನಾನ್ನಮತ್ತಿ ತ್ವಯಾ ವಿನಾ ।**
**ಭೋಜಯ್ಸೈನಂ ಸುಸಿದ್ಧಾನ್ನಂ ಕಲವಾಚಂ ಚ ಸಾರಿಕಾಂ ॥ ೩೮ ॥**

**ರಾಮ ರಾಮ ಹರೇ ಕೃಷ್ಣ ವಿಷ್ಣೋರ್ನಾಮಾವಲೀಮಿತಿ ।**
**ಪಾಠಯೋತ್ತಿಷ್ಠ ನಿಪುಣೌ ತ್ವಮೇತೌ ಸಾರಿಕಾಶುಕೌ ॥ ೩೯ ॥**

**ಅಪರಾದ್ಧಂ ಮಯಾ ಕಿಂ ತೇ ಯತ್ತ್ವಂ ಮಾಂ ನಾಭಿಭಾಷಸೇ ।**
**ಯತ್ತ್ವಯಾ ಮೇ ಧನಂ ದತ್ತಂ ತನ್ಮಯಾ ಸಾಧು ರಕ್ಷಿತಂ ॥ ೪೦ ॥**

**ಅರ್ಪಿತಂ ಯತ್ತ್ವಯಾ ನಾಥ ನಿಜತೇಜೋ ಮಮೋದರೇ ।**
**ಸೂತಿಕಾಲಮಹಂ ತಸ್ಯ ನಾಪೇಕ್ಷೇ ತ್ವಾಮನುವ್ರಜೇ ॥ ೪೧ ॥**

**॥ ಶ್ರೀ ನಾರದ ಉವಾಚ ॥**

**ಏವಂ ವಿಲಪ್ಯ ಸಾ ತಸ್ಯ ಮುಕುಂದಸ್ಯ ಪ್ರಿಯಾ ತದಾ ।**
**ನ ರುರೋದ ಸ್ವಭರ್ತಾರಮನುಗಂತುಮನಾಃ ಸತೀ ॥ ೪೨ ॥**

---

೩೮. ಈ ಪಂಜರದಲ್ಲಿರುವ ನಿನ್ನ ಗಿಳಿಯು ನೀನಿಲ್ಲದಿದ್ದರೆ ಅನ್ನವನ್ನು ತಿನ್ನುವುದೇ ಇಲ್ಲ. ಅನ್ನವಾಗಿದೆ. ಎದ್ದು ಈ ಗಿಳಿಗೂ ಸಾರಿಕೆಗೂ ಅನ್ನವನ್ನು ತಿನ್ನಿಸು.

೩೯. ರಾಮ ರಾಮ ಹರೆ ಕೃಷ್ಣ ಎಂಬುವೇ ಮೊದಲಾದ ವಿಷ್ಣುವಿನ ಹೆಸರುಗಳನ್ನು ಈ ಶುಕ ಸಾರಿಕೆಗಳಿಗೆ ಕಲಿಸು. ಎದ್ದೇಳು.

೪೦. ನಾನು ನಿನಗೆ ಮಾಡಿರುವ ತಪ್ಪೇನು? ನೀನೇಕೆ ನನ್ನೊಡನೆ ಮಾತನಾಡುವುದಿಲ್ಲ? ನೀನು ಕೊಟ್ಟಿದ್ದ ಹಣವನ್ನು ಜೋಪಾನವಾಗಿ ಇಟ್ಟಿದ್ದೇನೆ.

೪೧. ಎಲೈ ನಾಥನೆ! ನೀನು ನನ್ನ ಹೊಟ್ಟೆಯಲ್ಲಿಟ್ಟಿರುವ ಮಗನ ರೂಪವಾದ ನಿನ್ನ ತೇಜಸ್ಸು ಈಚೆಗೆ ಬರುವ ಹೆರಿಗೆಯ ಕಾಲವನ್ನು ಕೂಡ ನಾನು ಲಕ್ಷಿಸುವುದಿಲ್ಲ. ನಿನ್ನೊಡನೆಯೇ ಸಾಯುತ್ತೇನೆ.

೪೨. ಶ್ರೀ ನಾರದನು ಹೇಳಿದನು-ಆ ಮುಕುಂದನ ಹೆಂಡತಿಯು ಹೀಗೆ ದುಃಖಿಸಿ ಅಳುವನ್ನು ನಿಲ್ಲಿಸಿದಳು. ಮತ್ತು ಗಂಡನ ಜೊತೆಯಲ್ಲಿಯೇ ಸಾಯಬೇಕೆಂದು ಮನಸ್ಸನ್ನು ದೃಢಮಾಡಿಕೊಂಡಳು.

ಅಥ ತಸ್ಯ ಮುಕುಂದಸ್ಯ ಗುರುರ್ವೇದಾಯನಾಭಿಧಃ ।
ಸನ್ಯಾಸೀ ಪರ್ಯಟನ್ ಪೃಥ್ವೀಂ ತಸ್ಯ ವೇಶ್ಮ ಯಯೌ ನೃಪ ॥ ೪೩ ॥

ಮುಕುಂದಃ ಕ್ವ ಗತೋ ಮಾತಾ ಭಾರ್ಯಾ ತಸ್ಯ ಚ ಧೀಮತಃ ।
ನ ದೃಶ್ಯತೇ ತದಾ ತೇನ ಪೃಷ್ಟೇತ್ಯಾಚಷ್ಟ ಚೇಟಿಕಾ ॥ ೪೪ ॥

॥ ಚೇಟಿಕೋವಾಚ ॥

ಸ್ವಾಮಿನ್ ಕೇನಾಪಿ ಚೌರೇಣ ಮಮ ಸ್ವಾಮೀ ಹತೋ ನಿಶಿ ।
ಸ್ನುಷಾಯಾ ಭೂಷಣಂ ನೀತಂ ದುಕೂಲಾನಿ ಚ ಸರ್ವಶಃ ॥ ೪೫ ॥

ಸ ಮೃತಃ ಪತಿತೋ ಭೂಮೌ ಹರ್ಮ್ಯಸ್ಯೋಪರಿ ತಿಷ್ಠತಿ ।
ತಸ್ಯ ಮಾತಾ ವಧೂಶ್ಚೈವ ಭ್ರಾತರಶ್ಚ ತದಂತಿಕೇ ॥
ವಿಲಪಂತಿ ಮಹಾಶೋಕಸಾಗರೇ ಪತಿತಾ ಗುರೋ ॥ ೪೬ ॥

---

೪೩. ಅನಂತರ ಆ ಮುಕುಂದನ ಗುರುವಾದ ವೇದಾಯನನೆಂಬ ಸನ್ಯಾಸಿಯು ಭೂಮಿಯನ್ನು ಸುತ್ತುತ್ತಲಿದ್ದು ಅಂದು ಅಲ್ಲಿಗೆ ಬಂದು ಅವನ ಮನೆಗೆ ಬಂದನು.

೪೪. ಮುಕುಂದನು ಎಲ್ಲಿ ಹೋದನು ? ಅವನ ಹೆಂಡತಿ ತಾಯಿ ಅವರೆಲ್ಲರೂ ಎಲ್ಲಿ ಹೋದರು ? ಕಾಣುತ್ತಿಲ್ಲವಲ್ಲ ? ಎಂದು ಅವನು ಕೇಳಲು ಆಳು ಇಂತೆಂದಳು.

೪೫. ಚೇಟಿಯು ಹೇಳಿದಳು-ಸ್ವಾಮಿ ! ಯಾವನೋ ಕಳ್ಳನು ರಾತ್ರಿಯಲ್ಲಿ ಮನೆಗೆ ನುಗ್ಗಿ ಆ ನನ್ನ ಸ್ವಾಮಿಯನ್ನು ಕೊಂದು ಅವನ ಹೆಂಡತಿಯ ಒಡವೆ ರೇಷ್ಮೆಯ ಶೀರೆಗಳು ಎಲ್ಲವನ್ನೂ ಕದ್ದುಕೊಂಡು ಹೋದನು.

೪೬. ಸ್ವಾಮಿಯು ಸತ್ತು ಮಹಡಿಯ ಮೇಲೆ ಬಿದ್ದಿರುವನು. ಅವನ ತಾಯಿಯೂ ಹೆಂಡತಿಯೂ ತಮ್ಮಂದಿರೂ ಅವನ ಹತ್ತಿರದಲ್ಲಿ ಅಳುತ್ತ ಅಗಾಧವಾದ ದುಃಖ ಸಮುದ್ರದಲ್ಲಿ ಬಿದ್ದಿದ್ದಾರೆ.

॥ ನಾರದ ಉವಾಚ ॥

ಇತ್ಯಾಕರ್ಣ್ಯ ಪರಿವ್ರಾಟ್ಸ ವಚನಂ ಚೇಟಿಕೋದಿತಂ ।
ಆರುಹ್ಯ ಹರ್ಮ್ಯಮುದ್ರಾಕ್ಷೀದಾತ್ಮಾನ್ತೇವಾಸಿನಂ ಮೃತಂ ॥ ೪೭ ॥

ತದಂತಿಕೇ ಸಮಾಲೋಕ್ಯ ಬಂಧೂನಾಕ್ರಂದತೋ ಭೃಶಂ ।
ಉದ್ಧರಿಷ್ಯನ್ನಿದಂ ಧೀರಃ ಶೋಕಾಬ್ಧೇಸ್ತಾನುವಾಚ ಹ ॥ ೪೮ ॥

॥ ವೇದಾಯನ ಉವಾಚ ॥

ದೇಹಮುದ್ದಿಶ್ಯ ವಾತ್ಮಾನಂ ಶೋಕೋಯಂ ಕ್ರಿಯತೇ ತ್ವಯಾ ।
ಮಾತಃ ಕಥಯ ಸತ್ಯಂ ಮೇ ನೋಭಯೋರ್ಯುಜ್ಯತೇ ಹಿ ಸಃ ॥ ೪೯ ॥

ದೇಹೋಯಂ ಭೂತಸಂಘಾತಃ ಪ್ರಾರಬ್ಧೈಸ್ಸಮುಪಾರ್ಜಿತಃ ।
ತೇಷು ಕ್ಷೀಣೇಷು ಭೂತಾನಾಂ ಪೃಥಕ್ತ್ವಮುಪಜಾಯತೇ ॥ ೫೦ ॥

---

೪೭. ನಾರದನು ಹೇಳಿದನು-ಆ ಸನ್ಯಾಸಿಯು ಆಳು ಹೇಳಿದ ಮಾತನ್ನು ಕೇಳಿ ಮಹಡಿಯನ್ನು ಹತ್ತಿ ಅಲ್ಲಿ ಸತ್ತು ಬಿದ್ದಿರುವ ತನ್ನ ಶಿಷ್ಯನನ್ನು ನೋಡಿದನು.

೪೮. ಅವನ ಹೆಣದ ಹತ್ತಿರ ಬಂಧುಗಳು ಅಳುತ್ತಿರುವುದನ್ನು ನೋಡಿ ಅವರನ್ನು ಈ ದುಃಖದಿಂದ ಪಾರುಮಾಡಲು ಮನಸ್ಸುಳ್ಳವನಾಗಿ ಅವರನ್ನು ಕುರಿತು ಇಂತೆಂದನು.

೪೯. ವೇದಾಯನನೆಂಬ ಮುಕುಂದನ ಗುರುವು ಹೇಳಿದನು-ಎಲೈ ತಾಯಿಯೆ! ನೀನು ಮಗನ ದೇಹವನ್ನು ಕುರಿತು ಅಳುತ್ತಿದ್ದೀಯಾ? ಅಥವಾ ಅವನ ಪ್ರಾಣಗಳನ್ನು ಕುರಿತು ಅಳುತ್ತಿದ್ದೀಯಾ? ಅದನ್ನು ನಿಜವಾಗಿ ಹೇಳು ಆ ಎರಡೂ ಸರಿಯಲ್ಲವಲ್ಲ!

೫೦. ಈ ದೇಹವು ಪಂಚಭೂತಗಳಿಂದುಂಟಾಗಿರತಕ್ಕದ್ದು. ಇದು ಪ್ರಾರಬ್ಧ ಕರ್ಮದಿಂದ ಬಂದಿರತಕ್ಕದ್ದು ಆ ಪ್ರಾರಬ್ಧ ಕರ್ಮವು ನಾಶವಾದ ಮೇಲೆ ಅದು ಬೇರೆಯಾಗಲೇ ಬೇಕು. ಹಾಗೆಯೇ ಆಗಿದೆ.

ಯದೇಕೀಭವನಂ ತೇಷಾಂ ಕರ್ಮಭಿರ್ಜನ್ಮ ತನ್ನೃಣಾಂ ।
ತನ್ನಾಶೇ ತತ್ಪೃಥಕ್ತ್ವಂ ಚ ತದೇವ ಮರಣಂ ಸ್ಮೃತಂ ॥ ೫೧ ॥

ಐಕ್ಯಪೃಥಕ್ತ್ವೇ ಭೂತಾನಾಂ ಕರ್ಮಾಧೀನೇ ಯತೋ ಬುಧೈಃ ।
ಅತೋ ದೇಹೇ ನ ಕರ್ತವ್ಯಃ ಶೋಕಃ ಪರವಶೇ ಜಡೇ ॥ ೫೨ ॥

ಅನಾದ್ಯವಿದ್ಯಯಾ ಜೀವೇ ದೃಷ್ಟೇ ಮರಣಜನ್ಮನೀ ।
ದೇಹಸ್ಯಾತ್ಮನ್ಯಹಂಬುದ್ಧ್ಯಾ ಮನ್ಯತೇ ನ ಹಿ ತತ್ರ ತೇ ॥ ೫೩ ॥

ತಸ್ಮಿನ್ನಿವೃತ್ತೌ ತದ್ಬ್ರಹ್ಮ ಶುದ್ಧಂ ರೂಪವಿವರ್ಜಿತಂ ।
ಸ್ವಪ್ರಕಾಶಂ ಜಗದ್ಧೇತು ಹೇತ್ವತೀತಂ ಗುಣೋರ್ಜಿತಂ ॥ ೫೪ ॥

---

೫೧. ಪ್ರಾಣಿಯ ಕರ್ಮದಿಂದ ಅದಕ್ಕನುಸಾರವಾಗಿ ಆ ಪಂಚ ಭೂತಗಳು ಒಂದಾಗಿ ಸೇರಿಸಿಕೊಂಡು ಅದರಲ್ಲಿ ಈ ಆತ್ಮನು ಸೇರಿಕೊಂಡಾಗ ಪ್ರಾಣಿಗಳಿಗೆ ಜನ್ಮವು ಬರುತ್ತದೆ. ಆ ಕರ್ಮವು ನಾಶವಾದ ಮೇಲೆ ಅವು ಬೇರೆಯಾಗಲೇ ಬೇಕು. ಅದೇ ಪ್ರಾಣಿಗಳಿಗೆ ಮರಣವೆಂದೆನಿಸುತ್ತದೆ.

೫೨. ಆದ್ದರಿಂದ ಪ್ರಾಣಿಗಳಿಗೆ ಈ ಪಂಚಭೂತಗಳು ಬಂದು ಸೇರುವಿಕೆಯೂ ಬೇರೆಯಾಗುವಿಕೆಯೂ ಕರ್ಮಾಧೀನವು. ಆದ್ದರಿಂದ ಜಡವಾದ ಈ ದೇಹದ ವಿಷಯದಲ್ಲಿ ದುಃಖಿಸಬಾರದು.

೫೩. ಅನಾದಿಯಾಗಿರುವ ಮಾಯೆಯಿಂದ ಜೀವನಿಗೆ ಮರಣ ಜನ್ಮಗಳುಂಟಾಗಲೇಬೇಕು. ಅದು ತಿಳಿದೇ ಇದೆ. ಆದ್ದರಿಂದ ದೇಹದ ವಿಷಯದಲ್ಲಿಯೂ ಆತ್ಮನ ವಿಷಯದಲ್ಲಿಯೂ ನಾನು ನನ್ನದು ಎಂಬ ಬುದ್ಧಿಯನ್ನು ಹೊಂದುತ್ತಾನೆ. ಅದು ಸರಿಯಲ್ಲ

೫೪. ಅದೇ ದೇಹದಲ್ಲಿ ಅಹಂ ಎಂಬ ಬುದ್ಧಿಯು ಹೋದರೆ ಆ ಆತ್ಮನೇ ಬ್ರಹ್ಮನು. ಅದು ಶುದ್ಧವಾದುದು. ಅದಕ್ಕೆ ರೂಪವಿಲ್ಲ ತಾನಾಗಿಯೇ ಪ್ರಕಾಶಿಸುತ್ತದೆ. ಜಗತ್ತಿಗೆ ಅದೇ ಕಾರಣವಾದುದು. ಅದಕ್ಕೆ ಕಾರಣವು ಮತ್ತೊಂದಿಲ್ಲ. ಅದು ಒಳ್ಳೆಯ ಗುಣಗಳಿಂದ ಕೂಡಿರುತ್ತದೆ. ನಿತ್ಯವಾದುದು. ವಿಜ್ಞಾನ ರೂಪವಾದುದು. ಆನಂದ ರೂಪವಾದುದು. ತನ್ನ ಕಾಂತಿಯಿಂದ ಪ್ರಪಂಚವನ್ನೇ ಪ್ರಕಾಶಿಸುವಂತೆ ಮಾಡುತ್ತದೆ.

ನಿತ್ಯಂ ವಿಜ್ಞಾನಮಾನಂದಂ ಸ್ವಭಾಸಾ ಭಾಸಯಜ್ಜಗತ್ ।
ನ ಜಿಹ್ವಾ ಲೇಢಿ ತಚ್ಚಕ್ಷುಃ ನ ಪಶ್ಯತಿ ಶೃಣೋತಿ ನ ॥ ೫೫ ॥

ಶ್ರೋತ್ರೀರ್ಜಿಘ್ರತಿ ನ ಘ್ರಾಣಂ ನ ತ್ವಕ್ ಸ್ಪೃಶತಿ ಕರ್ಹಿಚಿತ್ ।
ಅತೀತಮಿಂದ್ರಿಯೇಭ್ಯಸ್ತತ್ ಸ್ವಪ್ರಕಾಶಕಮಾತ್ಮದೃಕ್ ॥ ೫೬ ॥

ಅವಿಷಯಂ ಮನೋದೂರಂ ಬುದ್ಧೇರಪಿ ನ ಗೋಚರಂ ।
ತಸ್ಯಾವತಾರರೂಪಾಣಿ ಶುದ್ಧಸತ್ವಾನಿ ದೇವತಾಃ ॥ ೫೭ ॥

ಸೇವಂತೇ ತನ್ನ ಜಾನಂತಿ ರೂಪಂ ಯತ್ಸದಸತ್ಪರಂ ।
ಏವಂ ಸ್ವರೂಪಮಾತ್ಮಾ ಯಸ್ತಂ ಸಮುದ್ದಿಶ್ಯ ಕಃ ಕುಧೀಃ ॥
ಕೋಶಂ ಕುರ್ಯಾದ್ಯತಸ್ತಸ್ಯ ನೋತ್ಪತ್ತಿರ್ನೈವ ಸಂಕ್ಷಯಃ ॥ ೫೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಕೋಶಲಾ ಮಹಾತ್ಮ್ಯಂ ನಾಮ ಪಂಚಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೫೫–೫೮. ಆ ಪರಮಾತ್ಮನನ್ನು ನಾಲಿಗೆಯಿಂದ ರುಚಿ ನೋಡಲಾಗುವುದಿಲ್ಲ. ಕಣ್ಣಿನಿಂದಲೂ ನೋಡಲಾಗುವುದಿಲ್ಲ. ಮೂಗಿನಿಂದ ಮೂಸಿ ನೋಡಲಾಗುವುದಿಲ್ಲ. ಚರ್ಮದಿಂದ ಮುಟ್ಟಿ ನೋಡಲಾಗುವುದಿಲ್ಲ. ಇಂತು ಪಂಚೇಂದ್ರಿಯಗಳಿಗೂ ಮೀರಿದವನು. ಸ್ವಪ್ರಕಾಶನು. ತಾನೇ ಎಲ್ಲವನ್ನೂ ನೋಡುವ ಕಣ್ಣಾಗಿರುವನು. ಅವನು ಇಂದ್ರಿಯಗಳಿಗೆ ಸಿಕ್ಕತಕ್ಕವನಲ್ಲ. ಮನಸ್ಸಿಗೂ ತಿಳಿಯತಕ್ಕವನಲ್ಲ ಬುದ್ಧಿಗೂ ಗೊತ್ತಾಗಲಾರನು. ದೇವತೆಗಳು ಅವನ ಅವತಾರರೂಪರಾದ ಶುದ್ಧ ಸತ್ವಗಳು. ಆ ದೇವತೆಗಳು ಆ ಸ್ವಾಮಿಯನ್ನು ಸೇವಿಸಿದರೂ ಸತ್ತಿಗೂ ಅಸತ್ತಿಗೂ ಮೀರಿದ ಅವನನ್ನು ತಿಳಿಯಲಾರರು. ಈ ರೀತಿಯಾದುದು ಆತ್ಮಸ್ವರೂಪವು. ಅದನ್ನು ಕುರಿತು ಯಾವ ದಡ್ಡನು ತಾನೇ ಅಳುತ್ತಾನೆ? ಅದಕ್ಕೆ ನಾಶವಾಗಲಿ ಹುಟ್ಟುವಿಕೆಯಾಗಲಿ ಇಲ್ಲವೇ ಇಲ್ಲವಲ್ಲ!

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಕೋಶಲ ಮಹಿಮೆ ಎಂಬ ಇನ್ನೂರ ಐದನೆಯ ಅಧ್ಯಾಯವು ಮುಗಿಪುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಡಧಿಕದ್ವಿಶತತಮೋಽಧ್ಯಾಯಃ ॥



॥ ನಾರದ ಉವಾಚ ॥

ಏವಂ ಪ್ರಬೋಧ್ಯ ತಾನ್ಸರ್ವಾನ್ವಚೋಭಿಃ ಪಾರಮಾರ್ಥಿಕೈಃ ।
ಸ ಹಂಸಃ ಕಾರಾಯಾಮಾಸ ಕ್ರಿಯಾಸ್ತಸ್ಯಾತ್ಮಸಂಭವಾಃ ॥ ೧ ॥

ಅಂತರ್ವತ್ನೀ ಮುಕುಂದಸ್ಯ ನಿರ್ಬಂಧಂ ಕುರ್ವತೀ ವಧೂಃ ।
ಅನುಗಂತುಂ ಸ್ವಭರ್ತಾರಂ ವಿದುಷಾ ತೇನ ವಾರಿತಾ ॥ ೨ ॥

ತಸ್ಯಾಸ್ಥೀನಿ ಸಮಾದಾಯ ತೇನ ಸನ್ಯಾಸಿನಾ ಸಮಂ ।
ತದ್ಭ್ರಾತಾ ಪ್ರಯಯೌ ಗಂಗಾಜಲೇ ಪಾತಯಿತುಂ ನೃಪ ॥ ೩ ॥

---

## ಇನ್ನೂರ ಆರನೆಯ ಅಧ್ಯಾಯವು.



೧. ನಾರದನು ಹೇಳಿದನು-ಈ ರೀತಿಯಾಗಿ ಆ ಸನ್ಯಾಸಿಯು ಉಚಿತವಾದ ಯಥಾರ್ಥವಾದ ಮಾತುಗಳಿಂದ ಅವರಿಗೆ ಜ್ಞಾನವನ್ನುಂಟುಮಾಡಿ ಆ ಸತ್ತವನಿಗೆ ಆಗಬೇಕಾದ ಪರಲೋಕ ಕ್ರಿಯೆಗಳೆಲ್ಲವನ್ನೂ ಮಾಡಿಸಿದನು.

೨. ಆ ಮುಕುಂದನ ಹೆಂಡತಿಯು ಗರ್ಭಿಣಿಯಾಗಿದ್ದರೂ ತಾನು ಸಹಗಮನ ಮಾಡಬೇಕೆಂದು ಹಟಮಾಡುತ್ತಿರಲು ಆ ಬುದ್ಧಿವಂತನಾದ ಸನ್ಯಾಸಿಯು ಉಚಿತವಾದ ಮಾತುಗಳಿಂದ ಅದನ್ನು ನಿಲ್ಲಿಸಿದನು.

೩. ಆ ಮುಕುಂದನ ಮೂಳೆಗಳನ್ನು ತೆಗೆದುಕೊಂಡು ಅವನ ಸಹೋದರನು ಆ ಸನ್ಯಾಸಿಯ ಜೊತೆಯಲ್ಲಿ ಗಂಗೆಗೆ ಹಾಕಲು ಹೋದನು.

ವಿಪ್ರಸನ್ಯಾಸಿನೌ ತೌ ಹಿ ಕತಿಭಿರ್ವಾಸರೈರ್ನೃಪ ।
ಸಾರ್ಥಲೋಕವಶಾತ್ಪ್ರಾಸ್ತಾವಿಂದ್ರಪ್ರಸ್ಥೇ ಜ ಸತ್ಪಥೇ ॥ ೪ ॥

ಇಂದ್ರಪ್ರಸ್ಥಾಂತರಾವರ್ತಿನ್ಯೇಷಾ ಯಾ ಕೋಶಲಾ ನೃಪ ।
ಅತ್ರ ಸುಪ್ತೌ ನಿಶಾಯಾಂ ತೌ ಯಮುನಾತೀರಭೂತಲೇ ॥ ೫ ॥

ಆತ್ಮನೋರುಭಯೋರ್ಮಧ್ಯೇ ನ್ಯಸ್ಯಾಸ್ಥಿಪುಟಸಂಪುಟಂ ।
ಮಾರ್ಗಖೇದಪರಿಕ್ಲಾಂತೌ ದಶಾಂ ಸೌಷುಪ್ತಿಕೀಂ ಗತೌ ॥ ೬ ॥

ನಿಶೀಥೇಥ ಪ್ರಸುಪ್ತೇಷು ಸಾರ್ಥಲೋಕೇಷು ಕಶ್ಚನ ।
ಏಕಃ ಶ್ವಾ ತತ್ರ ಸಂಪ್ರಾಪ್ತಃ ಪಕ್ವಾನ್ನಾದಿಜಿಹೀರ್ಷಯಾ ॥ ೭ ॥

ಬಭ್ರಾಮ ಸರ್ವಶಿಬಿರೇ ಜಿಘ್ರನ್ ಪಾಕಸ್ಥಲೀಂ ಮುಹುಃ ।
ಭಾಜನಾನಿ ಲಿಹನ್ ಮೂರ್ಧ್ನಿ ಕ್ವಚಿದ್ದಂಡಾಹತಿಂ ಸಹನ್ ॥ ೮ ॥

---

೪. ಆ ಬ್ರಾಹ್ಮಣನೂ, ಸನ್ಯಾಸಿಯೂ ಇಬ್ಬರೂ ಕೆಲವು ದಿನಗಳ ಮೇಲೆ ಪ್ರಯಾಣಿಕರ ಗುಂಪನ್ನು ಸೇರಿ ಇಂದ್ರಪ್ರಸ್ಥದ ದಾರಿಗೆ ಬಂದರು.

೫. ಅವರಿಬ್ಬರೂ ಈ ಇಂದ್ರಪ್ರಸ್ಥದ ಎಲ್ಲೆಗೆ ಸೇರಿರುವ ಕೋಸಲಕ್ಕೆ ಬಂದರು. ಮತ್ತು ಅಲ್ಲಿರುವ ಯಮುನೆಯ ದಡದಲ್ಲಿ ಆದಿನ ರಾತ್ರಿಯಲ್ಲಿ ಅವರು ಮಲಗಿಕೊಂಡಿದ್ದರು.

೬. ತಮ್ಮಿಗಳಿಬ್ಬರ ಮಧ್ಯದಲ್ಲಿಯೂ ಆ ಮೂಳೆಯ ಪಾತ್ರೆಯನ್ನು ಇಟ್ಟು ಕೊಂಡು ಮಲಗಿದರು. ದಾರಿಯನ್ನು ನಡೆದ ಆಯಾಸವು ಬಹಳವಾಗಿದ್ದು ದರಿಂದ ಅವರಿಗೆ ಬಹುವಾದ ನಿದ್ದೆಯು ಬಂದಿತು.

೭. ಅವರೆಲ್ಲರೂ ಎಚ್ಚರವಿಲ್ಲದಂತೆ ಮಲಗಿರಲು ಅರ್ಧರಾತ್ರಿಯಲ್ಲಿ ಒಂದು ನಾಯಿಯು ಅನ್ನ ಮುಂತಾದುವನ್ನು ಕದ್ದು ತೆಗೆದುಕೊಂಡು ಹೋಗುವ ಇಚ್ಛೆ ಯಿಂದ ಅಲ್ಲಿಗೆ ಬಂದಿತು.

೮. ಅದು ಆ ಗುಂಪಿನಲ್ಲಿ ಮೂಸಿನೋಡುತ್ತ ವಾಸನೆಯಿಂದ ಅಡಿಗೆಯ ಮನೆಯ ಜಾಗಕ್ಕೆ ನುಗ್ಗುತ್ತಾ ಒಂದೊಂದು ಜಾಗದಲ್ಲಿ ಹೊಡೆದ ದೊಣ್ಣೆಯ ಏಟುಗಳನ್ನು ತಿನ್ನುತ್ತಾ ಪಾತ್ರೆಗಳನ್ನು ಮೂಸಿನೋಡುತ್ತಾ ಸುತ್ತುತ್ತಿದ್ದಿತು.

ಕೇನ ಚಿತ್ತಾಡಿತೋ ಮೂರ್ಧ್ನಿ ನಿಶ್ಶಬ್ದಂ ವಿದ್ರುತಸ್ತತಃ ।
ಪ್ರತಿಕರ್ತುಮಶಕ್ತಸ್ತು ಸ್ತ್ರೀಜಿತಃ ಸ್ವಸ್ತ್ರಿಯಾ ಯಥಾ ॥ ೯ ॥

ಯತ್ರಾವಕಂಡಿತಃ ಸ ಶ್ವಾ ದಂಡಗ್ರಾವೇಷ್ಟಕಾದಿಭಿಃ ।
ಪುನರ್ವಿವೇಶ ತತ್ರೈವ ಸೋನ್ನಪಾತ್ರವಿಲಿಪ್ಸಯಾ ॥ ೧೦ ॥

ಭೋಗೇಚ್ಛಯಾ ಯಥಾ ವೇಶ್ಯಾಗೃಹೇ ವೈ ನಿರ್ಧನೋ ಜನಃ ।
ಭ್ರಮನ್ನೇವಂ ಸ ಚಾತ್ರಾಪಿ ಯತ್ರ ಸುಪ್ತೌ ಹಿ ತಾವುಭೌ ॥ ೧೧ ॥

ಸಾರಮೇಯಸ್ತಯೋರ್ಮಧ್ಯಾಜ್ಜಹ್ರೇಽಸ್ಥಿಪುಟಸಂಪುಟಂ ।
ನೀತ್ವಾ ಸ ಕಿಯತೀಂ ಭೂಮಿಂ ದನ್ತೈಸ್ತತ್ಪುಟಸಂಪುಟಂ ॥ ೧೨ ॥

ವಿದೀರ್ಯಾಸ್ಥೀನಿ ತತ್ಸ್ಥಾನಿ ನಿರ್ಮಾಂಸಾನ್ಯವಲೋಕ್ಯ ಸಃ ।
ಏತಸ್ಯಾಃ ಕೋಸಲಾಯಾಸ್ತು ಜಲಮಧ್ಯೇ ಸಮಾಕ್ಷಿಪತ್ ॥ ೧೩ ॥

---

೯. ಒಂದು ಜಾಗದಲ್ಲಿ ಒಬ್ಬನು ತಲೆಯ ಮೇಲೆ ಹೊಡೆಯಲು ಅದು ಅವನಿಗೆ ಪ್ರತೀಕಾರವನ್ನು ಮಾಡಲಾರದೆ ಹೆಂಗಸಿನ ಅಧೀನನಾದವನು ಅವಳಿಂದ ಏಟನ್ನು ತಿಂದು ಅವಳಿಗೆ ಬದಲು ಹೇಳದೆ ಸುಮ್ಮನೆ ಹೋಗುವಂತೆ ಹೊರಟು ಹೋಯಿತು.

೧೦. ಯಾವ ಜಾಗದಲ್ಲಿ ಆ ನಾಯಿಯು ಒಂದುಬಾರಿ ನುಗ್ಗಿ ದೊಣ್ಣೆ, ಕಲ್ಲು, ಇಟ್ಟಿಗೆಗಳ ಏಟುಗಳನ್ನು ತಿಂದಿದ್ದಿತೋ ಅಲ್ಲಿಯೇ ಮತ್ತೆ ಅನ್ನದ ಪಾತ್ರೆಯನ್ನು ಹುಡುಕುತ್ತಾ ನುಗ್ಗಿತು.

೧೧. ಹಣವಿಲ್ಲದ ಬಡವನು ಭೋಗದ ಇಚ್ಛೆಯಿಂದ ಸೂಳೆಯರ ಮನೆ ಮನೆಯನ್ನು ಸುತ್ತುವಂತೆ ಆ ನಾಯಿಯು ಸುತ್ತುತ್ತ ಇವರಿಬ್ಬರೂ ಮಲಗಿದ್ದಲ್ಲಿಗೆ ಬಂದಿತು.

೧೨-೧೩. ಆ ನಾಯಿಯು ಇವರಿಬ್ಬರೂ ಮಧ್ಯದಲ್ಲಿಟ್ಟುಕೊಂಡಿದ್ದ ಆ ಅಸ್ಥಿಯ ಮಡಕೆಯನ್ನು ಹಲ್ಲಿನಿಂದ ಕಚ್ಚಿಕೊಂಡು ಸ್ವಲ್ಪದೂರಕ್ಕೆ ತೆಗೆದುಕೊಂಡು ಹೋಗಿ ಅದರ ಬಾಯನ್ನು ಹಲ್ಲಿನಿಂದ ತೆಗೆದು ಒಳಗೆ ಮಾಂಸವಿಲ್ಲದ ಮೂಳೆಗಳನ್ನು ನೋಡಿ ಅವು ತನಗೆ ಬೇಡವಾ ಎದರಿಂದ ಅಕಸ್ಮಾತ್ತಾಗಿ ಆ ಕೋಸಲೆಯ ನೀರಿನ ಮಧ್ಯದಲ್ಲಿ ಬಿಸುಟಿತು

ಕ್ಷಿಪ್ತಮಾತ್ರೇಷು ತೇನಾಸ್ಥಿಷ್ವೇತದಂಬುನಿ ಭೂಪತೇ ।
ದಿವ್ಯಂ ವಿಮಾನಮಾಸ್ಥಾಯ ಮುಕುಂದೋಽತ್ರ ಸಮಾಗತಃ ॥ ೧೪ ॥

ದೃಷ್ಟ್ವಾ ಗುರ್ವನುಜೌ ಸುಪ್ತೌ ಶನೈಃ ಪ್ರಾಬೋಧಯತ್ತದಾ ।
ಉವಾಚ ಚ ನಮಸ್ಕೃತ್ಯ ಗುರುಂ ದಿವ್ಯಾಕೃತಿರ್ನೃಪ ॥ ೧೫ ॥

॥ ಮುಕುಂದ ಉವಾಚ ॥

ವೇದಾಯನ ಗುರೋ ತುಭ್ಯಂ ನಮ ಆಶೀಸ್ತ್ವಾನುಜ ।
ಪ್ರಸಾದ್ವಾಂ ಮಮಾಸ್ಥೀನಿ ತೀರ್ಥೇಽತ್ರ ಪತಿತಾನಿ ವೈ ॥ ೧೬ ॥

ಅಪಮೃತ್ಯುಮಹಂ ಗತ್ವಾ ನಿರಯಂ ಪ್ರಾಪ್ಯ ತತ್ಫಲಂ ।
ಏತತ್ತೀರ್ಥಪ್ರಸಾದೇನ ದೈವೀ ಲಬ್ಧಾ ಮಯಾ ಗತಿಃ ॥ ೧೭ ॥

ತ್ವಾಂ ಗುರುಂ ತೀರ್ಥಭೂತಂ ತು ನಮಸ್ಕರ್ತುಮಿಹಾಗತಃ ।
ಅಹಂ ಗಚ್ಛನ್ವಿಮಾನೇನ ದಿವ್ಯೇನ ತ್ರಿದಶಾಲಯಂ ॥ ೧೮ ॥

---

೧೪. ಎಲೈ ದೊರೆಯೇ ! ಈ ಮೂಳೆಗಳನ್ನು ಆ ನಾಯಿಯು ಆ ನೀರಿನ ಮಧ್ಯದಲ್ಲಿ ಹಾಕಿದೊಡನೆಯೇ ಆ ಮುಕುಂದನು ಒಳ್ಳೆಯ ವಿಮಾನದಲ್ಲಿ ಹತ್ತಿ ಕುಳಿತು ಅಲ್ಲಿಗೆ ಬಂದನು.

೧೫. ಅಲ್ಲಿ ತನ್ನ ಗುರುವೂ, ತಮ್ಮನೂ ಮಲಗಿರುವುದನ್ನು ನೋಡಿ ಅವರಿಬ್ಬರನ್ನೂ ಮೆಲ್ಲಗೆ ಎಬ್ಬಿಸಿದನು. ದಿವ್ಯಾಕಾರವನ್ನು ಹೊಂದಿದ ಅವನು ಅವರಿಗೆ ನಮಸ್ಕರಿಸಿ ಇಂತೆಂದನು.

೧೬. ಮುಕುಂದನು ಹೇಳಿದನು– ಗುರುವಾದ ವೇದಾಯನನೇ ! ನಿನಗೆ ನಮಸ್ಕಾರವು ಎಲೈ ತಮ್ಮನೇ ! ನಿನಗೆ ಆಶೀರ್ವಾದವು. ನಿಮ್ಮಿಬ್ಬರ ಅನುಗ್ರಹದಿಂದ ನನ್ನ ಮೂಳೆಗಳು ಈ ತೀರ್ಥದಲ್ಲಿ ಬಿದ್ದುವು.

೧೭. ನಾನು ಅಪಮೃತ್ಯುವನ್ನು ಹೊಂದಿ ಅದಕ್ಕೆ ತಕ್ಕ ಫಲವಾದ ನರಕವನ್ನು ಹೊಂದಿದ್ದೆನು. ಈ ತೀರ್ಥದ ಅನುಗ್ರಹದಿಂದ ಸ್ವರ್ಗದ ಗತಿಯು ನನಗೆ ಬಂದಿದೆ.

೧೮-೧೯. ಗುರುವೂ ತೀರ್ಥಭೂತನೂ ಆದ ನಿನ್ನನ್ನು ನಮಸ್ಕರಿಸಲು ಇಲ್ಲಿಗೆ ಬಂದೆನು. ನಾನು ವಿಮಾನದಿಂದ ಸ್ವರ್ಗಕ್ಕೆ ಹೋಗುತ್ತಾ ನಿನ್ನನ್ನು

ನಮಸ್ಕೃತೋ ಭವಾನೇತತ್ತೀರ್ಥಂ ಚಾಯಂ ಸಹೋದರಃ |
ದೃಷ್ಟೋ ಮಾಮನುಜಾನೀಹಿ ಯಾಮಿ ಸ್ವರ್ಗಂ ಸುಖೋದಯಂ || ೧೯ ||

|| ನಾರದ ಉವಾಚ ||

ಶ್ರುತ್ವೈವಂ ವಚನಂ ತಸ್ಯ ಮುಕುಂದಸ್ಯ ಗುರುಸ್ತದಾ |
ವೇದಾಯನೋ ವಿಮಾನಸ್ಥಂ ತಮೂಚೇ ಗತವಿಸ್ಮಯಃ || ೨೦ ||

|| ವೇದಾಯನ ಉವಾಚ ||

ಮುಕುಂದಾಖ್ಯಾಹಿ ಮೇ ಸತ್ಯಂ ಲಬ್ಧ್ವಾಪಮರಣಂ ಭವಾನ್ |
ಕಸ್ಮಿಂಲ್ಲೋಕೇ ಗತಸ್ತಾತ ಯತೋ ಯಾಸ್ಯಧುನಾ ದಿವಂ || ೨೧ ||

ಕಿಂ ವೃತ್ತಂ ತತ್ರ ತೇ ತಾತ ತಸ್ಯ ಲೋಕಸ್ಯ ಕೋಽಧಿಪಃ ।
ಕೀದೃಶೀ ಚ ಪ್ರಜಾ ಕೀದೃಗ್ಧರ್ಮಸ್ತತ್ರಾಖಿಲಂ ವದ || ೨೨ ||

---

ನಮಸ್ಕರಿಸಿದೆನು. ಅಲ್ಲದೆ ನಿನ್ನನ್ನೂ ಈ ಸಹೋದರನನ್ನೂ ಈ ತೀರ್ಥವನ್ನೂ ನೋಡಿದೆನು. ಸಂತೋಷವಾಯಿತು ನನಗೆ ಅಪ್ಪಣೆಯನ್ನು ಕೊಡು. ಸುಖವನ್ನು ಕೊಡುವ ಸ್ವರ್ಗಕ್ಕೆ ಹೋಗುತ್ತೇನೆ.

೨೦. ನಾರದನು ಹೇಳಿದನು-ಆ ಮುಕುಂದನ ಈ ಮಾತನ್ನು ಗುರುವು ಕೇಳಿ ಆಶ್ಚರ್ಯಪಡುತ್ತ ವಿಮಾನದಲ್ಲಿರುವ ಆತನನ್ನು ಕುರಿತು ಇಂತೆಂದು ಪ್ರಶ್ನಿಸಿದನು.

೨೧-೨೨. ವೇದಾಯನನು ಹೇಳಿದನು-ಎಲೈ ಮುಕುಂದನೇ ! ನಿಜವಾದ ಮಾತನ್ನು ಹೇಳು. ನೀನು ಅಪಮೃತ್ಯುವನ್ನು ಹೊಂದಿ ಯಾವ ಲೋಕಕ್ಕೆ ಹೋದೆ ? ಎಲ್ಲಿಂದ ಈಗ ಸ್ವರ್ಗಲೋಕಕ್ಕೆ ಹೋಗುತ್ತೀಯೆ ? ಇಲ್ಲಿ ಬಿಡುಗಡೆಯಾಗಿ ಅಲ್ಲಿಗೆ ಹೋಗಲು ಕಾರಣವೇನು ? ಆ ನೀನಿದ್ದ ಸ್ಥಳದ ವಿಷಯವೇನು ? ಆ ಲೋಕಕ್ಕೆ ಒಡೆಯನಾರು ? ಅಲ್ಲಿರುವ ಪ್ರಜೆಗಳು ಹೇಗಿರುವರು ? ಅಲ್ಲಿನ ಧರ್ಮವೇನು ? ಇವೆಲ್ಲವನ್ನೂ ಹೇಳು ?

|| ಮುಕುಂದ ಉವಾಚ ||

ಕಥಯಾಮಿ ಗುರೋ ತುಭ್ಯಂ ಯದ್ವೃತ್ತಂ ಮರಣಾದನು |
ತೀರ್ಥಸ್ಯಾಸ್ಯ ಪ್ರಸಾದೇನ ಸ್ಮೃತಿರ್ಮೇ ಜಾಯತೇಽಧುನಾ || ೨೩ ||

ಯದಾಹಂ ತೇನ ನಿಹತಶ್ಚಂಡಕೇನ ದುರಾತ್ಮನಾ |
ತಾಪಿತೇನ ತದಾಽಽಜಗ್ಮುಃ ಯಮಭೃತ್ಯಾಸ್ಸುದಾರುಣಾಃ || ೨೪ ||

ಪಿಂಗಾಕ್ಷಾ ರಕ್ತಕೇಶಾಶ್ಚ ಶ್ಯಾಮದೇಹನಖಾಧರಾಃ |
ವಾಮನಾ ದೀರ್ಘಚರಣಾ ಹ್ರಸ್ವನಾಸಾಶ್ಚ ದಂತುರಾಃ || ೨೫ ||

ನೀಯತಾಂ ನೀಯತಾಮೇಷ ಧರ್ಮರಾಜಸ್ಯ ಶಾಸನಾತ್ |
ಪುರೀಂ ಸಂಯಮನೀಮೇವಮೂಚಿರೇ ತೇ ಪರಸ್ಪರಂ || ೨೬ ||

ಇತ್ಯುಕ್ತ್ವಾ ಯಾತನಾದೇಹೇ ಮಾಂ ನಿವೇಶ್ಯ ಮಹಾರುಷಾ |
ನಿಬಧ್ಯ ದಾರುಣೈಃ ಪಾಶೈರ್ಜಘ್ನುರ್ಲೋಹಸ್ಯ ಮುದ್ಗರೈಃ || ೨೭ ||

---

೨೩. ಮುಕುಂದನು ಹೇಳಿದನು-ಎಲೈ ಗುರುವೇ ! ಈ ತೀರ್ಥದ ಅನುಗ್ರಹದಿಂದ ನನಗೆ ಈಗ ಜ್ಞಾಪಕವು ಬರುತ್ತಿದೆ. ನಾನು ಸತ್ತಮೇಲೆ ಏನೇನಾಯಿತೆಂಬುದನ್ನು ನಿನಗೆ ಹೇಳುತ್ತೇನೆ.

೨೪. ದುಷ್ಟನಾದ ಚಂಡಕನು ನನ್ನನ್ನು ಕೊಂದಮೇಲೆ ಒಡನೆಯೇ ಭಯಂಕರರಾದ ಯಮನ ಭಟರು ಅಲ್ಲಿಗೆ ಬಂದರು.

೨೫. ತಲೆಗೂದಲುಗಳು ಕೆಂಚಗಿದ್ದವು. ಮತ್ತು ಕೆಂಪಗೂ ಇದ್ದುವು. ಮೈ ಬಣ್ಣವು ಕಪ್ಪಗೆ ಇದ್ದಿತು. ಉಗುರುಗಳು ಕೂಡ ಕಪ್ಪಾಗಿದ್ದುವು. ಕುಳ್ಳರು. ಕಾಲು ಉದ್ದವಾಗಿದ್ದಿತು. ಮೂಗು ಗಿಡ್ಡವಾಗಿದ್ದಿತು. ಮತ್ತು ಮೇಲಕ್ಕೆದ್ದು ಕೊಂಡಿದ್ದಿತು.

೨೬. ಈತನನ್ನು ಕರೆದುಕೊಂಡು ಹೋಗಿ. ಧರ್ಮರಾಜನ ಅಪ್ಪಣೆಯಂತೆ ಸಂಯಮಿನೀ ಪಟ್ಟಣಕ್ಕೆ ಕರೆದುಕೊಂಡು ಹೋಗಿ. ಎಂಬುದಾಗಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಿದ್ದರು.

೨೭. ಹೀಗೆಂದು ಹೇಳುತ್ತಾ ಯಾತನಾ ದೇಹದಲ್ಲಿ ನನ್ನನ್ನು ಸೇರಿಸಿ ಕೋಪದಿಂದ ಬಲವಾದ ಹಗ್ಗಗಳಿಂದ ಕಟ್ಟಿ ಕಬ್ಬಿಣದ ಒನಕೆಗಳಿಂದ ಹೊಡೆದರು.

ತೈರಹಂ ನೀಯಮಾನಸ್ತು ಮಾರ್ಗೇ ಸುತಪ್ತವಾಲುಕೇ ।
ಅರುದಂ ಭೃಶದುಃಖಾರ್ತಃ ತಾಡಿತೋಽಹಂ ಪುನಶ್ಚ ತೈಃ ॥
ಪ್ರೋಚುಶ್ಚ ತೇ ಧ್ರುವಂ ಕೃತ್ವಾ ನಿರ್ಭರ್ತ್ಸ್ಯೇತಿ ಚ ಮಾಂ ಬಹು ॥ ೨೮ ॥

॥ ಯಮದೂತಾ ಊಚುಃ ॥

ತ್ವಯಾ ಲುಪ್ತೋ ಗುರುರ್ಯಸ್ಮಾದ್ವದತಾ ಬ್ರಹ್ಮ ನಿಶ್ಚಲಂ ।
ಕಿಂ ಕರೋಷಿ ಯಮಸ್ಯಾಗ್ರೇ ದ್ರಷ್ಟವ್ಯಂ ದಾರುಣಂ ಮುಖಂ ॥ ೨೯ ॥

ತಸ್ಯ ಪಾಪಸ್ಯ ಭೋಕ್ತವ್ಯಂ ದಾರುಣಸ್ಯ ಫಲಂ ತ್ವಯಾ ।
ತೇನೈವ ಪಾಪ್ಮನಾ ಪಾಪಿನ್ನಪಮೃತ್ಯುಂ ಗತೋ ಭವಾನ್ ॥ ೩೦ ॥

॥ ಮುಕುಂದ ಉವಾಚ ॥

ಇತ್ಯುಕ್ತ್ವಾ ಮಾಂ ಮುಹೂರ್ತೇನ ಬಹುಯೋಜನಸಂಸ್ಥಿತಾಂ ।
ಪುರೀಂ ಸಂಯಮಿನೀಂ ನಿನ್ಯುರ್ಯತ್ರ ರಾಜಾ ಸ್ವಯಂ ಯಮಃ ॥ ೩೧ ॥

---

೨೮. ಅವರು ನನ್ನನ್ನು ಕಾದಿರುವ ಮರಳುಳ್ಳ ದಾರಿಯಲ್ಲಿ ಕರೆದುಕೊಂಡು ಹೋದರು. ಆಗ ಬಹುವಾಗಿ ದುಃಖದಿಂದ ಅತ್ತೆನು. ಅದನ್ನು ನೋಡಿ ಕಟ್ಟಿಗೆಯ ಒನಕೆಗಳಿಂದ ಹೊಡೆಯುತ್ತಿದ್ದರು. ಅವರು ವಾಯಿದೆ ಮಾಡಿಕೊಂಡು ನನ್ನನ್ನು ಹೆದರಿಸುತ್ತ ಇಂತೆಂದರು.

೨೯. ಯಮದೂತರು ಹೇಳಿದರು-ಎಲೈ ಮುಕುಂದನೇ! ನೀನು ವೇದಾಧ್ಯಯನ ಮಾಡುತ್ತಿದ್ದಾಗ ಗುರುವಿಗೆ ಲೋಪ ಮಾಡಿದ್ದೀಯೆ. ನೀನು ಇದಕ್ಕೋಸ್ಕರ ಆ ಯಮನ ಕ್ರೂರವಾದ ಮುಖವನ್ನು ನೋಡಬೇಕಾಗಿದೆಯಲ್ಲ! ಅವನ ಮುಂದೇನು ಮಾಡುತ್ತೀಯೆ?

೩೦. ಆ ದಾರುಣವಾದ ಪಾಪಕ್ಕೆ ನೀನು ಫಲವನ್ನು ಅನುಭವಿಸಬೇಕು. ಎಲೈ ಪಾಪಿಯೇ! ಅದೇ ಪಾಪಕ್ಕೋಸ್ಕರ ನೀನು ಅಪಮೃತ್ಯುವಿನಿಂದ ಸತ್ತೆ.

೩೧. ಮುಕುಂದನು ಹೇಳಿದನು-ಹೀಗೆಂದು ಹೇಳುತ್ತಾ ಬಹು ದೂರದಲ್ಲಿರುವ ಆ ಸಂಯಮಿನೀ ಪಟ್ಟಣಕ್ಕೆ ಸ್ವಲ್ಪ ಹೊತ್ತಿನಲ್ಲಿಯೇ ನನ್ನನ್ನು ಕರೆದುಕೊಂಡು ಹೋಗಿ ಯಮನ ಬಳಿಯಲ್ಲಿ ನಿಲ್ಲಿಸಿದರು.

ಪ್ರಣಮ್ಯ ಧರ್ಮರಾಜಾನಂ ಸ್ಥಾಪಯಿತ್ವಾ ತು ಮಾಂ ಪುರಃ ।
ಆನೀತೋಽಯಂ ದ್ವಿಜಃ ಪಾಪ ಇತಿ ಮಾಂ ತೇ ನ್ಯವೇದಯನ್ ॥
ದೃಷ್ಟ್ವಾ ಮಾಂ ಧರ್ಮರಾಟ್ಸೋಽಥ ಪ್ರೋವಾಚ ಸ್ವಸಭಾಸದಃ ॥ ೩೨ ॥

॥ ಯಮ ಉವಾಚ ॥

ಭೋಸ್ಸಭ್ಯಾ ಮಾಮಕೀಂ ವಾಚಂ ಶೃಣ್ವಂತು ಸುಸಮಾಹಿತಾಃ ।
ಯದಾಹಂ ಬ್ರಹ್ಮಣಾಹ್ಯಸ್ಮಿನ್ನಧಿಕಾರೇ ನಿವೇಶಿತಃ ।
ತದಾ ಮಾಮಿತ್ಯುವಾಚಾಸೌ ಬ್ರಹ್ಮಾ ಲೋಕಪಿತಾಮಹಃ ॥ ೩೩ ॥

॥ ಬ್ರಹ್ಮೋವಾಚ ॥

ಅಧರ್ಮಿಣಾಂ ನರಾಣಾಂ ತ್ವಂ ಶಾಸ್ತಾ ಸಂಯಮನೀಪತಿಃ ।
ಯಥಾಪರಾಧಮಾಧತ್ಸ್ವ ದಂಡಂ ಚಂಡಕರಾತ್ಮಜ ॥ ೩೪ ॥

ಪಿತ್ರೋರಪೋಷಕೋ ಯಸ್ತು ಸಮರ್ಥೋ ಗುರುಧ್ರುಕ್ತು ಯಃ ।
ಏತೌ ಮಹಾಪಾತಕಿನೌ ನಿಪಾತ್ಯೌ ನರಕೇಷು ತೇ ॥ ೩೫ ॥

---

೩೨. ಅಲ್ಲಿಗೆ ಹೋಗಿ ಆ ಆಳುಗಳು ಧರ್ಮರಾಜನಿಗೆ ನಮಸ್ಕರಿಸಿ ನನ್ನನ್ನು ಅವನ ಮುಂದೆ ನಿಲ್ಲಿಸಿ ಇಗೋ ಈ ಪಾಪಿಯಾದ ಬ್ರಾಹ್ಮಣನನ್ನು ಕರೆತಂದಿದ್ದೇವೆ. ಎಂದರು. ನನ್ನನ್ನು ನೋಡಿ ಆ ಯಮನು ಆ ಸಭಾಸದರೊಡನೆ ಇಂತೆಂದು ಹೇಳಿದನು.

೩೩. ಯಮನು ಹೇಳಿದನು–ಎಲೈ ಸಭೆಯಲ್ಲಿರುವವರೇ ! ನನ್ನ ಮಾತನ್ನು ಮನಸ್ಸಿಟ್ಟು ಕೇಳಿರಿ. ನನ್ನನ್ನು ಬ್ರಹ್ಮನು ಈ ಅಧಿಕಾರದಲ್ಲಿ ಇಟ್ಟಾಗಲೇ ಆ ಲೋಕ ಪಿತಾಮಹನಾದ ಬ್ರಹ್ಮನು ನನ್ನನ್ನು ಕುರಿತು ಇಂತೆಂದನು.

೩೪. ಬ್ರಹ್ಮನು ಹೇಳಿದನು–ಎಲೈ ಯಮನೇ ! ನೀನು ಈ ಸಂಯಮನಿಗೆ ರಾಜನಾಗಿದ್ದುಕೊಂಡು ಅಧರ್ಮ ಮಾಡಿದ ಮನುಷ್ಯರಿಗೆ ಶಿಕ್ಷಕನಾಗಿರು ಅವರೆ ಎಲೈ ಸೂರ್ಯಪುತ್ರನೇ ! ತಪ್ಪಿಗೆ ಯೋಗ್ಯವಾದ ಶಿಕ್ಷೆಯನ್ನು ವಿಧಿಸು.

೩೫. ತಾಯಿತಂದೆಗಳಿಗೆ ಮೋಸಮಾಡುವ ಅವರನ್ನು ಸೇವಿಸದ ಮತ್ತು ಪೋಷಿಸದ ಜನರನ್ನೂ ಗುರುವಿಗೆ ದ್ರೋಹ ಮಾಡುವವರನ್ನೂ ಶಿಕ್ಷಿಸು. ಇವರಿಬ್ಬರೂ ಮಹಾಪಾತಕಿಗಳು. ಅವರನ್ನು ನರಕದಲ್ಲಿ ಹಾಕಬೇಕು.

ಸರ್ವೇಷು ಯಾವದ್ವರ್ಷಾಣಾಂ ಪ್ರತ್ಯೇಕಮಯುತಂ ಭವೇತ್ ।
ಏತಯೋರ್ನ ತ್ವಯಾ ಕಾರ್ಯಾ ದಯಾ ಜಾತು ಕಕುಪ್ಪತೇ || ೩೬ ||

|| ಯಮ ಉವಾಚ ||

ಇತ್ಯಹಂ ಬ್ರಹ್ಮಣೋ ವಾಕ್ಯಾತ್ ಸ್ವಗುರುದ್ರುಹಿ ಮಾನವೇ ।
ನ ಕರೋಮಿ ಕೃಪಾಂ ಸಭ್ಯಾಸ್ತಥಾ ಪಿತ್ರೋರಪೋಷಕೇ || ೩೭ ||

ಬ್ರಾಹ್ಮಣೋಽಯಂ ಗುರುದ್ರೋಹೀ ತದ್ದ್ರೋಹಾದಪಮೃತ್ಯುತಾಂ
ಪ್ರಾಪ್ತೋ ಮಚ್ಛಾಸನಾದ್ಭೃತ್ಯೈರಾನೀತೋ ದರ್ಶನಾಕ್ಷಮಃ || ೩೮ ||

ಭೋ ಭೃತ್ಯಾಃ ಪ್ರಥಮಂ ಘೋರೇ ರೌರವೇ ವತ್ಸರಾಯುತಂ ।
ಪಾತ್ಯತಾಂ ಚ ಪುನಸ್ತಸ್ಮಾನ್ನಿಸ್ಸಾರ್ಯಾನ್ಯತ್ರ ಪಾತ್ಯತಾಂ || ೩೯ ||

ತಾವಂತಮೇವ ಕಾಲಂ ವೈ ಪಾಪೋಽಯಂ ಗುರುಲೋಪಕಃ
ನರಕೇಷ್ವಿತಿ ಸರ್ವೇಷು ಯಥಾಕಾಲಂ ಸ್ಥಿತಿರ್ಧ್ರುವಂ || ೪೦ ||

---

೩೬. ಒಂದೊಂದು ತಪ್ಪಿಗೂ ಅವರಿಗೆ ಸಾವಿರ ಸಾವಿರ ವರ್ಷಗಳಂತೆ ನರಕದಲ್ಲಿ ಶಿಕ್ಷೆಯನ್ನು ಕೊಡು. ಇವರ ವಿಷಯವಲ್ಲಿ ದಯೆಯನ್ನು ತೋರಿಸಬೇಡ.

೩೭. ಯಮನು ಹೇಳಿದನು-ಆದ್ದರಿಂದ ಆ ಬ್ರಹ್ಮನ ಮಾತಿನಂತೆ ತನ್ನ ಗುರುವಿಗೆ ದ್ರೋಹಮಾಡಿದವನ ವಿಷಯವಲ್ಲಿಯೂ ತಾಯಿತಂದೆಗಳನ್ನು ಕಿರಸ್ಕರಿ ಪೋಷಿಸದವನಲ್ಲಿಯೂ ನಾನು ದಯೆಯನ್ನು ತೋರುವುದೇ ಇಲ್ಲ.

೩೮ ಈ ಬ್ರಾಹ್ಮಣನು ಗುರು ದ್ರೋಹಿಯು. ಆ ಪಾಪದಿಂದಲೇ ಈತನಿಗೆ ಅಪಮೃತ್ಯುವು ಒದಗಿತು. ನನ್ನ ಆಳುಗಳು ಅವನನ್ನು ನನ್ನ ಮಾತಿನಂತೆ ಕರೆ ತಂದಿದ್ದಾರೆ. ಅವನನ್ನು ನೋಡುವುದೂ ಕೂಡ ಅಯೋಗ್ಯವಾದ ಕೆಲಸ.

೩೯. ಎಲೈ ಆಳುಗಳಿರಾ ! ಮೊದಲು ಘೋರವಾದ ರೌರವ ನರಕದಲ್ಲಿ ಒಂದು ಸಾವಿರ ವರ್ಷಗಳವರೆಗೂ ಹಾಕಿ ಆಮೇಲೆ ಅಲ್ಲಿಂದ ತೆಗೆದು ಮತ್ತೊಂದಕ್ಕೆ ಹಾಕಿರಿ.

೪೦. ಇದೇ ರೀತಿಯಾಗಿ ಆ ಸಾವಿರ ಸಾವಿರ ವರ್ಷಗಳಂತೆ ಒಂದೊಂದು ನರಕದಲ್ಲಿಯೂ ಹಾಕಿರಿ ಈ ರೀತಿಯಾಗಿ ಆ ನರಕಗಳನ್ನೆಲ್ಲಾ ಆತನು ಅನುಭವಿಸಬೇಕು.

|| ಮುಕುಂದ ಉವಾಚ ||

ವೇದಾಯನ ಗುರೋ ಸ್ವಾಮಿನ್ ಭೃತ್ಯಾಸ್ತೇ ಯಮಶಾಸನಾತ್ |
ನೀತ್ವಾ ಮಾಂ ರೌರವೇ ಘೋರೇ ಪಾಶೈರ್ಬಧ್ವಾ ನ್ಯಪಾತಯನ್ || ೪೧ ||

ತತ್ರಾಹಂ ತಾಂ ವ್ಯಥಾಂ ಗುರ್ವೀಂ ಲಬ್ಧವಾನತಿದಾರುಣಾಂ |
ಯಯಾ ಕೋಽಪಿ ಕ್ಷಣಸ್ತತ್ರ ನೀತೋ ಮೇ ಯುಗವತ್ತದಾ || ೪೨ ||

ತ್ರಿಂಶದ್ದಿನಾನ್ಯತೀತಾನಿ ದುಃಖಂ ಮೇ ತತ್ರ ತಿಷ್ಠತಃ |
ಏಕತ್ರಿಂಶತ್ತಮೇ ಹ್ಯಸ್ಮಿನ್ ದಿನೇಽಹಂ ನಿರ್ಗತಸ್ತದಾ || ೪೩ ||

ಪತಿತೇಷ್ವಸ್ಥಿಖಂಡೇಷು ತೀರ್ಥೇಽಸ್ಮಿನ್ನುತ್ತಮೋತ್ತಮೇ |
ಗುರುಲೋಪೋದ್ಭವಂ ಪಾಪಂ ಸದ್ಯೋ ನಷ್ಟಂ ಮಮಾಭವತ್ || ೪೪ ||

ತೀರ್ಥಸ್ಯಾಸ್ಯ ಪ್ರಸಾದೇನ ಲಬ್ಧಾ ಚ ಸ್ವರ್ಗತಿರ್ಮಯಾ |
ಸುಖಂ ಸ್ವರ್ಗೇ ನಿವತ್ಸ್ಯಾಮಿ ಯಾವದಿಂದ್ರಾಶ್ಚತುರ್ದಶ || ೪೫ ||

---

೪೧. ಮುಕುಂದನು ಹೇಳಿದನು–ಎಲೈ ಗುರುವಾದ ವೇದಾಯನನೇ ! ಆ ಯಮನ ಅಪ್ಪಣೆಯಂತೆ ಆಳುಗಳು ನನ್ನನ್ನು ತೆಗೆದುಕೊಂಡು ಹೋಗಿ ಕೈ ಕಾಲುಗಳನ್ನು ಕಟ್ಟಿ ಘೋರವಾದ ರೌರವದಲ್ಲಿ ಹಾಕಿದರು.

೪೨ ಅಲ್ಲಿ ಬಹುವಾದ ವ್ಯಥೆಯನ್ನು ನಾನು ಹೊಂದಿದೆನು. ಆ ವ್ಯಥೆಯಿಂದ ಅಲ್ಲಿ ಒಂದು ಕ್ಷಣವನ್ನು ಒಂದು ಯುಗದಂತೆ ಕಳೆದೆನು.

೪೩. ದುಃಖದಿಂದ ಅಲ್ಲಿರುತ್ತಿರಲು ನನಗೆ ಮೂವತ್ತು ದಿನಗಳು ಕಳೆದುವು. ಮೂವತ್ತೊಂದನೆಯ ದಿನವಾದ ಈ ದಿನ ಅಲ್ಲಿಂದ ನಾನು ಹೊರಕ್ಕೆ ಬಂದನು.

೪೪. ಈ ಉತ್ತಮೋತ್ತಮವಾದ ತೀರ್ಥದಲ್ಲಿ ನನ್ನ ದೇಹದ ಮೂಳೆಗಳು ಬೀಳಲು ಆ ಗುರು ದ್ರೋಹಕರವಾದ ಪಾಪವು ಒಡನೆಯೇ ನನಗೆ ಹೋಯಿತು.

೪೫. ಈ ತೀರ್ಥದ ಅನುಗ್ರಹದಿಂದ ನನಗೆ ಸ್ವರ್ಗದ ಸ್ಥಿತಿಯು ಸಿಕ್ಕಿತು. ಹದಿನಾಲ್ಕು ಜನ ಇಂದ್ರರು ಸ್ವರ್ಗದಲ್ಲಿರುವವರೆಗೂ ನಾನು ಆ ಸ್ವರ್ಗದಲ್ಲಿಯೇ ಇರುತ್ತೇನೆ.

ಯಮಸ್ಯ ನಗರೇ ತಸ್ಮಿನ್ಯಾಃ ಪ್ರಜಾ ನಿವಸಂತಿ ವೈ |
ಪಾಪಿನಾಂ ಭಯದಾಯಿನ್ಯೋ ಧರ್ಮಿಣಾಂ ತಾ ಮನೋಹರಾಃ || ೪೬ ||

ಯದಾಹಂ ಯಮಭೃತ್ಯೈಸ್ತು ನೀತಃ ಪಾಪೇನ ಮೂರ್ಛಿತಃ |
ತದಾ ಮಯಾ ಪ್ರಜಾಸ್ಸರ್ವಾ ದೃಷ್ಟಾಸ್ತಾತ ಭಯಂಕರಾಃ || ೪೭ ||

ಸಿಂಹಾಸ್ಯಾ ಗಜಕೋಲಾಸ್ಯಾ ಮಹಾದಂಷ್ಟ್ರೋನ್ನತೋದರಾಃ |
ಬಿಡಾಲಾಸ್ಯಾಃ ಪಿಂಗಕೇಶ್ಯೋ ಭಾಮಿನ್ಯೋ ದೀರ್ಘಪತ್ಕರಾಃ || ೪೮ ||

ತೀರ್ಥಸ್ಯಾಸ್ಯ ಪ್ರಸಾದೇನ ನಿಷ್ಪಾಪೋಽಹಂ ಯದಾಭವಂ ।
ತದಾ ಮಯಾ ಪ್ರಜಾ ದೃಷ್ಟಾ ದಿವ್ಯರೂಪಾ ಯಮಾಲಯೇ || ೪೯ ||

ಸರ್ವಾಸ್ತಾಸ್ಸತ್ಯವಾದಿನ್ಯೋ ವಿನಯಾಚಾರಸಂಚಿತಾಃ ।
ದಿವ್ಯಾಭರಣಧಾರಿಣ್ಯೋ ದಿವ್ಯಾಂಬರವಿಭೂಷಿತಾಃ || ೫೦ ||

---

೪೬ ಯಮನ ಪಟ್ಟಣದಲ್ಲಿ ವಾಸಮಾಡುವ ಜನರು ಪಾಪಿಗಳಿಗೆ ಭಯಂಕರರಾಗಿಯೂ ಧರ್ಮಿಗಳಿಗೆ ಸಂತೋಷಕರರಾಗಿಯೂ ಇರುತ್ತಾರೆ.

೪೭. ನಾನು ಪಾಪಿಯಾಗಿ ಮೂರ್ಛೆಗೊಂಡು ಆ ಯಮನ ಪಟ್ಟಣಕ್ಕೆ ಹೋದಾಗ ಅಲ್ಲಿನ ಪ್ರಜೆಗಳು ನನ್ನ ಕಣ್ಣಿಗೆ ಭಯಂಕರರಾಗಿ ಕಂಡರು.

೪೮. ಆಗ ಅವರೆಲ್ಲರೂ ನನಗೆ ಸಿಂಹದ ಮುಖವುಳ್ಳವರಾಗಿಯೂ ಆನೆಯಂತೆಯೂ ಹಂದಿಯಂತೆಯೂ ದಪ್ಪ ದಪ್ಪ ಕೋರೆಹಲ್ಲುಗಳನ್ನು ಹೊಂದಿಯೂ ಹೊಟ್ಟೆಯನ್ನು ಮುಂದಕ್ಕೆ ಮಾಡಿಕೊಂಡು ಬಂದರು. ಮತ್ತು ಬೆಕ್ಕಿನಂತೆ ಮುಖವುಳ್ಳವರಾಗಿಯೂ ಉದ್ದವಾದ ಕೈಕಾಲುಗಳುಳ್ಳವರಾಗಿಯೂ ಕಂಡು ಬಂದರು.

೪೯. ಈ ತೀರ್ಥದ ಅನುಗ್ರಹದಿಂದ ನನ್ನ ಪಾಪವೆಲ್ಲವೂ ಹೋದಮೇಲೆ ಆ ಪಟ್ಟಣದ ಪ್ರಜೆಗಳೆಲ್ಲರೂ ಉತ್ತಮೋತ್ತಮರೂಪವುಳ್ಳವರಾಗಿ ಕಂಡು ಬಂದರು.

೫೦. ಮತ್ತು ಅವರೆಲ್ಲರೂ ಸತ್ಯವನ್ನು ಹೇಳುವವರಾಗಿಯೂ ವಿನಯವುಳ್ಳವರಾಗಿಯೂ ಒಳ್ಳೆಯ ಆಭರಣವನ್ನು ಹೊಂದಿದವರಾಗಿಯೂ ಒಳ್ಳೆಯ ಬಟ್ಟೆಯನ್ನುಟ್ಟವರಾಗಿಯೂ ಕಂಡು ಬಂದರು.

ಇತ್யೇತತ್ಕಥಿತಂ ತಾತ ಯತ್ಪೃಷ್ಟೋಽಹಂ ತ್ವಯಾನಘ |
ಅನುಜಾನೀಹಿ ಮಾಂ ಗಂತುಮಮರೇಶಪುರೀಂ ಪ್ರತಿ ॥ ೫೧ ॥

॥ ನಾರದ ಉವಾಚ ॥

ಇತ್ಯಾಕರ್ಣ್ಯ ಸ ಸನ್ಯಾಸೀ ಸ್ವಶಿಷ್ಯೋಕ್ತಂ ವಚಸ್ತದಾ |
ಭೂಯಃ ಪಪ್ರಚ್ಛ ಧರ್ಮಾತ್ಮಾ ಮುಕುಂದಂ ತಂ ದ್ವಿಜಂ ನೃಪ ॥ ೫೨ ॥

॥ ವೇದಾಯನ ಉವಾಚ ॥

ಬಾಲ್ಯಾವಧಿ ಗುರುಸ್ತೇಽಹಂ ಮತ್ತೋಽಧೀತಂ ತ್ವಯಾಖಿಲಂ |
ಶಬ್ದಶಾಸ್ತ್ರಸಮೇತಶ್ಚ ವೇದಸ್ತು ಸಪದಕ್ರಮಃ ॥ ೫೩ ॥

ವಿಹಿತಾ ಮಮ ಶುಶ್ರೂಷಾ ಭಾವೇನ ಭವತೋತ್ತಮಾ |
ತ್ವಯಿ ಸಂತಿ ಸತಾಂ ಸಾಧೋ ಗುಣಾಶ್ಶಮದಮಾದಯಃ ॥ ೫೪ ॥

ಗುರುಲೋಪಕೃತಂ ಪಾಪಂ ಕಥಂ ತೇ ಸಮುಜಾಯತ |
ಏತದಾಖ್ಯಾಹಿ ಮೇ ತಾತ ಯಥಾ ಜಾನಾಮಿ ತತ್ವತಃ ॥ ೫೫ ॥

---

೫೧. ಎಲೈ ಗುರುವೇ! ನೀನು ಕೇಳಿದ ಈ ವಿಷಯಗಳನ್ನೆಲ್ಲಾ ಹೇಳಿದೆನು. ನಾನು ದೇವಲೋಕಕ್ಕೆ ಹೋಗಬೇಕು. ನನಗೆ ಅನುಮತಿಯನ್ನು ಕೊಡು.

೫೨. ನಾರದನು ಹೇಳಿದನು–ಆ ಸನ್ಯಾಸಿಯು ತನ್ನ ಶಿಷ್ಯನು ಹೇಳಿದ ಈ ವಿಷಯವನ್ನು ಕೇಳಿ ಮತ್ತೆ ಆ ಮುಕುಂದನನ್ನು ಕುರಿತು ಇಂತೆಂದು ಕೇಳಿದನು.

೫೩-೫೫. ವೇದಾಯನನು ಹೇಳಿದನು–ಎಲೈ ಮುಕುಂದನೆ! ನೀನು ನನಗೆ ಬಾಲ್ಯದಿಂದಲೂ ಶಿಷ್ಯನು. ನನ್ನಿಂದಲೇ ನೀನು ವೇದದ ಪದಕ್ರಮ ಮೂಲಗಳನ್ನೂ ಶಬ್ದಶಾಸ್ತ್ರವಾದ ವ್ಯಾಕರಣವನ್ನೂ ಓದಿದ್ದೀಯೆ. ನೀನು ಒಳ್ಳೆಯ ಭಾವದಿಂದ ನನಗೆ ಶುಶ್ರೂಷೆಯನ್ನೂ ಮಾಡಿದ್ದೀಯೆ. ಎಲೈ ಸಾಧುವೇ! ನಿನ್ನಲ್ಲಿ ಶಮದಮ ಮುಂತಾದ ಗುಣಗಳೆಲ್ಲವೂ ಇವೆ. ಆದರೂ ಈ ಗುರುವಿನಲ್ಲಿ ಲೋಪ ಮಾಡಿದ ಪಾಪವು ನಿನಗೆ ಹೇಗೆ ಬಂದಿತು? ನನಗೆ ಸರಿಯಾಗಿ ತಿಳಿಯುವಂತೆ ಕ್ರಮವಾಗಿ ಎಲ್ಲವನ್ನೂ ಹೇಳು.

॥ ಮುಕುಂದ ಉವಾಚ ॥

ಜನ್ಮೋಪವೀತಕನ್ಯಾನಾಂ ದಾತಾರೋ ನಿಗಮಸ್ಯ ಚ ।
ಜನ್ಮೋಪವೀತದಾತುಶ್ಚ ನಾಜ್ಞಾಭಂಗಃ ಕೃತೋ ಮಯಾ ॥ ೫೬ ॥

ಶ್ವಶ್ರೂಶ್ವಶುರಯೋಸ್ಸೇವಾ ಭೃತ್ಯೇನೇವ ಕೃತಾ ಮಯಾ ।
ತವಾಪಿ ಶಾಸ್ತ್ರದಾತುಶ್ಚ ನಾಜ್ಞಾಭಂಗಃ ಕೃತೋ ಮಯಾ ॥ ೫೭ ॥

ಪುರೋಧಾ ಯಃ ಕುಲಾಚಾರ್ಯೋ ವೇದವೇದಾಂಗಪಾರಗಃ ।
ತಸ್ಯಾಪರಾಧಂ ಕಂಚಿನ್ಮೇ ತತ್ರ ತ್ವಂ ಶ್ರೋತುಮರ್ಹಸಿ ॥ ೫೮ ॥

ಯದ್ಯಸ್ಮಾಕಂ ಕುಲೇ ಪುತ್ರೋ ಜಾಯತೇ ಧರ್ಮಕೋವಿದ ।
ತದಾ ಪುರೋಧಸೇ ಧೇನುಮೇಕಾಂ ವಾ ತಸ್ಯ ದಕ್ಷಿಣಾಂ ॥ ೫೯ ॥

ದತ್ವಾ ಸಂಛಿದ್ಯತೇ ನಾಳಮಿತಿ ವಂಶಸ್ಯ ನಃ ಸ್ಥಿತಿಃ ।
ಪುರಾ ಮಮೈವ ಪುತ್ರೇ ತು ಜಾತಮಾತ್ರೇ ಶುಭೇಹನಿ ॥ ೬೦ ॥

---

೫೬. ಮುಕುಂದನು ಹೇಳಿದನು-ಜನ್ಮ ಕೊಟ್ಟ ತಂದೆ ಉಪನಯನ ಮಾಡಿದವನು ಹೆಣ್ಣು ಕೊಟ್ಟವನು ವೇದ ಹೇಳಿದವನು ಇವರುಗಳ ಆಜ್ಞೆಯನ್ನು ಮೀರಬಾರದು. ನಾನು ಆ ರೀತಿಯಾಗಿ ಆಜ್ಞಾ ಭಂಗವನ್ನು ಮಾಡಿಲ್ಲ.

೫೭. ಅತ್ತೆ ಮಾವಂದಿರ ಸೇವೆಯನ್ನು ಆಳಿನಂತೆ ಮಾಡಿದ್ದೇನೆ. ಶಾಸ್ತ್ರವನ್ನು ಹೇಳಿಕೊಟ್ಟ ನಿನ್ನ ಅಪ್ಪಣೆಯನ್ನೂ ನಾನು ಮೀರಿಲ್ಲ.

೫೮. ವೇದವೇದಾಂಗಗಳನ್ನು ಚೆನ್ನಾಗಿ ಬಲ್ಲ ಕುಲಾಚಾರ್ಯನಾದ ನನ್ನ ಪುರೋಹಿತನಿಗೆ ಒಂದು ತಪ್ಪನ್ನು ಮಾಡಿದ್ದೇನೆ. ಅದನ್ನು ನೀನು ಕೇಳು.

೫೯. ನಮ್ಮ ವಂಶದಲ್ಲಿ ಗಂಡು ಮಗುವು ಹುಟ್ಟಿದರೆ ಆಗ ಪುರೋಹಿತನಿಗೆ ಒಂದು ಹಸುವನ್ನು ಆಗಲಿ ಅದರ ದಕ್ಷಿಣೆಯನ್ನಾಗಲಿ ಕೊಡಬೇಕು.

೬೦-೬೧. ಆ ಗೋದಾನವನ್ನು ಕೊಟ್ಟನಂತರ ಮಗುವಿನ ನಾಳವನ್ನು ಕತ್ತರಿಸಬೇಕು. ಇದು ನಮ್ಮ ವಂಶದ ಆಚಾರವು. ಹಿಂದೆ ನನಗೆ ಮಗನು

ಕುಲಕ್ರಿಯಾ ಮಯಾ ತಾತ ನ ಕೃತಾ ಮೂಢಬುದ್ಧಿನಾ ।
ತಸ್ಮಾಚ್ಚ ಕಾರಣೇನೈವ ಗುರುಲೋಪಕರೋಭವಂ ॥ ೬೧ ॥

ನಿವೇದಿತಮಿದಂ ಸರ್ವಂ ಗುರುಲೋಪಾದ್ಯಥಾ ಮಮ ।
ಪಾಪಮಾಸೀದನುಜ್ಞಾಂ ಮೇ ದೇಹಿ ಯಾಮಿ ಸುರಾಲಯಂ ॥ ೬೨ ॥

॥ ವೇದಾಯನ ಉವಾಚ ॥

ಇಂದ್ರಪ್ರಸ್ಥಾನ್ತರಾವರ್ತಿನ್ಯೈಷಾ ಯಾ ಕೋಶಲಾ ಶುಭಾ ।
ಸ್ಮೃತಿರಸ್ಯಾಃ ಪ್ರಸಾದೇನ ದೃಶ್ಯತೇ ಪೂರ್ವಜನ್ಮನಃ ॥ ೬೩ ॥

ಕೇನ ಪುಣ್ಯೇನ ತೀರ್ಥೇಸ್ಮಿನ್ನಸ್ಥೀನಿ ಪತಿತಾನಿ ತೇ ।
ಮುಕುಂದಾಖ್ಯಾಹಿ ಚೇತ್ತಸ್ಯ ಸ್ಮೃತಿರಸ್ತಿ ತವಾನಘ ॥ ೬೪ ॥

---

ಹುಟ್ಟಿದಾಗ ಬುದ್ಧಿ ಕೆಟ್ಟದ್ದರಿಂದ ಅದನ್ನು ನಾನು ಮಾಡಲಿಲ್ಲ. ಆ ಕಾರಣದಿಂದ ನಾನು ಗುರುವಿನ ಸೇವೆಯ ಲೋಪವನ್ನು ಮಾಡಿದಂತೆ ಆಯಿತು.

೬೨. ಗುರುವಿಗೆ ಲೋಪ ಮಾಡಿದುದರಿಂದ ನನಗೆ ಬಂದ ಪಾಪವೆಲ್ಲವನ್ನೂ ನಿನಗೆ ಹೇಳಿದೆನು. ನನಗೆ ಅಪ್ಪಣೆಯನ್ನು ಕೊಡು. ಸ್ವರ್ಗಕ್ಕೆ ಹೋಗುತ್ತೇನೆ.

೬೩. ವೇದಾಯನನು ಹೇಳಿದನು– ಇಂದ್ರಪ್ರಸ್ಥದೊಳಗಿರುವ ಈ ಕೋಸಲ ತೀರ್ಥವು ಶುಭವಾದುದು. ಇದರ ಅನುಗ್ರಹದಿಂದ ನಿನಗೆ ಪೂರ್ವಜನ್ಮದ ಸ್ಮರಣೆಯುಂಟಾಯಿತು.

೬೪. ಎಲೈ ಮುಕುಂದನೇ ! ಯಾವ ಪುಣ್ಯ ವಿಶೇಷದಿಂದ ನಿನ್ನ ಅಸ್ಥಿಗಳು ಈ ತೀರ್ಥದಲ್ಲಿ ಬಿದ್ದುವು ? ಅದರ ಜ್ಞಾನವು ನಿನಗಿದ್ದರೆ ಆ ವಿಷಯವನ್ನು ನನಗೆ ಹೇಳು.

**॥ ಮುಕುಂದ ಉವಾಚ ॥**

**ಏಕಸ್ತು ಬ್ರಾಹ್ಮಣಃ ಕಶ್ಚಿತ್ಸಾಯಂ ಮದ್ಗೃಹಮಾಗತಃ ।**
**ತಸ್ಮೈ ಸ್ಥಾನಂ ಮಯಾ ದತ್ತಂ ಭೋಜನಂ ಚ ಯಥಾವಿಧಿ** ॥ ೬೫ ॥

**ಸೋಽಪಿ ಭುಕ್ತ್ವಾ ಯಥಾಕಾಮಂ ಸುಷ್ವಾಪ ಶಯನೇ ಶುಭೇ ।**
**ನಿಶೀಥೇ ತಸ್ಯ ಸರ್ವಾಂಗೇ ಜ್ವರೋಽಭೂದತಿದಾರುಣಃ** ॥ ೬೬ ॥

**ತೇನ ಪೀಡಿತಸರ್ವಾಂಗೋ ನಿದ್ರಾಂ ಲೇಭೇ ನ ಸ ದ್ವಿಜಃ ।**
**ಪ್ರಭಾತ ಏವ ತತ್ಯಾಜ ಪ್ರಾಣಾನ್ಮೃತ್ಯಾವುಪಸ್ಥಿತೇ** ॥ ೬೭ ॥

**ತಸ್ಯ ದಾಹಾದಿಕರ್ಮಾಣಿ ವಿಹಿತಾನಿ ಮಯಾ ಗುರೋ**
**ತದಸ್ಥೀನಿ ಚ ಗಂಗಾಯಾಂ ಪಾತಿತಾನಿ ವಿಧಾನತಃ** ॥ ೬೮ ॥

**ತೇನ ಪುಣ್ಯೇನ ಮೇಽಸ್ಥೀನಿ ಪತಿತಾನಿ ಶಿವಪ್ರದೇ ।**
**ತೀರ್ಥೇಽಸ್ಮಿನ್ಕೋಸಲಾನಾಮ್ನಿ ಬ್ರಹ್ಮದೇವವಿನಿರ್ಮಿತೇ** ॥ ೬೯ ॥

---

೬೫-೬೬. ಮುಕುಂದನು ಹೇಳಿದನು-ಒಬ್ಬ ಬ್ರಾಹ್ಮಣನು ಸಾಯಂಕಾಲದಲ್ಲಿ ನನ್ನ ಮನೆಗೆ ಬಂದನು. ಅವನಿಗೆ ಕ್ರಮವಾಗಿ ಭೋಜನವನ್ನು ಮಾಡಿಸಿದೆನು. ಅವನೂ ಸರಿಯಾಗಿ ಊಟಮಾಡಿ ರಾತ್ರಿಯಲ್ಲಿ ಹಾಸಿಗೆಯಲ್ಲಿ ಮಲಗಿಕೊಂಡನು. ಅರ್ಧರಾತ್ರಿಯಲ್ಲಿ ಅವನಿಗೆ ಬಹುವಾದ ಜ್ವರವು ಬಂದಿತು.

೬೭. ಆ ಜ್ವರದಿಂದ ತೊಂದರೆ ಪಡುತ್ತಿದ್ದುದರಿಂದ ಅವನಿಗೆ ನಿದ್ರೆಯೇ ಬರಲಿಲ್ಲ. ಬೆಳಗ್ಗೆ ಅವನಿಗೆ ಮೃತ್ಯುವು ಒದಗಲು ಪ್ರಾಣವನ್ನು ಬಿಟ್ಟುಬಿಟ್ಟನು.

೬೮-೬೯. ಎಲೈ ಗುರುವೇ! ಅವನ ದಹನವೇ ಮುಂತಾದ ಉತ್ತರಕ್ರಿಯೆಗಳನ್ನು ಮಾಡಿ ಅವನ ಮೂಳೆಯನ್ನು ಗಂಗೆಯ ತೀರ್ಥದಲ್ಲಿ ಶಾಸ್ತ್ರರೀತಿಯಿಂದ ಹಾಕಿದೆನು. ಆ ಪುಣ್ಯದಿಂದ ಈ ನನ್ನ ಅಸ್ಥಿಗಳು ಶುಭದಾಯಕವಾದ ಬ್ರಹ್ಮನು ನಿರ್ಮಿಸಿರುವ ಈ ಕೋಸಲ ತೀರ್ಥದಲ್ಲಿ ಬಿದ್ದುವು.

|| ನಾರದ ಉವಾಚ ||

ಸ್ವಚರಿತಮಿತಿ ರಾಜನ್ ಸ ದ್ವಿಜಃ ಪ್ರೋಚ್ಯ ಸದ್ಯಃ |
ಸುರಸುಭಗಶರೀರೋ ದ್ಯಾಂ ಯಯೌ ಯಾನಗತ್ವಾ ||
ಇದಮುಕಥಿ ಮಯಾ ತೇ ತಸ್ಕರಾತ್ಪ್ರಾಪ್ಯ ಮೃತ್ಯುಂ |
ವ್ಯಲಭತ ದಿವಮೇತತ್ತೀರ್ಥರಾಜಪ್ರಸಾದಾತ್ || ೭೦ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಮುಕುಂದೋಪಾಖ್ಯಾನಂ ನಾಮ ಷಡಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೦. ನಾರದನು ಹೇಳಿದನು-ಎಲೈ ರಾಜನೇ ! ಈ ರೀತಿಯಾಗಿ ಬ್ರಾಹ್ಮಣನು ತನ್ನ ಚರಿತ್ರೆಯನ್ನು ಹೇಳಿ ದೇವ ಶರೀರವನ್ನು ಹೊಂದಿ ಯಾನದಿಂದ ಸ್ವರ್ಗಕ್ಕೆ ಹೋದನು. ಆ ಮುಕುಂದನು ಕಳ್ಳನಿಂದ ಮರಣವನ್ನು ಹೊಂದಿ ಆ ತೀರ್ಥರಾಜನ ಅನುಗ್ರಹದಿಂದ ಸ್ವರ್ಗವನ್ನು ಹೊಂದಿದ ಕಥೆಯನ್ನು ಹೇಳಿದೆನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದಿಯ ಮಹಿಮೆಯಲ್ಲಿ ಮುಕುಂದೋಪಾಖ್ಯಾನ ಎಂಬ ಇನ್ನೂರ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತಾಧಿಕದ್ವಿಶತತಮೋಽಧ್ಯಾಯಃ ॥



**॥ ನಾರದ ಉವಾಚ ॥**

**ಶಿಬೇ ತವ ಪುರಸ್ಸರ್ವಂ ಮುಕುಂದಾಖ್ಯಾನಮುತ್ತಮಂ ।**
**ಕಥಿತಂ ಚಂಡಕಸ್ಯಾಪಿ ನಾಪಿತಸ್ಯ ಶ್ರುಣುಷ್ವ ಮೇ ॥ ೧ ॥**

**ಯಸ್ಮಿನ್ದಿನೇ ಮುಕುಂದಸ್ತು ಬ್ರಾಹ್ಮಣಸ್ತೇನ ಘಾತಿತಃ ।**
**ಚಂಡಕೇನ ತದಾ ರಾಜ್ಞ ತದ್ವೃತ್ತಂ ನಾಗರೈಶ್ಶ್ರುತಂ ॥**
**ಶ್ರುತ್ವಾ ತೈಸ್ತನ್ನೃಪಸ್ಯಾಗ್ರೇ ನಿವೇದಿತಮಿತಿ ಸ್ಫುಟಂ ॥ ೨ ॥**

---

### ಇನ್ನೂರ ಏಳನೆಯ ಅಧ್ಯಾಯವು



೧. ನಾರದನು ಹೇಳಿದನು–ಎಲೈ ಶಿಬಿಯೆ! ಮುಕುಂದನ ಕಥೆಯನ್ನು ನಿನಗೆ ಎಲ್ಲವನ್ನೂ ಹೇಳಿದ್ದೇನೆ. ಆ ನಾಪಿತನಾದ ಚಂಡಕನ ಕಥೆಯನ್ನು ಹೇಳುತ್ತೇನೆ. ಕೇಳು.

೨. ಮುಕುಂದನೆಂಬ ಬ್ರಾಹ್ಮಣನನ್ನು ಆ ಚಂಡಕನು ಕೊಂದ ದಿನವೇ ಆ ಸಮಾಚಾರವು ಪಟ್ಟಣಿಗರಿಗೆಲ್ಲಾ ಗೊತ್ತಾಯಿತು. ಅವರೆಲ್ಲರೂ ಹೋಗಿ ಆ ವಿಷಯವನ್ನು ರಾಜನಲ್ಲಿ ಹೇಳಿದರು.

॥ ನಾಗರಾ ಊಚುಃ ॥

ಚಂಡಕೇನ ಹತೋ ರಾಜನ್ ಮುಕುಂದೋ ಬ್ರಾಹ್ಮಣೋತ್ತಮಃ ।
ನೀತಂ ಚ ತದ್ಧನಂ ಭೂರಿ ಯದ್ಯುಕ್ತಂ ತದ್ವಿಧೀಯತಾಂ ॥
ತ್ವಮಸ್ಮಾಕಂ ಪ್ರಜಾನಾಂ ಹಿ ರಕ್ಷಕಃ ಶಾಸಕೋಽಸತಾಂ ॥ ೩ ॥

॥ ನಾರದ ಉವಾಚ ॥

ಇತ್ಯಾಕರ್ಣ್ಯ ಸ ಭೂಪಾಲೋ ಮಂತ್ರಿಣಂ ಪಾರ್ಶ್ವವರ್ತಿನಂ ।
ಉವಾಚ ಕೋಪರಕ್ತಾಕ್ಷಃ ಕಿಮೇಭಿಃ ಕಥ್ಯತೇ ಶೃಣು ॥ ೪ ॥

ಶೀಘ್ರಮಾನಯ ತಂ ಪಾಪಂ ನೋ ಚೇತ್ತ್ವಾಂ ಘಾತಯಾಮ್ಯಹಂ ।
ಉತ್ತಿಷ್ಠೋತ್ತಿಷ್ಠ ಪಾಪಿಷ್ಠ ಸಾಧೂನಾಂ ಶಂ ವಿಧೀಯತಾಂ ॥ ೫ ॥

ಪೀಡ್ಯತೇ ವಿಷಯೇ ಯಸ್ಯ ಪ್ರಜಾ ದಸ್ಯುಭಿರುಲ್ಬಣೈಃ ।
ಸ ನೃಪೋ ನರಕಂ ಯಾತಿ ತೇಭ್ಯಸ್ತಾಶ್ಚೇನ್ನ ರಕ್ಷತಿ ॥ ೬ ॥

---

೩. ಪಟ್ಟಣಿಗರು ಹೇಳಿದರು-ಎಲೈ ದೊರೆಯೇ ! ಚಂಡಕನು ಆ ಬ್ರಾಹ್ಮಣೋತ್ತಮನಾದ ಮುಕುಂದನನ್ನು ಕೊಂದನು. ಮತ್ತು ಅವನಲ್ಲಿದ್ದ ಬಹುವಾದ ಧನವನ್ನು ಕದ್ದುಕೊಂಡು ಹೋದನು. ನಿನ್ನ ಪ್ರಜೆಗಳಾದ ನಮಗೆ ನೀನೇ ರಕ್ಷಕನು ಮತ್ತು ದುಷ್ಟರನ್ನು ನೀನೇ ಶಿಕ್ಷಿಸತಕ್ಕವನು. ಇದನ್ನು ಹೇಳಿದ್ದೇವೆ. ನಿನ್ನ ಇಷ್ಟಬಂದಂತೆ ಮಾಡು.

೪ ನಾರದನು ಹೇಳಿದನು-ಇದನ್ನು ಕೇಳಿ ಆ ದೊರೆಯು ಹತ್ತಿರದಲ್ಲಿಯೇ ಇದ್ದ ಮಂತ್ರಿಯನ್ನು ನೋಡಿ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಇವರೇನು ಹೇಳುವರು ? ಕೇಳು ಎಂದನು.

೫. ಆ ಪಾಪಿಯನ್ನು ಬೇಗ ಹಿಡಿದುಕೊಂಡು ಬಾ. ಇಲ್ಲದಿದ್ದರೆ ನಿನ್ನನ್ನೇ ಕೊಂದುಹಾಕುತ್ತೇನೆ. ಎಲೈ ಪಾಪಿಷ್ಠನೇ ಏಳು. ಎದ್ದೇಳು. ಸಾಧುಗಳಿಗೆ ಅನುಕೂಲವನ್ನು ಮಾಡು.

೬. ಯಾವ ರಾಜನ ರಾಜ್ಯದಲ್ಲಿರುವ ಪ್ರಜೆಗಳು ದುಷ್ಟರಾದ ಕಳ್ಳರಿಂದ ತೊಂದರೆಪಡಿಸಲ್ಪಡುತ್ತಾರೆಯೋ ಆ ರಾಜನು ಆ ಕಳ್ಳರಿಂದ ಅವರನ್ನು ಕಾಪಾಡದಿದ್ದರೆ ನರಕಕ್ಕೆ ಹೋಗುತ್ತಾನೆ.

॥ ನಾರದ ಉವಾಚ ॥

ನಿಶಮ್ಯೇತಿ ವಚೋ ರಾಜ್ಞಃ ಸಚಿವಃ ಸ ಶಿಬೇ ನೃಪಃ ।
ವೇಗೇನ ಹಯಮಾರುಹ್ಯ ಪದಾತಿಶತಸಂಯುತಃ ॥
ಯಯೌ ಗೃಹೇ ಮುಕುಂದಸ್ಯ ತಸ್ಯ ಬಂಧೂನಪೃಚ್ಛತ ॥ ೭ ॥

॥ ಸಚಿವ ಉವಾಚ ॥

ಮುಕುಂದಃ ಕೇನ ನಿಹತಃ ಸತ್ಯಂ ಬ್ರೂತ ಮಮಾಗ್ರತಃ ।
ತಂ ಪಾಪಂ ನಿಹನಿಷ್ಯಾಮಿ ಶಾಸನಾದ್ಭೂಪತೇರಹಂ ॥ ೮ ॥

॥ ನಾರದ ಉವಾಚ ॥

ಶ್ರುತ್ವೇತಿ ಮಂತ್ರಿಣೋ ವಾಕ್ಯಂ ಪ್ರತ್ಯೂಚುರ್ವಿಪ್ರಬಾಂಧವಾಃ ॥ ೯ ॥

॥ ವಿಪ್ರಬಾಂಧವಾ ಊಚುಃ ॥

ಚಂಡಕೇನ ಹತೋ ಮಂತ್ರಿನ್ ಮುಕುಂದೋ ನಾಪಿತೇನ ಹಿ ।
ಇದಂ ಪಲಾಯಮಾನಸ್ಯ ತಸ್ಯೋಷ್ಣೀಷಂ ಪಪಾತ ವೈ ॥ ೧೦ ॥

---

೭. ನಾರದನು ಹೇಳಿದನು–ಆಗ ಆ ರಾಜನ ಮಾತನ್ನು ಮಂತ್ರಿಯು ಕೇಳಿ ಜಾಗ್ರತೆಯಾಗಿ ಕುದುರೆಯನ್ನು ಹತ್ತಿಕೊಂಡು ಕಾಲಾಳುಗಳನ್ನು ಜೊತೆಯಲ್ಲಿ ಕರೆದುಕೊಂಡು ಮುಕುಂದನ ಮನೆಗೆ ಹೋದನು. ಆಗ ಅವನ ಬಂಧುಗಳನ್ನು ಕುರಿತು ಇಂತೆಂದು ಕೇಳಿದನು.

೮. ಮಂತ್ರಿಯು ಹೇಳಿದನು–ಮುಕುಂದನನ್ನು ಕೊಂದವರಾರು ? ನನ್ನೆದುರಿಗೆ ಸತ್ಯವನ್ನು ಹೇಳಿರಿ. ರಾಜನು ಅಪ್ಪಣೆ ಮಾಡಿದ್ದಾನೆ. ಅವನ ಮಾತಿನಂತೆ ಆ ಕಳ್ಳನನ್ನು ಕೊಲ್ಲುತ್ತೇನೆ.

೯. ನಾರದನು ಹೇಳಿದನು–ಮಂತ್ರಿಯ ಈ ಮಾತನ್ನು ಕೇಳಿ ಆ ಬ್ರಾಹ್ಮಣರೂ ಬಂಧುಗಳೂ ಇಂತೆಂದು ಹೇಳಿದರು.

೧೦. ಆ ಬ್ರಾಹ್ಮಣನ ಬಂಧುಗಳು ಹೇಳಿದರು–ಎಲೈ ಮಂತ್ರಿಯೇ ! ಚಂಡಕನೆಂಬ ನಾಪಿತನು ಮುಕುಂದನನ್ನು ಕೊಂದಿರುವನು. ಅವನು ಮನೆಯಿಂದ ಓಡಿಹೋಗುತ್ತಿರುವಾಗ ಅವನ ತಲೆಯ ರುಮಾಲು ಬಿದ್ದು ಹೋಯಿತು. ಇದೋ ಇಲ್ಲಿದೆ ನೋಡು

ದೃಷ್ಟಃ ಸ್ವಚಕ್ಷುಷಾ ವಧ್ವಾ ಮುಕುಂದಸ್ಯೈವ ಸೋಘಕೃತ್ ।
ಕಿಂ ಕುರ್ಮಸ್ತೇನ ಪಾಪೇನ ಮಜ್ಜಿತಾಃ ಶೋಕಸಾಗರೇ ॥ ೧೧ ॥

॥ ನಾರದ ಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಬಂಧೂನಾಂ ಬ್ರಾಹ್ಮಣಸ್ಯ ಹಿ ।
ಸ ಮಂತ್ರೀ ತಸ್ಯ ಪಾಪಸ್ಯ ನಾಪಿತಸ್ಯ ಗೃಹಂ ಯಯೌ ॥ ೧೨ ॥

ಅಶ್ವಾದುತ್ತೀರ್ಯ ತರಸಾ ತದ್ಗೃಹಂ ಸ್ವಯಮಾವಿಶತ್ ।
ಕತಿಭಿಃ ಪತ್ತಿಭಿಸ್ಸಾರ್ಧಂ ಶಯಾನಂ ಚ ದದರ್ಶ ಹ ॥ ೧೩ ॥

ಪತ್ತಯಸ್ತು ತದಾಜ್ಞಪ್ತಾಃ ಕೇಶೇಷ್ವಾಕೃಷ್ಯ ತತ್ಕ್ಷಣಾತ್ ।
ತಲ್ಪಾದುತ್ಥಾಪಯಾಮಾಸುಸ್ತಂ ಪಾಪಂ ನಾಪಿತಾಧಮಂ ॥ ೧೪ ॥

ಕಿಂ ಕಿಮಿತ್ಯೇವ ಸಂಜಲ್ಪ್ಯ ನೇತ್ರೇ ಉನ್ಮೀಲಯತ್ಯಸೌ ।
ಯಾವತ್ಸನಾಪಿತಃ ಪಾಪಃ ತಾವತ್ತಂ ದದೃಶೇ ಪುರಃ ॥ ೧೫ ॥

---

೧೧. ಮುಕುಂದನನ್ನು ಕೊಲ್ಲುತ್ತಿರುವಾಗ ಆ ಮುಕುಂದನ ಹೆಂಡತಿಯು ತನ್ನ ಕಣ್ಣಿನಿಂದಲೇ ನೋಡಿದಳು. ಏನುಮಾಡೋಣ ! ಆ ಪಾಪಿಯು ನಮ್ಮೆಲ್ಲರನ್ನೂ ದುಃಖಸಾಗರದಲ್ಲಿ ಮುಳುಗಿಸಿದನು.

೧೨. ನಾರದನು ಹೇಳಿದನು–ಮಂತ್ರಿಯು ಆ ಬ್ರಾಹ್ಮಣನ ಬಂಧುಗಳ ಈ ಮಾತುಗಳನ್ನು ಕೇಳಿ ಆ ನಾಪಿತನ ಮನೆಗೆ ಹೋದನು.

೧೩. ಅಲ್ಲಿ ಕುದುರೆಯಿಂದ ಇಳಿದು ಒಡನೆಯೇ ಅವನ ಮನೆಯ ಒಳಗೆ ಹೋದನು. ಜೊತೆಯಲ್ಲಿ ಕೆಲವರು ಆಳುಗಳೂ ಹೋದರು. ಒಳಗೆ ಆ ಚಂಡಕನು ಮಲಗಿರುವುದನ್ನು ಕಂಡನು.

೧೪. ಅವನ ಅಪ್ಪಣೆಯಂತೆ ಆಳುಗಳು ಆ ಚಂಡಕನ ಜುಟ್ಟನ್ನು ಹಿಡಿದೆಳೆದು ಒಡನೆಯೇ ಎಬ್ಬಿಸಿದರು. ಅವನು ಒಡನೆಯೇ ಎದ್ದನು.

೧೫. ಏನು ? ಏನು ? ಎಂಬುದಾಗಿ ಹೇಳುತ್ತಾ ಕಣ್ಣುಗಳನ್ನು ತೆರೆಯುತ್ತಲು ಎದುರಿಗೆ ಮಂತ್ರಿಯಿರುವುದನ್ನು ಕಂಡನು.

ಸಂಸ್ಮರಂಸ್ತನ್ನಿಜಂ ಕರ್ಮ ರಾತ್ರೌ ಯತ್ಕೃತವಾನಘಂ ।
ಅಧೋಮುಖಃ ಕ್ಷಣಂ ತಸ್ಥೌ ಪಶ್ಯನ್ ಮೂರ್ಧ್ನಿ ಸ್ಥಿತಂ ಯಮಂ ॥ ೧೬ ॥

ಗ್ರಾಹಯಿತ್ವಾ ಚ ಸಚಿವಃ ತಂ ಪಾಪಂ ಚ ಸ್ವಪತ್ತಿಭಿಃ ।
ನಿನಾಯ ನೃಪತೇಃ ಪಾರ್ಶ್ವಮಿತಿ ಪ್ರೋವಾಚ ಭೂಪತಿಂ ॥ ೧೭ ॥

॥ ಸಚಿವ ಉವಾಚ ॥

ಆನೀತೋ ಬ್ರಹ್ಮಹಾ ರಾಜನ್ ಅಯಂ ಚಂಡಕನಾಪಿತಃ ।
ಯದಾಜ್ಞಾಪಯಸಿ ಸ್ವಾಮಿನ್ ತರಸಾ ತತ್ಕರೋಮ್ಯಹಂ ॥ ೧೮ ॥

॥ ರಾಜೋವಾಚ ॥

ಧರ್ಮಜ್ಞ ಸಚಿವಶ್ರೇಷ್ಠ ಶ್ರುಣು ತ್ವಂ ವಚನಂ ಮಮ ।
ಇಯಂ ಸರಿದ್ವರಾಯುಷ್ಮನ್ ಚಂದ್ರಭಾಗಾ ಚ ನಿರ್ಮಲಾ ॥ ೧೯ ॥

ತ್ಯಜಂತಿ ಯೇತ್ರ ವೈ ಪ್ರಾಣಾನ್ ಲಭಂತೇ ತೇ ಸುರಾಸ್ಪದಂ ।
ಅತ ಏಷ ನ ಹಂತವ್ಯಃ ಪಾಪಾತ್ಮಾ ಯತ್ರ ನಾಪಿತಃ ॥ ೨೦ ॥

---

೧೬. ಆಗ ತಾನು ರಾತ್ರಿಯಲ್ಲಿ ಮಾಡಿದ ಆ ಕೆಟ್ಟಕೆಲಸವನ್ನು ಜ್ಞಾಪಿಸಿಕೊಳ್ಳುತ್ತಿದ್ದನು. ತಲೆಯಮೇಲೆ ಯಮನು ಬಂದು ಕುಳಿತಿರುವುದಾಗಿ ತಿಳಿದುಕೊಂಡು ತಲೆಯನ್ನು ಬಗ್ಗಿಸಿಕೊಂಡು ಕ್ಷಣಕಾಲ ಯೋಚಿಸುತ್ತಾ ನಿಂತಿದ್ದನು.

೧೭. ಆಗ ಮಂತ್ರಿಯು ಆ ಪಾಪಿಯನ್ನು ಸೇವಕರಿಂದ ಹಿಡಿಸಿಕೊಂಡು ರಾಜನ ಬಳಿಗೆ ಕರೆದುಕೊಂಡು ಹೋಗಿ ರಾಜನನ್ನು ಕುರಿತು ಇಂತೆಂದು ಹೇಳಿದನು.

೧೮. ಮಂತ್ರಿಯು ಹೇಳಿದನು-ಎಲೈ ರಾಜನೇ! ಆ ಬ್ರಾಹ್ಮಣನನ್ನು ಕೊಂದ ನಾಪಿತನನ್ನು ಹಿಡಿದು ತಂದಿದ್ದೇನೆ. ನೀನು ಯಾವರೀತಿಯಾಗಿ ಅಪ್ಪಣೆ ಮಾಡಿದರೆ ಹಾಗೆ ನಡೆಸುತ್ತೇನೆ.

೧೯-೨೧. ರಾಜನು ಹೇಳಿದನು-ನ್ಯಾಯವನ್ನು ತಿಳಿದಿರುವ ಮಂತ್ರಿ ಶ್ರೇಷ್ಠನೇ! ನಾನು ಹೇಳುವುದನ್ನು ಕೇಳು. ಈ ನಮ್ಮ ಪಟ್ಟಣದ ಬಳಿ ಇರುವ ಚಂದ್ರಭಾಗಾನದಿಯು ಉತ್ತಮವಾದುದು. ಪವಿತ್ರವಾದುದು. ಇದರಲ್ಲಿ ಪ್ರಾಣಬಿಟ್ಟವರು ಸ್ವರ್ಗವನ್ನು ಹೊಂದುತ್ತಾರೆ. ಆದ್ದರಿಂದ ಪಾಪಿಯಾದ

ಪಂಚಕ್ರೋಶಾನ್ತರೇ ಹ್ಯಸ್ಯಾ ಮರ್ಯಾದಾಯಾ ಬಹಿರ್ಜಹಿ ।
ನರಕಾನ್ದಾರಣಾರ್ಹ್ಯೇಷಃ ಬ್ರಹ್ಮಹಾ ಯಾತು ಮಾಚಿರಂ ॥ ೨೧ ॥

॥ ನಾರದ ಉವಾಚ ॥

ಇತ್ಯುಕ್ತಸ್ತೇನ ವೈ ರಾಜ್ಞಾ ಸ ರಾಜ್ಞ ಮಂತ್ರಿಸತ್ತಮಃ ।
ಶ್ವಪಚಾನ್ ಪ್ರೇರಯಾಮಾಸ ಹಂತುಂ ತಂ ಭೂಪಶಾಸನಾತ್ ॥ ೨೨ ॥

ಶ್ವಪಚಾಸ್ತೇ ತಮುನ್ನೀಯ ಚಂದ್ರಭಾಗಾಪರೇ ತಟೇ ।
ಯೋಜನದ್ವಯಭೂಭಾಗಂ ಚಿಚ್ಛಿದುಸ್ತಸ್ಯ ಮಸ್ತಕಂ ॥ ೨೩ ॥

ಸ ಪಾಪೋ ಮಾರವೇ ದೇಶೇ ಸರ್ಪೋಽಭೂತ್ಕಾಲವಿಗ್ರಹಃ ।
ಧವಕೋಟರಮಧ್ಯಸ್ಥೋ ವಿಷಜ್ವಾಲಾಕರಾನನಃ ॥ ೨೪ ॥

---

ನಾಪಿತನನ್ನು ಇಲ್ಲಿ ಕೊಲ್ಲಬೇಡ. ಇವನನ್ನು ಐದು ಕೋಶಗಳ ದೂರಕ್ಕೆ ಕರೆದುಕೊಂಡು ಹೋಗು. ಅಲ್ಲಿ ಕೊಂದರೆ ಇವನು ನರಕಭಾಗಿಯಾಗುವನು. ಈ ಪಾಪಿಯು ಬಹುಕಾಲ ನರಕವನ್ನು ಅನುಭವಿಸಲಿ. ಸಾವಕಾಶ ಮಾಡದೆ ಕೊಂದುಹಾಕು.

೨೨. ನಾರದನು ಹೇಳಿದನು–ಆ ರಾಜನು ಹೀಗೆ ಅಪ್ಪಣೆಮಾಡುತ್ತಲೂ ಮಂತ್ರಿಯು ಕಟುಕರನ್ನು ಕರೆದು ಆ ನಾಪಿತನನ್ನು ಕೊಲ್ಲುವಂತೆ ಅಪ್ಪಣೆಮಾಡಿದನು.

೨೩. ಆ ಕಟುಕರು ಅವನನ್ನು ಕರೆದುಕೊಂಡು ಎರಡು ಯೋಜನಗಳ ದೂರಕ್ಕೆ ಹೋಗಿ ಅಲ್ಲಿ ಚಂದ್ರಭಾಗೆಯ ಆ ಕಡೆಯ ದಡದಲ್ಲಿ ಅವನ ತಲೆಯನ್ನು ಕತ್ತರಿಸಿ ಹಾಕಿದರು.

೨೪. ಸತ್ತಮೇಲೆ ಆ ಪಾಪಿಯು ಒಂದು ಮರುಪ್ರದೇಶದಲ್ಲಿ ಕೃಷ್ಣ ಸರ್ಪವಾಗಿ ಹುಟ್ಟಿದನು. ವಿಷದ ಜ್ವಾಲೆಯಿಂದ ಕೂಡಿದ ಮುಖವುಳ್ಳವನಾಗಿ ಒಂದು ಆಲದಮರದ ಪೊಟ್ಟರೆಯಲ್ಲಿ ಸೇರಿಕೊಂಡನು

ಸ ಶುಷ್ಕೋಃ ಧವವೃಕ್ಷಸ್ತು ತಸ್ಯ ಫೂತ್ಕಾರವಹ್ನಿನಾ ।
ತಥಾ ತಪನತಾಪೇನ ಸರಸೋಽಪಿ ಯಥಾಹ್ರದಃ ॥ ೨೫ ॥

ಗಮನಾತ್ತಸ್ಯ ಪಾಪಸ್ಯ ಸರ್ವತೋಃ ವಿಷಮೂಷರಂ ।
ಉಚ್ಛಿದ್ಯ ತೃಣಜಾತಾದಿ ಜಾತಂ ಪಶ್ಯಹಿತಂ ತದಾ ॥ ೨೬ ॥

ತತ್ರ ಜಾತು ಸಮಾಯಾತಃ ಸಾರ್ಥೋಃ ದಕ್ಷಿಣದೇಶತಃ ।
ನಾರಾಯಣಾಶ್ರಮಂ ಗಚ್ಛನ್ ಬದರ್ಯಾಖ್ಯಂ ಶಿಬೇ ನೃಪ ॥ ೨೭ ॥

ತತ್ರೈಕೋಃ ಬ್ರಾಹ್ಮಣಃ ಕಶ್ಚಿತ್ ಸಾರ್ಥೇಃ ಸಮ್ಮೀಲಿತಃ ಪಥಿ ।
ನಿಶ್ಛಿದ್ರಾಂ ಕಾಷ್ಠಮಂಜೂಷಾಂ ಪಿತೃಮಾತ್ರಸ್ಥಿಸಂಯುತಾಂ ॥ ೨೮ ॥

ಸ್ಕಂಧೇನ ಧಾರಯನ್ಯಾತಿ ತಾನಿ ಪಾತಯಿತುಂ ನೃಪ ।
ಗಂಗಾಂಭಸಿ ಮಹಾಭಾಗ ಪಾಪಿನಾಮಪಿ ಕಾಮದೇ ॥ ೨೯ ॥

---

೨೫. ಬಿಸಿಲಿನ ಬೇಗೆಯಿಂದ ನೀರಿರುವ ಮಡುವು ಹೇಗೆ ಬತ್ತಿಹೋಗು ವುದೋಃ ಹಾಗೆ ಈ ಹಾವಿನ ವಿಷದ ಫೂತ್ಕಾರದಿಂದ ಆ ಮರವು ಒಣಗಿ ಹೋಯಿತು.

೨೬. ಆ ಪಾಪಿಯಾದ ಹಾವು ಅಲ್ಲೆಲ್ಲವೂ ಸಂಚರಿಸುತ್ತಿದ್ದುದರಿಂದ ಆ ಮರುಪ್ರದೇಶವೆಲ್ಲವೂ ವಿಷದಿಂದ ಕೂಡಿಕೊಂಡಿತು. ಅಲ್ಲಿದ್ದ ಹುಲ್ಲು ಮುಂತಾದು ಕೂಡ ವಿಷದಿಂದ ತುಂಬಿಕೊಂಡು ಪಶುಗಳಿಗೆ ಕೆಟ್ಟವುಗಳಾಗಿ ಪರಿಣಮಿಸಿದುವು.

೨೭. ಎಲೈ ಶಿಬಿಯೇ! ಅಲ್ಲಿಗೆ ಒಂದುಸಾರಿ ಒಂದು ದಕ್ಷಿಣದೇಶದ ಪ್ರಯಾಣಿಕರಗುಂಪು ನಾರಾಯಣಾಶ್ರಮವಾದ ಬದರಿಗೆ ಹೋಗಲು ಬಂದಿತು.

೨೮. ಅದರಲ್ಲಿ ಒಬ್ಬ ಬ್ರಾಹ್ಮಣನು ತಾಯಿತಂದೆಗಳ ಮೂಳೆಯನ್ನು ತುಂಬಿದ್ದ ಒಂದು ಸಂದಿಲ್ಲದಿರುವ ಪೆಟ್ಟಿಗೆಯನ್ನು ತೆಗೆದುಕೊಂಡು ಒಂದು ದಾರಿಯಲ್ಲಿ ಅವರ ಜೊತೆಗೆ ಸೇರಿದನು.

೨೯. ಪಾಪಿಗಳಿಗೂ ಇಷ್ಟವಾದುದನ್ನು ಕೊಡುವ ಗಂಗಾನದಿಯ ನೀರಿನಲ್ಲಿ ಅದನ್ನು ಹಾಕಬೇಕೆಂದು ಹೆಗಲಿನ ಮೇಲೆ ಹೊತ್ತುಕೊಂಡು ಹೋಗುತ್ತಲಿದ್ದನು.

ಸೋಽಪ್ಯಾಗತಸ್ತತ್ರ ವನೇ ಯತ್ರಾಸ್ತೇ ಸ ಭುಜಂಗಮಃ ।
ವಿವಿಕ್ತೇ ಕ್ಷಿಪ್ಯ ಮಂಜೂಷಾಂ ಶಲಾಕಾಲೋಹನಿರ್ಮಿತಾಂ ॥ ೩೦ ॥

ಅಥಾಗತ್ಯ ಭುಜಂಗೋಽಸೌ ಶಲಾಕಾಂ ಫಣಯಾಘಟಿತ್ ।
ಕಿಂಚಿದುದ್ಘಾಟಿತಾಯಾಂ ಸ ಮಂಜೂಷಾಯಾಂ ಸಮಾವಿಶತ್ ॥ ೩೧ ॥

ಪುನಶ್ಶಲಾಕಾ ಸ್ವಂ ಸ್ಥಾನಮಾಗತಾಥ ಸ ಕುಂಡಲೀ ।
ತತ್ರೈವ ತಸ್ಥೌ ನಿಶ್ಚೇಷ್ಟೋ ಮಂಜೂಷಾಯಾಂ ವಿಷೋಲ್ಬಣಃ ॥ ೩೨ ॥

ಅಥ ಪ್ರಭಾತೇ ಸರ್ವೇ ತೇ ಚೇಲುಃ ಸ್ಥಾನಾತ್ತತೋ ನೃಪ ।
ಬ್ರಾಹ್ಮಣಸ್ಸೋಽಪಿ ಮಂಜೂಷಾಂ ಕಂಬಲೇನ ಸಮಾವೃತಾಂ ॥ ೩೩ ॥

ಕೃತ್ವಾ ಶಿರಸಿ ರಾಜೇಂದ್ರ ಚಚಾಲ ಪ್ರತಿ ಜಾಹ್ನವೀಂ ।
ಕತಿಭಿರ್ವಾಸರೈಃ ಸಾರ್ಥಃ ಸಂಪ್ರಾಪ್ತಸ್ತೀರ್ಥಗಾಮಿನಾಂ ॥ ೩೪ ॥

---

೩೦. ಅವನು ಆ ಕಾಡಿಗೆ ಬಂದು ಆ ಕ್ರೂರವಾದ ಹಾವಿರುವಲ್ಲಿಯೇ ಒಂದು ಮರೆಯಾದ ಜಾಗದಲ್ಲಿ ಸಲಾಕಿಗಳನ್ನು ಸೇರಿಸಿ ಮಾಡಿದ್ದ ಆ ಪೆಟ್ಟಿಗೆಯನ್ನು ಇಟ್ಟನು.

೩೧. ಆಗ ಆ ಹಾವು ಬಂದು ಆ ಬುಟ್ಟಿಯನ್ನು ನೋಡಿ ಹೆಡೆಯಿಂದ ಒಂದೇಟು ಹೊಡೆಯಿತು. ಅದು ಸ್ವಲ್ಪಜಾಗವನ್ನು ಬಿಡಲು ಅದರೊಳಕ್ಕೆ ನುಗ್ಗಿತು.

೩೨. ಅನಂತರ ಆ ಜಾಗಬಿಟ್ಟಿದ್ದ ಸಲಾಕಿಯು ಸರಿಯಾಗಿ ಜಾಗಬಿಡ ದಂತೆ ಸೇರಿಕೊಂಡಿತು. ಆ ವಿಷದಿಂದ ಕೂಡಿದ ಹಾವು ಆ ಬುಟ್ಟಿಯಲ್ಲಿಯೇ ಸೇರಿಕೊಂಡಿತು.

೩೩-೩೪. ಬೆಳಗಾಗುತ್ತಲೂ ಅಲ್ಲಿಂದ ಅವರೆಲ್ಲರೂ ಹೊರಟರು. ಆ ಬ್ರಾಹ್ಮಣನು ಕಂಬಳಿಯಿಂದ ಆ ಬುಟ್ಟಿಯನ್ನು ಸುತ್ತಿ ಕಟ್ಟಿಕೊಂಡು ತಲೆಯ ಮೇಲಿಟ್ಟುಕೊಂಡು ಗಂಗೆಗೆ ಹೊರಟನು. ಕೆಲವು ದಿನಗಳಮೇಲೆ ಆ ಯಾತ್ರಿಕರು ಕೋಸಲೆಯ ಬಳಿಗೆ ಬಂದರು.

**ಇಹೈವ ಕೋಶಲಾಯಾಂ ವೈ ಪುನೀತಾಯಾಂ ಮಹೀಪತೇ ।**
**ಅಥ ಶೀತಾತುರೋ ವಿಪ್ರಃ ಕಂಬಳಂ ಚೋದಘಾಟಯತ್ ॥ ೩೫ ॥**

**ಮಂಜೂಷಾವರಣಂ ರಾಜನ್ ತತ್ರಾಯೋಧ್ಯಾತಟೇ ಶುಭೇ ।**
**ಸೋಽಪಿ ಸರ್ಪೋ ನಿರಾಹಾರೋಽಲಬ್ಧ್ವಾ ಮಾರುತಭೋಜನಂ ॥ ೩೬ ॥**

**ನಿಶ್ಚಕ್ರಾಮ ಬಹಿಸ್ತಸ್ಯಾ ಉತ್ಕ್ಷಿಪ್ಯ ಸುಶಲಾಕಕಾಂ ।**
**ತಂ ನಿಸ್ಸೃತಂ ಸಮಾಲೋಕ್ಯ ಸರ್ಪಃ ಸರ್ಪ ಇತಿ ಕ್ರುಧಾ ॥ ೩೭ ॥**

**ವ್ಯಾಹರನ್ತೋ ಜನಾಸ್ಸರ್ವೇ ಲೋಷ್ಟಹಸ್ತಾ ಸಮಭ್ಯಯುಃ ।**
**ಯಾವತ್ಪಲಾಯತೇ ಸರ್ಪಃ ತಾವದೇಕೇನ ಘಾತಿತಃ ॥ ೩೮ ॥**

**ತತ್ಯಾಜ ಸ ತದಾ ಪ್ರಾಣಾನ್ ಪಶ್ಯತಾಂ ತೀರ್ಥಗಾಮಿನಾಂ ।**
**ತ್ಯಕ್ತ್ವಾ ಭುಜಂಗದೇಹಂ ಸ ದೇವತ್ವಂ ಪ್ರಾಪ ದುರ್ಲಭಂ ॥**
**ದಿವ್ಯಂ ವಿಮಾನಮಾರುಹ್ಯ ಪ್ರೋವಾಚೇದಂ ಜನಾನಿಹ ॥ ೩೯ ॥**

---

೩೫. ಈ ಕೋಶಲೆಯಲ್ಲಿಯೇ ಆ ಬ್ರಾಹ್ಮಣನು ಶೀತದಿಂದ ತೊಂದರೆ ಪಡುತ್ತ ಆ ಬುಟ್ಟಿಗೆ ಸುತ್ತಿದ್ದ ಕಂಬಳಿಯನ್ನು ಬಿಚ್ಚಿದನು.

೩೬. ಆ ಅಯೋಧ್ಯೆಯಲ್ಲಿ ಆ ಬುಟ್ಟಿಯ ಮೇಲಿನ ಮುಚ್ಚಳವನ್ನು ತೆಗೆದನು. ಅದರೊಳಗಿದ್ದ ಆ ಸರ್ಪವು ಗಾಳಿಯನ್ನು ಕೂಡ ಕುಡಿಯದೆ ಇದ್ದಿತು.

೩೭-೩೮. ಆ ಕಟ್ಟನ್ನು ಬಿಚ್ಚುತ್ತಲೂ ಒಡನೆಯೇ ಆ ಸರ್ಪವು ಆ ಮುಚ್ಚಳದ ಸಲಾಕೆಗಳನ್ನು ಅಗಲಮಾಡಿಕೊಂಡು ಹೊರಗೆ ಹೊರಟಿತು. ಅದು ಹೊರಟುದುದನ್ನು ನೋಡಿ ಜನಗಳು ಹಾವು ಹಾವು ಎಂಬುದಾಗಿ ಹೇಳುತ್ತಾ ಕಲ್ಲು ಮಣ್ಣು ಹೆಂಟೆಗಳನ್ನು ತೆಗೆದುಕೊಂಡು ಹೊಡೆಯಲು ಬಂದರು. ಆ ಹಾವು ತಪ್ಪಿಸಿಕೊಂಡು ಹೋಗುವರಷ್ಟರಲ್ಲಿಯೇ ಯಾವನೋ ಒಬ್ಬನು ಅದನ್ನು ಕೊಂದುಬಿಟ್ಟನು.

೩೯. ಆಗ ಆ ಹಾವು ತೀರ್ಥಯಾತ್ರಿಕರು ನೋಡುತ್ತಿರುವಂತೆಯೇ ಪ್ರಾಣವನ್ನು ಬಿಟ್ಟು ಬಿಟ್ಟಿತು. ಹಾವಿನ ದೇಹವನ್ನು ಬಿಟ್ಟಕೂಡಲೇ ಅದು ಹೊಂದಲು ಅಸಾಧ್ಯವಾದ ದೇವತೆಗಳ ಶರೀರವನ್ನು ಹೊಂದಿತು. ಮತ್ತೂ ಆಗಲೇ ಬಂದಿದ್ದ ಉತ್ತಮವಾದ ವಿಮಾನವನ್ನು ಹತ್ತಿ ಅಲ್ಲಿರುವ ಜನಗಳನ್ನು ಕುರಿತು ಇಂತೆಂದಿತು.

|| ಸರ್ಪ ಉವಾಚ ||

ಭೋ ದಾಕ್ಷಿಣಾತ್ಯಾಃ ಶೃಣುತ ಬ್ರಾಹ್ಮಣಾ ವಚನಂ ಮಮ |
ಪುರಾ ಚಂಡಕನಾಮಾಹಂ ನಾಪಿತೋ ಬ್ರಹ್ಮಹಾಧಮಃ || ೪೦ ||

ಬ್ರಹ್ಮಹತ್ಯಾಪ್ರದೋಷೇಣ ಸರ್ಪ ಆಸಂ ಮರುಸ್ಥಲೇ |
ಭುಕ್ತ್ವಾ ನರಕದುಃಖಾನಿ ವರ್ಷಾಣಾಂ ಲಕ್ಷಪಂಚಕಂ || ೪೧ ||

ಅತೀತಂ ಸರ್ಪಯೋನೌ ಮೇ ವರ್ಷಾಣಾಮಯುತದ್ವಯಂ |
ತೀರ್ಥಸ್ಯಾಸ್ಯ ಪ್ರಸಾದೇನ ಪ್ರಾಪ್ತಂ ದೇವತ್ವಮುತ್ತಮಂ || ೪೨ ||

ತಸ್ಮಾದಿದಂ ನ ವೈ ತ್ಯಾಜ್ಯಂ ತೀರ್ಥಂ ವೈ ಕೋಶಲಾಭಿದಂ |
ಸರ್ವಾರ್ಥದಂ ಯತೋ ನಾಕಃ ಪ್ರಾಪ್ತಃ ಪಾಪೀಯಸಾ ಮಯಾ || ೪೩ ||

---

೪೦. ಹಾವು ಹೇಳಿತು-ಎಲೈ ದಕ್ಷಿಣ ದೇಶದವರಾದ ಬ್ರಾಹ್ಮಣರೇ! ಕೇಳಿರಿ ಪೂರ್ವದಲ್ಲಿ ನಾನು ಚಂಡಕನೆಂಬ ಹೆಸರುಳ್ಳ ಬ್ರಹ್ಮಹತ್ಯೆಯನ್ನು ಮಾಡಿದ ಅಧಮನಾದ ನಾಪಿತನು. ಆ ಬ್ರಹ್ಮಹತ್ಯೆಯ ದೋಷದಿಂದ ಮರುಭೂಮಿಯಲ್ಲಿ ಹಾವಾಗಿ ಹುಟ್ಟಿದೆನು.

೪೧-೪೨. ಅನಂತರ ಐದು ಲಕ್ಷ ವರ್ಷಗಳವರೆಗೂ ನರಕ ದುಃಖವನ್ನು ಅನುಭವಿಸಿ ಅನಂತರ ಮರುಭೂಮಿಯಲ್ಲಿ ಹಾವಾಗಿ ಹುಟ್ಟಿದೆನು. ಆ ಜನ್ಮದಲ್ಲಿಯೂ ಇಪ್ಪತ್ತು ಸಾವಿರ ವರ್ಷಗಳನ್ನು ಕಳೆದೆನು. ಈ ತೀರ್ಥದ ಅನುಗ್ರಹದಿಂದ ಉತ್ತಮವಾದ ದೇವತೆಯ ಸ್ಥಿತಿಯನ್ನು ಹೊಂದಿದೆನು.

೪೩. ಆದ್ದರಿಂದ ಈ ಕೋಶಲವೆಂಬ ಹೆಸರುಳ್ಳ ತೀರ್ಥವನ್ನು ಬಿಡಬಾರದು ಇದು ಎಲ್ಲಾ ಇಷ್ಟಾರ್ಥವನ್ನೂ ಸಹ ಕೊಡುತ್ತದೆ. ಪಾಪಿಯಾದ ನಾನೂ ಕೂಡ ಸ್ವರ್ಗವನ್ನು ಹೊಂದಿದ್ದೇನೆ.

॥ ನಾರದ ಉವಾಚ ॥

ಏವಂ ಸ ನಾಪಿತಃ ಪಾಪ್ರೋ ಯೋನಿಂ ಪ್ರಾಪ್ಯಾಪಿ ನಿಂದಿತಾಂ ।
ಜಗಾಮ ದ್ಯಾಂ ವಿಮಾನಸ್ಥಃ ತೀರ್ಥಸ್ಯಾಸ್ಯ ಪ್ರಸಾದತಃ ॥ ೪೪ ॥

ತೇ ದಾಕ್ಷಿಣಾತ್ಯಾ ಯತಯೋ ಭೂತ್ವಾ ತತ್ರೈವ ತೀರ್ಥಕೇ ।
ಊಷುರ್ಗೋವಿಂದಪಾದಾಬ್ಜಮಾನಸಾ ದೃಷ್ಟವೈಭವೇ ॥ ೪೫ ॥

ಮಾಹಾತ್ಮ್ಯಮಸ್ಯ ತೀರ್ಥಸ್ಯ ದೃಷ್ಟ್ವಾ ಸ ಬ್ರಾಹ್ಮಣೋತ್ತಮಃ ।
ತೀರ್ಥೇತ್ರ ಜಾತವಿಶ್ರದ್ಧಃ ಪಿತ್ರೋರಸ್ಥೀನಿ ಸೋಕ್ಷಿಪತ್ ॥ ೪೬ ॥

ಪತಿತೇಷ್ವಸ್ಥಿಖಂಡೇಷು ಪಿತರೌ ತಸ್ಯ ತತ್ಕ್ಷಣಾತ್ ।
ವಿಮಾನವರಮಾರೂಢೌ ದಿವ್ಯೌ ತತ್ರ ಸಮಾಗತೌ ॥ ೪೭ ॥

ಊಚತುಶ್ಚ ಸ್ವತನಯಂ ಶೃಣ್ವಾನೇಷು ಜನೇಷು ವೈ ।
ವತ್ಸ ಜೀವ ಚಿರಂ ಲೋಕೇ ಧನಧಾನ್ಯಸುಖೀ ಭವ ॥ ೪೮ ॥

---

೪೪. ನಾರದನು ಹೇಳಿದನು-ಈ ರೀತಿಯಾಗಿ ಆ ಕ್ಷೌರಕನು ಪಾಪತನದ ಜನ್ಮವನ್ನು ಹೊಂದಿಯೂ ಕೂಡ ಈ ತೀರ್ಥದ ಅನುಗ್ರಹದಿಂದ ವಿಮಾನದಲ್ಲಿ ಕುಳಿತುಕೊಂಡು ಸ್ವರ್ಗಕ್ಕೆ ಹೋದನು.

೪೫. ಆಗ ಆ ದಕ್ಷಿಣ ದೇಶದವರು ಯತಿಗಳಾಗಿ ತೀರ್ಥದ ಮಹಿಮೆಯನ್ನು ಬಲ್ಲ ಆ ಜಾಗದಲ್ಲಿಯೇ ಗೋವಿಂದನ ಪಾದಗಳನ್ನು ಸ್ಮರಿಸುತ್ತ ವಾಸಿಸುತ್ತಿದ್ದರು.

೪೬. ಆ ಬ್ರಾಹ್ಮಣೋತ್ತಮನು ಈ ತೀರ್ಥದ ಮಹಿಮೆಯನ್ನು ನೋಡಿ ಇವರಲ್ಲಿ ನಂಬಿಕೆಯು ಹುಟ್ಟಿ ಆ ತಾಯಿತಂದೆಗಳ ಅಸ್ಥಿಗಳನ್ನು ಇಲ್ಲೇ ತೀರ್ಥವಲ್ಲಿ ಬಿಟ್ಟು ಬಿಟ್ಟನು.

೪೭. ಆ ಮೂಳೆಗಳು ಬಿದ್ದೊಡನೆಯೇ ಅವನ ತಂದೆ ತಾಯಿಗಳು ಉತ್ತಮ ದೇಹವನ್ನು ಹೊಂದಿ ವಿಮಾನದಲ್ಲಿ ಕುಳಿತು ಅಲ್ಲಿಗೆ ಬಂದರು. ಎಲ್ಲರೂ ಕೇಳುವಂತೆ ತಮ್ಮ ಮಗನನ್ನು ಕುರಿತು ಇಂತೆಂದರು.

೪೮. ಎಲೈ ವತ್ಸನೇ ! ಬಹುಕಾಲ ಬದುಕು. ಧನಧಾನ್ಯಗಳಿಂದ ಸುಖಪಡು. ನಮ್ಮಿಬ್ಬರಿಗೂ ಮುಕ್ತಿಯನ್ನು ಕೊಡಿಸಿದ್ದರಿಂದ ನೀನೂ ಮುಕ್ತಿಯನ್ನು ಹೊಂದುತ್ತೀಯೆ. ಇದು ಸುಳ್ಳಲ್ಲ.

**ಅನಯೋರ್ಮುಕ್ತಿದಾನಾಚ್ಚ ಮುಕ್ತಿಂ ಯಾಸ್ಯಸಿ ನೋ ಮೃಷಾ ।**
**ಗಂಗಾಯಾಂ ಪಿಂಡದಾನೇನ ಯತ್ಫಲಂ ಸ್ಯಾತ್ಸುತಸ್ಯ ವೈ ।**
**ಪಿತೃಣಾಂ ಯಾ ಗತಿಶ್ಚಾತ್ರ ದ್ವಯಂ ಸ್ಯಾದಸ್ಥಿಪಾತತಃ ॥ ೪೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಚಂಡಿಕಾಖ್ಯಾನಂ ನಾಮ ಸಪ್ತಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೪೯. ತಂದೆಗೆ ಪಿಂಡವನ್ನು ಗಂಗೆಯಲ್ಲಿ ಕೊಟ್ಟರೆ ಮಗನಿಗೆ ಯಾವ ಪುಣ್ಯವು ಬರುತ್ತದೆಯೋ ಮತ್ತು ಪಿತೃಗಳಿಗೆ ಯಾವ ಗತಿಯು ಬರುತ್ತದೆಯೋ ಆವೆರಡು ಗತಿಗಳೂ ಇಲ್ಲಿ ಅಸ್ಥಿಯನ್ನು ಹಾಕುವುದರಿಂದ ಬರುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಚಂಡಿಕಾಖ್ಯಾನ ಎಂಬ ಇನ್ನೂರ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾಧಿಕದ್ವಿಶತತಮೋಽಧ್ಯಾಯಃ ॥



॥ ನಾರದ ಉವಾಚ ॥

ಇತ್ಯುಕ್ತ್ವಾ ತಸ್ಯ ವಿಪ್ರಸ್ಯ ಪಿತರೌ ದಿವ್ಯರೂಪಿಣೌ ।
ವಿಮಾನವರಮಾರುಹ್ಯ ಗತೌ ಹರಿಪುರಂ ಪ್ರತಿ ॥ ೧ ॥

ತಯೋಃ ಪುತ್ರಸ್ತು ತತ್ರೈವ ಕೋಶಲಾಯಾಂ ದಿನತ್ರಯಂ ।
ಉಷಿತ್ವಾ ಸ್ವಗೃಹಂ ಪ್ರಾಯಾಚ್ಚಿಂತಯಂಸ್ತೀರ್ಥವೈಭವಂ ॥ ೨ ॥

ಇಯಮೇವ ತು ಕಥ್ಯತೇ ವಿಬುಧೈಃ ಕೋಶಲಾ ನೃಪ ।
ಕಥಯಿಷ್ಯಾಮಿ ತತ್ತೇಽಹಂ ಶ್ರವಣೋತ್ಸುಕಚೇತಸೇ ॥ ೩ ॥

---

### ಇನ್ನೂರ ಎಂಟನೆಯ ಅಧ್ಯಾಯವು.



೧. ನಾರದನು ಹೇಳಿದನು-ಆ ಬ್ರಾಹ್ಮಣನ ತಾಯಿತಂದೆಗಳು ಅವರೆಲ್ಲರೆದುರಿಗೂ ಇಂತೆಂದು ಹೇಳಿ ದಿವ್ಯವಾದ ರೂಪವನ್ನು ಹೊಂದಿ ಉತ್ತಮವಾದ ವಿಮಾನದಲ್ಲಿ ಕುಳಿತು ವೈಕುಂಠಕ್ಕೆ ಹೋದರು.

೨. ಆ ಬ್ರಾಹ್ಮಣನು ಮೂರು ದಿನಗಳವರೆಗೂ ಆ ಕೋಸಲೆಯಲ್ಲಿಯೇ ಇದ್ದು ಅನಂತರ ತೀರ್ಥದ ಮಹಿಮೆಯನ್ನೇ ಯೋಚಿಸಿಕೊಂಡು ಹೋಗುತ್ತ ತನ್ನ ಮನೆಗೆ ಹೋದನು.

೩. ಈ ತೀರ್ಥವನ್ನೇ ಕೋಸಲೆಯೆಂದೆನ್ನುತ್ತಾರೆ. ಎಲೈ ಶಿಬಿಯೇ ! ಕೇಳಬೇಕೆಂದೆನ್ನುವ ಇಷ್ಟವುಳ್ಳ ನಿನಗೆ ಬೇಕಾದುದನ್ನು ಹೇಳುತ್ತೇನೆ.

ತೇ ದಾಕ್ಷಿಣಾತ್ಯಾ ಯತಯಸ್ತಸ್ಯಾಮೂಷುರ್ಮುಮೂರ್ಷವಃ ।
ಸಮರ್ಥಾರ್ಥಪ್ರದಾಯಿನ್ಯಾಂ ಕೋಸಲಾಯಾಂ ವಿಪದ್ಯತಾಂ ॥ ೪ ॥

ಕಶ್ಚಿದೇಕಸ್ತದಾ ತೇಷು ತಾಮನಾದೃತ್ಯ ಕೋಶಲಾಂ ।
ಗಚ್ಛನ್ನಾರಾಯಣಸ್ಥಾನಂ ವಿಷ್ಣುನಾ ವಾರಿತಃ ಪಥಿ ।
ವೃದ್ಧಬ್ರಾಹ್ಮಣರೂಪೇಣ ಪ್ರೋಕ್ತಂ ಚೇತಿ ದ್ವಿಜಂ ಪ್ರತೀ ॥ ೫ ॥

॥ ವೃದ್ಧಬ್ರಾಹ್ಮಣ ಉವಾಚ ॥

ಕ್ವ ಯಾಸಿ ಬ್ರಾಹ್ಮಣಶ್ರೇಷ್ಠ ತ್ಯಕ್ತ್ವೇಮಾಂ ಕೋಶಲಾಂ ಶುಭಾಂ ।
ಇಂದ್ರಪ್ರಸ್ಥಮಿದಂ ತೀರ್ಥಂ ಸರ್ವತೀರ್ಥೋತ್ತಮಂ ದ್ವಿಜ ॥ ೬ ॥

ಕೋಶಲಾ ಹಿ ಪವಿತ್ರೇಯಂ ಮುಕ್ತಿದಾ ವಿಷ್ಣುವಲ್ಲಭಾ ।
ಯತ್ರ ಯಾಸಿ ವಿಹಾಯೈನಾಂ ನಿಷ್ಕಾಮಪದದಾಯಿನೀಂ ॥ ೭ ॥

---

೪. ದಕ್ಷಿಣ ದೇಶದಿಂದ ಬಂದ ಅನೇಕ ಯಾತ್ರಿಕರು ಯತಿಗಳಾಗಿ ಆ ಕೋಸಲೆಯಲ್ಲಿಯೇ ಪ್ರಾಣಬಿಡಲಿಚ್ಛೆಯುಳ್ಳವರಾಗಿ ವಾಸಿಸುತ್ತಿದ್ದರು. ಬೇಕಾದುದನ್ನು ಕೊಡುವುದರಲ್ಲಿ ಶಕ್ತವಾದ ಕೋಸಲೆಯಲ್ಲಿಯೇ ಸಾಯಬೇಕಲ್ಲದೆ ಬೇರೆ ಕಡೆಗೆ ಹೋಗಬಾರದು.

೫. ಆ ದಕ್ಷಿಣ ದೇಶದವರಲ್ಲಿ ಒಬ್ಬ ಬ್ರಾಹ್ಮಣನು ಕೋಸಲೆಯಲ್ಲಿ ನಿಲ್ಲದೆ ನಾರಾಯಣ ಸ್ಥಾನವಾದ ಬದರಿಗೆ ಹೋಗುತ್ತಿರಲು ನಾರಾಯಣನು ಮುದುಕ ಬ್ರಾಹ್ಮಣ ವೇಷದಿಂದ ಬಂದು ದಾರಿಯಲ್ಲಿ ತಡೆದನು.

೬. ಮುದುಕ ಬ್ರಾಹ್ಮಣನು ಹೇಳಿದನು-ಎಲೈ ಬ್ರಾಹ್ಮಣೋತ್ತಮನೇ ! ಈ ಉತ್ತಮವಾದ ಕೋಸಲೆಯನ್ನು ಬಿಟ್ಟು ಎಲ್ಲಿಗೆ ಹೋಗುತ್ತೀಯೆ ? ಇಂದ್ರಪ್ರಸ್ಥದಲ್ಲಿರುವ ಈ ಕೋಸಲ ತೀರ್ಥವು ಉತ್ತಮೋತ್ತಮವಾದುದು.

೭. ಈ ಕೋಸಲೆಯು ಪವಿತ್ರವಾದುದು. ಮುಕ್ತಿಯನ್ನು ಕೊಡತಕ್ಕದ್ದು. ವಿಷ್ಣುವಿಗೆ ಪ್ರಿಯವಾದುದು. ನಿಷ್ಕಾಮದಿಂದ ಬರುವ ವೈಕುಂಠವನ್ನು ಕೊಡುವ ಈ ತೀರ್ಥವನ್ನು ಬಿಟ್ಟು ಮತ್ತೆ ಎಲ್ಲಿಗೆ ಹೋಗುತ್ತಿದ್ದೀಯೆ ?

ನ ಸಿದ್ಧಿರ್ಭವಿತಾ ತತ್ರ ವಿಷ್ಣುಸ್ತೇ ಚ ಪರಾಙ್ಮುಖಃ |
ಮುಕ್ತಿಂ ಚೇದಿಚ್ಛಸೇ ವಿಪ್ರ ತೀರ್ಥೇ ನ್ಯಾಸಂ ಪ್ರಗೃಹ್ಯ ಚ || ೮ ||

ಯಸ್ಯ ಯಸ್ಯೇಚ್ಛಯಾ ಸ್ನಾಸಿ ತಂ ತಂ ವರ್ಗಂ ಪ್ರದಾಸ್ಯತಿ |
ತವ ದೃಷ್ಟಿಪಥೇ ವಿಪ್ರ ಸರ್ಪೋಽಪಿ ಸುರತಾಂ ಗತಃ || ೯ ||

ಅಸ್ಯಾಃ ಪ್ರಸಾದತೋ ಮುಕ್ತೌ ಸ್ವರ್ಗಸ್ಥೌ ವಿಪ್ರದಂಪತೀ |
ಸಂಜಾತಪ್ರತ್ಯಯೋಽಪಿ ತ್ವಮೇತನ್ಮಾಹಾತ್ಮ್ಯದರ್ಶನಾತ್ || ೧೦ ||

ಲಬ್ಧ್ವಾ ಭಾಗ್ಯೋದಯೇನಾಪಿ ಕಥಮೇನಾಂ ವಿಮುಂಚಸಿ |
ಯಥಾ ಕಶ್ಚಿತ್ತೃಷಾರ್ತೋಽಪಿ ಲಬ್ಧ್ವಾಪ್ಯಮೃತವಾರಿಧಿಂ || ೧೧ ||

ತಂ ತ್ಯಕ್ತ್ವಾ ಯಾತಿ ಪಂಕಾಂಭಃ ತದ್ವತ್ತ್ವಂ ಮೂಢ ದೃಶ್ಯಸೇ |
ಯಥಾ ಚಿಂತಾಮಣಿಂ ಕಶ್ಚಿತ್ ಕೂಪೇ ಕ್ಷಿಪತಿ ಮೋಹಿತಃ || ೧೨ ||

ಹಸ್ತಸ್ಥಂ ಯಾ ಗತಿಸ್ತಸ್ಯ ದೃಶ್ಯತೇ ಸಾ ಗತಿಸ್ತವ |
ಆರಾಧ್ಯ ವಿಷ್ಣುಂ ವಿಶ್ವೇಶಂ ಯಥಾ ಕಶ್ಚಿತ್ಸುಮಾನ್ಸುಧೀಃ || ೧೩ ||

---

೮–೧೪. ನಿನಗೆ ವಿಷ್ಣುವು ಪರಾಙ್ಮುಖನಾಗಿರುವುದರಿಂದ ನೀನು ಹೋಗುವಲ್ಲಿ ಮುಕ್ತಿಯೂ ಸಿಕ್ಕುವುದಿಲ್ಲ. ಸಿದ್ಧಿಯೂ ಉಂಟಾಗುವುದಿಲ್ಲ. ನಿನಗೆ ಮುಕ್ತಿಯು ಬೇಕಾದಲ್ಲಿ ಈ ತೀರ್ಥವಲ್ಲಿದ್ದುಕೊಂಡು ಯಾವು ಯಾವುದನ್ನು ಅಪೇಕ್ಷಿಸಿ ಸ್ನಾನ ಮಾಡುತ್ತೀಯೋ ಅವೆಲ್ಲವೂ ನಿನಗೆ ಸಿಕ್ಕುತ್ತವೆ. ಎಲೈ ಬ್ರಾಹ್ಮಣನೇ! ನೀನು ನೋಡುತ್ತಿರುವಂತೆಯೇ ಹಾವು ದೇವಶರೀರವನ್ನು ಹೊಂದಿ ಸ್ವರ್ಗಕ್ಕೆ ಹೋಯಿತು. ಈ ತೀರ್ಥದ ಅನುಗ್ರಹದಿಂದಲೇ ಆ ಬ್ರಾಹ್ಮಣ ದಂಪತಿಗಳು ಸ್ವರ್ಗಕ್ಕೆ ಹೋದರು. ಈ ತೀರ್ಥದ ಮಹಿಮೆಯನ್ನು ನೋಡಿ ನಿನಗೆ ನಂಬಿಕೆಯುಂಟಾಗಿದ್ದರೂ ನಿನ್ನ ಪುಣ್ಯಾವಶದಿಂದ ನೀನು ಇದನ್ನು ಹೊಂದಿದ್ದರೂ ಕೂಡ ಹೇಗೆ ತಾನೇ ಇದನ್ನು ಬಿಟ್ಟು ಹೋಗುತ್ತಿರುವೆ? ಬಾಯಾರಿದವನೊಬ್ಬ ಮನುಷ್ಯನು ಅಮೃತದ ಸಮುದ್ರವನ್ನು ಹೊಂದಿದ್ದರೂ ಅದನ್ನು ಬಿಟ್ಟು ಬದಿಯ ನೀರಿಗೆ ಹೋಗುತ್ತಿರುವಂತೆ ನಿನ್ನನ್ನು ನೋಡಿದರೆ ಕಾಣುತ್ತಿರುವೆಯಲ್ಲ! ಯಾವನಾದರೂ ಒಬ್ಬನು ಕೇಳಿದುದನ್ನು ಕೊಡುವಂತಹ ಕೈಯ್ಯಲ್ಲಿಯೂ ಇರುವ ಚಿಂತಾಮಣಿಯೆಂಬ ರತ್ನವನ್ನು ಬುದ್ಧಿಯಿಲ್ಲದೆ ಬಾವಿಯಲ್ಲಿ ಬಿಸುಟು ಯಾವ ರೀತಿಯು ತೊಂದರೆಗೆ ಗುರಿಯಾಗುವನೋ ಅಂತಹ ಗತಿಯನ್ನು ನೀನು ಹೊಂದುತ್ತೀಯೆ.

ಸುಖಮೈಂದ್ರಿಯಕಂ ತುಚ್ಛಂ ಯಾಚತೇ ಸಾ ಗತಿಸ್ತವ ।
ನ ಯಾಹಿ ಕೋಶಲಾಮೇನಾಂ ತ್ಯಕ್ತ್ವಾ ಸರ್ವಾರ್ಥದಾಯಿನೀಂ ।
ಸ್ನಾತಸ್ಯಾತ್ರ ದಿವಪ್ರಾಪ್ತಿರ್ಮೃತಸ್ಯಾಮೃತಸಂಸ್ಥಿತಿಃ ॥ ೧೪ ॥

॥ ನಾರದ ಉವಾಚ ॥

ರಾಜನ್ನಾಕರ್ಣ್ಯ ವಿಪ್ರೋಽಸೌ ದ್ವಿಜರೂಪಭೃತೋ ಹರೇಃ ।
ವಾಕ್ಯಂ ಪ್ರೋವಾಚ ವಿಜ್ಞಾಯ ಶ್ರೇಷ್ಠಂ ಬದರಿಕಾಶ್ರಮಂ ॥ ೧೫ ॥

॥ ವಿಪ್ರ ಉವಾಚ ॥

ಭೋ ಭೋ ವಿಪ್ರವರ ಶ್ರದ್ಧಾ ತವ ವಾಕ್ಯೇ ನ ಜಾಯತೇ ।
ಮಮ ಶ್ರುತವತಃ ಪೂರ್ವಮಲ್ಪಗ್ರಾಮಸ್ಯ ವೈಭವಂ ॥ ೧೬ ॥

ಇಂದ್ರಪ್ರಸ್ಥಮಿದಂ ತೀರ್ಥಂ ನ ಕದಾಚಿನ್ಮಯಾ ಶ್ರುತಂ ।
ಕುತಸ್ತು ಕೋಶಲಾ ವೃದ್ಧ ಏತದಂತರವರ್ತಿನೀ ॥ ೧೭ ॥

---

ಬಹು ಕಷ್ಟಪಟ್ಟು ವಿಷ್ಣುವನ್ನು ಆರಾಧಿಸಿ ಅವನು ಪ್ರತ್ಯಕ್ಷನಾದ ಮೇಲೆ ತನ್ನ ದಡ್ಡತನದಿಂದ ತುಚ್ಛವಾದ ಇಂದ್ರಿಯ ಸುಖಗಳನ್ನು ಬೇಡಿ ತೆಗೆದುಕೊಳ್ಳುವವನಂತೆ ನಿನ್ನ ಗತಿಯಾಗಿರುವುದಲ್ಲಾ ! ಸಮಸ್ತ ಪುರುಷಾರ್ಥವನ್ನು ಕೊಡುವ ಈ ಕೋಶಲೆಯನ್ನು ಬಿಟ್ಟು ಹೋಗಬೇಡ. ಇಲ್ಲಿ ಸ್ನಾನಮಾಡಿದರೇನೇ ಸ್ವರ್ಗವು ಸಿಕ್ಕುತ್ತದೆ. ಇಲ್ಲಿ ಸತ್ತರಂತೂ ಅವನು ವೈಕುಂಠವನ್ನು ಹೊಂದುತ್ತಾನೆ.

೧೫. ನಾರದನು ಹೇಳಿದನು-ಆ ಬ್ರಾಹ್ಮಣನು ಬ್ರಾಹ್ಮಣ ರೂಪಿಯಾದ ಈ ವಿಷ್ಣುವಿನ ಮಾತನ್ನು ಕೇಳಿ ಅದರಲ್ಲಿ ನಂಬಿಕೆ ಬಾರದೆ ಬದರಿಕೆಯನ್ನೇ ಶ್ರೇಷ್ಠವೆಂದು ತಿಳಿದು ಇಂತೆಂದನು.

೧೬ ಬ್ರಾಹ್ಮಣನು ಹೇಳಿದನು-ಎಲೈ ಬ್ರಾಹ್ಮಣನೇ ! ಹಿಂದೆ ನಾನು ಸಣ್ಣ ಸಣ್ಣ ಗ್ರಾಮಗಳ ವೈಭವವನ್ನು ಕೂಡ ಕೇಳಿದ್ದೇನೆ ಇದರ ವಿಷಯವನ್ನೇ ಕೇಳಿಲ್ಲ ಆದ್ದರಿಂದ ನನಗೆ ನಿನ್ನ ಮಾತನ್ನು ಕೇಳಿದರೂ ಶ್ರದ್ಧೆಯುಂಟಾಗುವುದೇ ಇಲ್ಲ.

೧೭. ನೀನು ದೊಡ್ಡದೆಂದು ಹೇಳುವ ಆ ದೊಡ್ಡದಾಗಿರುವ ಇಂದ್ರಪ್ರಸ್ಥ ತೀರ್ಥವನ್ನೇ ನಾನು ಕೇಳಿಲ್ಲ. ಹೀಗಿರುವಲ್ಲಿ ಅದರ ಮಧ್ಯದಲ್ಲಿರುವ ಈ ಕೋಸಲ ತೀರ್ಥವನ್ನಂತೂ ಕೇಳಿರುವುದೆಲ್ಲಿ ಬಂತು ?

ಯತ್ರ ನಾರಾಯಣಸ್ಸಾಕ್ಷಾತ್ಸ್ಮಕ್ತಾ ಯತ್ರ ಚ ಯೋಗಿನಃ ।
ಮುಕ್ತ್ವಾ ತಮಾಶ್ರಮಂ ಪುಣ್ಯಂ ತಿಷ್ಠಾಮ್ಯತ್ರ ಕಥಂ ದ್ವಿಜ ॥ ೧೮ ॥

ಯದಾಗತ್ಯ ಸ್ವಯಂ ವಿಷ್ಣುರಿತ್ಯುಕ್ತ್ವಾ ಮಾಂ ನಿವಾರಯೇತ್ ।
ಬದರ್ಯಾಶ್ಚಾಧಿಕಂ ಕ್ಷೇತ್ರಮಿಂದ್ರಪ್ರಸ್ಥಮಿದಂ ದ್ವಿಜ ॥ ೧೯ ॥

ತದಾಹಮತ್ರ ತಿಷ್ಠಾಮಿ ಚಾಲಿತೋಽಪಿ ತಪಾಶ್ರಮಂ ।
ಮುಕ್ತಿಕಾಮಸ್ಸ್ವಸದನಾತ್ ನಾನ್ಯಥಾ ಸ್ಥಿತಿರತ್ರ ಮೇ ॥ ೨೦ ॥

॥ ನಾರದ ಉವಾಚ ॥

ಇತ್ಯುಕ್ತೇ ತೇನ ವಿಪ್ರೇಣ ಪ್ರಾದುರಾಸೀಚ್ಚತುರ್ಭುಜಃ ।
ವಿಹಾಯ ಪ್ರಾಕೃತಂ ರೂಪಂ ದಿವ್ಯರೂಪಧರೋ ಹರಿಃ ॥
ಉವಾಚ ಚ ಮಹಾಭಾಗಂ ತಂ ದ್ವಿಜಂ ಮೋಕ್ಷಕಾಮುಕಂ ॥ ೨೧ ॥

---

೧೮. ಯಾವ ಜಾಗದಲ್ಲಿ ನಾರಾಯಣನೇ ಪ್ರತ್ಯಕ್ಷನಾಗಿ ಕಾಣುತ್ತಿರುವನೋ ಯಾವ ಜಾಗದಲ್ಲಿ ಯೋಗಿಗಳೂ ಕೂಡ ಮುಕ್ತಿಯನ್ನು ಹೊಂದಿದ್ದಾರೆಯೋ ಅಂತಹ ಪುಣ್ಯಕರವಾದ ಬದರಿಕಾಶ್ರಮವನ್ನು ಬಿಟ್ಟು ಈ ಸಣ್ಣ ಕೋಸಲ ತೀರ್ಥದಲ್ಲಿ ಹೇಗೆ ತಾನೆ ಇರಲಿ ?

೧೯-೨೦. ಎಲೈ ಬ್ರಾಹ್ಮಣನೇ ! ಒಂದು ವೇಳೆ ಆ ವಿಷ್ಣುವೇ ಬಂದು ಈ ಕೋಸಲಕ್ಷೇತ್ರವು ಬದರಿಗಿಂತಲೂ ಅಧಿಕವಾದುದು. ಇಲ್ಲಿರು. ಬದರಿಗೆ ಹೋಗಬೇಡ. ಎಂದು ನನ್ನನ್ನು ತಡೆದರೆ ಮುಂದಕ್ಕೆ ಹೊರಟಿದ್ದರೂ ಆಗ ಈ ಕೋಸಲ ಕ್ಷೇತ್ರದಲ್ಲಿ ನಿಲ್ಲುತ್ತೇನೆ. ನಾನು ಮುಕ್ತಿಯನ್ನಪೇಕ್ಷಿಸಿ ನನ್ನ ಮನೆಯಿಂದ ಹೊರಟಿದ್ದೇನೆ. ನನಗೆ ಸರಿಯಾದವರು ಹೇಳದಿದ್ದರೆ ಇಲ್ಲ ನಾನು ನಿಲ್ಲುವುದೇ ಇಲ್ಲ. ನನಗೆ ಮುಕ್ತಿಯು ಬೇಕಾದುದು

೨೧. ನಾರದನು ಹೇಳಿದನು–ಆ ಬ್ರಾಹ್ಮಣನು ಹೀಗೆನ್ನಲು ಒಡನೆಯೇ ಆ ವಿಷ್ಣುವು ಹಿಂದಿನ ರೂಪವನ್ನು ಬಿಟ್ಟು ಚತುರ್ಭುಜವನ್ನು ಹೊಂದಿ ದಿವ್ಯವಾದ ರೂಪವನ್ನು ಧರಿಸಿದನು ಅನಂತರ ಮೋಕ್ಷವನ್ನು ಅಪೇಕ್ಷಿಸುವ ಆ ಬ್ರಾಹ್ಮಣನನ್ನು ಕುರಿತು ಇಂತೆಂದನು.

|| ವಿಷ್ಣುರುವಾಚ ||

ಇಂದ್ರಪ್ರಸ್ಥಮಿದಂ ವಿಪ್ರ ಸರ್ವತೀರ್ಥೋತ್ತಮೋತ್ತಮಂ |
ಬ್ರಹ್ಮಜ್ಞೇಷ್ವಿವ ಸರ್ವೇಷು ಶಂಭುರ್ಗಂಗಾ ನದೀಷ್ವಿವ || ೨೨ ||

ಹಿಮವಾನಿವ ಶೈಲೇಷು ಪಕ್ಷಿರಾಡಿವ ಪಕ್ಷಿಷು |
ತ್ರಿದಶೇಷು ಯಥಾ ಶಕ್ರೋ ವೈಷ್ಣವೇಷ್ವಿವ ನಾರದಃ || ೨೩ ||

ತೇಜಸ್ವಿಷು ಯಥಾ ಸೂರ್ಯಃ ಕ್ಷೀರಾಬ್ಧಿರಿವ ಚಾಬ್ಧಿಷು |
ಯಥಾ ವರ್ಣೇಷು ಭೂದೇವಃ ಸೃಷ್ಟಿಷ್ವಿವ ಪಿತಾಮಹಃ || ೨೪ ||

ವಿಷ್ಣೋರ್ಯಥಾವತಾರೇಷು ಕೌಸಲ್ಯಾಜನಿತೋ ವರಃ |
ತಥಾ ಸಮಸ್ತತೀರ್ಥೇಷು ಶಕ್ರಪ್ರಸ್ಥಮಿದಂ ವರಂ || ೨೫ ||

ನಿಷ್ಕಾಮೋ ವಾ ಸಕಾಮೋ ವಾ ಯಾತಿ ತೀರ್ಥೇ ಕ್ವಚಿನ್ನರಃ |
ತತ್ರ ತತ್ರ ಸಮುಸ್ನಾತಾತ್ಮಾ ಫಲದಾತಾಽಹಮೇವ ವೈ || ೨೬ ||

---

೨೨-೨೫. ವಿಷ್ಣುವು ಹೇಳಿದನು-ಎಲೈ ಬ್ರಾಹ್ಮಣನೇ ! ಈ ಇಂದ್ರಪ್ರಸ್ಥ ತೀರ್ಥವು ಎಲ್ಲಾ ತೀರ್ಥಗಳಲ್ಲಿಯೂ ಉತ್ತಮವಾದುದು. ಬ್ರಹ್ಮಜ್ಞಾನವನ್ನು ಹೊಂದಿರುವವರೊಳಗೆ ಶಂಭುವಿನಂತೆಯೂ ನದಿಗಳೊಳಗೆ ಗಂಗಾ ನದಿಯಂತೆಯೂ ಪರ್ವತಗಳೊಳಗೆ ಹಿಮವಂತನಂತೆಯೂ ಪಕ್ಷಿಗಳೊಳಗೆ ಗರುಡನಂತೆಯೂ ದೇವತೆಗಳಲ್ಲಿ ಇಂದ್ರನಂತೆಯೂ ವಿಷ್ಣು ಭಕ್ತರೊಳಗೆ ನಾರದನಂತೆಯೂ ಕಾಂತಿಯುಳ್ಳವರಲ್ಲಿ ಸೂರ್ಯನಂತೆಯೂ ಸಮುದ್ರಗಳೊಳಗೆ ಕ್ಷೀರ ಸಮುದ್ರದಂತೆಯೂ ವರ್ಣಗಳೊಳಗೆ ಬ್ರಾಹ್ಮಣನಂತೆಯೂ ಸೃಷ್ಟಿಗಳೊಳಗೆ ಬ್ರಹ್ಮ ಸೃಷ್ಟಿಯಂತೆಯೂ ಅವತಾರಗಳೊಳಗೆ ವಿಷ್ಣುವಿನ ರಾಮಾವತಾರದಂತೆಯೂ ಈ ಕೋಸಲ ತೀರ್ಥವು ತೀರ್ಥಗಳಲ್ಲಿ ಬಹು ಶ್ರೇಷ್ಠವಾದುದು. ಹಾಗೆಯೇ ಎಲ್ಲಾ ತೀರ್ಥಗಳಲ್ಲಿಯೂ ಈ ಇಂದ್ರಪ್ರಸ್ಥವು ಉತ್ತಮವಾದುದು.

೨೬. ಮನುಷ್ಯನು. ನಿಷ್ಕಾಮದಿಂದಾಗಲೀ ಸಕಾಮದಿಂದಾಗಲೀ ಯಾವುದಾದರೂ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನ ಮಾಡಿದರೆ ಅವನಿಗೆ ಅಲ್ಲಲ್ಲಿಯೇ ಸಮಸ್ತ ವಸ್ತುಗಳಲ್ಲಿಯೂ ಇರುವ ನಾನೇ ಫಲವನ್ನು ಕೊಡುವೆನು.

ಇಂದ್ರಪ್ರಸ್ಥಾಂತರಗತಾಂ ತ್ಯಕ್ತ್ವಾ ಯೋ ಯಾತಿ ಕೋಶಲಾಂ।
ಸ ನೋ ಫಲಮವಾಪ್ನೋತಿ ಮತ್ತೋ ವರದವೃಂದಪಾತ್ ॥ ೨೭ ॥

॥ ನಾರದ ಉವಾಚ ॥

ಏವಂ ನಿಶಮ್ಯ ತದ್ವಾಕ್ಯಂ ದೃಷ್ಟ್ವಾ ತದ್ರೂಪಮುತ್ತಮಂ ।
ಪ್ರಣಿಪತ್ಯ ರಮಾಕಾನ್ತಂ ತಸ್ಯಾಮೇವಾಗಮದ್ವಿಜಃ ॥ ೨೮ ॥

ಭಗವಾನಪಿ ವಿಶ್ವಾತ್ಮಾ ಸಪದ್ಯಂತರ್ದಧೇ ವಿಭುಃ ।
ತತ್ತ್ವಮುದ್ದಿಶ್ಯ ತಂ ವಿಪ್ರಂ ತೇನ ಭಾವೇನ ಪೂಜಿತಃ ॥ ೨೯ ॥

ತತ್ರಾಗತ್ಯ ಸ ವಿಪ್ರೋಽಸೌ ಕೋಸಲಾಯಾಂ ನರಾಧಿಪ ।
ಕಥಯಾಮಾಸ ತದ್ವೃತ್ತಂ ಸರ್ವಂ ಸರ್ವಾನ್ ಸ್ವಸಂಗಿನಃ ॥ ೩೦ ॥

ತೇಽಪಿ ಶ್ರುತ್ವಾ ಮಹಾಭಾಗ ದಾಕ್ಷಿಣಾತ್ಯಾ ದ್ವಿಜಾತಯಃ ।
ತಸ್ಯಾಮನಶನಂ ಕೃತ್ವಾ ತತ್ಯಜುಃ ಪ್ರಾಕೃತಂ ವಪುಃ ॥ ೩೧ ॥

---

೨೭. ಈ ಇಂದ್ರ ಪ್ರಸ್ಥದ ಒಳಗೆ ಸೇರಿಕೊಂಡಿರುವ ಕೋಸಲೆಯನ್ನು ಬಿಟ್ಟು ಯಾವನು ಬೇರೆ ಕಡೆಗೆ ಹೋಗುತ್ತಾನೆಯೋ ಅವನು ವರವನ್ನು ಕೊಡುವ ಕಾಮಧೇನುವಾದ ನನ್ನಿಂದ ಫಲವನ್ನು ಹೊಂದಲಾರನು.

೨೮. ನಾರದನು ಹೇಳಿದನು-ಅವನ ಮಾತನ್ನು ಕೇಳಿ ಅವನ ಆ ಉತ್ತಮರೂಪವನ್ನು ನೋಡಿ ಆ ಸ್ವಾಮಿಗೆ ನಮಸ್ಕರಿಸಿ ಆ ಕೋಸಲೆಗೆ ಹೋದನು.

೨೯. ವಿಶ್ವಾತ್ಮನಾದ ಆ ಭಗವಂತನು ಒಡನೆಯೇ ಅಂತರ್ಧಾನನಾದನು. ಆ ಬ್ರಾಹ್ಮಣನು ಸರಿಯಾದ ಸ್ಥಿತಿಯನ್ನು ತಿಳಿದುಕೊಂಡು ಉತ್ತಮವಾದ ಭಾವದಿಂದ ಆತನನ್ನು ಪೂಜಿಸಿದನು.

೩೦. ಅನಂತರ ಆ ಬ್ರಾಹ್ಮಣನು ಆ ಕೋಸಲೆಗೆ ಬಂದು ಆ ವಿಷಯವನ್ನು ತನ್ನ ಜೊತೆಯವರಿಗೆಲ್ಲಾ ತಿಳಿಸಿದನು.

೩೧. ಅದನ್ನು ಕೇಳಿ ದಕ್ಷಿಣದೇಶದ ಆ ಬ್ರಾಹ್ಮಣರು ಆ ಕೋಸಲ ತೀರ್ಥದಲ್ಲಿ ಅನಶನ ವ್ರತವನ್ನು ಮಾಡಿ ತಮ್ಮ ಈ ಪ್ರಾಕೃತವಾದ ಶರೀರವನ್ನು ಬಿಟ್ಟು ಬಿಟ್ಟರು.

ತದೈವ ಗರುಡಾರೂಢಃ ಶ್ರೀವಿಷ್ಣುಸ್ಸಮುಪಾಗತಃ ।
ವಿಮಾನೈಸ್ಸ್ವಗಣೈಸ್ಸಾರ್ಧಂ ತಾವದ್ಭಿರ್ದೀಪ್ತಿಭಾಸ್ಕರೈಃ ॥ ೩೨ ॥

ತೇ ತಂ ದೃಷ್ಟ್ವಾ ಸಮಾಯಾಂತಂ ವಿಮಾನಗಣಸಂಯುತಂ ।
ವಪುಷಾ ದಿವ್ಯರೂಪೇಣ ದಂಡವತ್ಪತಿತಾ ಭುವಿ ॥ ೩೩ ॥

ತುಷ್ಟುವುಶ್ಚ ದ್ವಿಜಾಸ್ಸರ್ವೇ ದಿವ್ಯಜ್ಞಾನವಪುರ್ಧರಾಃ ।
ತಂ ದಿವ್ಯರೂಪಿಣಂ ದೇವಂ ದೇವವಂದ್ಯಪದಾಂಬುಜಂ ॥ ೩೪ ॥

॥ ಬ್ರಾಹ್ಮಣಾ ಊಚುಃ ॥

ನಮಸ್ತೇಽತಸೀಪುಷ್ಪಸಂಕಾಶಭಾಸಂ
ತನುಂ ಬಿಭ್ರತೇ ಪೀತವಾಸೋಽವೃತಾಯ ।
ಲಸತ್ಕುಂಡಲಪ್ರೋತನಾನೋಪಲಾಯ
ಶ್ರುತೌ ಚಂಚಲಾವ್ಯಾಪಿನೀಲಾಂಬುದಾಯ ॥ ೩೫ ॥

---

೩೨. ಆಗಲೇನೇ ಆ ವಿಷ್ಣುವು ಎಷ್ಟು ಜನ ಸತ್ತರೋ ಅವರೊಬ್ಬೊಬ್ಬರಿಗೆ ಒಂದೊಂದು ವಿಮಾನದಂತೆ ಪ್ರಕಾಶವಾನ ವಿಮಾನವನ್ನು ತೆಗೆದುಕೊಂಡು ಅಲ್ಲಿಗೆ ಬಂದನು.

೩೩. ವಿಮಾನಗಳ ಗುಂಪಿನೊಡನೆ ಬರುತ್ತಿರುವ ಆ ಸ್ವಾಮಿಯನ್ನು ನೋಡಿ ಅವರೆಲ್ಲರೂ ಆ ದಿವ್ಯರೂಪಿನಿಂದಲೇ ಆ ಭೂಮಿಯಲ್ಲಿಯೇ ಬಿದ್ದು ದಂಡನಮಸ್ಕಾರಮಾಡಿದರು.

೩೪. ಆಗ ದಿವ್ಯದೇಹವನ್ನು ಧರಿಸಿದ ಆ ಬ್ರಾಹ್ಮಣರು ದೇವತೆಗಳಿಂದ ಸಮಸ್ಕರಿಸಲ್ಪಟ್ಟ ಪಾದಗಳುಳ್ಳ ಆ ದಿವ್ಯರೂಪಿಯಾದ ಸ್ವಾಮಿಯನ್ನು ನಮಸ್ಕರಿಸಿ ಸ್ತೋತ್ರಮಾಡಿದರು.

೩೫. ಬ್ರಾಹ್ಮಣರು ಹೇಳಿದರು-ನೀಲಿಯಬಣ್ಣದ ಅಗಸೆಹೂವಿನಂತೆ ಕಾಂತಿಯುಳ್ಳ ಶರೀರವನ್ನು ಹೊಂದಿರುವ ಹೊಂಬಣ್ಣದ ಬಟ್ಟೆಯನ್ನು ಹೊದ್ದಿರುವ ಅನೇಕಬಣ್ಣದ ಮಣಿಗಳನ್ನು ಸುತ್ತಿಕಟ್ಟಿರುವ ಕುಂಡಲವನ್ನು ಹಾಕಿಕೊಂಡಿರುವ ಮಿಂಚನ್ನು ಹೊಂದಿದ ನೀಲಮೇಘದಂತೆ ಇರುವ ಸ್ವಾಮಿಗೆ ನಮಸ್ಕಾರವು.

ಭಕ್ತಿಸ್ತ್ವದೀಯಾ ಕಿಲ ಕಲ್ಪವಲ್ಲೀ
ಸಮಾಶ್ರಿತಾ ಯಚ್ಛತಿ ಚಿತ್ತವಾಂಛಿತಂ ।
ಯಥಾ ತಥೈಷಾ ಕಿಲ ಕೋಶಲಾ ವಿಭೋ
ಜನ್ಯೈರುಭೇ ತೇ ಕೃಪಯಾ ತವಾಪ್ಯತೇ　　　॥ ೩೬ ॥

ವಂದಾಮಹೇ ತೇ ಚರಣಾರವಿಂದಂ
ವೃಂದಾರಕೈರ್ವಂದಿತಮೀಶ್ವರಾದ್ಯೈಃ ।
ವಿಚಿಂತ್ಯ ಮಾನಂ ಹೃದಿ ಯೋಗಿವೃಂದೈಃ
ಕಂದಂ ಪರಾನಂದಭುವೋ ವಿಮುಕ್ತೇಃ　　　॥ ೩೭ ॥

ಪ್ರಾಪ್ತಾಃ ಕಾಮಂ ಶ್ರೀಪತೇ ತ್ವತ್ಸ್ವರೂಪಂ
ಶ್ರೀವತ್ಸಾದ್ಯೈರ್ಲಕ್ಷಿತಂ ಚಾರುಚಿಹ್ನೈಃ ।
ವಾಂಛಾಮಸ್ತೇ ದಾಸಭಾವಂ ತಥಾಪಿ
ಪ್ರಾಯಸ್ಸರ್ವೈರಾದೃತಂ ನಾರದಾದ್ಯೈಃ　　　॥ ೩೮ ॥

---

೩೬. ನಿನ್ನ ಭಕ್ತಿಯೆಂಬ ಕಲ್ಪವೃಕ್ಷವನ್ನು ಆಶ್ರಯಿಸಿದರೆ ಇಷ್ಟವಾದುವೆಲ್ಲವನ್ನೂ ಕೊಡುತ್ತದೆ. ಎಲೈ ಸ್ವಾಮಿಯೇ ! ಆ ನಿನ್ನ ಭಕ್ತಿಹೇಗೋ ಹಾಗೆ ಈ ಕೊಸಲೆಯು ಕೇಳಿದುದನ್ನು ಕೊಡುತ್ತದೆ. ನಿನ್ನ ಭಕ್ತಿಯಾಗಲಿ ಈ ಕೊಸಲ ತೀರ್ಥವಾಗಲಿ ನಿನ್ನ ಕೃಪೆಯಿಂದಲೇ ಸಿಕ್ಕಬೇಕು. ಅಂತೆಯೇ ಎರಡೂ ಕೇಳಿದುದವನ್ನು ಕೊಡುತ್ತವೆ.

೩೭. ಇಂದ್ರನೇ ಮುಂತಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟ ನಿನ್ನ ಚರಣಾರವಿಂದವನ್ನು ನಮಸ್ಕರಿಸುತ್ತೇನೆ. ಅದು ತನ್ನನ್ನು ಹೃದಯದಲ್ಲಿ ಧ್ಯಾನಮಾಡಿದ ಯೋಗಿಗಳಿಗೆ ಆನಂದವನ್ನು ಕೊಡುವ ಮುಕ್ತಿಗೆ ಮರದ ಮಧ್ಯದ ದಿಂಡಿನ ರೂಪವಾದುದು.

೩೮. ಎಲೈ ಶ್ರೀಪತಿಯೇ ! ಶ್ರೀವತ್ಸವೇ ಮುಂತಾದುವುಗಳಿಂದ ಕೂಡಿರುವ ನಿನ್ನ ಸ್ವರೂಪವನ್ನು ಹೊಂದಿದ್ದೇವೆ ಆದರೂ ಕೂಡ ನಾರದಾದಿಗಳಿಂದ ಅನುಸರಿಸಲ್ಪಟ್ಟ ದಾಸಭಾವವನ್ನೇ ಅಪೇಕ್ಷಿಸುತ್ತೇವೆ.

ಯತ್ಸೌಖ್ಯಂ ತೇ ದಾಸಭಾವಂ ಗತಾನಾಂ
ತನ್ನೋ ಲಕ್ಷ್ಮ್ಯಾ ವಕ್ಷಸೋಸ್ತ್ವರ್ಗಸನ್ನ್ಯಾಃ ।
ತಜ್ಜಾನಾತಿ ಶ್ರೀಪತೇ ಶ್ರೀಮಹೇಶೋ
ನಾನ್ಯೋ ಲೋಕೇ ಯೇನ ತಚ್ಚಾನುಭೂತಂ ॥ ೩೯ ॥

ಮಧ್ಯೇಸ್ಮಾಕಂ ಶ್ರೀಪತೇ ಸೇವಕಾನಾಂ
ನೀರಾಗಾಣಾಮಪ್ಯಸೌ ಮಾನನೀಯಃ ।
ಅಸ್ಮಾತ್ತಂ ತೇ ನಾರದಾದ್ಯಾ ಮುನೀಶಾಃ
ತ್ವದ್ಭಕ್ತ್ಯಾಪ್ತ್ಯೈ ಲೋಕನಾಥಂ ಭಜಂತೇ ॥ ೪೦ ॥

ಕಾಮಂ ಬ್ರಹ್ಮಾನಂದಮಾಪ್ತೋಽಸ್ತರಾತ್ಮಾ
ತ್ವದ್ದಾಸ್ಯೇ ನೋ ತೃಪ್ತಿಮಾಯಾತಿ ಶಂಭುಃ ।
ವಾರಂ ವಾರಂ ತ್ವದ್ಗುಣಾನುಗ್ರಹೀತಃ
ನೃತ್ಯತ್ಯುಚ್ಚೈಃ ತ್ವತ್ಪರೋ ಭಾವಯುಕ್ತಃ ॥ ೪೧ ॥

---

೩೯. ಎಲೈ ಶ್ರೀಪತಿಯೇ ! ದಾಸಭಾವವನ್ನು ಹೊಂದಿರುವವರು ಪಡುವ ಸೌಖ್ಯವನ್ನು ಲಕ್ಷ್ಮಿಯೊಡನೆ ನಿನ್ನ ದೇಹದಲ್ಲಿ ಸೇರಿಕೊಂಡಿರುವವರು ಅನುಭವಿಸಲಾರರು. ಅದನ್ನು ಶ್ರೀ ಮಹೇಶನೊಬ್ಬನು ಹೊರತು ಲೋಕದಲ್ಲಿ ಮತ್ತಾರೂ ಕಾಣರು. ಅನುಭವಿಸಿಯೂ ಇಲ್ಲ.

೪೦. ಎಲೈ ಶ್ರೀಪತಿಯೇ ! ಸೇವಕರಾದ ಆಸೆ ಮುಂತಾದುವನ್ನು ಬಿಟ್ಟಿರುವ ಯೋಗಿಗಳೊಳಗೆ ಕೂಡ ಆ ಶಿವನು ಗೌರವಾರ್ಹನು. ಆದ್ದರಿಂದಲೇ ನಿನ್ನಲ್ಲಿ ಭಕ್ತಿಯನ್ನು ಹೊಂದಬೇಕಾದರೆ ನಾರದಾದಿ ಋಷಿಗಳೂ ಕೂಡ ಲೋಕನಾಥನಾದ ಆ ಮಹದೇವನನ್ನು ಭಜಿಸುತ್ತಾರೆ.

೪೧. ಶಂಭುವು ಬ್ರಹ್ಮಾನಂದವನ್ನು ಪಡೆದ ಆತ್ಮನುಳ್ಳವನಾಗಿ ನಿನ್ನ ದಾಸ್ಯದಲ್ಲಿರುತ್ತಿದ್ದರೂ ತೃಪ್ತಿಯನ್ನೇ ಹೊಂದುವುದಿಲ್ಲ. ಆದ್ದರಿಂದಲೇ ನಿನ್ನ ಗುಣಗಳಿಂದ ಅನುಗ್ರಹೀತನಾಗಿ ನಿನ್ನಲ್ಲಿಯೇ ಆಸಕ್ತನಾಗಿ ಪ್ರೀತಿಯಿಂದ ಆಗಾಗ್ಗೆ ಕುಣಿಯುತ್ತಿರುತ್ತಾನೆ.

ಹೇತೋರಸ್ಮಾದ್ದೇಹಿ ನಃ ಸ್ವಸ್ಯ ದಾಸ್ಯಂ
ಯತ್ಪ್ರಾಪ್ತಾನಾಂ ನೋರ್ಮಯಃ ಸಂಭವಂತಿ ।
ತ್ವಚ್ಚಿಹ್ನಾಂಗೌ ದ್ವಾರಪಾಲೌ ತ್ವದೀಯೌ
ಮೋಹಾದ್ವಾಮಃ ಪ್ರೀಯತೌ ತತ್ಸ್ವಕೀಯಂ ॥ ೪೨ ॥

ಲೋಕಾದಸ್ಮಾದಂತರೇಣ ತ್ವದಿಚ್ಛಾಂ
ತ್ವಲ್ಲೋಕಾನಾಂ ನೋದ್ಯತೇ ಚಾಂಶುಪಾತಃ ।
ಕೋ ಜಾನೀಯಾತ್ತಾವಕೀಮತ್ರ ಮಾಯಾಂ
ದುರ್ವಿಜ್ಞೇಯಾಂ ಬ್ರಹ್ಮಶರ್ವಾದಿದೇವೈಃ ॥ ೪೩ ॥

॥ ನಾರದ ಉವಾಚ ॥

ಏವಂ ತೈಸ್ತೂಯಮಾನಸ್ಸಃ ಪ್ರಭುರ್ನಿಜಪದೋನ್ಮುಖಃ ।
ಉವಾಚ ತಾನ್ ದಾಕ್ಷಿಣಾತ್ಯಾನ್ ಮೇಘಗಂಭೀರಯಾ ಗಿರಾ ॥ ೪೪ ॥

---

೪೨. ಆ ಶಂಭುವು ಈ ರೀತಿಯಾದ ಭಕ್ತಿಯನ್ನು ಹೊಂದಿರುವುದರಿಂದಲೇ ಅವನು ಸೌಖ್ಯಪಡುತ್ತಿರುವುದು. ಆದ್ದರಿಂದ ನಮಗೂ ಕೂಡ ನಿನ್ನ ದಾಸ್ಯವನ್ನು ಕೊಡು. ಆ ನಿನ್ನ ದಾಸ್ಯವನ್ನು ಹೊಂದಿದರೆ ಸಂಸಾರವು ಇರುವುದಿಲ್ಲ ಆ ನಿನ್ನ ಚಿಹ್ನೆಯನ್ನು ಹೊಂದಿ ಭಕ್ತಿಯನ್ನು ಹೊಂದದಿದ್ದ ದ್ವಾರಪಾಲಕರು ನಿನ್ನ ಸಂಬಂಧವಾದ ಅಜ್ಞಾನದಿಂದಲೇ ಕೀಳುಸ್ಥಿತಿಯನ್ನು ಹೊಂದಿ ಮತ್ತೆ ಭಕ್ತಿಯಿಂದ ಮುಕ್ತಿ ಮತ್ತು ಉನ್ನತ ಸ್ಥಿತಿಗಳನ್ನು ಪಡೆದರು.

೪೩. ನೀನು ಇಚ್ಛೆಪಡದಿದ್ದರೆ ಈ ಲೋಕದಿಂದ ನಿನ್ನ ಲೋಕಕ್ಕೆ ಹೋಗುವಿಕೆಯು ಇಲ್ಲವೇ ಇಲ್ಲ. ಬ್ರಹ್ಮ ಈಶ್ವರರಿಂದಲೂ ತಿಳಿಯಲಾಗದ ನಿನ್ನ ಮಾಯೆಯನ್ನು ಯಾವನು ತಾನೇ ತಿಳಿಯುವುದಕ್ಕೆ ಸಾಧ್ಯವಾದೀತು !

೪೪. ನಾರದನು ಹೇಳಿದನು-ತನ್ನ ವೈಕುಂಠಕ್ಕೆ ಹೋಗುತ್ತಿರುವ ಸ್ವಾಮಿಯು ಇವರ ಈ ಸ್ತೋತ್ರವನ್ನು ಕೇಳಿ ಆ ದಾಕ್ಷಿಣಾತ್ಯರನ್ನು ಕುರಿತು ಗುಡುಗಿನಂತಿರುವ ಗಂಭಿರವಾದ ಧ್ವನಿಯಿಂದ ಇಂತೆಂದನು.

॥ ಶ್ರೀ ಭಗವಾನುವಾಚ ॥

ಭೋ ಭೋ ದ್ವಿಜಾ ಭವಂತೋಽಸ್ಯಾಃ ಕೋಶಲಾಯಾಃ ಪ್ರಸಾದತಃ ।
ಸಾರೂಪ್ಯಮಪಿ ಮೇ ಪ್ರಾಪ್ತಾ ದಾಸಭಾವಂ ಚ ಯಾಸ್ಯಥ ॥ ೪೫ ॥

ಅದ್ಯಪ್ರಭೃತಿ ಭೋ ವಿಪ್ರಾ ತೀರ್ಥಮೇತದನುತ್ತಮಂ ।
ದಕ್ಷಿಣಕೋಸಲೇತ್ಯುಚ್ಚೈಃ ನಾಮ್ನಾ ಖ್ಯಾತಂ ಭವಿಷ್ಯತಿ ॥ ೪೬ ॥

ಯತ್ರ ದಾಶರಥಿರ್ಭೂತ್ವಾ ನಿಹನಿಷ್ಯದ್ದಶಾಸನಂ ।
ಸಾ ಕಥ್ಯತೇ ಮುನಿವರ್ಯೈಃ ಸರ್ವೈರುತ್ತರಕೋಶಲಾ ॥ ೪೭ ॥

ವಿಪನ್ನೋ ಜ್ಞಾನವಾನ್ಯಸ್ಯಾಂ ವೈಕುಂಠಮಧಿರೋಹತಿ ।
ವಿನಾಪಿ ತದ್ವಸೇದ್ಯೋಽಸ್ಯಾಂ ಸೋಽಪಿ ಸ್ವರ್ಗಂ ಚ ಗಚ್ಛತಿ ॥ ೪೮ ॥

---

೪೫. ಭಗವಂತನು ಹೇಳಿದನು–ಎಲೈ ದ್ವಿಜರಿರಾ ! ನೀವುಗಳು ಕೋಸಲ ತೀರ್ಥದ ದೆಸೆಯಿಂದ ನನ್ನ ಸಾರೂಪ್ಯವನ್ನು ಹೊಂದಿದಿರಿ. ನನ್ನ ಅನುಗ್ರಹದಿಂದ ದಾಸಭಾವವನ್ನೂ ಹೊಂದಿರಿ.

೪೬. ಎಲೈ ಬ್ರಾಹ್ಮಣರಿರಾ ! ಇಂದಿನಿಂದ ಮೊದಲುಗೊಂಡು ಈ ಉತ್ತಮವಾದ ತೀರ್ಥವು ದಕ್ಷಿಣ ಕೋಸಲತೀರ್ಥವೆಂಬುದಾಗಿ ಹೆಸರಿನಿಂದ ಪ್ರಸಿದ್ಧವಾಗಲಿ.

೪೭. ನಾನು ಎಲ್ಲಿ ದಶರಥನಿಗೆ ಮಗನಾಗಿ ಹುಟ್ಟಿ ದಶಾನನನಾದ ರಾವಣನನ್ನು ಕೊಂದೆನೋ ಅದನ್ನು ಮುನಿಗಳು ಉತ್ತರಕೋಸಲವೆಂದು ಹೇಳುತ್ತಾರೆ.

೪೮. ಆ ಉತ್ತರಕೋಸಲದಲ್ಲಿ ಜ್ಞಾನಿಯಾಗಿ ಮೃತನಾದರೆ ಅವನು ವೈಕುಂಠವನ್ನು ಹೊಂದುತ್ತಾನೆ. ಇಲ್ಲದಿದ್ದರೆ ಇಲ್ಲ. ಆ ಜ್ಞಾನವು ಇಲ್ಲದಿದ್ದರೂ ಈ ದಕ್ಷಿಣಕೋಸಲೆಯಲ್ಲಿ ವಾಸಿಸಿ ಮೃತನಾದರೆ ಅವನು ಸ್ವರ್ಗವನ್ನು ಹೊಂದುತ್ತಾನೆ.

ಇಮಾಂ ತತೋ ದಶಗುಣಾಮಾಹುರ್ದಕ್ಷಿಣಕೋಶಲಾಂ ।
ಏಕಾದಶಗುಣಾಮೇಕೇ ಸಮಮಾಹುರ್ಮುನೀಶ್ವರಾಃ ॥ ೪೯ ॥

ಇಯಾನೇವ ವಿಶೇಷೋಽಸ್ತಿ ತಸ್ಯಾ ಅಸ್ಯಾ ಮತಿರ್ಮಮ ।
ತಸ್ಯಾಂ ಮೃತಂ ನಯಂತ್ಯನ್ಯೇ ವೈಕುಂಠಂ ಮಾಮಕಾ ಗಣಾಃ ॥ ೫೦ ॥

ಅಸ್ಯಾಂ ಮೃತಂ ಸ್ವಯಮಹಮನನ್ಯಪದಮಾನಸಂ ।
ಆರೋಪ್ಯ ಗರುಡಂ ದತ್ವಾ ಸಾರೂಪ್ಯಂ ಪ್ರಾಪಯಾಮಿ ತತ್ ॥ ೫೧ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ತಾನ್ ದ್ವಿಜಾನ್ ವಿಷ್ಣುಃ ನೀತ್ವಾ ವೈಕುಂಠಮಭ್ಯಗಾತ್ ।
ಮಹಿಮಾನಂ ಸ್ತುವನ್ನಸ್ಯ ಸ್ವಯಂ ತೀರ್ಥಸ್ಯ ಭೂಪತೇ ॥ ೫೨ ॥

ಏತತ್ತೇ ಸರ್ವಮಾಖ್ಯಾತಂ ಕಾರಣಂ ಜಗತೀಪತೇ ।
ಯೇನೇಯಂ ಕಥ್ಯತೇ ವಿಜ್ಞೈರಿಹ ದಕ್ಷಿಣಕೋಶಲಾ ॥ ೫೩ ॥

---

೪೯. ಈ ಉತ್ತರಕೋಸಲೆಗಿಂತಲೂ ದಕ್ಷಿಣಕೋಸಲೆಯು ಹತ್ತರಷ್ಟು ಹೆಚ್ಚಿನದೆಂದೂ ಕೆಲವರು ಹನ್ನೊಂದರಷ್ಟು ಹೆಚ್ಚಿನದೆಂದೂ ಮತ್ತೆ ಕೆಲವರು ಸಮವೆಂದೂ ಕೆಲವರು ಮುನಿಗಳು ಹೇಳುತ್ತಾರೆ.

೫೦-೫೧. ಆ ಕೊಸಲೆಗೂ ಈ ಕೋಸಲೆಗೂ ಇಷ್ಟೇ ವ್ಯತ್ಯಾಸವು ಆ ಉತ್ತರಕೋಸಲೆಯಲ್ಲಿ ಮೃತನಾದವನನ್ನು ಕೊನೆಯಲ್ಲಿ ಆ ನನ್ನ ಗಣಗಳು ವೈಕುಂಠಕ್ಕೆ ಕರೆದುಕೊಂಡು ಹೋಗುತ್ತಾರೆ. ಇಲ್ಲಿ ನನ್ನನ್ನೇ ಧ್ಯಾನಿಸಿ ಸತ್ತವರನ್ನು ನಾನೇನೇ ಗರುಡನಮೇಲೆ ಕೂರಿಸಿಕೊಂಡು ನನ್ನ ಸಾರೂಪ್ಯವನ್ನು ಕೊಟ್ಟು ಆ ವೈಕುಂಠಕ್ಕೆ ಕರೆದುಕೊಂಡು ಹೋಗುತ್ತೇನೆ.

೫೨. ನಾರದನು ಹೇಳಿದನು–ಆ ವಿಷ್ಣುವು ಹೀಗೆಂದು ಹೇಳಿ ಆ ತೀರ್ಥವನ್ನು ಸ್ತುತಿಸುತ್ತಾ ಅದರ ಮಹಿಮೆಯನ್ನು ಹೇಳುತ್ತ ಆ ಬ್ರಾಹ್ಮಣರನ್ನು ಕರೆದುಕೊಂಡು ವೈಕುಂಠಕ್ಕೆ ಹೋದನು.

೫೩. ತಿಳಿದವರು ಇದನ್ನು ದಕ್ಷಿಣಕೋಸಲೆಯೆಂದು ಕರೆಯುವರು. ಅದಕ್ಕೆ ಕಾರಣದೊಡನೆ ಹೆಸರನ್ನು ಹೇಳಿದ್ದೇನೆ. ಇದೆಲ್ಲವನ್ನೂ ನೀನು ತಿಳಿದುಕೋ.

ಕಲಿಮಲಕುಲಹನ್ತ್ರಾ ಶೃಣ್ವತಾಂ ಮಾನವಾನಾಂ ।
ಕಮಲನಯನಪಾದಪ್ರಾಪ್ತಯೇ ವಾಂಛಿತಶ್ಚ ॥
ನೃಪವರ ಮಹಿಮಾ ತೇ ವರ್ಣಿತಃ ಕೋಶಲಾಯಾಃ ।
ಮಧುವನಭವವೃತ್ತಂ ಶೃಣ್ವತಸ್ತೇ ವದಾಮಿ ॥ ೫೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಕೋಸಲ ಮಹಿಮ ವರ್ಣನಂ
ನಾಮ ಅಷ್ಟಾಧಿಕಶತತಮೋಽಧ್ಯಾಯಸ್ಸಮಾಪ್ತಃ

೫೪. ಎಲೈ ದೊರೆಯೇ ! ಕೇಳುವ ಮನುಷ್ಯರಿಗೆ ಉಂಟಾದ ಕಲಿದೋಷದ ಪಾಪವನ್ನು ನಾಶಮಾಡುವ ಕಮಲಾಕ್ಷನಾದ ವಿಷ್ಣುವಿನ ಪಾದಕಮಲವನ್ನು ಹೊಂದಲು ಬೇಕಾದ ಈ ಕೋಸಲೆಯ ಮಹಿಮೆಯನ್ನು ವರ್ಣಿಸಿದ್ದೇನೆ. ಈ ಮಧುವನದ ವಿಷಯಗಳನ್ನು ಏನುಬೇಕೋ ಅವೆಲ್ಲವನ್ನೂ ನಿನಗೆ ಹೇಳುತ್ತೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಕಾಳಿಂದೀ ಮಹಿಮೆಯಲ್ಲಿ ಕೋಸಲ ಮಹಿಮ ವರ್ಣನ
ಎಂಬ ಇನ್ನೂರ ಎಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ನವಾಧಿಕದ್ವಿಶತತಮೋಽಧ್ಯಾಯಃ ||



|| ನಾರದ ಉವಾಚ ||

ಏತನ್ಮಧುವನಂ ತಾತ ಶಿಬೇ ಪರಮಪಾವನಂ |
ದೇವರಾಜಾಯ ತುಷ್ಟೇನ ಸ್ಥಾಪಿತಾ ವಿಷ್ಣುನಾ ಪುರೀ || ೧ ||

ಅತ್ರ ವಿಶ್ರಾನ್ತಿನಾಮೇದಂ ತೀರ್ಥಂ ತ್ರಿಭುವನೋತ್ತಮಂ |
ವಿಬುಧಾಮುಕ್ತಿದಂ ಪುಂಸಾಂ ಪಾವನಂ ಸಾಧುಸೇವಿತಂ || ೨ ||

ನಿತ್ಯಂ ವಸತಿ ವಿಶ್ವಾತ್ಮಾ ವಿಷ್ಣುಃ ಶ್ರೀಕೋಲರೂಪಧೃಕ್ |
ಅತ್ರ ತೀರ್ಥೋತ್ತಮೇ ಪುಣ್ಯೇ ನೃಪ ವಿಶ್ರಾನ್ತಿಸಂಜ್ಞಿಕೇ || ೩ ||

---

## ಇನ್ನೂರ ಒಂಭತ್ತನೆಯ ಅಧ್ಯಾಯವು



೧. ನಾರದನು ಹೇಳಿದನು-ಎಲೈ ಶಿಬಿಯೇ! ಈ ಮಧುವನವು ಬಹು ಪಾವನವಾದುದು. ದೇವರಾಜನಾದ ಇಂದ್ರನಿಗೋಸ್ಕರ ವಿಷ್ಣುವು ಈ ಊರನ್ನು ಸ್ಥಾಪಿಸಿದನು.

೨. ಈ ಜಾಗದಲ್ಲಿ ವಿಶ್ರಾನ್ತಿಯೆಂಬ ಹೆಸರುಳ್ಳ ಮೂರು ಲೋಕದಲ್ಲಿಯೂ ಉತ್ತಮವಾದ ತೀರ್ಥವೊಂದಿದೆ. ಅದು ದೇವತೆಗಳಿಗೂ ಮುಕ್ತಿಯನ್ನು ಕೊಡತಕ್ಕದ್ದು ಪಾವನವು. ಸಾಧುಗಳಿಂದ ಸೇವಿಸಲ್ಪಡತಕ್ಕದ್ದು.

೩. ಎಲೈ ದೊರೆಯೇ! ಈ ವಿಶ್ರಾಂತಿ ತೀರ್ಥದಲ್ಲಿ ಹಂದಿಯರೂಪನ್ನು ಹೊಂದಿ ಸಾಕ್ಷಾದ್ವಿಷ್ಣುವೇ ಅಲ್ಲಿ ಯಾವಾಗಲೂ ವಾಸಮಾಡಿಕೊಂಡಿರುತ್ತಾನೆ.

ಬಹುಭಿರ್ಜನ್ಮಭಿರ್ಯೇನ ವಿಷ್ಣುರಾರಾಧಿತಃ ಸದಾ |
ಮರಣಂ ತಸ್ಯ ತೀರ್ಥೇಽಸ್ಮಿನ್ ಜಾಯತೇ ಕಿಲ ಭೂಪತೇ ॥ ೪ ॥

ಕಾಲಿಂದ್ಯಾ ಏವ ಕೂಲೇ ತು ದ್ವಿತೀಯಂ ಹರಿಣಾ ಕೃತಂ |
ತೀರ್ಥಂ ವಿಶ್ರಾನ್ತಿಸಂಜ್ಞಂ ತು ಯತ್ರ ಕಂಸೋ ನಿಪಾತಿತಃ ॥ ೫ ॥

ಏತದ್ದ್ವಯಂ ಸಮಂ ರಾಜನ್ ಗುಣೈರ್ವೈಕುಂಠದಾತೃಭಿಃ |
ಭಾಗ್ಯೋದಯೇನ ಕೇನಾಪಿ ಲಭತೇ ಸಕಲಾರ್ಥದಂ ॥ ೬ ॥

ಅಥ ತೀರ್ಥಸ್ಯ ಮಾಹಾತ್ಮ್ಯಂ ಕಥಯಾಮಿ ತವಾಗ್ರತಃ |
ಯಚ್ಛ್ರುತ್ವಾ ಸರ್ವತೀರ್ಥೇಷು ಮಜ್ಜನಾಲ್ಲಭ್ಯತೇ ಫಲಂ ॥ ೭ ॥

ಹಿಮಾಚಲೋಪತ್ಯಕಾಯಾಂ ಕಿರಾತನಗರೇ ಶುಭೇ |
ಬ್ರಾಹ್ಮಣೋ ನಾಮ ಕುಶಲೋ ರಾಜನ್ನಾಸೀದ್ದರಿದ್ರತಃ ॥ ೮ ॥

---

೪. ಎಲೈ ದೊರೆಯೇ! ಯಾವನು ಬಹು ಜನ್ಮಗಳಿಂದ ವಿಷ್ಣುವನ್ನು ಪೂಜಿಸುತ್ತಿರುವನೋ ಅವನು ಮಾತ್ರ ಈ ಮಧುವನ ತೀರ್ಥದಲ್ಲಿ ಮರಣವನ್ನು ಹೊಂದುತ್ತಾನೆ.

೫. ಈ ಕಾಳಿಂದಿಯ ದಡದಲ್ಲಿ ಹರಿಯು ಈ ಎರಡನೆಯ ಈ ತೀರ್ಥವನ್ನು ಸೃಷ್ಟಿಸಿದ್ದಾನೆ. ವಿಶ್ರಾಂತಿ ಸಂಜ್ಞಿಕವಾದ ಈ ತೀರ್ಥದಲ್ಲಿಯೇ ಕೃಷ್ಣನು ಕಂಸನನ್ನು ಕೊಂದನು.

೬. ವೈಕುಂಠವನ್ನು ಕೊಡುವ ರೀತಿಯಿಂದ ಇವೆರಡೂ ಒಂದೇನೇ. ಯವುದೋ ಒಂದು ಪೂರ್ವಜನ್ಮದ ಪುಣ್ಯದಿಂದ ಇಷ್ಟಾರ್ಥವನ್ನು ಕೊಡುವ ಈ ತೀರ್ಥವು ಲಭಿಸುತ್ತದೆ.

೭. ಇನ್ನುಮೇಲೆ ಈ ತೀರ್ಥದ ಮಹಿಮೆಯನ್ನು ಹೇಳುತ್ತೇನೆ. ಅದನ್ನು ಕೇಳಿದರೆ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವು ಸಿಕ್ಕುತ್ತದೆ.

೮. ಹಿಮವತ್ಪರ್ವತದ ತಪ್ಪಲಿನಲ್ಲಿ ಕಿರಾತನಗರಿ ಎಂಬ ಒಂದು ಊರಿರುವುದು. ಅಲ್ಲಿ ಕುಶಲನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಬಹುದರಿದ್ರನು.

ತಸ್ಯ ಪತ್ನೀ ದುರಾಚಾರಾ ದುರಾಚಾರನರೇ ರತಾ |
ಕಾರ್ಮಣೈರ್ಮೋಹಯಾಮಾಸ ಪತಿಂ ಸಾ ಬಂಧಕೀವರಾ　　॥ ೯ ॥

ಪತಿಸ್ತಸ್ಯಾ ಮೋಹಿತಸ್ತು ನ ನಿವಾರಯಿತುಂ ಕ್ಷಮಃ |
ತದಾಜ್ಞಾತತ್ಪರೋ ದೀನಃ ಕ್ರಯಕ್ರೀತ ಇವಾಭವತ್　　॥ ೧೦ ॥

ಲೋಕಾ ಉಪಹಸಂತಿ ಸ್ಮ ತಂ ದ್ವಿಜಂ ಕುಲಟಾಪತಿಂ |
ಉಪಹಾಸಭಯಾತ್ಸೋಽಪಿ ನಿರ್ಯಯೌ ನ ಗೃಹಾತ್ಕುಧೀಃ　　॥ ೧೧ ॥

ಮಹಾರ್ಹಾಣಿ ದುಕೂಲಾನಿ ಭೂಷಣಾನಿ ಚ ಸಾ ದಧೌ |
ಜಾರೈರ್ದತ್ತಾನಿ ದುಷ್ಟಾತ್ಮಾ ಹಾಸಿತಾಪಿ ನ ಲಜ್ಜತೇ　　॥ ೧೨ ॥

ವಸ್ತ್ರಂ ಪುರಾತನಂ ಜೀರ್ಣಮುತ್ತೀರ್ಯ ಸ್ವಶರೀರತಃ |
ಅವಜ್ಞಾಪೂರ್ವಕಂ ದುಷ್ಟಾ ಸ್ವಭರ್ತ್ರೇ ಸಾ ಪ್ರಯಚ್ಛತಿ　　॥ ೧೩ ॥

---

೯. ಅವನ ಹೆಂಡತಿಯು ಕೆಟ್ಟ ಆಚಾರವುಳ್ಳವಳು. ಕೆಟ್ಟ ಆಚಾರವುಳ್ಳ ಮನುಷ್ಯರಲ್ಲಿಯೇ ಆಸಕ್ತಳಾಗಿದ್ದಳು. ಆ ಹಾದರಗಿತ್ತಿಯೇ ವಶ್ಯಮಾಡಿಕೊಳ್ಳುವ ಔಷಧಿ ಮಂತ್ರ ಮುಂತಾದುವುಗಳಿಂದ ಅವನನ್ನು ಬುದ್ಧಿಕೆಡಿಸಿದ್ದಳು.

೧೦. ಅವಳು ಹೇಳಿದಂತೆ ತನ್ನ ಗಂಡನು ಕೇಳಿಕೊಂಡು ಇರುವಂತೆ ಮಾಡಿಕೊಂಡಿದ್ದುದರಿಂದ ಅವನು ಅವಳನ್ನು ಕೆಟ್ಟಕೆಲಸದಿಂದ ತಪ್ಪಿಸಲಾರದವನಾಗಿದ್ದನು. ಆದರಿಂದ ಅವನು ಅವಳ ಅಪ್ಪಣೆಯಂತೆ ನಡೆಯುತ್ತಾ ದುಃಖಿಯಾಗಿ ಹಣಕೊಟ್ಟು ಕೊಂಡುಕೊಂಡ ಆಳಿನಂತಾಗಿದ್ದನು.

೧೧. ಆ ಹಾದರಗಿತ್ತಿಯ ಗಂಡನನ್ನು ಜನರು ಹಾಸ್ಯಮಾಡುತ್ತಿದ್ದರು. ಆ ಹಾಸ್ಯಕ್ಕೋಸ್ಕರ ಹೆದರಿ ಅವನು ಮನೆಯಿಂದಲೇ ಹೊರಗೆ ಹೊರಡುತ್ತಿರಲಿಲ್ಲ.

೧೨. ಬಹು ಬೆಲೆಯುಳ್ಳ ರೇಷ್ಮೆಶೀರೆಗಳನ್ನೂ ಒಳ್ಳೊಳ್ಳೆಯ ಒಡವೆಗಳನ್ನೂ ಜಾರರು ತಂದುಕೊಡಲು ಅದನ್ನು ಧರಿಸುತ್ತಿದ್ದಳು. ಆ ಅಯೋಗ್ಯೆಯು ಜನಗಳು ಹಾಸ್ಯಮಾಡಿದರೂ ನಾಚಿಕೆ ಪಡುತ್ತಿರಲಿಲ್ಲ.

೧೩. ಹಳೆಯ ಹರಿದುಹೋದ ಬಟ್ಟೆಗಳನ್ನು ತನ್ನ ಮೈಯಿಂದ ತೆಗೆದು ತಿರಸ್ಕಾರದಿಂದ ನೋಡುತ್ತ ತನ್ನ ಗಂಡನಿಗೆ ಅವಳು ಕೊಡುತ್ತಿದ್ದಳು.

ಏವಂ ತಯಾ ಕುಲಟಯಾ ಸೋಽವಜ್ಞಾತಃ ಸ್ವಕಃ ಪತಿಃ ।
ನಿತಾಂತಂ ದುಃಖಮಾಪನ್ನೋ ವಿಷಮುತ್ತ್ವಾ ಮೃತೋ ನಿಶಿ ॥ ೧೪ ॥

ಸಾ ಭೀತಾ ರಾಜತಃ ಪಾಪಾ ನ ಪಾಪಾತ್ ಸ್ವೈರಿಣೀ ತದಾ ।
ಅನುಯಾಸ್ಯಾಮಿ ಭರ್ತಾರಮಿತ್ಯುವಾಚ ಮೃಷಾ ವಚಃ ॥ ೧೫ ॥

ತಯೈವ ಶಿಕ್ಷಿತಾಸ್ಸಖ್ಯಃ ಸ್ವಕೀಯಾಸ್ತಾಂ ಸಮೀಪಗಾಃ ।
ನಿವಾರಯಾಮಾಸುರಿತಿ ಕಥಯಿತ್ವಾ ಮಹಿಪತೇ ॥ ೧೬ ॥

॥ ಸಖ್ಯ ಊಚುಃ ॥

ಭೋ ಮೃಗಾಕ್ಷಿ ಕಿಮರ್ಥಂ ತು ಕ್ರಿಯತೇಽನರ್ಥ ಈದೃಶಃ ।
ಯತ್ಸುವರ್ಣನಿಭಂ ಕಾಯಂ ತ್ವಂ ನಾಶಯಿತುಮುದ್ಯತಾ ॥ ೧೭ ॥

ಭವತ್ಯಾ ಕಿಂ ಸುಖಂ ದೃಷ್ಟಮಮುಷ್ಯಾವ್ಯವಸಾಯಿನಃ ।
ದರಿದ್ರಸ್ಯಾಸಮರ್ಥಸ್ಯ ಸಖಿ ಸ್ವೋದರಪೂರಿಣಃ ॥ ೧೮ ॥

---

೧೪. ಈ ರೀತಿಯಾಗಿ ಆ ವ್ಯಭಚಾರಿಣಿಯು ತಿರಸ್ಕರಿಸುತ್ತಿರಲು ಒಂದುದಿನ ಆಕೆಯಗಂಡನು ಈ ತಿರಸ್ಕಾರದಿಂದ ದುಃಖಪಡುತ್ತಾ ರಾತ್ರಿಯಲ್ಲಿ ವಿಷವನ್ನು ತಿಂದು ಸತ್ತುಹೋದನು.

೧೫. ಆ ವ್ಯಭಿಚಾರಿಣಿಯು ಪಾಪಕ್ಕೆ ಹೆದರದಿದ್ದರೂ ರಾಜನ ದೆಸೆಯಿಂದ ಹೆದರಿದಳು. ಅದಕ್ಕೋಸ್ಕರ ಗಂಡನನ್ನೇ ಅನುಸರಿಸಿಕೊಂಡು ಸಹಗಮನಮಾಡುತ್ತೇನೆಂದು ಸುಳ್ಳನ್ನು ಹರಡಿದಳು.

೧೬. ಅವಳ ಹತ್ತಿರದಲ್ಲಿಯೇ ಯಾವಾಗಲೂ ಇದ್ದುಕೊಂಡಿದ್ದ ಸಖಿಯರಿಗೆ ಕೆಲವು ವಿಷಯಗಳನ್ನು ಹೇಳಿಕೊಟ್ಟು ಕಲಿಸಿದ್ದಳು ಆಗ ಅವರು ಅವಳು ಹತ್ತಿರದಲ್ಲಿದ್ದುಕೊಂಡು ಮುಂದೆ ಹೇಳುವಂತೆ ಹೇಳಿ ಅವಳನ್ನು ತಡೆದರು.

೧೭. ಸಖಿಯರು ಹೇಳಿದರು–ಎಲೈ ಮೃಗಾಕ್ಷಿಯೆ ! ಯಾತಕ್ಕೋಸ್ಕರ ಈ ಅಯೋಗ್ಯವಾದ ಕೆಲಸವನ್ನು ಮಾಡುತ್ತೀಯೆ ? ನೀನು ಚಿನ್ನದಂತಿರುವ ಈ ಶರೀರವನ್ನು ಹಾಳುಮಾಡಿಕೊಳ್ಳುವುದಕ್ಕೆ ಪ್ರಯತ್ನಪಟ್ಟಿರುವೆಯಲ್ಲ !

೧೮. ಎಲೈ ಸಖಿಯೆ ! ಕೆಲಸಮಾಡದೆ ಇರುವ ಈ ಮನುಷ್ಯನಿಂದ ನೀನೇನು ಸುಖವನ್ನು ಪಡೆದಿದ್ದೀಯೆ ? ಇವನಾದರೋ ದರಿದ್ರನು. ಕೈಲಾಗದವನು. ತನ್ನ ಹೊಟ್ಟೆಯನ್ನು ತುಂಬಿಕೊಳ್ಳುವುದರಲ್ಲಿ ಮಾತ್ರ ಆಸಕ್ತನು.

ಪಾಲಯ್ಯೈನಂ ಸುತಂ ಬಾಲಂ ತ್ವದೃತೇ ಕೋಸ್ಯ ಪಾಲಕಃ ।
ಮರಿಷ್ಯಾಮೋ ವಯಂ ಸರ್ವಾ ಮೃತಾಯಾಂ ತ್ವಯಿ ಸುಂದರಿ ॥ ೧೯ ॥

ಗೃಹಮೇತದವೇಕ್ಷಸ್ವ ಸಮುತ್ತಿಷ್ಠ ವರಾನನೇ ।
ಜೀಯಾದಯಂ ತವ ಸುತೋ ಯಸ್ತೇ ಭಾವಿಸುಖಪ್ರದಃ ॥ ೨೦ ॥

ವಾಂಛಂತಿ ಬಾಂಧವಾಸ್ಸರ್ವೇ ತ್ವದೀಯಾಸ್ತವ ಜೀವಿತಂ ।
ಉತ್ತಿಷ್ಠ ನಿಜಬಂಧೂನಾಂ ಕುರು ಚಿತ್ತ ಸಮೀಹಿತಂ ॥ ೨೧ ॥

ರುದಂತಿ ತವ ರಾಗೇಣ ವಯಸ್ಯಾಃ ಸಕಲಾಃ ಸತಿ ।
ನಿಜವಾಕ್ಯಪ್ರದಾನೇನ ವಾರಯ್ಯೈತಾಸ್ಸುದುಃಖಿತಾಃ ॥ ೨೨ ॥

॥ ನಾರದ ಉವಾಚ ॥

ಇತ್ಯಾಕರ್ಣ್ಯ ವಚಸ್ತಾಸಾಂ ದುಷ್ಟಾ ಸಾ ಧರ್ಮವಿಶ್ರುತಂ ।
ಉನ್ನಮಯ್ಯ ಮುಖಂ ಪ್ರಾಹ ಶ್ರಾವಯಂತೀ ಸ್ವಬಾಂಧವಾನ್ ॥ ೨೩ ॥

---

೧೯. ಎಲೈ ಸುಂದರಿಯೆ! ಈ ಚಿಕ್ಕವನಾಗಿರುವ ಮಗುವನ್ನು ಕಾಪಾಡು. ನೀನಿಲ್ಲದಿದ್ದರೆ ಇದನ್ನು ಕಾಪಾಡುವವರು ಯಾರು ? ನೀನು ಸತ್ತರೆ ನಾವೂ ಕೂಡ ಬದುಕುವಂತಿಲ್ಲ.

೨೦. ಎಲೈ ಪುಣ್ಯಾತ್ಮಳೆ! ಈ ಮನೆಯ ವಿಷಯವನ್ನು ನೋಡು. ಮೇಲಕ್ಕೆ ಏಳು. ಈ ನಿನ್ನ ಮಗನು ಬದುಕಲಿ. ಇವನು ನಿನಗೆ ಮುಂದೆ ಸುಖವನ್ನು ಕೊಡತಕ್ಕವನಲ್ಲವೆ!

೨೧. ನಿನ್ನ ಬಂಧುಗಳೆಲ್ಲರೂ ನೀನು ಬದುಕಿರಬೇಕೆನ್ನುತ್ತಾರೆ. ಏಳು. ಆ ಬಂಧುಗಳ ಇಷ್ಟದಂತೆ ಮಾಡು.

೨೨. ಎಲೈ ಸಖಿಯೆ ! ನಿನ್ನಲ್ಲಿರುವ ಪ್ರೀತಿಯಿಂದ ನಿನ್ನ ಸಖಿಯರೆಲ್ಲರೂ ಅಳುತ್ತಿದ್ದಾರೆ. ಈ ದುಃಖಿತರಾದ ಸಖಿಯರನ್ನು ನಿನ್ನ ಮಾತಿನಿಂದ ಸಮಾಧಾನಪಡಿಸು.

೨೩. ನಾರದನು ಹೇಳಿದನು–ಆ ಸಖಿಯರ ಈ ಧರ್ಮದಿಂದ ಕೂಡಿದ ಮಾತನ್ನು ಕೇಳಿ ಆ ದುಷ್ಟೆಯು ಮುಖವನ್ನು ಮೇಲಕ್ಕೆತ್ತಿಕೊಂಡು ತನ್ನ ಬಂಧುಗಳಿಗೆಲ್ಲರಿಗೂ ಕೇಳುವಂತೆ ಇಂತೆಂದಳು.

॥ ಸಖ್ಯುವಾಚ ॥

ಯುಷ್ಮಾಭಿರ್ಯದ್ವಚೋ ಧರ್ಮ್ಯಂ ಪ್ರೋಕ್ತಂ ಜಾನೇ ಋತಂ ನನು ।
ತಥಾಪಿ ಸ್ವಪತಿಸ್ಸ್ತ್ರೀಭಿಃ ಮಾನ್ಯೋ ಲೋಕದ್ವಯಪ್ರದಃ ॥ ೨೪ ॥

ಯದುಚ್ಯತೇ ಮಯಾ ವಾಕ್ಯಂ ಧರ್ಮಶಾಸ್ತ್ರಸಮನ್ವಿತಂ ।
ತದ್ವಚಶ್ಶ್ರೂಯತಾಂ ಸಖ್ಯಃ ಯುಕ್ತಂ ಚೇದನುಮೋದತ ॥ ೨೫ ॥

ಯಾ ಸ್ತ್ರೀ ನಿಧನಮಾಪನ್ನಂ ಪತಿಮನ್ವೇತಿ ತತ್ಪರಾ ।
ಪಾಪಾಪಿ ಸಹ ತೇನೈವ ಸ್ವರ್ಗೇ ವಸತಿ ಸಾ ಚಿರಂ ॥ ೨೬ ॥

ಸ್ತ್ರೀಭಿಃ ಪತಿರ್ನ ಹಾತವ್ಯೋ ನಿರ್ಧನೋ ರೋಗವಾನಪಿ ।
ಜೀವನ್ ಮೃತೋನುಗಂತವ್ಯಃ ಶ್ರುತಿರೇಷಾ ಸನಾತನೀ ॥ ೨೭ ॥

ವಿಚಾರ್ಯೇತಿ ಸ್ವಮನಸಿ ಸಖ್ಯೋನ್ವೇಮಿ ಸ್ವಕಂ ಪತಿಂ ।
ವರ್ತಿಷ್ಯತೇ ಸ್ವಭಾಗ್ಯೇನ ಕರಿಷ್ಯೇಹಂ ಕಿಮಸ್ಯ ವೈ ॥ ೨೮ ॥

---

೨೪. ಸಖಿಯು ಹೇಳಿದಳು-ನೀವು ಹೇಳಿದ ಈ ಮಾತುಗಳು ಧರ್ಮವಾಗಿಯೂ ನಿಶ್ಚಯವಾಗಿಯೂ ಇವೆ. ಆದರೂ ಇಹಪರಗಳಲ್ಲಿ ಸುಖವನ್ನು ಕೊಡತಕ್ಕ ಗಂಡನನ್ನು ಹೆಂಡತಿಯರು ಅನುಸರಿಸಲೇ ಬೇಕು.

೨೫. ಎಲೈ ಸಖಿಯರೇ ! ನಾನು ಧರ್ಮಶಾಸ್ತ್ರದಲ್ಲಿರುವಂತೆ ಹೇಳುತ್ತೇನೆ. ಆ ಮಾತನ್ನು ಕೇಳಿರಿ. ಅದು ಸರಿಯಾಗಿದ್ದರೆ ಅದನ್ನು ಒಪ್ಪಿಕೊಳ್ಳಿರಿ.

೨೬. ಯಾವ ಹೆಂಗಸು ಸತ್ತುಹೋದ ತನ್ನ ಗಂಡನನ್ನು ಅವನಲ್ಲಿಯೇ ಮನಸ್ಸಿಟ್ಟು ಅನುಸರಿಸುತ್ತಾಳೆಯೋ ಅವಳು ಪಾಪಿನಿಯಾದರೂ ಸ್ವರ್ಗದಲ್ಲಿ ಬಹುಕಾಲ ವಾಸಿಸುತ್ತಾಳೆ.

೨೭. ಗಂಡನು ರೋಗಿಯಾಗಲಿ ಬಡವನಾಗಲಿ ಅವನನ್ನು ಹೆಂಡತಿಯರು ಬಿಡಬಾರದು. ಜೀವದಿಂದಿದ್ದಾಗಲೂ ಸತ್ತಮೇಲೂ ಅವನನ್ನೇ ಅನುಸರಿಸಬೇಕು. ಹೀಗೆಂದು ಸನಾತನವಾದ ವೇದವೇ ಹೇಳುತ್ತದೆ.

೨೮. ಎಲೈ ಸಖಿಯರಿರಾ ! ಇದನ್ನು ಮನಸ್ಸಿನಲ್ಲಿ ಯೋಚಿಸಿಯೇ ನಾನು ಗಂಡನನ್ನು ಅನುಸರಿಸುತ್ತೇನೆ. ಅವನು ಅವನ ಪಾಪಪುಣ್ಯಗಳಂತೆ ನಡೆಯುತ್ತಾನೆ. ಆದ್ದರಿಂದ ಇವನ ವಿಷಯದಲ್ಲಿ ನಾನು ಏನುಮಾಡಲಾದೀತು ?

|| ನಾರದ ಉವಾಚ ||

ಇತ್ಯುಕ್ತಾಸ್ತಾಸ್ತಯಾ ಸಖ್ಯೋ ದುಷ್ಟಾ ದುಷ್ಟಮತಿಪ್ರದಾಃ ।
ಊಚುಸ್ತಾಂ ಧರ್ಮವಾಕ್ಯೇನ ಸಮಸ್ತಜನಮೋಹಿನೀಂ || ೨೯ ||

|| ಸಖ್ಯ ಊಚುಃ ||

ಜಹಿ ಪೂರ್ವಂ ಹಿ ನಃ ಸುಭ್ರೂಃ ಪಶ್ಚಾದನ್ವೇಹಿ ವಲ್ಲಭೇ ।
ಸಮಸ್ತಾಸ್ತ್ವದ್ವಿಯೋಗಂ ನ ವಯಂ ಸೋಢುಂ ಕ್ಷಮಾಮಹೇ || ೩೦ ||

ಅಸ್ಮಾಂಸ್ತ್ವವ ವಿನಿಘ್ನತ್ಯಾ ಅನುಯಾನ್ತ್ಯಾಃ ಸ್ವಕಂ ಪತಿಂ ।
ಧರ್ಮೋಽಲ್ಪಃ ಪಾಪಬಾಹುಲ್ಯಂ ಸ್ವರ್ಗಪ್ರಾಪ್ತಿಸ್ತು ಕೀದೃಶೀ || ೩೧ ||

ಜೀವನ್ನಯಂ ಪತಿಃ ಸ್ವೀಯಃ ಸಾಧ್ವ್ಯಯಂ ಪ್ರತಿಪಾಲಿತಃ ।
ಯದುಕ್ತಂ ಪತಿಪತ್ನೀಭ್ಯಾಂ ತತ್ತ್ವಯಾ ವಿಹಿತಂ ಸಖಿ || ೩೨ ||

---

೨೯. ನಾರದನು ಹೇಳಿದನು–ದುಷ್ಟರೂ ದುಷ್ಟತನವನ್ನು ಹೇಳಿಕೊಡುವವರೂ ಆದ ಸಖಿಯರಿಗೆ ಆಕೆಯು ಇಂತೆಂದು ಹೇಳಲು ಆ ಸಖಿಯರು ಜನಗಳಿಗೆ ಕಣ್ಣಿಗೆ ಮಣ್ಣೆರಚುವಂತೆ ಮಾತನಾಡುತ್ತಿರುವ ಆಕೆಯನ್ನು ಕುರಿತು ಇಂತೆಂದರು.

೩೦. ಸಖಿಯರು ಹೇಳಿದರು-ಎಲೈ ಸಖಿಯೆ ! ನೀನು ನಮ್ಮನ್ನು ತಿರಸ್ಕರಿಸುತ್ತೀಯೆ. ನೀನು ನಿನ್ನ ಪತಿಯನ್ನು ಅನುಸರಿಸು. ನಮ್ಮಲ್ಲಿ ಒಬ್ಬರೂ ಕೂಡ ನಿನ್ನ ವಿಯೋಗವನ್ನು ಸಹಿಸಲಾರೆವು.

೩೧. ನಮ್ಮನ್ನು ನೀನು ಸಾಯುವಂತೆ ಮಾಡಿ ಗಂಡನನ್ನು ಅನುಸರಿಸಿದರೆ ಅದರಿಂದ ನಿನಗೂ ಬರುವ ಧರ್ಮವು ಅತ್ಯಲ್ಪವು. ಪಾಪವೇ ಬಹುವಾಗಿರುತ್ತದೆ. ಸ್ವರ್ಗವು ಹೇಗೆ ಸಿಕ್ಕೀತು ?

೩೨. ಎಲೈ ಸಖಿಯೇ ! ಗಂಡನು ಬದುಕಿದ್ದಾಗ ಅವನನ್ನು ಸರಿಯಾಗಿ ಕಾಪಾಡಿಕೊಂಡಿದ್ದೆ. ಗಂಡ ಹೆಂಡತಿಯರಿಗೆ ಯಾವ ಧರ್ಮವು ಹೇಳಲ್ಪಟ್ಟಿದೆಯೋ ಅದನ್ನು ಸರಿಯಾಗಿ ಕಾಪಾಡಿಕೊಂಡು ಅದರಂತೆಯೇ ಮಾಡಿದೆ.

ಯಾವತ್ ಸ್ವಜೀವನೋಪಾಯಂ ವಿಧಾತುಮಯಮಕ್ಷಮಃ ।
ತಾವತ್ತ್ವದೀಯಭಾಗ್ಯೇನ ಜೀವಿಷ್ಯತಿ ಸುತಸ್ತವ ॥ ೩೩ ॥

॥ ನಾರದ ಉವಾಚ ॥

ಇತ್ಯುಕ್ತಾ ಸಾ ನಿವವೃತೇ ಸ್ವಭರ್ತುರನುಯಾನತಃ ।
ಸುತೇನ ಕಾರಯಾಮಾಸ ತದಾ ತದ್ವಿರತಿಕ್ರಿಯಾಂ ॥ ೩೪ ॥

ಅಥ ಕಾಲೇನ ಕಿಯತಾ ಸುತೋಪನಯನೇ ಮತಿಂ ।
ಕಾರಯಾಮಾಸ ಸಾ ವಿಪ್ರೈರ್ದತ್ತ್ವಾ ಜಾರಾರ್ಪಿತಂ ಧನಂ ॥ ೩೫ ॥

ಕೃತೋಪನಯನಃ ಕುಂಡಃ ಸ ತತ್ತ್ವಜ್ಞಾನವಾನ್ ಶಿಶುಃ ।
ಗೃಹಾನ್ನಿರ್ಗಮ್ಯ ಸಪದಿ ನಾರಾಯಣಪರೋಽಭವತ್ ॥ ೩೬ ॥

ಸತಾಂ ಸಂಗತಿಮಾಸಾದ್ಯ ತ್ಯಕ್ತ್ವಾ ಸ ಪ್ರಾಕೃತಂ ವಪುಃ ।
ಆರುರೋಹ ನಿಜಂ ಲೋಕಮಪ್ರಾಪ್ಯಂ ಯೋಗಿಭಿಶ್ಚ ತತ್ ॥ ೩೭ ॥

---

೩೩. ಈ ಮಗುವು ತನ್ನ ಜೀವನೋಪಾಯವನ್ನು ಮಾಡಿಕೊಳ್ಳಲು ಶಕ್ತನಾಗುವವರೆಗೂ ನಿನ್ನ ಭಾಗ್ಯದಿಂದಲೇ ಜೀವಿಸಬೇಕಾಗಿರುತ್ತದೆ.

೩೪. ನಾರದನು ಹೇಳಿದನು- ಅವರೆಲ್ಲರೂ ಹೀಗೆ ಹೇಳಲು ಆಕೆಯು ತನ್ನ ಪತಿಯೊಡನೆ ಸಹಗಮನವನ್ನು ನಿಲ್ಲಿಸಿದಳು. ಅನಂತರ ಮಗನಿಂದ ಆತನ ಉತ್ತರಕ್ರಿಯೆಗಳನ್ನು ಮಾಡಿಸಿದಳು.

೩೫. ಅನಂತರ ಕೆಲವು ಕಾಲದ ಮೇಲೆ ಜಾರರು ಕೊಟ್ಟ ಹಣದಿಂದ ಆ ಮಗನಿಗೆ ಉಪನಯನವನ್ನು ಬ್ರಾಹ್ಮಣರಿಂದ ಮಾಡಿಸಬೇಕೆಂಬ ಬುದ್ಧಿಯನ್ನು ಮಾಡಿಕೊಂಡಳು. ಮತ್ತು ಹಾಗೆಯೇ ಮಾಡಿಸಿದಳು.

೩೬. ಗಂಡನಿದ್ದಾಗಲೇ ಮಿಂಡನಿಂದ ಹುಟ್ಟಿದ ಆ ಕುಂಡನೆಂಬ ಹೆಸರನ್ನು ಪಡೆದ ಮಗನು ಉಪನಯನವಾಗುತ್ತಲೂ ತತ್ತ್ವಜ್ಞಾನಿಯಾದನು. ಒಡನೆಯೇ ಹೊರಟು ನಾರಾಯಣನನ್ನು ಧ್ಯಾನಮಾಡತೊಡಗಿದನು.

೩೭. ಆ ಕುಂಡನು ಸತ್ಪುರುಷರ ಸಹವಾಸವನ್ನು ಹೊಂದಿ ಈ ದೇಹವನ್ನು ಬಿಟ್ಟುಬಿಟ್ಟನು. ಅನಂತರ ಯೋಗಿಗಳಿಂದಲೂ ಹೊಂದಲಸಾಧ್ಯವಾದ ಉತ್ತಮವಾದ ಲೋಕವನ್ನು ಹೊಂದಿದನು.

**ಅಥ ಸ ನಿರ್ಗತೇ ಪುತ್ರೇ ಮನೋದುಃಖಂ ಚಕಾರ ವೈ ।**
**ತಸ್ಮಿನ್ನೇವ ದಿನೇ ರಾಜನ್ ಭೂಯೋ ಜಾರೈಸ್ಸಹಾರಮತ್ ॥ ೩೮ ॥**

**ಇತಿ ತೈಃ ರಮಮಾಣಾಯಾಂ ತಸ್ಯಾಂ ಜಾರೈಃ ಸಮಂ ನೃಪ ।**
**ಸಮಾಗತಾ ಜರಾ ಕಾಲೇ ಲಾವಣ್ಯಮದನಾಶಿನೀ ॥ ೩೯ ॥**

**ತ್ಯಕ್ತೋಽಪಪತಿಭಿರ್ದುಷ್ಟಾ ಸಾ ಜರಾಗ್ರಸ್ತವಿಗ್ರಹಾ ।**
**ಬಭೂವ ದೂತಿಕಾಽನ್ಯಾಸಾಂ ಕುಲಶೀಲವಿನಾಶಿನೀ ॥ ೪೦ ॥**

**ತದಾ ಹ್ಯೇಕಸ್ಯ ವಿಪ್ರಸ್ಯ ಸವತ್ಸಾಂ ಗಾಮುಪಾಹರತ್ ।**
**ವಿಕ್ರೀತಾ ಕಿಯತಾ ರಾಜನ್ ದ್ರವ್ಯೇಣ ನನು ಸಾ ತಯಾ ॥ ೪೧ ॥**

**ತಯೇತಿ ಗಮಿತಂ ಕಾಲೋ ದೂತಿತ್ವೇನ ಕಿಯಾನ್ನೃಪ ।**
**ಪಶ್ಚಾತ್ಕುಷ್ಠಂ ಶರೀರೇಸ್ಯಾ ವಿಗುಣಂ ಸಮಜಾಯತ ॥ ೪೨ ॥**

---

೩೮. ಆ ಮಗನು ಹೊರಟುಹೋದಮೇಲೆ ಆಕೆಯು ಬಹು ದುಃಖಪಟ್ಟಳು. ಆದರೂ ಆ ದಿನವೂ ಅವಳು ಮತ್ತೆ ಜಾರರೊಡನೆ ರಮಿಸಿದಳು.

೩೯. ಆಕೆಯು ಹೀಗೆ ಜಾರರೊಡನೆ ರಮಿಸುತ್ತಿರಲು ಕೊನೆಗೆ ಕಾಲವನ್ನು ಅನುಸರಿಸಿ ಲಾವಣ್ಯದ ಮದವನ್ನು ನಾಶಮಾಡುವ ಮುಪ್ಪುಬಂದಿತು.

೪೦. ಆಗ ಜಾರರೆಲ್ಲರೂ ಈಕೆಯನ್ನು ಬಿಟ್ಟುಬಿಟ್ಟರು. ಈಕೆಯು ಮುಪ್ಪಿನಿಂದ ಕೂಡಿ ತಾನು ರಮಿಸಲಾರದೆ ಮತ್ತೊಬ್ಬರಿಗೆ ದೂತಿಯಾಗಿ ಕುಲ ಶೀಲಗಳನ್ನು ಯೋಚನೆಮಾಡದೆ ಇದ್ದಳು.

೪೧. ಆಗ ಒಬ್ಬ ಬ್ರಾಹ್ಮಣನ ಹಸುವನ್ನೂ ಕರುವನ್ನೂ ಕದ್ದಳು. ಅದನ್ನು ಅವಳು ಸ್ವಲ್ಪಹಣಕ್ಕೆ ಯಾರಿಗೋ ಮಾರಿಬಿಟ್ಟಳು.

೪೨. ಆಕೆಯು ದೂತಿಯಾಗಿ ಈ ರೀತಿಯಾಗಿ ಕಾಲವನ್ನು ಕಳೆದಳು. ಕೊನೆಗೆ ಆಕೆಯ ದೇಹದಲ್ಲಿ ಕುಷ್ಠರೋಗವು ಉಂಟಾಗಿ ಆಕಾರವು ಬಹು ಕೆಟ್ಟುಹೋಯಿತು.

ತಸ್ಯಾಃ ಕುಷ್ಠೇ ಸಮುತ್ಪನ್ನೇ ಗಳಿತಂ ಹ್ಯಂಗಪಂಚಕಂ ।
ಹಸ್ತೌ ಪಾದೌ ಚ ನೃಪತೇ ಪಂಚಮೀ ನಾಸಿಕಾ ತದಾ ॥ ೪೩ ॥

ಏವಂ ಭೂತಾ ಯದಾಹಾರಂ ನ ಲಭೇತ ಕುತಶ್ಚನ ।
ತದಾ ತು ತತ್ರೋದಿತಯಾ ದಾಸ್ಯಾ ಸಾಽಽನೀಯತಾಽಽಪಣಂ ॥ ೪೪ ॥

ತತ್ರ ಸಂಪತಿತಾ ಪಾಪಾ ಲೋಕಾನ್ ಸಂಪ್ರಾಪ್ಯ ದೀನಯಾ ।
ಗಿರಾ ಧಿಗಿತಿ ಕುರ್ವಾಣಾ ಚಕ್ರೇ ಸ್ವೋದರಪೂರಣಂ ॥ ೪೫ ॥

ತದಿಹಾಭ್ಯಾಸವರ್ತ್ಯೇಕೋ ದ್ವಿಜಸ್ಸರ್ವಾಗಮಾರ್ಥವಿತ್ ।
ತಾಂ ವಿಲೋಕ್ಯ ಮಹಾವಾಗ್ಮೀ ಪ್ರೋವಾಚೇದಂ ವಚೋ ನೃಪ ॥ ೪೬ ॥

॥ ದ್ವಿಜ ಉವಾಚ ॥

ಜನಾನಾಂ ದುಃಖದಂ ಪಾಪಮಿಹ ಲೋಕೇ ಪರತ್ರ ಚ ।
ತಸ್ಮಾತ್ಪಾಪಂ ನ ಕರ್ತವ್ಯಂ ಮಾನವೈರ್ದುಃಖಭೀರುಭಿಃ ॥ ೪೭ ॥

---

೪೩. ಅವಳಿಗೆ ಹೀಗೆ ಕುಷ್ಠರೋಗವು ಬರಲು ಎರಡು ಕೈಗಳು ಎರಡು ಕಾಲುಗಳು. ಮೂಗು ಈ ರೀತಿಯಾಗಿ ಐದು ಅಂಗಗಳು ಕೆಟ್ಟುಹೋದುವು.

೪೪. ಹೀಗೆ ವಿಕಾರವಾಗಿ ಕೈಲಾಗದೆ ಆಕೆಗೆ ಎಲ್ಲಿಯೂ ಆಹಾರವು ಸಿಕ್ಕದೆ ಹೋಗಲು ಅವಳ ಯಜಮಾನಿಯು ಅವಳನ್ನು ಅಂಗಡಿ ಬೀದಿಗೆ ಮತ್ತೊಬ್ಬಳ ಜತೆಮಾಡಿ ಬಿಟ್ಟುಬಿಟ್ಟಳು.

೪೫. ಅಲ್ಲಿ ಅವಳು ಕೈಲಾಗದೆ ಜನಗಳ ಎದುರಿಗೆ ಬಿದ್ದು ಬಿಟ್ಟಳು. ಆಗ ಆಕೆಯು ಎಲ್ಲರಿಂದಲೂ ಛೆ ಥೂ ಎಂದು ಬಯ್ಯಿಸಿಕೊಳ್ಳುತ್ತ ಬೇಡಿಕೊಂಡು ತನ್ನ ಹೊಟ್ಟೆಯನ್ನು ತುಂಬಿಕೊಳ್ಳುತ್ತಿದ್ದಳು.

೪೬. ಆಗ ಅವಳ ಮನೆಯ ಪಕ್ಕದಮನೆಯ ಎಲ್ಲಾ ಶಾಸ್ತ್ರಗಳನ್ನೂ ಬಲ್ಲ ಮಾತಾಳಿಯಾದ ಬ್ರಾಹ್ಮಣನೊಬ್ಬನು ಈಕೆಯನ್ನು ನೋಡಿ ಈ ರೀತಿಯಾಗಿ ಹೇಳಿದನು.

೪೭ ಬ್ರಾಹ್ಮಣನು ಹೇಳಿದನು–ಜನಗಳಿಗೆ ತಾವು ಮಾಡಿದ ಪಾಪವು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಕೂಡ ದುಃಖವನ್ನು ಕೊಡುತ್ತದೆ. ಆದ್ದರಿಂದ ದುಃಖಕ್ಕೆ ಹೆದರುವ ಮನುಷ್ಯರು ಪಾಪಕೆಲಸವನ್ನು ಮಾಡಬಾರದು.

ಪಾಪಂ ಕೃತ್ವಾ ಜನೋ ಯಸ್ತು ಪ್ರಾಯಶ್ಚಿತ್ತಂ ಕರೋತಿ ವೈ ।
ನ ತದಾಚರತೇ ಭೂಯೋ ನ ತತ್ಫಲಮವಾಪ್ನುಯಾತ್ ॥ ೪೮ ॥

ಯಃ ಕೃತ್ವಾ ಮುಹುರೇನಾಂಸಿ ಪ್ರಾಯಶ್ಚಿತ್ತಂ ಕರೋತಿ ನ ।
ತಸ್ಯಾಸ್ಯಾ ಇವ ಪಾಪಾಯಾ ಪತಿರತ್ರ ಪರತ್ರ ಚ ॥ ೪೯ ॥

ಅನಯಾ ಪಾಪಸಂಘಾತೋ ಲೋಕೇತ್ರ ಸಮುಪಾರ್ಜಿತಃ ।
ಇಹೈವ ತತ್ಫಲಂ ಭುಂಕ್ತೇ ಭೋಕ್ಷ್ಯತೇ ನರಕೇಪ್ಯಸೌ ॥ ೫೦ ॥

ಸರ್ವಶಾಸ್ತ್ರೇಷು ದೃಷ್ಟಂ ವೈ ಸರ್ವೇಷಾಂ ಪಾಪಕರ್ಮಣಾಂ ।
ಪ್ರಾಯಶ್ಚಿತ್ತಂ ನ ಚ ಸ್ತ್ರೀಣಾಂ ವಿಮುಖಾನಾಂ ಸ್ವಕರ್ಮಣಃ ॥ ೫೧ ॥

---

೪೮. ಯಾವುದಾದರೂ ಪಾಪಕೆಲಸವನ್ನು ಮಾಡಿದವನು ಅದರ ಪರಿಹಾರಕ್ಕೋಸ್ಕರ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾನೆ. ಅನಂತರ ಆ ಪಾಪಕೆಲಸವನ್ನು ಮಾಡುವುದೇ ಇಲ್ಲ. ಆಗ ಆ ಪಾಪಗಳ ಫಲವನ್ನು ಅವನು ಅನುಭವಿಸುವುದೂ ಇಲ್ಲ.

೪೯. ಯಾವನು ಮತ್ತೆ ಮತ್ತೆ ಪಾಪಗಳನ್ನು ಮಾಡುತ್ತಾನೆಯೋ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದಿಲ್ಲವೋ ಅವನು ಇವರಂತೆ ಪಾಪಿಯಾಗಿ ಈ ಲೋಕಪರಲೋಕಗಳ ಸೌಖ್ಯವೊಂದನ್ನೂ ಹೊಂದುವುದಿಲ್ಲ.

೫೦. ಈಕೆಯು ಈ ಲೋಕದಲ್ಲಿ ಪಾಪದ ಮೂಟೆಗಳನ್ನೇ ಸಂಪಾದಿಸಿಕೊಂಡಿದ್ದಾಳೆ. ಈ ಲೋಕದಲ್ಲಿಯೂ ಅದರ ಫಲವನ್ನು ಅನುಭವಿಸುತ್ತಾಳೆ. ಪರಲೋಕದಲ್ಲಿಯೂ ಅನುಭವಿಸುತ್ತಾಳೆ.

೫೧. ಎಲ್ಲಾ ಪಾಪಗಳಿಗೂ ಎಲ್ಲಾ ಶಾಸ್ತ್ರಗಳಲ್ಲಿಯೂ ಪ್ರಾಯಶ್ಚಿತವನ್ನು ಹೇಳಿರುತ್ತದೆ. ಆದರೆ ಅವರವರ ಧರ್ಮದಲ್ಲಿ ಮನಸ್ಸಿಡದೆ ಪಾಪಮಾಡಿದ ಹೆಂಗಸರಿಗೆ ಎಲ್ಲಿಯೂ ಪ್ರಾಯಶ್ಚಿತ್ತವನ್ನು ಹೇಳಿಯೇ ಇಲ್ಲ.

॥ ನಾರದ ಉವಾಚ ॥

ಇತ್ಯುಕ್ತ್ವಾ ಸ ದ್ವಿಜಶ್ರೇಷ್ಠೋ ನಮಸ್ಕೃತ್ಯ ರವಿಂ ಯಯೌ ।
ವಿಷ್ಣುಂ ಸಂಸ್ಮೃತ್ಯ ಸಂಸ್ಮೃತ್ಯ ಭೀತಸ್ತದವಲೋಕನಾತ್ ॥ ೫೨ ॥

ಏವಂ ಸಾ ದುಃಖಮಾಪನ್ನಾ ಭುಂಜಾನಾ ಕರ್ಮಣಃ ಫಲಂ ।
ಅರ್ಜಿತಸ್ಯ ಸ್ವಯಂ ರಾಜನ್ ಮೃತಾ ಕತಿಪಯೈರ್ದಿನೈಃ ॥ ೫೩ ॥

ನ ತಸ್ಯಾ ಅಗ್ನಿಸಂಸ್ಕಾರಃ ಸಂಜಾತಃ ಪಾಪಕರ್ಮಣಃ ।
ಆಕೃಷ್ಯ ಕೇಶೇ ಸಾ ನೀತಾ ಶ್ವಪಚೈರ್ನಗರಾದ್ಬಹಿಃ ॥ ೫೪ ॥

ಮರಣಾವಸರೇ ತಸ್ಯಾ ಯಮಭೃತ್ಯಾಃ ಸಮಾಗತಾಃ ।
ಪ್ರಾಪಯ್ಯ ಯಾತನಾದೇಹಂ ತಾಂ ನಿನ್ಯುಃ ಭಾಸ್ಕರೇಃ ಪುರೀಂ ॥ ೫೫ ॥

---

೫೨. ನಾರದನು ಹೇಳಿದನು-ಆ ಬ್ರಾಹ್ಮಣನು ಹೀಗೆಂದು ಹೇಳಿ ಕಷ್ಟವನ್ನು ಹೊಂದಿರುವವರನ್ನೂ ಪಾಪಿಗಳನ್ನೂ ನೋಡಿದರೆ ಸೂರ್ಯದರ್ಶನವನ್ನು ಮಾಡಬೇಕು. ಎಂದು ಹೇಳಿರುವುದರಿಂದ ಸೂರ್ಯನಿಗೆ ನಮಸ್ಕರಿಸಿ ಹೊರಟು ಆ ಪಾಪಪರಿಹಾರಕೋಸ್ಕರ ವಿಷ್ಣುವನ್ನೇ ಸ್ಮರಿಸುತ್ತ ಅವಳನ್ನು ಮತ್ತೆಲ್ಲಿ ನೋಡುವೆನೊ ? ಎಂದು ಹೆದರುತ್ತ ಹೊರಟುಹೋದನು.

೫೩. ಈ ರೀತಿಯಾಗಿ ಆಕೆಯು ತಾನು ಸಂಪಾದಿಸಿದ ಪಾಪದಫಲವನ್ನು ಅನುಭವಿಸುತ್ತ ದುಃಖಿನಿಯಾಗಿದ್ದಳು. ಹೀಗಿರುತ್ತಿರಲು ಕೆಲವು ದಿನಗಳಲ್ಲಿಯೇ ಸತ್ತಳು.

೫೪. ಅವಳ ಪಾಪಕರ್ಮದ ಫಲದಿಂದ ಅಗ್ನಿಯ ಸಂಸ್ಕಾರವು ಅವಳಿಗಾಗಲಿಲ್ಲ. ಸತ್ತನಂತರ ಜುಟ್ಟನ್ನು ಹಿಡಿದು ಹೆಣವನ್ನು ಆ ಊರಿನ ಚಂಡಾಲರು ಎಳೆದುಕೊಂಡು ಹೋಗಿ ಊರ ಹೊರಗೆ ಬಿಸಾಡಿದರು.

೫೫. ಅವಳು ಸಾಯುವಾಗ ಯಮನ ಆಳುಗಳು ಬಂದರು. ಆಕೆಯನ್ನು ಯಾತನಾ ದೇಹಕ್ಕೆ ಸೇರಿಸಿ ಯಮನಪಟ್ಟಣಕ್ಕೆ ಕರೆದುಕೊಂಡು ಹೋದರು.

ಸೌಮ್ಯಃ ಸ ಧರ್ಮಿಣಾಂ ದೇವಃ ಸಾಕ್ಷಾದುಗ್ರಸ್ತು ಪಾಪಿನಾಂ ।
ತಸ್ಯಾ ವಿಲೋಕನಾದ್ಭೂಯಃ ಸೋಽಪ್ಯಭೂದ್ವೈ ಪರಾಙ್ಮುಖಃ ॥ ೫೬ ॥

ಭೃತ್ಯಾನಾಜ್ಞಾಪಯಾಮಾಸ ಯಮ ಏವ ಪರಾಙ್ಮುಖಃ ।
ರೌರವೇ ನರಕೇ ಘೋರೇ ಪಾತ್ಯತಾಂ ತು ಮಯೇರಿತಾ ॥ ೫೭ ॥

ಇತ್ಯುಕ್ತಾಸ್ತೇ ತದಾ ಭೃತ್ಯಾ ನೀತ್ವಾ ತಾಂ ಘೋರರೌರವೇ ।
ನ್ಯಪಾತಯನ್ನಧೋವಕ್ತ್ರಾಂ ಸ್ಮರಂತೀಂ ಕರ್ಮ ಯತ್ಕೃತಂ ॥ ೫೮ ॥

ಏವಂ ಮನ್ವಂತರಂ ಯಾವತ್ಸ್ಥಿತ್ವಾ ತತ್ರ ರೌರವೇ ।
ಪಶ್ಚಾದ್ಗೋದಾ ಸಮುತ್ಪನ್ನಾ ಶ್ಮಶಾನೇ ಮೃತಮಾಂಸಭುಕ್ ॥ ೫೯ ॥

ತತ್ರಾಪಿ ಸಾ ವರ್ಷಶತಂ ಲೇಭೇ ದುಃಖಂ ಸ್ವಕರ್ಮಣಃ ।
ಫಲಂ ಮೃತಕಮಾಂಸೇನ ಕುರ್ವತ್ಯಾಹಾರಮುತ್ಕಟಂ ॥ ೬೦ ॥

---

೫೬. ಆ ಯಮನು ಧರ್ಮಿಷ್ಠರಿಗೆ ಮೃದುವಾಗಿಯೂ ಪಾಪಿಷ್ಠರಿಗೆ ಉಗ್ರನಾಗಿಯೂ ಇರುವನು. ಇವಳನ್ನು ನೋಡಿದೊಡನೆಯೇ ತಲೆಯನ್ನು ತಿರುಗಿಸಿಕೊಂಡನು.

೫೭. ಅವನು ಹಿಂತಿರುಗಿಕೊಂಡೇ "ಈಕೆಯನ್ನು ರೌರವನರಕದಲ್ಲಿ ಹಾಕಿರಿ" ಎಂದು ಆಳುಗಳಿಗೆ ಅಪ್ಪಣೆಮಾಡಿದನು.

೫೮. ಯಮನು ಹೀಗೆ ಹೇಳುತ್ತಲೂ ಅವರು ತನ್ನ ಕರ್ಮವನ್ನು ಜ್ಞಾಪಿಸಿಕೊಳ್ಳುತ್ತಿರುವ ಈಕೆಯನ್ನು ತಲೆಕೆಳಗಾಗಿ ಘೋರವಾದ ರೌರವನರಕದಲ್ಲಿ ಹಾಕಿದರು.

೫೯. ಆಕೆಯು ಹೀಗೆ ಒಂದು ಮನ್ವಂತರದವರೆಗೂ ನರಕವನ್ನು ಅನುಭವಿಸಿ ಅನಂತರ ಶ್ಮಶಾನದಲ್ಲಿ ಹೆಣದ ಮಾಂಸವನ್ನು ತಿನ್ನುವ ನರಿಯಾಗಿ ಹುಟ್ಟಿದಳು.

೬೦. ಆ ಸ್ಮಶಾನದಲ್ಲಿಯೂ ಆಕೆಯು ನರಿಯಾಗಿ ಹೆಣದ ಮಾಂಸವನ್ನು ತಿನ್ನುತ್ತಲೇ ನೂರುವರ್ಷಗಳವರೆಗೂ ತನ್ನ ಕರ್ಮದ ಫಲವನ್ನು ಅನುಭವಿಸಿದಳು.

ಏಕದಾ ಸ ಮುನೇಃ ಪುತ್ರೋ ಯೋಸ್ಯಾಃ ಕುಕ್ಷೌ ವ್ಯಜಾಯತ ।
ವಿಪ್ರಯೋನೌ ಸಮಾಯಾತಃ ಶ್ಮಶಾನೇ ತತ್ರ ಪರ್ಯಟೇ ॥ ೬೧ ॥

ಮುನಿಪುತ್ರಸ್ತು ತಾಂ ವೀಕ್ಷ್ಯ ಮೃತಾನಾಂ ಕ್ರವ್ಯಮಶ್ನತೀಂ ।
ಧ್ಯಾತ್ವಾ ಕ್ಷಣಂ ಸ್ವಮನಸಿ ಬುಬುಧೇ ತಾಂ ಸ್ವಮಾತರಂ ॥
ಸ ಉವಾಚಾತ್ಮನಾತ್ಮಾನಂ ಬುಧ್ವಾ ತಾಂ ನಿಜಮಾತರಂ ॥ ೬೨ ॥

॥ ಮುನಿಪುತ್ರ ಉವಾಚ ॥

ಏತಾಂ ತು ತಾರಯಾಮ್ಯದ್ಯ ದುಸ್ತರಾದ್ದುಃಖವಾರಿಧೇಃ ।
ಅಹೋ ನ ಮುಚ್ಯತೇ ಜಂತುಃ ಜಾತಪಾಪೇನ ಕರ್ಮಣಾ ॥ ೬೩ ॥

ಆತ್ಮನೋಪಾರ್ಜಿತೇನೈವ ಭೋಗಕಾಲಾವಧಿಂ ವಿನಾ ।
ಅಸ್ಯಾಃ ಕಾಲೋ ವ್ಯತೀಯಾಯ ನಿರಯೇ ಮಾನವಾಭಿಧಃ ॥ ೬೪ ॥

---

೬೧. ಇವಳ ಹೊಟ್ಟೆಯಲ್ಲಿ ಹುಟ್ಟಿದ್ದ ಮುನಿಯಾಗಿದ್ದ ಗೋಳಕನು ಅವಳ ಒಂದಿನ ಬ್ರಾಹ್ಮಣ ಜನ್ಮದಲ್ಲಿ ತನ್ನ ಪುಣ್ಯದಿಂದ ಹುಟ್ಟಿದ್ದನು. ಆಗ ಒಂದುಸಾರಿ ಸ್ಮಶಾನದಲ್ಲಿ ಸುತ್ತುತ್ತ ಈಕೆಯಿದ್ದ ಜಾಗಕ್ಕೆ ಬಂದನು.

೬೨. ಆ ಬ್ರಾಹ್ಮಣನ ಮಗನು ಆ ನರಿಯು ಹೆಣದ ಮಾಂಸವನ್ನು ತಿನ್ನುತ್ತಿರುವುದನ್ನು ನೋಡಿದನು. ಕ್ಷಣಕಾಲ ಯೋಚಿಸಿ ಅವಳು ತನ್ನ ತಾಯಿಯೆಂದು ತಿಳಿದುಕೊಂಡನು. ಅವಳು ತನ್ನ ತಾಯಿಯೆಂದು ತಿಳಿದುಕೊಂಡ ಮೇಲೆ ತನ್ನಲ್ಲಿ ತಾನೇ ಇಂತೆಂದುಕೊಂಡನು.

೬೩. ಮುನಿಪುತ್ರನು ಹೇಳಿದನು–ಈಕೆಯನ್ನು ಈಗ ದುಃಖಸಾಗರದಿಂದ ತಪ್ಪಿಸುತ್ತೇನೆ. ಪ್ರಾಣಿಯಾದರೋ ತಾನು ಮಾಡಿದ ಪಾಪದಿಂದ ಬಿಡಲ್ಪಡುವುದೇ ಇಲ್ಲ.

೬೪. ತಾನು ಮಾಡಿದ ಪಾಪವನ್ನು ಭೋಗಿಸಿದ ಹೊರತು ಪ್ರಾಣಿಗೆ ಅದರಿಂದ ಬಿಡುಗಡೆಯೇ ಇಲ್ಲವು. ಈಕೆಯು ಮನ್ವಂತರದಕಾಲ ನರಕವನ್ನು ಅನುಭವಿಸಿರುವುದರಿಂದ ಈಕೆಯ ಆ ಪಾಪದ ಭೊಗದಕಾಲವು ಕಳೆದಿದೆ.

ಸಾಂಪ್ರತಂ ಚ ಜನೇಸ್ತ್ವತ್ರ ವತ್ಸರಾಣಾಂ ಶತಂ ಗತಂ ।
ಕಿಯದಗ್ರೇ ಚ ಭೋಕ್ತ್ರವ್ಯಂ ಏತಯಾ ಪಾಪಮುಲ್ಬಣಂ ॥ ೬೫ ॥

॥ ನಾರದ ಉವಾಚ ॥

ಇತ್ಯಾಲೋಚ್ಯ ಪುನರ್ಧ್ಯಾ ಜ್ಞಾನೇನಾಮೀಲ್ಯ ಚಕ್ಷುಷೀ ।
ದೃಷ್ಟ್ವಾ ತಸ್ಯಾ ಗತಿಂ ಘೋರಾಂ ಪಾಪಾಯಾ ದಿವ್ಯಚಕ್ಷುಷಾ ॥
ಪುನರಾತ್ಮಾನಮಾಹೇದಂ ಸ ದ್ವಿಜಪ್ರವರೋ ನೃಪ ॥ ೬೬ ॥

॥ ಮುನಿಪುತ್ರ ಉವಾಚ ॥

ಅಹೋ ಕಲ್ಪಶತೇನಾಪಿ ನಿಸ್ತಾರೋಸ್ಯಾ ನ ದೃಶ್ಯತೇ ।
ವಿನಾ ಸತ್ತೀರ್ಥಮರಣಂ ಶರಣಂ ವಾ ರಮಾಪತೇಃ ॥ ೬೭ ॥

ಅಥವಾ ಪಿಂಡದಾನೇನ ಗಯಾಯಾಂ ಮತ್ಕೃತೇನ ಚ ।
ವಿನಾಸ್ಯಾಸ್ಸದ್ಗತಿರ್ನೈವ ಕಲ್ಪಕೋಟಿಶತೈರಪಿ ॥ ೬೮ ॥

---

೬೫. ಆ ಪಾಪವನ್ನು ಅನುಭವಿಸಿದಮೇಲೆ ಈಕೆಯು ಹುಟ್ಟಿ ಪಾಪವನ್ನು ಈ ಜನ್ಮದಲ್ಲಿ ಅನುಭವಿಸುತ್ತ ನೂರುವರ್ಷಗಳು ಕಳೆದುವು. ಇನ್ನೂ ಕೂಡ ಇನ್ನುಮುಂದೆ ಈ ಕ್ರೂರಕರ್ಮವನ್ನು ಇನ್ನೆಷ್ಟುಕಾಲ ಅನುಭವಿಸಬೇಕೋ ಕಾಣೆನು.

೬೬. ನಾರದನು ಹೇಳಿದನು–ಹೀಗೆಂದು ಯೋಚಿಸಿ ಮತ್ತೆ ಕಣ್ಣುಗಳನ್ನು ಮುಚ್ಚಿಕೊಂಡು ಧ್ಯಾನಮಾಡಿದನು. ಆಗ ದಿವ್ಯಜ್ಞಾನದಿಂದ ಆ ಪಾಪಿಸಿಯ ಕೆಟ್ಟಸ್ಥಿತಿಯನ್ನು ತಿಳಿದುಕೊಂಡನು. ಮತ್ತೆ ಆ ಬ್ರಾಹ್ಮಣನು ತನ್ನಲ್ಲಿ ತಾನೇ ಇಂತೆಂದುಕೊಂಡನು.

೬೭. ಮುನಿಯ ಮಗನು ಹೇಳಿದನು–ಅಯ್ಯೋ ! ಈಕೆಯು ಮಾಡಿರುವ ಪಾಪಗಳಲ್ಲಿ ನೂರಾರುಕಲ್ಪಗಳು ದಾಟಿದರೂ ಉದ್ಧಾರವಾಗುವಂತೆ ಕಾಣುವುದಿಲ್ಲವಲ್ಲ ! ಒಂದುವೇಳೆ ಆ ಪಾಪವು ಹೋಗಬೇಕಾದರೆ ಒಳ್ಳೆಯ ತೀರ್ಥದಲ್ಲಿ ಮರಣವನ್ನು ಹೊಂದಬೇಕು. ಇಲ್ಲವೇ ರಮಾರಮಣನಾದ ವಿಷ್ಣುವನ್ನು ಶರಣು ಹೊಂದಬೇಕು.

೬೮ ಇಲ್ಲದಿದ್ದರೆ ಗಯೆಯಲ್ಲಿ ನಾನು ಪಿಂಡವನ್ನು ಹಾಕಬೇಕು. ಇವುಗಳಿಲ್ಲದಿದ್ದರೆ ಕೋಟಿಕಲ್ಪಗಳಾದರೂ ಈಕೆಗೆ ಒಳ್ಳೆಯ ಗತಿಯು ಸಿಕ್ಕುವುದೇ ಇಲ್ಲ.

ನ ಘಟೇತ ದ್ವಯಂ ಚಾಸ್ಯಾ ಅಸ್ಯಾಂ ಯೋನೌ ಕದಾಚನ ।
ಸತ್ತೀರ್ಥವಿಷಯೇ ಮೃತ್ಯುಃ ಸೇವಾಯಾಂ ಶ್ರೀಪತೇ ರತಿಃ ॥ ೬೯ ॥

ಅಸ್ಯಾ ಉದ್ಧಾರಹೇತುರ್ವೈ ಮಗ್ನಾಯಾಃ ಪಾಪಸಾಗರೇ ।
ಭವಿತಾ ಮತ್ಕೃತಂ ಶ್ರಾದ್ಧಂ ಗಯಾಯಾಂ ಚ ಪಿಂಡಕಂ ॥ ೭೦ ॥

॥ ನಾರದ ಉವಾಚ ॥

ಇತ್ಯಾಲೋಚ್ಯ ಸ ಧರ್ಮಾತ್ಮಾ ಯಯೌ ಸ್ವಪಿತುರಾಶ್ರಮಂ ।
ಆಚಖ್ಯೌ ಪಿತರಂ ಸರ್ವಂ ಸ್ವಮಾತುರ್ದುಃಖಕಾರಣಂ ॥ ೭೧ ॥

ನಿಶಮ್ಯ ಪುತ್ರವಚನಂ ಮಾತೃದುಃಖನಿವೇದಕಂ ।
ಉವಾಚ ಸ ಮುನಿಶ್ರೇಷ್ಠಃ ಪುತ್ರಂ ಪ್ರಣತಕಂಧರಂ ॥ ೭೨ ॥

---

೬೯. ಒಳ್ಳೆಯ ತೀರ್ಥದಲ್ಲಿ ಮರಣ ಹೊಂದುವುದಾಗಲಿ ಶ್ರೀಪತಿಯನ್ನು ಸೇವಿಸುವುದಾಗಲಿ ಈ ಹೀನಜನ್ಮದಲ್ಲಿ ಇವೆರಡೂ ಸಾಧ್ಯವೇ ಆಗುವುದಿಲ್ಲ.

೭೦. ಈ ರೀತಿಯಾಗಿ ಪಾಪಿನಿಯಾದ ಈಕೆಗೆ ಗಯೆಯಲ್ಲಿ ಶ್ರಾದ್ಧಮಾಡಿ ಪಿಂಡದಾನ ಮಾಡಿದರೆ ಅದು ಮಾತ್ರ ಈಕೆಯನ್ನು ಉದ್ಧಾರಮಾಡುತ್ತದೆ.

೭೧. ನಾರದನು ಹೇಳಿದನು–ಆ ಧರ್ಮಿಷ್ಠನು ಇದೆಲ್ಲವನ್ನೂ ಯೋಚಿಸಿ ತಿಳಿದುಕೊಂಡು ತನ್ನ ತಂದೆಯ ಆಶ್ರಮಕ್ಕೆ ಹೋದನು. ಅಲ್ಲಿ ತನ್ನ ತಾಯಿಗೆ ಬಂದಿರುವ ದುಃಖಕಾರಣಗಳೆಲ್ಲವನ್ನೂ ತಿಳಿಸಿದನು

೭೨. ತನ್ನ ತಾಯಿಗೆ ದುಃಖವನ್ನು ಕೊಟ್ಟಿರುವ ಪಾಪದ ವಿಷಯವನ್ನು ಹೇಳಿ ನಮ್ರತೆಯಿಂದ ತಲೆತಗ್ಗಿಸಿಕೊಂಡು ನಿಂತಿರುವ ಮಗನನ್ನು ಕುರಿತು ಇಂತೆಂದನು.

॥ ಮುನಿರುವಾಚ ॥

ಹೇ ತಾತ ಮಾತರಂ ಸ್ವೀಯಾಂ ಶೀಘ್ರಮುದ್ಧರ ದುರ್ಗತೇಃ ।
ನಯವಿದ್ಭೂಪತಿಶ್ಶತ್ರೋಃ ಜಯಲಕ್ಷ್ಮೀಮಿವಾಹವೇ ॥ ೭೩ ॥

ನ ತಾರಯತಿ ಯಃ ಪುತ್ರೋ ಮಾತರಂ ಪಿತರಂ ಸ್ವಕಂ ।
ದುಃಖಾತ್ಸಯಾತಿ ನರಕಂ ಯದಿ ತಾರಯಿತುಂ ಕ್ಷಮಃ ॥ ೭೪ ॥

ಸ್ವಪುತ್ರಾತ್ ಪ್ರಾಪ್ಯ ಪಾನೀಯಂ ಪಿಂಡಾಂಶ್ಚ ವರತೀರ್ಥಕೇ ।
ಪಿತರೋ ನರಕಾತ್ಸ್ವರ್ಗಂ ಸ್ವರ್ಗಾದ್ಯಾಂತಿ ಹರೇಃ ಪದಂ ॥ ೭೫ ॥

ತಸ್ಮಾದಾಶು ಸಮುತ್ತಿಷ್ಠ ಗಚ್ಛ ಖಾಂಡವಕಾನನೇ ।
ತತ್ರಾಸ್ತಿ ಯಮುನಾ ಪುಣ್ಯಾ ಮುನಿವರ್ಯನಿಷೇವಿತಾ ॥ ೭೬ ॥

ತತ್ತೀರೇಸ್ತಿ ಹರಿಪ್ರಸ್ಥಂ ಸರ್ವತೀರ್ಥಮಯಂ ತತಃ ।
ಪುಣ್ಯಂ ಮಧುವನಂ ತತ್ರ ವಿಷ್ಣುನಾ ಸ್ಥಾಪಿತಂ ಸ್ವಯಂ ॥ ೭೭ ॥

---

೭೩. ಮುನಿಯು ಹೇಳಿದನು-ಅಯ್ಯಾ ಮಗನೆ! ಒಳ್ಳೆಯ ನೀತಿಯನ್ನು ತಿಳಿದಿರುವ ರಾಜನು ಶತ್ರುವಿನ ದೆಸೆಯಿಂದ ಯುದ್ಧದಲ್ಲಿ ಜಯಲಕ್ಷ್ಮಿಯನ್ನು ಉದ್ಧರಿಸುವಂತೆ ನೀನು ನಿನ್ನ ತಾಯಿಯನ್ನು ಈ ಪಾಪಗಳ ತೊಂದರೆಯಿಂದ ಜಾಗ್ರತೆಯಾಗಿ ಉದ್ಧಾರಮಾಡು.

೭೪. ಪಾಪದಿಂದ ಉದ್ಧಾರಮಾಡುವುದಕ್ಕೆ ಶಕ್ತಿಯಿದ್ದರೂ ಯಾವನು ತನ್ನ ತಾಯಿತಂದೆಗಳನ್ನು ಆ ನರಕಗಳಿಂದ ಪಾರುಮಾಡುವುದಿಲ್ಲವೋ ಅವನು ಆ ಪಾಪಗಳಿಂದ ನರಕವನ್ನು ಹೊಂದುತ್ತಾನೆ

೭೫. ಆ ತಾಯಿತಂದೆಗಳು ತನ್ನ ಮಗನ ದೆಸೆಯಿಂದ ಪಿಂಡವನ್ನೂ ನೀರನ್ನೂ ಉತ್ತಮ ತೀರ್ಥದಲ್ಲಿ ಹೊಂದಿ ನರಕದಿಂದ ಸ್ವರ್ಗವನ್ನೂ ಅನಂತರ ಸ್ವರ್ಗದಿಂದ ವೈಕುಂಠವನ್ನೂ ಹೊಂದುತ್ತಾರೆ.

೭೬-೭೭. ಆದ್ದರಿಂದ ಬೇಗನೆ ಏಳು. ಖಾಂಡವಕಾನನಕ್ಕೆ ಹೋಗು. ಅಲ್ಲಿ ಪುಣ್ಯಕರವಾದ ಯಮುನಾ ನದಿಯಿರುವುದು. ಅದನ್ನು ಮುನಿಗಳೂ ಕೂಡ ಸೇವಿಸುತ್ತಿರುವರು. ಅದರ ದಡದಲ್ಲಿ ಸರ್ವತೀರ್ಥಗಳಿಂದ ಕೂಡಿದ ಇಂದ್ರಪ್ರಸ್ಥ ವಿರುವುದು. ಅದರ ಹತ್ತಿರ ಪುಣ್ಯಕರವಾದ ಮಧುವನವಿರುವುದು. ಅದನ್ನು ವಿಷ್ಣುವು ತಾನಾಗಿಯೇ ಸ್ಥಾಪಿಸಿರುವನು.

ತತ್ರ ಸ್ನಾತ್ವಾ ತು ವಿಧಿವತ್ ಕೃತ್ವಾ ನಿತ್ಯಕ್ರಿಯಾಂ ನಿಜಾಂ ।
ತಾಮುದ್ದಿಶ್ಯ ಕುರು ಶ್ರಾದ್ಧಂ ಸ್ವಪ್ರಸೋಶ್ಚ ಕುರು ಕ್ರಿಯಾಂ ॥ ೭೮ ॥

ತ್ವಯಾ ತತ್ರ ಕೃತೇ ಶ್ರಾದ್ಧೇ ತಸ್ಯಾಸ್ಸದ್ಗತಿಮಿಚ್ಛತಾ ।
ಸಾ ಪ್ರಸ್ಸ್ಯತಿ ಹರೇರ್ಲೋಕಂ ಹಿತ್ವಾ ಗೋಧಾಂಗಮುಲ್ಬಣಂ ॥ ೭೯ ॥

ಗಯಾಯಾಂ ಪಿಂಡದಾನೇನ ಯತ್ಪುಣ್ಯಂ ತಾತ ಜಾಯತೇ ।
ತತಶ್ಶತಗುಣಂ ಪುಣ್ಯಂ ಸದ್ಭಿರ್ಮಧುವನೇ ಸ್ಮೃತಂ ॥ ೮೦ ॥

ಇದಾನೀಂ ವರ್ತತೇ ತಾತ ಕನ್ಯಾರಾಶಿಗತೋ ರವಿಃ ।
ಪುತ್ರ ಗತ್ವಾ ಕುರು ಶ್ರಾದ್ಧಂ ಪೂರ್ವಾನುದ್ದಿಶ್ಯ ಬಾಂಧವಾನ್ ॥ ೮೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಮಧುವನ ಮಹಿಮ ವರ್ಣನಂ ನಾಮ ನವಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೮-೮೦. ಅಲ್ಲಿ ಶಾಸ್ತ್ರೋಕ್ತವಾಗಿ ಸ್ನಾನಮಾಡಿ ನಿನ್ನ ನಿತ್ಯಕ್ರಿಯೆಗಳೆಲ್ಲ ವನ್ನೂ ಮಾಡಿಕೊಂಡು ಆ ನಿನ್ನ ತಾಯಿಯನ್ನು ಉದ್ದೇಶಿಸಿ ತರ್ಪಣವನ್ನೂ ಶ್ರಾದ್ಧವನ್ನೂ ಮಾಡು. ಆಕೆಗೆ ಸದ್ಗತಿ ಬರಲೆಂದು ನೀನು ಅಲ್ಲಿ ಶ್ರಾದ್ಧಮಾಡಿದ ಒಡನೆಯೇ ಈ ನರಿಯ ದೇಹವನ್ನು ಬಿಟ್ಟು ಆಕೆಯು ದಿವ್ಯಶರೀರವನ್ನು ಹೊಂದಿ ಹರಿಯ ಲೋಕವನ್ನು ಹೊಂದುತ್ತಾಳೆ. ಗಯೆಯಲ್ಲಿ ಪಿಂಡವನ್ನು ಹಾಕಿದರೆ ಯಾವ ಪುಣ್ಯವು ಬರುವುದೋ ಅದಕ್ಕಿಂತಲೂ ನೂರರಷ್ಟು ಹೆಚ್ಚಾದ ಪುಣ್ಯವು ಈ ಮಧುವನದಲ್ಲಿ ಪಿಂಡದಾನ ಮಾಡಿದರೆ ಬರುತ್ತದೆಂದು ಮುನಿಗಳು ಹೇಳುತ್ತಾರೆ.

೮೧. ಎಲೈ ಪುತ್ರನೇ! ಈಗ ಸೂರ್ಯನು ಕನ್ಯಾರಾಶಿಗೆ ಬಂದಿದ್ದಾನೆ. ಆದ್ದರಿಂದ ನೀನು ಅಲ್ಲಿಗೆ ಹೋಗಿ ಹಿಂದಿನ ಬಂಧುಗಳನ್ನುದ್ದೇಶಿಸಿಕೊಂಡು ಶ್ರಾದ್ಧವನ್ನು ಮಾಡು-

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಮಧುವನ ಮಹಿಮೆಯ ವರ್ಣನೆ ಎಂಬ ಇನ್ನೂರ ಒಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದಶಾಧಿಕದ್ವಿಶತತಮೋಽಧ್ಯಾಯಃ ॥



### ॥ ನಾರದ ಉವಾಚ ॥

**ಇತ್ಯಾಕರ್ಣ್ಯ ಪಿತುರ್ವಾಕ್ಯಂ ಸ ಜಗಾಮ ತ್ವರಾನ್ವಿತಃ ।**
**ಪುಣ್ಯಂ ಮಧುವನಂ ರಾಜನ್ ಗಯಾಶತಗುಣಾಧಿಕಂ ॥ ೧ ॥**

**ತತ್ತೀರವಾಸಿನೋ ವಿಪ್ರಾನ್ ಸಾಯಮಾಮಂತ್ರ್ಯ ಮಂತ್ರವಿತ್ ।**
**ಕಾಲೇ ಪುನಸ್ಸಮಾಹೂಯ ಬಭಾಷೇ ಸ್ವಾಗತಂ ವಚಃ ॥ ೨ ॥**

**ತತಃ ಪ್ರಕ್ಷಾಳ್ಯ ತತ್ಪಾದೌ ಗಂಧಾದ್ಯೈರಭಿಪೂಜ್ಯ ಚ ।**
**ಪಾದಾರ್ಘ್ಯಮದದಾತ್ಪ್ರೀತ್ಯಾ ಸವ್ಯೇನ ಸ್ವಯಮಾಚಮತ್ ॥ ೩ ॥**

---

### ಇನ್ನೂರ ಹತ್ತನೆಯ ಅಧ್ಯಾಯವು



೧. ನಾರದನು ಹೇಳಿದನು-ತಂದೆಯ ಈ ಮಾತನ್ನು ಕೇಳಿ ಮಗನು ಗಯೆಗಿಂತಲೂ ನೂರರಷ್ಟು ಹೆಚ್ಚಾದ ಪುಣ್ಯವನ್ನು ಕೊಡುವ ಪುಣ್ಯಕರವಾದ ಮಧುವನವನ್ನು ಕುರಿತು ಹೊರಟನು.

೨. ನದಿಯ ದಡದಲ್ಲಿ ವಾಸಿಸುವ ಬ್ರಾಹ್ಮಣರಿಗೆ ವಿಧಿಪೂರ್ವಕವಾಗಿ ಹಿಂದಿನ ಸಾಯಂಕಾಲವೇ ಹೇಳಿ ಮತ್ತೆ ಮಾರನೆಯ ದಿನ ಸ್ವಾಗತವನ್ನು ಕೊಟ್ಟನು.

೩. ಅನಂತರ ಕಾಲುಗಳನ್ನು ತೊಳೆದು ಗಂಧ ಹೂಗಳಿಂದ ಪೂಜಿಸಿ ಪಾದಾರ್ಘ್ಯವನ್ನು ಕೊಟ್ಟು ಅನಂತರ ಸವ್ಯದಿಂದ ಆಚಮನಮಾಡಿದನು.

ತತಸ್ತಾನ್ ಬ್ರಾಹ್ಮಣಾನ್ನೀತ್ವಾ ಶ್ರಾದ್ಧದೇಶೇ ನ್ಯವೇಶಯತ್ ।
ಕುಶಾಂಬುತುಲಸೀಪುಷ್ಪಗಂಧಾಕ್ಷತತಿಲೈಸ್ಸಹ ॥ ೪ ॥

ಪೂರಯಿತ್ವಾ ಕರ್ಮಪಾತ್ರಂ ಪುಂಡರೀಕಾಕ್ಷಮಸ್ಮರತ್ ।
ದೇವತಾಭ್ಯ ಇತಿ ಶ್ಲೋಕಂ ತ್ರಿಃ ಕೃತ್ವಾ ಸೋಽಪಠದ್ದ್ವಿಜಃ ॥ ೫ ॥

ಸತಿಲಶೋಧಿತಕುಶೈಃ ವಿದಧೇ ಬಂಧನಂ ತತಃ ।
ಅಗ್ನಿಷ್ವಾತ್ತೇತಿ ಮಂತ್ರೇಣ ಪೂರ್ವಾದೀನಾಂ ದಿಶಾಂ ಕ್ರಮಾತ್ ॥ ೬ ॥

ರಕ್ಷೋಭೂತೇತಿಮಂತ್ರೇಣ ನೀವೀಬಂಧಂ ವ್ಯಧಾಚ್ಚ ಸಃ ।
ತತಃ ಪ್ರತಿಜ್ಞಾಮಾಧಾಯ ದದೌ ದ್ವಿಜಕುಶಾಸನಂ ॥ ೭ ॥

ಪಿತೄನ್ ಸಮಾಹ್ವಯಾಮಾಸ ಸ ತದಾ ಬ್ರಾಹ್ಮಣೋತ್ತಮಃ ।
ದತ್ವಾ ತತಸ್ತು ಹಸ್ತಾರ್ಘ್ಯಂ ಪಾತ್ರಂ ನ್ಯುಬ್ಜೀಚಕಾರ ವೈ ॥ ೮ ॥

---

೪. ಅನಂತರ ಆ ಬ್ರಾಹ್ಮಣರನ್ನು ಕರೆದುಕೊಂಡು ಹೋಗಿ ಶ್ರಾದ್ಧಮಾಡುವ ಜಾಗದಲ್ಲಿ ಕೂರಿಸಿ ದರ್ಭೆ ನೀರು ತುಲಸೀ ಹೂ ಗಂಧ ಅಕ್ಷತೆ ಎಳ್ಳುಗಳನ್ನು ತೆಗೆದುಕೊಂಡನು.

೫. ಆ ದರ್ಭೆಯೇ ಮುಂತಾದುವುಗಳಿಂದ ಕರ್ಮಪಾತ್ರವನ್ನು ತುಂಬಿ (ಕಲಶಪೂಜೆಯನ್ನುಮಾಡಿ) ವಿಷ್ಣುವನ್ನು ಸ್ಮರಿಸುತ್ತ ದೇವತಾಭ್ಯಃ ಪಿತೃಭ್ಯಶ್ಚ ಎಂಬ ಶ್ಲೋಕವನ್ನು ಮೂರುಸಾರಿ ಹೇಳಿದನು.

೬. ಒಳ್ಳೆಯದಾದ ಎಳ್ಳು ದರ್ಭೆಗಳಿಂದಲೂ ಅಗ್ನಿಷ್ವಾತ್ತ ಎಂಬ ಮಂತ್ರದಿಂದಲೂ ಪೂರ್ವಾದಿದಿಕ್ಕುಗಳಿಗೆ ಬಂಧನವನ್ನು ಮಾಡಿದನು.

೭. ರಕ್ಷೋ ಭೂತವೆಂಬ ಮಂತ್ರದಿಂದ ಉಟ್ಟಿರುವ ಬಟ್ಟೆಯಲ್ಲಿ ಗಂಟನ್ನು ಕಟ್ಟಿದನು. ಆಮೇಲೆ ಬ್ರಾಹ್ಮಣರಿಂದ ಪ್ರತಿಜ್ಞೆಯನ್ನು ಮಾಡಿಸಿಕೊಂಡು ಆ ಬ್ರಾಹ್ಮಣರಿಗೆ ದರ್ಭಾಸನವನ್ನು ಕೊಟ್ಟನು.

೮. ಅನಂತರ ಪಿತೃಗಳನ್ನು ಕರೆದನು. ಆಮೇಲೆ ಬ್ರಾಹ್ಮಣರ ಹಸ್ತದಲ್ಲಿ ಆ ಪಿತೃಗಳಿಗೆ ಅರ್ಘ್ಯವನ್ನು ಕೊಟ್ಟನು. ಅನಂತರ ಪಾತ್ರೆಗಳನ್ನು ಕವಿಚಿ ಹಾಕಿದನು.

ಕೃತ್ವಾ ಗಂಧಾದಿದಾನಂ ಚ ಪುನಃ ಸವ್ಯೇನ ಚಾಚಮತ್ ।
ಸವ್ಯಾಪಸವ್ಯೇನ ತದಾ ಕೃತ್ವಾ ಪಾತ್ರಾಣಿ ಸ ದ್ವಿಜಃ ॥ ೯ ॥

ತ್ರೈರ್ಬ್ರಾಹ್ಮಣೈರನುಜ್ಞಾತಶ್ಚಕ್ರೇಗ್ನೌಕರಣಂ ತತಃ ।
ಆಜ್ಯಾದಿಹವಿಷಾ ರಾಜನ್ ತಾನ್ಯಮೂತ್ರಾಣ್ಯಪೂರಯುತ್ ॥ ೧೦ ॥

ಅನುತ್ತಾನೋತ್ತಾನಪಾಣಿಃ ಕುರ್ವನ್ ಪಾತ್ರಾವಲಂಬನಂ ।
ಪಪಾಠ ಪಾಠಿತೋ ವಿಪ್ರೈಃ ಪೃಥ್ವೀ ತೇತಿ ದ್ವಿಜನ್ಮನಾಂ ॥ ೧೧ ॥

ಅಸಂಸ್ಕೃತಪ್ರಮೀತಾನಾಮಿತಿ ಮಂತ್ರೇಣ ಸ ದ್ವಿಜಃ ।
ದರ್ಭೇಷು ದಕ್ಷಿಣಾಗ್ರೇಷು ದದೌ ಚ ವಿಕಿರಾಸನಂ ॥ ೧೨ ॥

ಅಗ್ನಿದಗ್ಧೇತಿ ಮಂತ್ರೇಣ ಘೃತಮಿಶ್ರಾನ್ನಮುತ್ಕ್ಷಿಪತ್ ।
ಜಲೇನ ಸಹ ರಾಜೇಂದ್ರ ವಿಸ್ತರೇ ಕುಶಕಲ್ಪಿತೇ ॥ ೧೩ ॥

---

೯. ಆ ಆವಾಹಿತ ಪಿತೃಗಳಿಗೆ ಗಂಧ ತುಳಸಿ ಮುಂತಾದುವುಗಳನ್ನು ಕೊಟ್ಟು ಬಲಕ್ಕೆ ಯಜ್ಞೋಪವೀತವನ್ನು ಹಾಕಿಕೊಂಡು ಆಚಮನಮಾಡಿದನು. ಅನಂತರ ಕರ್ಮಕ್ಕನುಗುಣವಾಗಿ ಬಲಕ್ಕೂ ಎಡಕ್ಕೂ ಹಾಕಿಕೊಳುತ್ತ ಆ ಪಾತ್ರೆಗಳನ್ನು ಪೂಜಿಸಿದನು.

೧೦. ಅನಂತರ ಬ್ರಾಹ್ಮಣರಿಂದ ಅನುಜ್ಞೆಯನ್ನು ಹೊಂದಿ ಅಗ್ನೌಕರಣವನ್ನು ಮಾಡಿದನು. ಅಂತೆಯೇ ತುಪ್ಪವೇ ಮುಂತಾದ ಹವಿಸ್ಸುಗಳನ್ನು ಪಾತ್ರೆಗೆ ತುಂಬಿದನು.

೧೧. ಎರಡು ಕೈಗಳಿಂದಲೂ ಮೇಲಕ್ಕೊಂದು ಕೈ ತಳಗಡೆಯೊಂದು ಕೈಯಂತೆ ಹಾಕಿಕೊಂಡು ಎಲೆಯನ್ನು ಹಿಡಿದುಕೊಂಡನು. ತಾನು ಪೃಥ್ವೀತೇ ಪಾತ್ರಂ ಎಂಬ ಮಂತ್ರವನ್ನು ಹೇಳಿ ಆ ಬ್ರಾಹ್ಮಣರ ಕೈಯ್ಯಿಂದಲೂ ಹೇಳಿಸಿದನು.

೧೨. ಅಸಂಸ್ಕೃತಪ್ರಮಿತಾನಾಂ ಎಂಬ ಮಂತ್ರವನ್ನು ಹೇಳಿಕೊಂಡು ದರ್ಭೆಯನ್ನು ದಕ್ಷಿಣಾಗ್ರವಾಗಿ ಹಾಕಿ ಅದರಮೇಲೆ ವಿಕಿರವನ್ನು ಕೊಟ್ಟನು.

೧೩. ಯೇ ಅಗ್ನಿದಗ್ಧಾಃ ಎಂಬ ಮಂತ್ರವನ್ನು ಹೇಳಿಕೊಂಡು ತುಪ್ಪವನ್ನು ಹಾಕಿ ಕಲಸಿದ ಅನ್ನವನ್ನೂ, ನೀರನ್ನೂ, ದರ್ಭೆಯ ಆಸನದ ಮೇಲೆ ಹಾಕಿದನು.

ಸವ್ಯೇನ ಪುನರಾಚಮ್ಯ ದದೌ ಜಲಕಜೀವನಂ ।
ತೃಪ್ತಾಃ ಸ್ಥೇತಿ ಚ ಸಂಪೃಚ್ಛ್ಯ ತೃಪ್ತಾಃ ಸ್ಮ ಇತಿ ಭಾಷಿತಃ ॥ ೧೪ ॥

ಶೇಷಾನ್ನಭೋಜನೇ ತೇಷಾಂ ಜಗ್ರಾಹಾಜ್ಞಾಂ ದ್ವಿಜನ್ಮನಾಂ ।
ಪಿಂಡಾರ್ಥಂ ವೇದಿಕಾಂ ಕೃತ್ವಾ ವಿತಸ್ತಿಪ್ರತಿಮಾಂ ದ್ವಿಜಃ ॥ ೧೫ ॥

ರೇಖಾಂ ಚಕಾರ ದರ್ಭೇಣ ದಕ್ಷಿಣಾಭಿಮುಖೀಂ ನೃಪ ।
ಯೇ ರೂಪಾಣೀತಿ ಮಂತ್ರೇಣ ದಧೇಗ್ನಿದಿಶಿ ಚೋಲ್ಮುಕಂ ॥ ೧೬ ॥

ಪೂರ್ವಜನ್ಮನಿ ಯಾ ಮಾತಾ ಪಿತಾ ಯಶ್ಚ ಮಹೀಪತೇ ।
ತಯೋಶ್ಚ ಪಿತರೌ ಯೌ ಹಿ ಯೌ ಚ ರಾಜನ್ ಪಿತಾಮಹೌ ॥ ೧೭ ॥

ಯಃ ಪ್ರಮಾತಾಮಹಶ್ಚಾಪಿ ಪಿತರೋ ರಾಜಸತ್ತಮ ।
ಪಿತ್ರಾದೀನ್ ಷಟ್ ಸಪತ್ನೀಕಾನ್ ತಾನುದ್ದಿಶ್ಯ ಯಥಾವಿಧಿ ॥ ೧೮ ॥

---

೧೪. ಸವ್ಯದಿಂದ ಆಚಮನಮಾಡಿ ನೀರನ್ನು ಕುಡಿಯಲು ಕೊಟ್ಟು ತೃಪ್ತರಾದಿರ? ಎಂದು ಕೇಳಿ ಅವರಿಂದ ತೃಪ್ತರಾದೆವು. ಎಂದು ಉತ್ತರ ಬಂದಮೇಲೆ ಉತ್ತರಾಪೋಶನವನ್ನು ಹಾಕಿದನು.

೧೫. ಶೇಷಾನ್ನವನ್ನು ಊಟಮಾಡಲು ಅವರಿಂದ ಒಪ್ಪಿಗೆಯನ್ನು ತೆಗೆದುಕೊಂಡನು. ಅವನು ಪಿಂಡಹಾಕಲು ಹನ್ನೆರಡು ಅಂಗುಲದ ಒಂದು ವೇದಿಕೆಯನ್ನು ಮಾಡಿದನು.

೧೬. ಅದರ ಮೇಲೆ ದಕ್ಷಿಣ ದಿಕ್ಕಿನ ಕಡೆಗೆ ಕೊನೆಸೇರುವಂತೆ ಗೆರೆಗಳನ್ನು ಮಾಡಿದನು. ಯೇರೂಪಾಣಿ ಎಂಬ ಮಂತ್ರವನ್ನು ಹೇಳುತ್ತಾ ಆಗ್ನೇಯದಿಕ್ಕಿನಲ್ಲಿ ಕೊಳ್ಳಿಯನ್ನು ಎಸೆದನು.

೧೭-೧೮. ಪೂರ್ವಜನ್ಮದ ತಾಯಿ ತಂದೆ ತಾತ ಆತನ ಹೆಂಡತಿ ಮುತ್ತಾತ ಆತನ ಹೆಂಡತಿ ಅವರಂತೆಯೇ ತಾಯಿಯ ತಂದೆ ತಾಯಿಗಳು ಆವರ ತಂದೆತಾಯಿಯರು ಅವರ ತಂದೆತಾಯಿಯರು ಈ ರೀತಿಯಾಗಿ ಮಾತಾಮಹ ವರ್ಗದ ಆರು ಜನರು ಇವರನ್ನು ಉದ್ದೇಶಿಸಿ ದರ್ಭಾಸನಗಳನ್ನು ಕೊಟ್ಟು ಆರು ಪಿಂಡಗಳನ್ನು ಹಾಕಿದನು.

**ಕುಶಾಸನಾನಿ ದತ್ವಾ ವೈ ದದೌ ಪಿಂಡಾನ್ ಷಡೇವ ಹಿ ।**
**ಗಂಧಾದಿಭಿಶ್ಚ ಸಂಪೂಜ್ಯ ಮಧ್ಯಪಿಂಡವಿಸರ್ಜನಂ　　　　|| ೧೯ ||**

**ಕೃತ್ವಾಘ್ರಾಯ ಚ ನಾಮಾಂಸೇ ಪಿಂಡಾನ್ಪಾತ್ರೇ ನ್ಯವೇಶಯತ್ ।**
**ಜಲಪಾತ್ರಂ ತಮಾದಾಯ ವಾಜೇ ವಾಜೇ ಪಠನ್ನಿತಿ　　　　|| ೨೦ ||**

**ಪಾದಾರ್ಘಂ ಚ ಪುನರ್ದತ್ವಾ ದಕ್ಷಿಣಾದ್ಯೈರತೂತುಷತ್ ।**
**ಆದ್ವಾರಂ ತಾನನುವ್ರಜ್ಯ ತೇಭ್ಯೋ ಲಬ್ಧ್ವಾನುಶಾಸನಂ　　　　|| ೨೧ ||**

**ಬುಭುಜೇ ಚ ಸ್ವಯಂ ರಾಜನ್ ಬಾಂಧವೈಸ್ಸಹ ಸ ದ್ವಿಜಃ ।**
**ಏವಂ ಸಮಾಪ್ಯ ರಾಜೇಂದ್ರ ಶ್ರಾದ್ಧಂ ಸ ದ್ವಿಜಸತ್ತಮಃ　　　　|| ೨೨ ||**

**ಪೂರ್ವಸಂಬಂಧಿನಾಂ ತತ್ರ ತೀರ್ಥೇ ಮಧುವನೇ ಶುಭೇ ।**
**ಯದಾ ಚಚಾಲ ಶಾನ್ತಾತ್ಮಾ ಪಿತುರಾಶ್ರಮಕಂ ಪ್ರತಿ　　　　|| ೨೩ ||**

---

೧೯-೨೪. ಆ ಪಿಂಡಕ್ಕೆ ಗಂಧಾಕ್ಷತೆಗಳಿಂದ ಪೂಜೆಮಾಡಿ ಮಧ್ಯಪಿಂಡ ವನ್ನು ಮೊದಲು ವಿಸರ್ಜಿಸಿ ಅದನ್ನು ಪಿಂಡದಪಾತ್ರೆಯಲ್ಲಿಟ್ಟನು. ಆ ಪಿಂಡದ ಪಾತ್ರೆಯನ್ನು ಎಡಗಡೆಗಿಟ್ಟು ಮತ್ತು ಅನ್ನವನ್ನು ಮೂಸಿನೋಡಿದನು. ಜಲದ ಪಾತ್ರೆಯನ್ನು ತೆಗೆದುಕೊಂಡು ವಾಜೆ ವಾಜೆ ಎಂಬ ಮಂತ್ರವನ್ನು ಹೇಳುತ್ತಾ ಆ ಪಿತೃಗಳನ್ನು ಕಳುಹಿಸಲು ಮತ್ತೆ ಪಾದಾರ್ಘ್ಯವನ್ನು ಕೊಟ್ಟು ಆ ಬ್ರಾಹ್ಮಣರನ್ನು ದಕ್ಷಿಣೆಯಿಂದ ಸಂತೋಷಪಡಿಸಿದನು. ಅನಂತರ ಬಾಗಿಲಿನವರೆಗೆ ಆ ಬ್ರಾಹ್ಮಣ ರನ್ನು ಹಿಂಬಾಲಿಸಿ ಅವರ ಅಪ್ಪಣೆಪಡೆದು ನಂಟರೊಡನೆ ತಾನೂ ಶೇಷವನ್ನು ಊಟಮಾಡಿದನು. ಆ ಬ್ರಾಹ್ಮಣನು ಈ ರೀತಿಯಾಗಿ ಆ ಶ್ರಾದ್ಧವನ್ನು ಪೂರ್ವ ಸಂಬಂಧಿಗಳಿಗೆ ಮಾಡಿ ಮಧುವನದಲ್ಲಿ ಮುಗಿಸಿದನು. ಅನಂತರ ತಂದೆಯ ಆಶ್ರಮಕ್ಕೆ ಹೊರಟನು. ಬರುತ್ತ ದಾರಿಯಲ್ಲಿ ಆ ಶ್ರಾದ್ಧದಲ್ಲಿ ಊಟಮಾಡಿದ

ತದಾ ಸಮ್ಮಿಲಿತಾ ಮಾರ್ಗೇ ಸರ್ವೇ ತೇ ಶ್ರಾದ್ಧಭೋಜಿನಃ ।
ವಿಮಾನಸಸ್ಪಟ್ಕಮಾರೂಢಾ ದಿವ್ಯಾಭರಣಭೂಷಿತಾಃ ॥
ದಿವ್ಯಾಂಬರಧರಾ ರಾಜನ್ನಿತ್ಯೂಚಸ್ತೇ ದ್ವಿಜೋತ್ತಮಂ ॥ ೨೪ ॥

॥ ಪಿತರ ಊಚುಃ ॥

ಭೋ ವತ್ಸ ವಿಪ್ರಶಾರ್ದೂಲ ವೃಣೀಷ್ವ ವರಮುತ್ತಮಂ ।
ತೀರ್ಥೇತ್ರ ಕುರ್ವತಾ ಶ್ರಾದ್ಧಂ ಭವತಾ ತಾರಿತಾವಯಂ ॥ ೨೫ ॥

ವಯಂ ಗಣತ್ವಮಾಪನ್ನಾಃ ಶ್ರೀಪತೇಸ್ತ್ವತ್ಪ್ರಸಾದತಃ ।
ಪ್ರಾರ್ಥಯಸ್ವ ಮಹಾಬುದ್ಧೇ ಯದಿಷ್ಟಂ ತವ ಚೇತಸಿ ॥ ೨೬ ॥

॥ ಮುನಿಪುತ್ರ ಉವಾಚ ॥

ಕೇ ಯೂಯಂ ಕುತ ಆಯಾತಾ ಗಣತ್ವಂ ಹಿ ಕುತೋ ಗತಾಃ ।
ಉಪಕಾರಂ ವಿನಾ ಕಸ್ಮಾತ್ ವರಂ ಯನ್ಮೇ ಪ್ರಯಚ್ಛಥ ॥ ೨೭ ॥

---

ಪಿತೃಗಳು ಸಿಕ್ಕಿದರು. ಅವರೆಲ್ಲರೂ ಆರು ಜನರೂ ಆರು ವಿಮಾನದಲ್ಲಿ ಕುಳಿತಿದ್ದರು. ಒಂದೊಂದು ದಂಪತಿಗೆ ಒಂದೊಂದು ವಿಮಾನದಂತೆ ಹನ್ನೆರಡು ಜನರಿಗೆ ಆರು ವಿಮಾನಗಳು ಬೇಕಾದುವು. ಅವರೆಲ್ಲರೂ ಒಳ್ಳೊಳ್ಳೆಯ ಬಟ್ಟೆಯನ್ನು ಉಟ್ಟಿದ್ದರು. ಒಳ್ಳೆಯ ಒಡವೆಗಳನ್ನು ಹಾಕಿಕೊಂಡಿದ್ದರು. ಇವರು ಈ ಶ್ರಾದ್ಧಮಾಡಿದವನನ್ನು ನೋಡಿ ಇಂತೆಂದರು.

೨೫. ಪಿತೃಗಳು ಹೇಳಿದರು-ಎಲೈ ಬ್ರಾಹ್ಮಣ ಶ್ರೇಷ್ಠನಾದ ಪುತ್ರನೆ! ನಿನಗೆ ಬೇಕಾದ ವರವನ್ನು ಕೇಳಿಕೊ. ಈ ತೀರ್ಥದಲ್ಲಿ ಶ್ರಾದ್ಧಮಾಡಿದುದರಿಂದ ನಿನ್ನಿಂದ ನಾವೆಲ್ಲರೂ ಉದ್ಧಾರವನ್ನು ಹೊಂದಿದೆವು.

೨೬. ನಿನ್ನ ಅನುಗ್ರಹದಿಂದ ನಾವೆಲ್ಲರೂ ಶ್ರೀಪತಿಯ ಗಣದಲ್ಲಿ ಸೇರಿಕೊಂಡೆವು. ನಿನ್ನ ಮನಸ್ಸಿಗೆ ಬಂದ ವರವನ್ನು ಕೇಳಿಕೋ. ಕೊಡುತ್ತೇವೆ.

೨೭. ಮುನಿಯ ಪುತ್ರನು ಹೇಳಿದನು-ನೀವಾರು? ಎಲ್ಲಿಂದ ಬಂದಿರಿ? ನೀವು ಗಣಗಳಾಗಿ ಆಗಲು ಕಾರಣವೇನು? ನನ್ನಿಂದ ಯಾವ ಉಪಕಾರವನ್ನೂ ಹೊಂದದೆ ನನಗೆ ವರವನ್ನು ನೀವು ಕೊಡಲು ಕಾರಣವೇನು?

॥ ನಾರದ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಪೂರ್ವಜನ್ಮಸುತಸ್ಯ ವೈ ।
ಪಿತಾ ಪ್ರೋವಾಚ ಯೋ ದುಃಖಾದ್ಭಕ್ಷಯಿತ್ವಾ ಮೃತೋ ವಿಷಂ ॥ ೨೮ ॥

॥ ಪಿತೋವಾಚ ॥

ಅಹಂ ತವ ಪಿತಾ ವಿಪ್ರ ಪೂರ್ವಜನ್ಮನಿ ಭೂಸುರಃ ।
ಭಾರ್ಯಯಾ ವ್ಯಭಿಚಾರಿಣ್ಯಾ ಮಾತ್ರಾ ತೇ ಪೀಡಿತೋ ಭೃಶಂ ॥ ೨೯ ॥

ಅತೀವ ದುಃಖಮಾಪನ್ನೋ ಭಕ್ಷಯಿತ್ವಾ ವಿಷಂ ನಿಶಿ ।
ಅಪಮೃತ್ಯುಂ ಗತಸ್ತಸ್ಮಾದಭವಂ ರಜನೀಚರಃ ॥ ೩೦ ॥

ಏಕಂ ಮನ್ವಂತರಂ ತಾತ ಶತಪಂಚದಶಾಧಿಕಂ ।
ವರ್ಷಾಣಾಂ ಚ ವ್ಯತೀತಂ ತದ್ರಾಕ್ಷಸತ್ವಂ ಗತೇ ಮಯಿ ॥ ೩೧ ॥

ಇದಾನೀಂ ಷೋಡಶಾಬ್ದೇ ತು ತ್ವಯಾ ಶ್ರಾದ್ಧೇ ಕೃತೇತ್ರ ವೈ ।
ಪುಣ್ಯೇ ಮಧುವನೇ ತೀರ್ಥೇ ದೇವತ್ವಂ ಪ್ರಾಪ್ತವಾನಹಂ ॥ ೩೨ ॥

---

೨೮. ನಾರದನು ಹೇಳಿದನು-ಹಿಂದಿನ ಜನ್ಮದಲ್ಲಿ ಮಗನಾದ ಆತನ ಈ ಮಾತನ್ನು ಕೇಳಿ ವಿಷವನ್ನು ತಿಂದು ಸತ್ತ ತಂದೆಯು ಮಗನನ್ನು ಕುರಿತು ಇಂತೆಂದನು.

೨೯. ತಂದೆಯು ಹೇಳಿದನು- ಎಲೈ ಬ್ರಾಹ್ಮಣನೆ ! ನಾನು ನಿನ್ನ ಪೂರ್ವ ಜನ್ಮದ ತಂದೆಯಾದ ಬ್ರಾಹ್ಮಣನು. ನಿನ್ನ ತಾಯಿಯು ವ್ಯಭಿಚಾರಿಣಿಯಾಗಿ ನನ್ನನ್ನು ಬಹುವಾಗಿ ತೊಂದರೆ ಪಡಿಸಿದಳು.

೩೦. ಆಗ ನನಗೆ ಬಹುವಾಗಿ ದುಃಖವುಂಟಾಗಲು ರಾತ್ರಿಯಲ್ಲಿ ವಿಷವನ್ನು ತಿಂದೆನು. ಅದರಿಂದ ಅಪಮೃತ್ಯುವನ್ನು ಹೊಂದಿ ರಾಕ್ಷಸನಾಗಿ ಹುಟ್ಟಿದೆನು.

೩೧. ಈ ರೀತಿ ನಾನು ಜನ್ಮವೆತ್ತಿದ ಮೇಲೆ ನನಗೆ ಒಂದು ಮನ್ವಂತರವೂ ನೂರಹದಿನೈದು ವರ್ಷವೂ ಆದುವು.

೩೨. ಈ ಹದಿನಾರನೆಯ ವರ್ಷದಲ್ಲಿ ನೀನು ಈ ಪುಣ್ಯಕರವಾದ ಮಧು ವನದಲ್ಲಿ ಶ್ರಾದ್ಧಮಾಡಿದುದರಿಂದ ನನಗೆ ಅದು ಬಿಡುಗಡೆಯಾಗಿ ದೇವತ್ವವು ಬಂದಿತು.

ಏತದ್ವಿಮಾನಮಾಯಾತಂ ಸ್ವರ್ಗಾದಿಂದ್ರಪ್ರಣೋದಿತಂ ।
ಸಗಣಂ ಸಾಪ್ಸರೋವೃಂದಂ ಮಮಾರೋಹಣಹೇತವೇ ॥ ೩೩ ॥

ಅತ್ರ ತುಭ್ಯಂ ವರಂ ದಾತುಂ ಸಗಣಃ ಸಾಪ್ಸರೋಗಣಃ ।
ವಿಮಾನವರಮಾರುಹ್ಯ ಗಚ್ಛನ್ ಸ್ವರ್ಗೇಹಮಾಗಮಂ ॥ ೩೪ ॥

ವರಂ ವರಯ ಭದ್ರಂ ತೇ ನ ವಿಲಂಬಸಹಾ ವಯಂ ।
ಐರಾವತಗಜಾರೂಢಃ ಸುರೇಶೋ ಮಾಮವೇಕ್ಷತೇ ॥ ೩೫ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ನಿಜವೃತ್ತಾಂತಂ ದತ್ವಾ ಚ ನಿಜಸೂನವೇ ।
ತತ್ಪ್ರಾರ್ಥಿತಾಂ ಹರೇರ್ಭಕ್ತಿಂ ಜಗಾಮ ಸ ದಿವಂ ನೃಪ ॥
ಅಥ ಪ್ರೋವಾಚ ತನ್ಮಾತಾ ಪೂರ್ವಜನ್ಮಸುತಂ ಚ ತಂ ॥ ೩೬ ॥

---

೩೩. ಸ್ವರ್ಗದಿಂದ ಇಂದ್ರನು ಕಳುಹಿಸಿರುವ ಈ ವಿಮಾನವು ನನಗೆ ಬಂದಿದೆ. ಇದರಲ್ಲಿ ಆ ಇಂದ್ರನ ಆಳುಗಳೂ ಅಪ್ಸರಸ್ತ್ರೀಯರೂ ಕುಳಿತುಕೊಂಡು ನನ್ನನ್ನು ಕರೆದುಕೊಂಡು ಹೋಗಲು ಬಂದಿದ್ದಾರೆ.

೩೪. ಗಣಗಳೊಡನೆಯೂ ಅಪ್ಸರಸ್ತ್ರೀಯರೊಡನೆಯೂ ಸ್ವರ್ಗಕ್ಕೆ ಈ ವಿಮಾನದಲ್ಲಿ ಹೋಗುತ್ತಿದ್ದವನು ನಿನಗೆ ವರವನ್ನು ಕೊಡಲು ಇಲ್ಲಿಗೆ ಬಂದೆನು.

೩೫. ನೀನು ವರವನ್ನು ಕೇಳಿಕೋ. ನಿನಗೆ ಮಂಗಳವಾಗಲಿ ನನಗೆ ಸಾವಕಾಶವಾಗಕೂಡದು. ಐರಾವತವನ್ನು ಹತ್ತಿಕೊಂಡು ಇಂದ್ರನು ನಮ್ಮನ್ನು ಎದುರುನೋಡುತ್ತಲಿರುವನು.

೩೬. ನಾರದನು ಹೇಳಿದನು– ತನ್ನ ವೃತ್ತಾಂತವನ್ನು ಈ ರೀತಿಯಾಗಿ ಹೇಳಿ ತನ್ನ ಮಗನಿಗೆ ಬೇಕಾದ ಹರಿಭಕ್ತಿಯ ರೂಪವಾದ ವರವನ್ನು ಕೊಟ್ಟು ಸ್ವರ್ಗಕ್ಕೆ ಹೊರಟುಹೋದನು. ಅನಂತರ ಪೂರ್ವಜನ್ಮದ ತಾಯಿಯು ಮಗನನ್ನು ಕುರಿತು ಇಂತೆಂದಳು.

॥ ಮಾತೋವಾಚ ॥

ತ್ವತ್ಪ್ರಸಾದಾದಹಂ ಜಾತಾ ದೇವೀ ಮುಕ್ತಾ ಚ ಪಾಪತಃ ।
ಪ್ರಾಪ್ತಂ ಶಚ್ಯಾಃ ಸಖೀತ್ವಂ ಮೇ ಪಾಪಯಾಪಿ ದ್ವಿಜೋತ್ತಮ ॥ ೩೭ ॥

ತ್ವಯಾತ್ರ ವಿಹಿತೇ ಶ್ರಾದ್ಧೇ ತೀರ್ಥೇ ವಿಶ್ರಾನ್ತಿಸಂಜ್ಞಕೇ ।
ಪ್ರಾರ್ಥಯಸ್ವ ಮಹಾಭಾಗ ನಿಜಚಿತ್ತಸಮೀಹಿತಂ ॥ ೩೮ ॥

ದದಾಮಿ ತೇ ಯತೋಽಸ್ಮಾಕಂ ದೇವೀನಾಂ ನ ವಚೋ ಮೃಷಾ ।
ಯೇನ ಪಾಪೇನ ಜಾತಾಹಂ ಗೋಧಾ ಚ ಪಿತೃಕಾನನೇ ॥ ೩೯ ॥

ನರಕೇ ಚಿರಮಾಸ್ಥಾಯ ತತ್ತ್ವಂ ವೇತ್ಸಿ ದ್ವಿಜೋತ್ತಮ ।
ಅನುಜಾನೀಹಿ ಮಾಂ ಪುತ್ರ ಪುಲೋಮತನಯಾ ದಿವಿ ॥
ಮಾಮವೇಕ್ಷತ ಆಕಾಶೇ ವೃತಾ ದೇವಾಂಗನಾಗಣೈಃ ॥ ೪೦ ॥

---

೩೭. ನಿನ್ನ ಅನುಗ್ರಹದಿಂದ ಪಾಪದಿಂದ ಮುಕ್ತಳಾಗಿ ದೇವತ್ವವನ್ನು ಹೊಂದಿದೆನು. ನನಗೆ ಶಚಿಯ ಸ್ನೇಹವು ಸಿಕ್ಕಿ ಅವಳಿಗೆ ಸಖಿಯಾದೆನು. ನಾನು ಪಾಪಿನಿಯಾಗಿದ್ದರೂ ನನಗೆ ನೀನು ಮಾಡಿದ ಪುಣ್ಯಕೆಲಸದಿಂದ ಇಂತಹ ಉತ್ಕೃಷ್ಟವಾದ ಪದವಿಯು ಸಿಕ್ಕಿತು.

೩೮. ವಿಶ್ರಾಂತಿ ಎಂಬ ಹೆಸರುಳ್ಳ ಈ ತೀರ್ಥದಲ್ಲಿ ನೀನು ಶ್ರಾದ್ಧಮಾಡಿದುದರಿಂದ ಒಳ್ಳೆಯ ಗತಿಯು ಬಂದಿದೆ. ಆದ್ದರಿಂದ ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳಿಕೋ.

೩೯. ನಿನಗೆ ಬೇಕಾದ ವರವನ್ನು ಕೊಡುತ್ತೇನೆ. ದೇವತ್ವವನ್ನು ಹೊಂದಿರುವವರ ಮಾತು ಸುಳ್ಳಾಗುವುದಿಲ್ಲ. ಆ ಹಿಂದಿನ ಜನ್ಮದ ಪಾಪದಿಂದಲೇ ಸ್ಮಶಾನದಲ್ಲಿ ನಾನು ನರಿಯೆಂಬ ಮೃಗವಾಗಿ ಹುಟ್ಟಿದೆನು.

೪೦. ನರಕದಲ್ಲಿಯೂ ಬಹುಕಾಲವಿದ್ದೆನು. ಅದು ನಿನಗೆ ತಿಳಿದೇ ಇದೆ. ಎಲೈ ಮಗನೇ ! ನನಗೆ ಅನುಮತಿಯನ್ನು ಕೊಡು. ಶಚೀದೇವಿಯು ದೇವತೆಯರಿಂದ ಕೂಡಿಕೊಂಡು ಆಕಾಶದಲ್ಲಿ ನನ್ನನ್ನು ನಿರೀಕ್ಷಿಸುತ್ತಿದ್ದಾಳೆ.

॥ ನಾರದ ಉವಾಚ ॥

ಇತ್ಯುಕ್ತ್ವಾ ಸಾಪಿ ತನ್ಮಾತಾ ನಿಷ್ಕಾಮಾಯ ಸ್ವಸೂನವೇ ।
ಯಯೌ ತ್ರಿವಿಷ್ಟಪಂ ರಾಜನ್ ಶಿರಸಾ ತೇನ ವಂದಿತಾ ॥ ೪೧ ॥

ತತಃ ಪಿತಾಮಹಸ್ತಸ್ಯ ಸ್ವಪೌತ್ರಂ ತಂ ದ್ವಿಜೋತ್ತಮಂ ।
ಉವಾಚ ವಚನಂ ಭೂಪ ಹರೇರ್ಬಿಭ್ರತ್ಸ್ವರೂಪತಾಂ ॥ ೪೨ ॥

॥ ಪಿತಾಮಹ ಉವಾಚ ॥

ವತ್ಸ ವತ್ಸ ಚಿರಂ ಜೀವ ಲಭಸ್ವ ನಿಜವಾಂಛಿತಂ ।
ತ್ವತ್ಪ್ರಸಾದಾದ್ವಯಂ ತೀರ್ಣಾ ದುಸ್ತರಾದ್ಭವಸಾಗರಾತ್ ॥ ೪೩ ॥

ಪಿತಾಮಹೋಽಹಂ ತೇ ವತ್ಸ ತವೇಯಂ ಚ ಪಿತಾಮಹೀ ।
ಮೃತಂ ಮಾನುಗತಾ ಸಾಧ್ವೀ ಸಾಲೋಕ್ಯಮಚಿರಂ ಗತಾ ॥ ೪೪ ॥

---

೪೧. ನಾರದನು ಹೇಳಿದನು–ಯಾವ ಅಪೇಕ್ಷೆಯೂ ಇಲ್ಲದಿರುವ ತನ್ನ ಮಗನಿಗೆ ಆ ತಾಯಿಯು ಇಂತೆಂದು ಹೇಳಿದಳು. ಅವನು ಏನನ್ನೂ ಕೇಳದೆ ತಲೆ ತಗ್ಗಿಸಿಕೊಂಡು ನಮಸ್ಕರಿಸಲು ಆಕೆಯು ಹೊರಟುಹೋದಳು.

೪೨. ವಿಷ್ಣುವಿನ ಸ್ವರೂಪವನ್ನು ಹೊಂದಿದ ಆ ಪಿತಾಮಹನು ತನ್ನ ಮೊಮ್ಮಗನನ್ನು ಕುರಿತು ಇಂತೆಂದನು.

೪೩. ಪಿತಾಮಹನು ಹೇಳಿದನು– ಎಲೈ ವತ್ಸನೇ ! ನೀನು ಬಹುಕಾಲ ಬದುಕು. ನಿನ್ನ ಇಷ್ಟಾರ್ಥವು ಕೈಗೂಡಲಿ. ನಿನ್ನ ಅನುಗ್ರಹದಿಂದ ನಾವೆಲ್ಲರೂ ಈ ಸಂಸಾರವೆಂಬ ಸಮುದ್ರದಿಂದ ಪಾರಾಗಿದ್ದೇವೆ.

೪೪ ಎಲೈ ವತ್ಸನೇ ! ನಾನು ನಿನ್ನ ತಂದೆಯ ತಂದೆಯು. ಈಕೆಯು ನಿನ್ನ ತಂದೆಯ ತಾಯಿಯು. ನಾನು ಸತ್ತನಂತರ ಸಹಗಮನಮಾಡಿ ನನ್ನನ್ನೇ ಅನುಸರಿಸಿದಳು. ಕೆಲವು ದಿನಗಳಲ್ಲಿಯೇ ಸಾಲೋಕ್ಯವನ್ನು ಹೊಂದಿದಳು.

ಅದ್ಯ ತ್ವಯಾತ್ರ ವಿಶ್ರಾನ್ತೌ ವಿಹಿತೇ ಶ್ರಾದ್ಧಕರ್ಮಣಿ ।
ಆವಯೋಸ್ತು ಹರೇರ್ಲೋಕೇ ಲಬ್ಧಾ ತಸ್ಯ ಸರೂಪತಾ ॥ ೪೫ ॥

॥ ನಾರದ ಉವಾಚ ॥

ಏವಮುಕ್ತ್ವಾ ತಯಾ ಸಾರ್ಧಂ ಸ್ವಸ್ತ್ರಿಯಾ ಭೂಪಸತ್ತಮ ।
ಬ್ರಹ್ಮಲೋಕಮತಿಕ್ರಮ್ಯ ವೈಕುಂಠಂ ಸ ಯಯೌ ದ್ವಿಜಃ ॥
ಅಥ ಪ್ರೋವಾಚ ರಾಜೇಂದ್ರ ವಚಸ್ತತ್ ಪ್ರಪಿತಾಮಹಃ ॥ ೪೬ ॥

॥ ಪ್ರಪಿತಾಮಹ ಉವಾಚ ॥

ಯತ್ತೇ ತತ್ಕಥಯಾಮ್ಯದ್ಯ ಶೃಣುಷ್ವೈಕಮನಾ ದ್ವಿಜ ।
ಭೋ ಭೋ ವತ್ಸ ಮಹಾಭಾಗ ತವಾಹಂ ಪ್ರಪಿತಾಮಹಃ ॥ ೪೭ ॥

ಭ್ರೂಣಹತ್ಯಾಫಲೇನಾಹಂ ಶೌಕರೀಂ ಯೋನಿಮಾಸ್ತವಾನ್ ।
ತತೋ ವಿನಿರ್ಗತಸ್ತಾತ ಶ್ವಾಭವಂ ಪಾಪಪೀಡಿತಃ ॥ ೪೮ ॥

---

೪೫. ನೀನು ಈ ದಿನ ಇಲ್ಲಿ ಮಾಡಿದ ಶ್ರಾದ್ಧದಲ್ಲಿ ತೃಪ್ತರಾಗಿ ಊಟ ಮಾಡಿದೆವು. ನಮ್ಮಿಬ್ಬರಿಗೂ ಹರಿಯಲೋಕವಾದ ವೈಕುಂಠದಲ್ಲಿ ಆ ಹರಿಯ ಸಮಾನರೂಪವು ಸಿಕ್ಕಿರುವುದು.

೪೬. ನಾರದನು ಹೇಳಿದನು- ಈತನ ತಾತನು ಮೊಮ್ಮಗನಿಗೆ ಹೀಗೆಂದು ಹೇಳಿ ತನ್ನ ಹೆಂಡತಿಯೊಡನೆ ಬ್ರಹ್ಮಲೋಕವನ್ನು ದಾಟಿ ವೈಕುಂಠಕ್ಕೆ ಹೋದನು. ಅನಂತರ ಅವನ ತಾತನ ತಂದೆಯು ಇವನನ್ನು ಕುರಿತು ಇಂತೆಂದನು.

೪೭. ಪ್ರಪಿತಾಮಹನು ಹೇಳಿದನು– ಎಲೈ ವತ್ಸನೇ! ನಾನು ನಿನಗೆ ತಾತನ ತಂದೆಯಾಗಬೇಕು. ನಾನು ನನ್ನ ವಿಷಯವನ್ನು ಹೇಳುತ್ತೇನೆ. ಅದನ್ನು ಮನಸ್ಸಿಟ್ಟು ಕೇಳು.

೪೮. ಎಲೈ ವತ್ಸನೇ! ನಾನು ಭ್ರೂಣಹತ್ಯೆಯನ್ನು ಮಾಡಿ ಅದರ ಪಾಪದಿಂದ ಹಂದಿಯಾಗಿ ಹುಟ್ಟಿದ್ದೆನು.

ತತಃ ಸ್ಥಾವರತಾಂ ಪ್ರಾಪ್ತೋ ವಿಂಧ್ಯೇ ಪರ್ವತಸತ್ತಮೇ |
ತತ್ರಾಪಿ ಚಿರಕಾಲೇನ ಸ್ಥಿತಸ್ಸ್ಥಾವರತಾಂ ದಧತ್ ‖ ೪೯ ‖

ಯಸ್ಮಿನಾ ಕೇನ ಚಿತ್ತಾತ ಮೂಲಾದುತ್ಪಾಟಿತೋ ಬಲಾತ್ |
ತಸ್ಮಿನ್ನೇವ ತತಃ ಕಾಲೇ ತ್ವಯಾ ಶ್ರಾದ್ಧಮಕಾರಿ ವೈ ‖ ೫೦ ‖

ಅಸ್ಮಿಂಸ್ತೀರ್ಥೋತ್ತಮೇ ತಾತ ಮುಕ್ತೋಹಂ ಸ್ಥಾವರಾತ್ತತಃ |
ಪ್ರಾಪ್ತೋಯಂ ಯಕ್ಷರಾಜಸ್ಯ ನಗರ್ಯಾಂ ವಾಸ ಉತ್ತಮಃ ‖ ೫೧ ‖

ದೇಹ್ಯನುಜ್ಞಾಂ ದ್ವಿಜಶ್ರೇಷ್ಠ ಯಾಮಿ ತಾಂ ತ್ವತ್ಪ್ರಸಾದತಃ |
ತ್ವಾಂ ದಿದೃಕ್ಷುರಿಹಾಯಾತೋ ದೃಷ್ಟಸ್ತ್ವಂ ಪುಣ್ಯದರ್ಶನಃ ‖
ತೀರ್ಥಂ ಚ ಸರ್ವತೀರ್ಥೇಷು ಶ್ರೇಷ್ಠಂ ಮಧುವನಂ ಮಯಾ ‖ ೫೨ ‖

‖ ನಾರದ ಉವಾಚ ‖

ಇತ್ಯುಕ್ತಸ್ತೇನ ರಾಜೇಂದ್ರ ಮುನಿಪುತ್ರಸ್ಸ ಧರ್ಮವಿತ್ |
ಪಪ್ರಚ್ಛ ಶಿರಸಾನಮ್ಯ ತಂ ನಿಜಂ ಪ್ರಪಿತಾಮಹಂ ‖ ೫೩ ‖

---

೪೯. ಅನಂತರ ವಿಂಧ್ಯಪರ್ವತದಲ್ಲಿ ಸ್ಥಾವರ ಭೂತನಾಗಿ ಹುಟ್ಟಿದೆನು. ಅಲ್ಲಿ ಆ ಸ್ಥಿತಿಯಲ್ಲಿ ಬಹುಕಾಲವಿದ್ದೆನು.

೫೦-೫೧. ಹೀಗಿರುತ್ತಿರಲು ಒಂದು ಆನೆಯು ಬಲಾತ್ಕಾರದಿಂದ ನನ್ನನ್ನು ಬೇರುಸಹಿತವಾಗಿ ಕಿತ್ತುಬಿಟ್ಟಿತು. ಅದೇ ಕಾಲದಲ್ಲಿ ನೀನು ಈ ಉತ್ತಮವಾದ ತೀರ್ಥದಲ್ಲಿ ಶ್ರಾದ್ಧವನ್ನು ಮಾಡಿದೆ. ಆದ್ದರಿಂದ ನಾನು ಆ ಸ್ಥಾವರಭಾವದಿಂದ ಮುಕ್ತನಾದೆ. ಯಕ್ಷರಾಜನಾದ ಕುಬೇರನ ಪಟ್ಟಣದಲ್ಲಿ ನನಗೆ ವಾಸವು ಸಿಕ್ಕಿದೆ. ಅಲ್ಲಿಗೆ ಹೋಗುತ್ತೇನೆ.

೫೨. ಎಲೈ ವತ್ಸನೇ ! ನನಗೆ ಅನುಮತಿಯನ್ನು ಕೊಡು. ನಿನ್ನ ಅನುಗ್ರಹದಿಂದ ಅಲ್ಲಿಗೆ ಹೋಗುತ್ತೇನೆ ನಿನ್ನನ್ನು ನೋಡಬೇಕೆಂದು ಇಲ್ಲಿಗೆ ಬಂದೆನು. ಪುಣ್ಯವಂತನಾದ ನಿನ್ನ ದರ್ಶನನಾಯಿತು. ಎಲ್ಲಾ ತೀರ್ಥಗಳಲ್ಲಿಯೂ ಪುಣ್ಯಕರವಾದ ಈ ಮಧುವನವನ್ನೂ ನೋಡಿದೆನು.

೫೩. ನಾರದನು ಹೇಳಿದನು- ಆ ಮುನಿಪುತ್ರನನ್ನು ಕುರಿತು ಮುತ್ತಾತನು ಹೀಗೆಂದು ಹೇಳಲು ಆಗ ಅವನು ಮುತ್ತಾತನಿಗೆ ತಲೆಬಗ್ಗಿಸಿ ನಮಸ್ಕರಿಸಿ ಇಂತೆಂದು ಕೇಳಿದನು.

|| ಋಷಿರುವಾಚ ||

ಬ್ರಾಹ್ಮಣಾನಾಂ ಕುಲೇ ತಾತ ಜಾತೋಽಸಿ ತ್ವಂ ಗರೀಯಸಿ ।
ಕಥಂ ವಿಹಿತವಾನ್ ಪಾಪಂ ಭ್ರೂಣಹತ್ಯಾಭಿಧಂ ಗುರೋ || ೫೪ ||

ಯೇನ ನಿಂದ್ಯಾಂ ಸಮಾಪನ್ನೋ ಭವಾನ್ಯೋನಿಪರಂಪರಾಂ ।
ಸಮಾಚಕ್ಷ್ವ ಮಹಾಭಾಗ ಯದಿ ತತ್ಸ್ಮೃತಿರಸ್ತಿ ಮೇ || ೫೫ ||

|| ಪ್ರಪಿತಾಮಹ ಉವಾಚ ||

ಪುರಾಹಂ ದ್ವಿಜಶಾರ್ದೂಲ ಬ್ರಾಹ್ಮಣಸ್ಯೈವ ಜನ್ಮನಿ ।
ಮಂತ್ರಯಂತ್ರವಿಧಾನೇನ ಕೃತವಾನ್ವೃತ್ತಮಾತ್ಮನಃ || ೫೬ ||

ಧನಲೋಭೇನ ನಾರೀಣಾಂ ಗರ್ಭಾರ್ಥಮಹಮೌಷಧಂ ।
ದತ್ತವಾಂಶ್ಚೈವ ನಾಶಾಯ ದೈವೋಪಹತಚೇತನಃ || ೫೭ ||

---

೫೪. ಋಷಿಯು ಹೇಳಿದನು- ಎಲೈ ಮುತ್ತಾತನೇ ! ನೀನು ಉತ್ತಮರಾದ ಬ್ರಾಹ್ಮಣರ ವಂಶದಲ್ಲಿ ಹುಟ್ಟಿದ್ದೀಯೆ. ಅಂತಹ ನೀನು ಭ್ರೂಣಹತ್ಯೆಯನ್ನು ಮಾಡಲು ಕಾರಣವೇನು ?

೫೫. ಹೀಗಿದ್ದರೂ ನೀನು ನಿಂದ್ಯವಾದ ಆ ಜನ್ಮಗಳನ್ನು ಹೊಂದಲು ಕಾರಣವೇನು ? ಇದು ನಿನಗೆ ಜ್ಞಾಪಕವಿದ್ದರೆ ಹೇಳು.

೫೬. ಪ್ರಪಿತಾಮಹನು ಹೇಳಿದನು- ಎಲೈ ಬ್ರಾಹ್ಮಣನೇ ! ಹಿಂದಿನ ಬ್ರಾಹ್ಮಣ ಜನ್ಮದಲ್ಲಿ ನಾನು ಯಂತ್ರ ಮಂತ್ರಗಳನ್ನು ಮಾಡುತ್ತ ನನ್ನ ಜೀವಿಕೆಯನ್ನು ಮಾಡಿಕೊಳ್ಳುತ್ತಿದ್ದೆನು.

೫೭. ಆ ಹಿಂದಿನ ಜನ್ಮದಲ್ಲಿ ನಾನು ಬುದ್ಧಿಗೆಟ್ಟವನಾಗಿ ಹಣದಾಸೆಯಿಂದ ಗರ್ಭವನ್ನು ನಾಶಮಾಡಿಕೊಳ್ಳಲು ಹೆಂಗಸರಿಗೆ ಔಷಧವನ್ನು ಕೊಡುತ್ತಿದ್ದೆನು.

ಲೋಭೋ ಹಿ ಧನಹೀನಾನಾಂ ಜನಾನಾಂ ಜ್ಞಾನಮಾಹರೇತ್ ।
ಶುಚಿಕಾಲೇ ದಿನಾಧೀಶಃ ಕುಲ್ಯಾನಾಮಪಿ ಜೀವನಂ ॥ ೫೮ ॥

ಜ್ಞಾನೇ ನಷ್ಟೇ ಜನಸ್ತಾತ ಪಾಪಮಾಚರತೇ ಧ್ರುವಂ ।
ಪಾಪಾನ್ನರಕಮಾಪ್ನೋತಿ ತತೋ ಯಾತಿ ಕುಯೋನಿತಾಂ ॥ ೫೯ ॥

ಕಾಚಿದೇಕಾ ತದಾ ನಾರೀ ಗುರ್ವಿಣೀ ಮಾಮಪೃಚ್ಛತ ।
ಕಿಂ ಜನಿಷ್ಯಾಮ್ಯಹಂ ವಿಪ್ರ ಪುತ್ರಂ ನೇತ್ಯಥವಾ ಸ್ತ್ರಿಯಂ ॥ ೬೦ ॥

ತದಾಹಮುಕ್ತವಾಂಸ್ತಾಂ ವೈ ತವ ಕನ್ಯಾ ಭವಿಷ್ಯತಿ ।
ಪುತ್ರೋತ್ಪತ್ತಿಕೃತೇ ತುಭ್ಯಂ ಪ್ರದಾಸ್ಯಾಮಿ ಮಹೌಷಧಂ ॥ ೬೧ ॥

ಇತ್ಯುಕ್ತಾ ಚ ಮಯಾ ನಾರೀ ದುರ್ಬುದ್ಧಿಸ್ತ್ರೀಶಿರೋಮಣಿಃ ।
ಜಗ್ರಾಹ ಮಮ ಪಾದೌ ತು ದತ್ತಂ ಹೇಮಪಲಂ ಚ ಮೇ ॥ ೬೨ ॥

---

೫೮. ಆಸೆಯೆಂಬುದು ಎಲ್ಲರಿಗೂ ಅದರಲ್ಲಿಯೂ ಬಡವರಿಗೆ ಅತಿಶಯವಾಗಿಯೂ ಜ್ಞಾನವನ್ನು ನಾಶಮಾಡುತ್ತದೆ. ಗ್ರೀಷ್ಮಕಾಲದಲ್ಲಿ ನೀರನ್ನು ಕುಡಿಯುವ ಸೂರ್ಯನು ಹೆಚ್ಚು ಆಸೆಯನ್ನು ಹೊಂದಿರುವುದರಿಂದ ಕೆರೆಕಟ್ಟೆಗಳ ಜೀವನವಾದ ನೀರನ್ನು ನಾಶಮಾಡುತ್ತಾನೆ.

೫೯. ಜನಗಳಿಗೆ ವಿವೇಕಜ್ಞಾನವು ಹೋದರೆ ಅವರು ಖಂಡಿತವಾಗಿಯೂ ಪಾಪಕೆಲಸಗಳನ್ನು ಮಾಡುತ್ತಾರೆ. ಆ ಪಾಪದಿಂದ ನರಕಭಾಗಿಗಳಾಗಿ ಅನಂತರ ಕೆಟ್ಟಜನ್ಮದಲ್ಲಿ ಹುಟ್ಟುತ್ತಾರೆ.

೬೦. ಹೀಗಿರುವಲ್ಲಿ ಬಸುರಿಯಾಗಿದ್ದ ಒಬ್ಬ ಹೆಂಗಸು ನನ್ನ ಬಳಿಗೆ ಬಂದು ನಾನು ಗಂಡನ್ನು ಹೆರುತ್ತೇನೆಯೇ ಅಥವಾ ಹೆಣ್ಣನ್ನು ಹೆರುತ್ತೇನೆಯೇ ಎಂಬುದಾಗಿ ನನ್ನನ್ನು ಕೇಳಿದಳು.

೬೧. ಆಗ ನಾನು ಅವಳನ್ನು ಕುರಿತು ನಿನಗೆ ಹೆಣ್ಣುಮಗುವಾಗುತ್ತದೆ. ಎಂದು ಹೇಳಿದೆನು. ಆದರೆ ನಿನಗೆ ಗಂಡುಮಗುವಾಗುವಂತೆ ಒಳ್ಳೆಯ ಔಷಧಿಯನ್ನು ಕೊಡುತ್ತೇನೆ. ಎಂದೂ ಹೇಳಿದೆನು.

೬೨. ದುರ್ಬುದ್ಧಿಯಲ್ಲಿ ಮೊದಲನೆಯ ಹೆಂಗಸಾದ ಆಕೆಯು ನಾನು ಹೀಗೆ ಹೇಳುತ್ತಲೂ ನನಗೆ ಒಂದು ಪಲ ಚಿನ್ನವನ್ನು ಕೊಟ್ಟು ನನ್ನ ಕಾಲುಗಳನ್ನು ಗಂಡಾಗುವಂತೆ ಔಷಧಿಯನ್ನು ಕೊಡುವುದಕ್ಕೆ ಕೇಳುತ್ತಾ ಹಿಡಿದುಕೊಂಡಳು.

ಇತ್ಯುವಾಚ ಚ ಸಾ ಮಹ್ಯಂ ಷಟ್ ಕನ್ಯಾ ಜನಿತಾ ಮಯಾ ।
ಸಪ್ತಮೀಯಂ ತ್ವಯಾ ಚೋಕ್ತಾ ಜೀವಿಷ್ಯೇಽಸ್ಯಾ ನ ಜನ್ಮನಿ ॥ ೬೩ ॥

ತಥಾ ಕುರು ಮಹಾಬುದ್ಧೇ ಯಥಾಹಂ ನೈ ನ ಕನ್ಯಕಾಂ ।
ಜನಯಿಷ್ಯಾಮಿ ವಿಪ್ರಾಗ್ರ್ಯ ನಿಜಪ್ರಾಣವಿನಾಶಿನೀಂ ॥ ೬೪ ॥

ಇತ್ಯಾಕರ್ಣ್ಯ ವಚಸ್ತಸ್ಯಾಸ್ತಾಮಹಂ ಪುನರುಕ್ತವಾನ್ ।
ಪ್ರಸೂತಿಕಾಲೇ ದಾಸ್ಯಾಮಿ ಪುತ್ರೋತ್ಪಾದ್ಯಂ ಮಹೌಷಧಂ ॥ ೬೫ ॥

ತಥೇತಿ ಸಾ ವಚೋ ಮಹ್ಯಂ ಪ್ರತಿಶ್ರುತ್ಯ ಗತಾ ಗೃಹಂ ।
ಅವೇಕ್ಷಮಾಣಾ ತಂ ಕಾಲಂ ತಸ್ಥೌ ವಾಕ್ಯಪ್ರತೀತಿಕೃತ್ ॥ ೬೬ ॥

ತಸ್ಯಾಂ ಗತಾಯಾಂ ಭೋಽಸ್ತ್ರಾತ ಚಿನ್ತಯಾಭವಮಾತುರಃ ।
ಇತ್ಯಹಂ ದ್ವಿಜಶಾರ್ದೂಲ ತಚ್ಛೃಣುಷ್ವ ವದಾಮಿ ತೇ ॥ ೬೭ ॥

---

೬೩. ಎಲೈ ಬ್ರಾಹ್ಮಣನೇ ! ನನಗೆ ಇದುವರೆಗೆ ಆರು ಜನ ಹೆಣ್ಣುಮಕ್ಕಳಾದರು. ನೀನು ಹೇಳಿದಂತೆ ಇದೂ ಹೆಣ್ಣಾದರೆ ಏಳು ಹೆಣ್ಣುಮಕ್ಕಳಾದಂತೆ ಆಯಿತು. ನಾನು ಈ ಜನ್ಮದಲ್ಲಿ ಬದುಕುವಂತಿಲ್ಲ.

೬೪. ಎಲೈ ಬ್ರಾಹ್ಮಣಶ್ರೇಷ್ಠನೇ ! ನನ್ನ ಪ್ರಾಣಗಳನ್ನು ನಾಶಮಾಡುವ ಆ ಹೆಣ್ಣು ಮಗುವು ಹುಟ್ಟದಂತೆಯೇ ಮಾಡು.

೬೫. ಅವಳ ಆ ಮಾತನ್ನು ನಾನು ಕೇಳಿ ನಾನು ಹೆರಿಗೆಯ ಕಾಲದಲ್ಲಿ ಗಂಡು ಮಗುವಾಗುವಂತಹ ಔಷಧವನ್ನು ಕೊಡುತ್ತೇನೆ. ಎಂದು ಅವಳಿಗೆ ಹೇಳಿದನು.

೬೬. ಆಕೆಯು ಹಾಗೇ ಆಗಲೆಂದು ನನಗೆ ಹೇಳಿ ಮನೆಗೆ ಹೊರಟು ಹೋದಳು. ಮತ್ತು ನನ್ನ ಮಾತನ್ನು ನಂಬಿಕೊಂಡು ಹೆರಿಗೆಯ ಕಾಲವನ್ನು ನಿರೀಕ್ಷಿಸುತ್ತಿದ್ದಳು.

೬೭. ಅವಳು ಅತ್ತ ಹೋಗುತ್ತಲೂ ನಾನು ಯೋಚಿಸಲು ಮೊದಲು ಮಾಡಿದೆನು. ಅದೇನೆಂಬುದನ್ನು ಕೇಳು. ನಿನಗೆ ಹೇಳುತ್ತೇನೆ.

ಪುತ್ರೋತ್ಪತ್ತಿಪ್ರತೀಕ್ಷ್ಯೇಯಂ ಮಹ್ಯಂ ದತ್ತವತೀ ಫಲಂ ।
ಸುವರ್ಣಸ್ಯ ನ ಜಾನಾಮಿ ಕಿಮಸ್ಯಾಃ ಸಂಭವಿಷ್ಯತಿ ॥ ೬೮ ॥

ಕಿಮತ್ರ ಕರಣೀಯಂ ಮೇ ಕಥಮೇತತ್ಸುವರ್ಣಕಂ ।
ಫಲಪ್ರಮಾಣಂ ತಿಷ್ಠೇದ್ವೈ ದರಿದ್ರಸ್ಯ ಗೃಹೇ ಮಮ ॥ ೬೯ ॥

ಏವಂ ವಿಮೃಶ್ಯ ತದ್ದಾಸ್ಯಾಃ ತಸ್ಯೈ ಹಸ್ತೇನ ದಾಪಿತಂ ।
ಗರ್ಭಪಾತಕರಂ ತಾತ ಮಯಾ ದಾರುಣಮೌಷಧಂ ॥ ೭೦ ॥

ತೇನೌಷಧೇನ ತಸ್ಯಾಸ್ತು ಗರ್ಭಸ್ರಾವೋಽಭವತ್ತದಾ ।
ಮಾಸೇ ತೃತೀಯೇ ನ ಜ್ಞಾತಂ ಚಿಹ್ನಂ ಪುರುಷಕನ್ಯಯೋಃ ॥ ೭೧ ॥

ತದಾ ಸಾ ಮೇ ಗೃಹಂ ಪ್ರಾಪ್ತಾ ವಿಷಣ್ಣಾ ಗರ್ಭಸ್ರಾವತಃ ।
ಅಥಾರ್ಥಯತ್ಸುವರ್ಣಂ ತನ್ನಿರಾಶಾ ಪುತ್ರಜನ್ಮನಿ ॥ ೭೨ ॥

---

೬೮. ಈಕೆಯು ಗಂಡು ಮಗುವಾಗುವುದೆಂದು ನಂಬಿ ನನಗೆ ಚಿನ್ನದ ಹಣವನ್ನು ಫಲವಾಗಿ ಕೊಟ್ಟಳು. ಆದರೆ ಈಕೆಗೆ ಏನಾಗುವುದೆಂಬುದನ್ನು ನಾನು ಕಾಣೆನು.

೬೯. ಈಗೇನು ಮಾಡಲಿ ! ಈ ಚಿನ್ನವನ್ನು ಬೇರೆ ಕೊಟ್ಟಿರುವಳಲ್ಲ ! ದರಿದ್ರನಾದ ನನ್ನ ಮನೆಯಲ್ಲಿ ಈ ಒಂದು ಫಲಪ್ರಮಾಣದಷ್ಟಾದರೂ ಚಿನ್ನವಿರಲಿ. ಇದನ್ನು ನಾಶಮಾಡಬಾರದು.

೭೦. ಹೀಗೆಂದು ಯೋಚಿಸಿ ಆಕೆಯ ದಾಸಿಯ ಕೈಯ್ಯಲ್ಲಿ ಅವಳಿಗೆ ಗರ್ಭವು ಪತನವಾಗುವಂತೆ ಔಷಧವನ್ನು ಕೊಟ್ಟು ಕಳುಹಿಸಿದೆನು. ಆ ಔಷಧವು ಅಂತಹ ಕ್ರೂರವಾಗಿದ್ದಿತು.

೭೧. ಆ ಔಷಧದಿಂದ ಅವಳ ಗರ್ಭವು ಪತನವಾಗಿ ಹೋಯಿತು. ಆಗ ಮೂರು ತಿಂಗಳಾಗಿದ್ದುದರಿಂದ ಅದು ಗಂಡೋ ಹೆಣ್ಣೋ ಎಂಬುದು ಗೊತ್ತಾಗಲಿಲ್ಲ.

೭೨. ಆಗ ಆಕೆಯು ನನ್ನ ಮನೆಗೆ ಬಂದು ಗರ್ಭಸ್ರಾವವಾದುದಕ್ಕೆ ದುಃಖ ಪಡುತ್ತಾ ಮಗನು ಹುಟ್ಟುವುದಿಲ್ಲವೆಂದು ನಿರಾಶಳಾಗಿ ನನಗೆ ಕೊಟ್ಟಿದ್ದ ಆ ಚಿನ್ನವನ್ನು ಕೊಡೆಂದು ಕೇಳಿದಳು.

ತದಾಹಮಿಷ್ಟಕಾಚೂರ್ಣಂ ಭಸ್ಮನಾ ಚ ಸಮನ್ವಿತಂ ।
ಹರಿದ್ರಾಚೂರ್ಣಸಂಯುಕ್ತಂ ಸಾಂಬು ತಸ್ಯಾ ಅದರ್ಶಯಂ ॥ ೭೩ ॥

ಏತಚ್ಚೂರ್ಣಂ ಕೃತಂ ಮಾತಃ ತ್ವತ್ಪ್ರೀತ್ಯೇತ್ಪತ್ತಯೇ ಮಯಾ ।
ತ್ವದ್ದಾನಾದ್ದ್ವಿಗುಣಂ ದ್ರವ್ಯಂ ಲಗ್ನಮೇತಸ್ಯ ಸಾಧನೇ ॥ ೭೪ ॥

ಇತ್ಯುಕ್ತಾ ಸಾ ಮಯಾ ತಾತ ತ್ಯಕ್ತ್ವಾ ಚೂರ್ಣಂ ಗೃಹಂ ಯಯೌ ।
ಮಾಮುಕ್ತ್ವೇತಿ ಗ್ರಹೀಷ್ಯಾಮಿ ಕಾಲೇ ತ್ವತ್ತೋ ದ್ವಿಜೋತ್ತಮ ॥ ೭೫ ॥

ಏವಂ ಮಯಾ ಕೃತಾ ತಾತ ಭ್ರೂಣಹತ್ಯಾತಿದಾರುಣಾ ।
ಯಯಾತಿಕುತ್ಸಿತೇ ಯೋನಿತ್ರಿತಯೇ ಭ್ರಮಿತಂ ಮಯಾ ॥ ೭೬ ॥

ತ್ವತ್ಪ್ರಸಾದಾದಹಂ ಮುಕ್ತಃ ಸಾಂಪ್ರತಂ ಸ್ಥಾವರತ್ವತಃ ।
ದೇಹ್ಯನುಜ್ಞಾಂ ಮುನಿಶ್ರೇಷ್ಠ ಯಾಮ್ಯಹಂ ಹ್ಯಲಕಾಂ ಶುಭಾಂ ॥ ೭೭ ॥

---

೭೩. ಆಗ ನಾನು ಇಟ್ಟಿಗೆಯ ಪುಡಿಯನ್ನೂ ಬೂದಿಯನ್ನೂ ಅರಿಶಿನವನ್ನೂ ಬೆರೆಸಿ ನೀರಿನಿಂದ ಕಲೆಸಿ ಆಕೆಗೆ ತೋರಿಸಿದೆನು.

೭೪. ಅಮ್ಮಾ! ನಿನಗೋಸ್ಕರವಾಗಿ ಈ ಚೂರ್ಣವನ್ನು ಮಾಡಿದ್ದೇನೆ. ಇದಕ್ಕೆ ನೀನು ಕೊಟ್ಟ ಹಣಕ್ಕಿಂತಲೂ ಎರಡರಷ್ಟು ಹೆಚ್ಚು ಹಣವು ವೆಚ್ಚವಾಗಿದೆ.

೭೫. ಆಗ ಆಕೆಯು ಎಲೈ ಬ್ರಾಹ್ಮಣನೇ! ಮತ್ತೆ ಕಾಲ ಬಂದಾಗ ನಿನ್ನ ಈ ಔಷಧಿಯನ್ನು ನಾನು ತೆಗೆದುಕೊಳ್ಳುತ್ತೇನೆ. ಎಂದು ಹೇಳಿ ಆ ಚೂರ್ಣವನ್ನು ತೆಗೆದುಕೊಳ್ಳದೇನೇ ಹೊರಟು ಹೋದಳು.

೭೬. ಈ ರೀತಿಯಾಗಿ ನಾನು ಬಹು ಕ್ರೂರವಾದ ಭ್ರೂಣಹತ್ಯೆಯನ್ನು ಮಾಡಿದೆನು. ಈ ಭ್ರೂಣಹತ್ಯೆಯ ಪಾಪದಿಂದಲೇ ನಾನು ಕೆಟ್ಟದಾದ ಮೂರು ಜನ್ಮಗಳಲ್ಲಿ ಹುಟ್ಟಿದೆನು.

೭೭. ಈಗ ನಿನ್ನ ಅನುಗ್ರಹದಿಂದ ಈ ಸ್ಥಾವರ ಭಾವದಿಂದ ಮುಕ್ತನಾಗಿ ಇದ್ದೇನೆ. ನನಗೆ ಅನುಮತಿಯನ್ನು ಕೊಡು. ನಾನು ಅಲಕಾಪಟ್ಟಣಕ್ಕೆ ಹೋಗಬೇಕು.

|| ಶ್ರೀ ನಾರದ ಉವಾಚ ||

ಏವಮುಕ್ತ್ವಾ ತು ರಾಜೇಂದ್ರ ತಸ್ಯ ತು ಪ್ರಪಿತಾಮಹಃ ।
ತೇನಾಭಿವಂದಿತೋ ಮೂರ್ಧ್ನಾ ಪ್ರಯಯೌ ದಿಶಮುತ್ತರಾಂ || ೭೮ ||

ವಿಮಾನೇನ ವಿಚಿತ್ರೇಣ ಕಿಂಕಿಣೀಜಾಲಮಾಲಿನಾ ।
ನೃತ್ಯದ್ಗಂಧರ್ವತುಷ್ಟೇನ ಮಣಿಪ್ರಕರಶೋಭಿನಾ || ೭೯ ||

ಅಥ ತಸ್ಯ ಮಹಾರಾಜ ವಿಪ್ರಸ್ಯ ಪ್ರಪಿತಾಮಹೀ ।
ಉವಾಚ ಸ್ವಪ್ರಪೌತ್ರಂ ತಂ ವಿಮಾನವರಮಾಸ್ಥಿತಾ || ೮೦ ||

|| ಪ್ರಪಿತಾಮಹ್ಯುವಾಚ ||

ನಾನ್ಯತ್ರ ಕುತ್ರ ಗಂತಾಸಿ ಪುಣ್ಯೇನಾನೇನ ಸುವ್ರತ ।
ವಿನಾ ಪದ್ಮಾಪತೇಃ ಪಾದಪದ್ಮಚಿಹ್ನಿತಮಂದಿರಂ || ೮೧ ||

ಅಯಂ ಮಮ ಪತಿಃ ಪಾಪೋ ಮುನೇ ತ್ವತ್ಪ್ರಪಿತಾಮಹಃ ।
ವಾರಿತೋಽಪಿ ಮಯಾ ಪಾಪಮಾಚಚಾರ ಸುದುಷ್ಟಧೀಃ || ೮೨ ||

---

೭೮. ಶ್ರೀ ನಾರದನು ಹೇಳಿದನು-ಅವನ ಪ್ರಪಿತಾಮಹನು ಇಂತೆಂದು ಹೇಳಿ ಮೊಮ್ಮಗನಿಂದ ನಮಸ್ಕೃತನಾಗಿ ಉತ್ತರ ದಿಕ್ಕಿಗೆ ಹೊರಟು ಹೋದನು.

೭೯. ಕಿರುಗೆಜ್ಜೆಗಳನ್ನು ಕಟ್ಟಿದ್ದ ಗಂಧರ್ವರು ಕುಣಿಯುತ್ತಿರುವ ಅನೇಕವಾದ ಮಣಿಗಳಿಂದ ಪ್ರಕಾಶಿಸುವ ವಿಚಿತ್ರವಾದ ವಿಮಾನದಲ್ಲಿ ಕುಳಿತುಕೊಂಡು ಹೋದನು.

೮೦. ಅನಂತರ ಆತನ ತಂದೆಯ ಅಜ್ಜಿಯು ಈತನನ್ನು ಕುರಿತು ವಿಮಾನದಲ್ಲಿ ಕುಳಿತಿದ್ದಂತೆಯೇ ಇಂತೆಂದಳು.

೮೧. ತಂದೆಯ ಅಜ್ಜಿಯು ಹೇಳಿದಳು—ಎಲೈ ಪುಣ್ಯವಂತನೇ ! ನೀನು ಈ ಪುಣ್ಯದಿಂದ ರಮಾರಮಣನಾದ ವಿಷ್ಣುವಿನ ಪಾದದಿಂದ ಗುರುತು ಮಾಡಿರುವ ಈ ದೇವತೀರ್ಥವನ್ನು ಬಿಟ್ಟು ಮತ್ತೆಲ್ಲಿಗೂ ಹೋಗಬೇಡ.

೮೨. ನನ್ನ ಗಂಡನೂ ನಿನಗೆ ಮುತ್ತಾತನೂ ಆದ ಈತನು ನಾನು ತಡೆದರೂ ಕೂಡ ದುಷ್ಟತನದಿಂದ ಪಾಪವನ್ನು ಮಾಡುತ್ತಲೇ ಇದ್ದನು.

**ಸೋಽಪಿ ತ್ವಯಾತಿಪಾಪಾತ್ಮಾ ತಾರಿತೋ ದುಃಖಸಾಗರಾತ್ |**
**ಶಕ್ಯತೇ ಕೇನ ವೈ ಕರ್ತುಂ ತಾವಕಂ ಗುಣವರ್ಣನಂ ॥ ೬೩ ॥**

**॥ ಶ್ರೀ ನಾರದ ಉವಾಚ ॥**

**ಇತ್ಯುಕ್ತ್ವಾ ಸಾಪಿ ರಾಜೇಂದ್ರ ಪತಿಲೋಕಂ ಜಗಾಮ ಹ |**
**ಅಲಕಾಯಾಂ ಚಿರಂ ಪತ್ಯಾ ತೇನೈವ ಮುಮುದೇ ಸಹ ॥ ೬೪ ॥**

**ಅಥ ತೇ ಮುನಿಪುತ್ರಸ್ಯ ಸರ್ವೇ ಮಾತಾಮಹಾದಯಃ |**
**ಸಪತ್ನೀಕಾಸ್ಸಮಾರುಹ್ಯ ವಿಮಾನೇಷು ಯಯುರ್ದಿವಂ ॥ ೬೫ ॥**

**ಸೋಽಪಿ ದ್ವಿಜವರಸ್ತಸ್ಮಾತ್ತೀರ್ಥಾತ್ ಸ್ವಪಿತುರಾಶ್ರಮಂ |**
**ಗತ್ವಾ ತಂ ಸರ್ವವೃತ್ತಾಂತಂ ಸ್ವಪಿತ್ರೇ ಸಮವರ್ಣಯತ್ ॥ ೬೬ ॥**

**ಸೋಽಪಿ ತತ್ರ ತತಸ್ಸಾರ್ಧಂ ಕುಟುಂಬೇನ ವನೇ ಮಧೋಃ |**
**ಚಕಾರ ಪರ್ಣಶಾಲಾಂ ವೈ ವಿಶ್ರಾಂತೇಸ್ತು ಸಮೀಪತಃ ॥ ೬೭ ॥**

---

೬೩. ಅಂತಹ ಪಾಪಿಯಾದವನನ್ನು ನೀನು ದುಃಖಸಾಗರದಿಂದ ಪಾರು ಮಾಡಿದ್ದೀಯೆ. ಅಂತಹ ನಿನ್ನ ಗುಣಗಳನ್ನು ವರ್ಣಿಸುವುದಕ್ಕೆ ಯಾರಿಂದ ತಾನೇ ಸಾಧ್ಯವಾದೀತು ?

೬೪. ಶ್ರೀ ನಾರದನು ಹೇಳಿದನು-ಆಕೆಯು ಹಾಗೆಂದು ಹೇಳುತ್ತ ಗಂಡನು ಹೋದ ಸ್ಥಳಕ್ಕೆ ಹೋಗಿ ಆ ಅಲಕೆಯಲ್ಲಿ ಗಂಡನೊಡನೆ ಸುಖವಾಗಿದ್ದಳು.

೬೫. ಅನಂತರ ಆ ಮುನಿಪುತ್ರನ ತಾಯಿಯ ತಂದೆ ಮುಂತಾದವರು ತಮ್ಮ ತಮ್ಮ ಹೆಂಡತಿಯರ ಸಂಗಡ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋದರು.

೬೬. ಆ ಬ್ರಾಹ್ಮಣನೂ ಕೂಡ ಆ ತೀರ್ಥದಿಂದ ತನ್ನ ತಂದೆಯ ಆಶ್ರಮಕ್ಕೆ ಹೊರಟು ಹೋಗಿ ತನ್ನ ತಂದೆಗೆ ಎಲ್ಲಾ ವಿಷಯಗಳನ್ನೂ ತಿಳಿಸಿದನು.

೬೭. ಆ ತಂದೆಯೂ ಕೂಡ ತನ್ನ ಮನೆಯವರನ್ನೆಲ್ಲಾ ಕರೆದುಕೊಂಡು ಆ ಮಧು ವನಕ್ಕೆ ಹೋಗಿ ಅಲ್ಲಿ ಆ ವಿಶ್ರಾಂತಿ ತೀರ್ಥದ ಬಳಿಯಲ್ಲಿ ಪರ್ಣಶಾಲೆಯನ್ನು ಮಾಡಿಕೊಂಡನು.

ತತ್ರ ವಿಶ್ರಾನ್ತಿತೀರ್ಥೇ ತು ತ್ರಿಕಾಲಂ ಸ್ನಾನಮಾಚರನ್ ।
ನಾಕರೋದ್ವಿಷ್ಣುಲೋಕೇಽಪಿ ಸ್ಪೃಹಾಂ ಸ ಮುನಿಸತ್ತಮಃ ॥ ೮೮ ॥

ಏಕದಾ ಜಲಮಧ್ಯೇ ಸ ಸ್ನಾನಂ ಕುರ್ವನ್ ಮುನಿರ್ನೃಪ ।
ಆಚಕಾಂಕ್ಷೇ ಚ ಭವಿತಾ ಕದಾ ಮೇ ಹರಿದರ್ಶನಂ ॥ ೮೯ ॥

ಏವಂ ಕಾಮಯಮಾನಸ್ಯ ಮುನಿವರ್ಯಸ್ಯ ಭೂಪತೇ ।
ಆಜಗಾಮ ತ್ವರಾಯುಕ್ತಃ ಪಕ್ಷಿರಾಜಾಸನೋ ಹರಿಃ ॥ ೯೦ ॥

ಲಕ್ಷ್ಮ್ಯಾ ವಕ್ಷಸ್ಥಯಾ ಸಾರ್ಧಂ ಚತುರ್ಬಾಹುಧರೋ ಹರಿಃ ।
ನವೀನಘನವರ್ಣಾಭೋ ವಿದ್ಯುದ್ವರ್ಣಾಂಬರಾವೃತಃ ॥ ೯೧ ॥

ಕೌಸ್ತುಭೋದ್ಭಾಸಿಸದ್ವಕ್ಷಾಃ ಶಂಖಚಕ್ರಗದಾಬ್ಜಭೃತ್ ।
ವನಮಾಲಾಲಸತ್ಕಂಠೋ ಮಕರಾಕೃತಿಕುಂಡಲಃ ॥ ೯೨ ॥

---

೮೮. ಆ ವಿಶ್ರಾಂತಿ ತೀರ್ಥದಲ್ಲಿ ಮೂರು ಹೊತ್ತು ಸ್ನಾನ ಮಾಡುತ್ತ ಅಲ್ಲಿ ದ್ದುಕೊಂಡು ಆತನು ವಿಷ್ಣು ಲೋಕದಲ್ಲಿಯೂ ಆಸೆಯನ್ನು ಬಿಟ್ಟವನಾಗಿ ಅಲ್ಲಿಯೇ ಪ್ರೀತಿಯಿಂದಲೂ ಸುಖದಿಂದಲೂ ಇದ್ದರು.

೮೯. ಒಂದು ಸಾರಿ ಸ್ನಾನ ಮಾಡುತ್ತಿದ್ದಾಗ ನೀರಿನ ಮಧ್ಯದಲ್ಲಿ ನನಗೆ ಹರಿಯ ದರ್ಶನವು ಯಾವಾಗ ಆದೀತು ? ಎಂದು ಅಪೇಕ್ಷಿಸಿದನು.

೯೦–೯೩. ಈ ರೀತಿಯಾಗಿ ಆತನು ಅಪೇಕ್ಷಿಸಲು ಒಡನೆಯೇ ಹರಿಯು ಅವಸರ ಪಡುತ್ತ ಗರುಡನ ಮೇಲೆ ಕುಳಿತುಕೊಂಡು ಬಂದನು. ಅವನ ವಕ್ಷ ಸ್ಥಳದಲ್ಲಿ ಲಕ್ಷ್ಮಿಯು ಪ್ರಕಾಶಿಸುತ್ತಿದ್ದಳು ನಾಲ್ಕು ತೋಳುಗಳನ್ನು ಹೊಂದಿದ್ದನು. ಹೊಸದಾಗಿ ಉದಯಿಸಿ ಬರುತ್ತಿರುವ ನೀಲಮೇಘದಂತೆ ಇದ್ದನು. ಪೀತಾಂಬರ ವನ್ನು ಹೊದ್ದಿದ್ದನು. ಕೌಸ್ತುಭ ಮಣಿಯನ್ನು ಕತ್ತಿಗೆ ಹಾಕಿಕೊಂಡಿರುವುದ ರಿಂದ ಅದು ಎದೆಯ ಪ್ರದೇಶದಲ್ಲಿ ಪ್ರಕಾಶಿಸುತ್ತಿದ್ದಿತು. ಶಂಖ ಚಕ್ರ ಗದೆ ಪದ್ಮ ಗಳನ್ನು ನಾಲ್ಕು ಕೈಗಳಲ್ಲಿಯೂ ಧರಿಸಿದ್ದನು. ವನಮಾಲೆಯೆಂಬ ಉದ್ದವಾದ ಮಾಲೆಯನ್ನು ಹಾಕಿಕೊಂಡಿದ್ದನು. ಮೊಸಳೆಯಂತಿರುವ ಕರ್ಣಾಭರಣಗಳನ್ನು

ಫುಲ್ಲಾಂಬುಜಪಲಾಶಾಕ್ಷಃ ಸ್ವಲಕಾಲಂಕೃತಾನನಃ ।
ವಿದ್ರುಮಾಕಾರಕರಜೋಽರುಣಹಸ್ತಾಂಘ್ರಿಸತ್ತಲಃ ॥ ೯೩ ॥

ಉವಾಚ ತಂ ದ್ವಿಜಶ್ರೇಷ್ಠಂ ದಂತಭಾಸಾ ವಿಭಾಸಯನ್ ।
ಶರನ್ನಿಶಾಪತಿಸ್ತೋಮತಿರಸ್ಕಾರಕೃತಾ ದಿಶಃ ॥ ೯೪ ॥

॥ ಶ್ರೀ ಭಗವಾನುವಾಚ ॥

ಭೋ ಭೋ ದ್ವಿಜವರ್ಯೈತನ್ಮೇ ತೀರ್ಥಂ ಮಧುವನಂ ಶುಭಂ ।
ವಿಶ್ರಾನ್ತಿಸಂಜ್ಞಕಂ ಸ್ನಾನಾತ್ ಸರ್ವಕಾಮೋಪಪಾದಕಂ ॥ ೯೫ ॥

ಅತ್ರ ತ್ವಯಾ ಸ್ನಾನಕಾಲೇ ವಾಂಛಿತಂ ಮಮ ದರ್ಶನಂ ।
ತುಭ್ಯಂ ಹಿ ತನ್ಮಯಾ ದತ್ತಂ ಬ್ರಹ್ಮಾದಿಸುರದುರ್ಲಭಂ ॥ ೯೬ ॥

ತ್ಯಜ ದೇಹಮಿಮಂ ವಿಪ್ರ ಮಾನುಷಂ ದಿವ್ಯಮಾಪ್ನುಹಿ ।
ಆಯಾಹಿ ಮದ್ಗೃಹಂ ಸಾರ್ಧಂ ಮಯಾರುಹ್ಯ ಖಗೇಶ್ವರಂ ॥ ೯೭ ॥

---

ಹಾಕಿಕೊಂಡಿದ್ದನು. ಅರಳಿರುವ ಕಮಲಗಳಂತೆ ಆತನ ಕಣ್ಣುಗಳು ಇದ್ದುವು. ಮುಂಗುರುಳು ಹಣೆಯ ಮೇಲೆಲ್ಲಾ ಹಾರಾಡುತ್ತಿದ್ದುವು. ಕೈಗಳು ಹವಳದಂತೆ ಕೆಂಪಾಗಿದ್ದುವು. ಕಾಲುಗಳೂ ಕೂಡ ಕೆಂಪಗೆ ಇದ್ದುವು.

೯೪. ಆಗ ಆ ಸ್ವಾಮಿಯು ಶರತ್ಕಾಲದ ಚಂದ್ರನನ್ನು ತಿರಸ್ಕರಿಸುವ ಹಲ್ಲುಗಳ ಕಾಂತಿಯಿಂದ ಎಲ್ಲಾ ದಿಕ್ಕುಗಳನ್ನೂ ಪ್ರಕಾಶಿಸುವಂತೆ ಮಾಡುತ್ತ ಆ ಬ್ರಾಹ್ಮಣನನ್ನು ಕುರಿತು ಇಂತೆಂದನು.

೯೫. ಶ್ರೀ ಭಗವಂತನು ಹೇಳಿದನು–ಎಲೈ ಬ್ರಾಹ್ಮಣನೇ ! ಇದು ನನಗೆ ಪ್ರಿಯವಾದ ಮಧುವನವೆಂಬ ಸ್ಥಳವು. ಅತ್ಯಂತ ಪ್ರಿಯವಾದ ಈ ವಿಶ್ರಾಂತಿಯೆಂಬ ಹೆಸರುಳ್ಳ ತೀರ್ಥವು ಕೇಳಿದುದನ್ನು ಕೊಡತಕ್ಕದ್ದು.

೯೬. ನೀನು ಈ ತೀರ್ಥದಲ್ಲಿ ಸ್ನಾನ ಕಾಲದಲ್ಲಿ ನನ್ನ ದರ್ಶನವನ್ನು ಅಪೇಕ್ಷಿಸಿದೆ. ಬ್ರಹ್ಮಾದಿಗಳಿಗೂ ದುರ್ಲಭವಾದ ಆ ದರ್ಶನವನ್ನು ನಿನಗೆ ಕೊಟ್ಟಿದ್ದೇನೆ.

೯೭. ಎಲೈ ವಿಪ್ರನೆ ! ಈ ಮಾನುಷ ದೇಹವನ್ನು ಬಿಟ್ಟುಬಿಡು. ಉತ್ತಮವಾದ ದೇಹವನ್ನು ಹೊಂದಿ ನನ್ನೊಡನೆ ಈ ಗರುಡನ ಮೇಲೆ ಕುಳಿತುಕೊಂಡು ನನ್ನ ಮನೆಯಾದ ವೈಕುಂಠಕ್ಕೆ ಬಾ.

|| ಶ್ರೀ ನಾರದ ಉವಾಚ ||

ಇತ್ಯಾಕರ್ಣ್ಯ ವಚಸ್ತಸ್ಯ ಶ್ರೀಪತೇಸ್ಸಮುನೀಶ್ವರಃ |
ತುಷ್ಟಾವ ಪ್ರಣತೋ ಭೂತ್ವಾ ಜಲ ಏವ ವಿಶಾಂ ಪತೇ | || ೯೮ ||

|| ಮುನಿರುವಾಚ ||

ಶ್ರೀಪತೇ ಶ್ರೀಕರಾಂಭೋಜಸುಮ್ಮರ್ದಿತಪದಾಂಬುಜಂ |
ಭವತೋ ಭವತಾಪಘ್ನಂ ವಂದೇ ತ್ರಿದಶವಂದಿತಂ || ೯೯ ||

ತ್ವದೀಯಮಾಯಯಾ ನಾಥ ಮೋಹಿತಾ ಯೇತ್ರ-ಜಂತವಃ |
ತೇಷಾಂ ಕದಾಚಿನ್ನಿಸ್ತಾರೋ ನ ಕೃಪಾಮಂತರೇಣ ತೇ || ೧೦೦ ||

ಸತ್ತೀರ್ಥಸೇವನಾದೀಶ ತಥಾ ಸಜ್ಜನಸಂಗಮಾತ್ |
ಪುಂಸಾಂ ಭಕ್ತಿಸ್ತು ಯೇಷಾಂ ವೈ ಜಾಯತೇ ಕೃಪಯಾ ತವ || ೧೦೧ ||

---

೯೮. ಶ್ರೀ ನಾರದನು ಹೇಳಿದನು-ಆ ವಿಷ್ಣುವಿನ ಮಾತನ್ನು ಕೇಳಿ ಆ ಬ್ರಾಹ್ಮಣನು ಆ ಸ್ವಾಮಿಯನ್ನು ನೀರಿನಲ್ಲಿದ್ದುಕೊಂಡೇ ನಮಸ್ಕರಿಸಿ ಸ್ತುತಿಸಿದನು.

೯೯. ಮುನಿಯು ಹೇಳಿದನು-ಎಲೈ ಶ್ರೀಪತಿಯೆ! ಲಕ್ಷ್ಮೀದೇವಿಯ ಕಮಲ ದಂತಿರುವ ಕೈಗಳಿಂದ ಒತ್ತಲ್ಪಟ್ಟ ಸಂಸಾರವೆಂಬ ತಾಪವನ್ನು ನಾಶಮಾಡುವ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ನಿನ್ನ ಪಾದಗಳನ್ನು ನಮಸ್ಕರಿಸುತ್ತೇನೆ.

೧೦೦. ಎಲೈ ಸ್ವಾಮಿಯೆ! ನಿನ್ನ ಮಾಯೆಯಿಂದ ಮೋಹಿತರಾದ ಪ್ರಾಣಿಗಳಿಗೆ ನಿನ್ನ ಕೃಪೆಯಿಲ್ಲದಿದ್ದರೆ ಈ ಸಂಸಾರದಿಂದ ಮೋಕ್ಷವೆಂಬುದೇ ಇಲ್ಲ.

೧೦೧. ಎಲೈ ದೇವನೆ! ಒಳ್ಳೆಯ ತೀರ್ಥಗಳ ಸೇವೆಯಿಂದಲೂ ಅಂತೆಯೇ ಸಜ್ಜನರ ಸಹವಾಸದಿಂದಲೂ ಮನುಷ್ಯರಿಗೆ ನಿನ್ನಲ್ಲಿ ಭಕ್ತಿಯು ಹುಟ್ಟುತ್ತದೆ. ಅದಕ್ಕೂ ನಿನ್ನ ಕೃಪೆಯಿರಬೇಕು.

ಸಾಧುಭಿರ್ಬಹು ಉದೀರಿತಂ ಹರೇ
ಯೋ ನಿಶಮ್ಯ ಗುಣಕೀರ್ತನಂ ತವ ।
ಕೀರ್ತ್ಯಯತ್ಯಖಿಲಪಾಪನಾಶನಂ
ಮಾತೃಗರ್ಭಕುಹರೇ ಸ ನೋ ಪತೇತ್　　　　॥ ೧೦೨ ॥

ಶ್ರೀಪತೇ ತವ ಜನಸ್ಯ ಮಾನಸಂ
ದೈವತಸ್ತು ಪತಿತಂ ಮಹಾರಣೇ ।
ಗುಂಠಿತಂ ಚ ರಜಸಾ ಜಹಾತಿ ನೋ
ನಿರ್ಮಲತ್ವಮಿವ ರತ್ನಮುತ್ತಮಂ　　　　॥ ೧೦೩ ॥

ಯಃ ಪುಮಾನ್ಪತತಿ ತೇ ಪದಾಂಬುಜೇ
ದಂಡವತ್ಪುಲಕಮಂಗಕೇ ದಧತ್ ।
ಸೋಽನ್ವಯಂ ನಯತಿ ತಾವಕಂ ಪದಂ
ಸ್ವಂ ಚ ವಾಂಛಿತಮಶೇಷಯೋಗಿಭಿಃ　　　　॥ ೧೦೪ ॥

---

೧೦೨. ಎಲೈ ಹರಿಯೆ ! ಸಾಧುಗಳಿಂದ ಬಹುವಾಗಿ ಹೊಗಳಲ್ಪಟ್ಟ ನಿನ್ನ ಗುಣವನ್ನು ಯಾವನು ಕೇಳಿ ಅದನ್ನು ಉಚ್ಚರಿಸುತ್ತ ತನ್ನ ಪಾಪಗಳನ್ನು ನಾಶ ಮಾಡಿಕೊಳ್ಳುತ್ತಾನೆಯೋ ಅವನು ಮತ್ತೆ ತಾಯಿಯ ಗರ್ಭವೆಂಬ ಗುಹೆಯನ್ನು ಪ್ರವೇಶಿಸುವುದಿಲ್ಲ.

೧೦೩. ಎಲೈ ಶ್ರೀಪತಿಯೆ ! ನಿನ್ನ ಭಕ್ತರ ಮನಸ್ಸನ್ನು ಅವರು ಮಹಾ ಯುದ್ಧದಲ್ಲಿ ಬಿದ್ದ ಧೂಳಿನಿಂದಲಾಗಲಿ ಪಾಪದಿಂದಲಾಗಲಿ ಕಲುಷರಾಗಿದ್ದರೂ ಅವರನ್ನು ರತ್ನವನ್ನು ನಿರ್ಮಲತೆಯು ಬಿಡದಿರುವಂತೆ ಬಿಡದಿರುತ್ತೀಯೆ

೧೦೪. ಯಾವನು ದೇಹದಲ್ಲಿ ರೋಮಾಂಚವನ್ನು ಹೊಂದುತ್ತ ನಿನ್ನ ಪಾದಗಳಿಗೆ ದೀರ್ಘದಂಡ ನಮಸ್ಕಾರ ಮಾಡುವನೋ ಅವನು ಯೋಗಿಗಳಿಂದ ಅಪೇಕ್ಷಿತವಾದ ನಿನ್ನ ಸ್ಥಾನವನ್ನು ತನ್ನ ವಂಶದವರೊಡನೆ ಹೊಂದುತ್ತಾನೆ.

ಜೀವ ಏವ ತವ ಮಾಯಯಾ ವಿಭೋ
ಮೋಹಿತೋ ಭ್ರಮತಿ ವಿಶ್ವವರ್ತ್ಮಸು ।
ತ್ವತ್ಕೃಪಾಲಲಿತಲೋಚನಾಂಚಲೈಃ
ತತ್ಕ್ಷಣಂ ತರತಿ ವಿಶ್ವವಾರಿಧಿಂ ॥ ೧೦೫

॥ ಶ್ರೀ ನಾರದ ಉವಾಚ ॥

ಇತಿ ಸಂಸ್ತುತ್ಯ ಗೋವಿಂದಂ ದಂಡವತ್ತಸ್ಯ ಪಾದಯೋಃ ।
ಪಪಾತ ಸ ಮುನಿಶ್ರೇಷ್ಠೋ ಜಯೇತಿ ಮುಹುರೀರಯನ್ ॥ ೧೦೬ ॥

ಶ್ರೀಪತಿಸ್ತಂ ಮುನಿಶ್ರೇಷ್ಠಂ ದಂಡವತ್ಪತಿತಂ ಭುವಿ ।
ಉತ್ಥಾಪ್ಯ ಬಾಹುಭಿಸ್ತೂರ್ಣಂ ಸುಪರ್ಣೇ ಸಮರೋಪಯತ್ ॥ ೧೦೭ ॥

ತತ್ಕುಟುಂಬಂ ಚ ವಿಶ್ವಾತ್ಮಾ ವೈಕುಂಠಂ ಚ ಜಗಾಮ ಹ ।
ಇತ್ಯೇತತ್ಕಥಿತಂ ರಾಜನ್ ಶಿಬೇ ಮಧುವನಸ್ಯ ವೈ ॥ ೧೦೮ ॥

---

೧೦೫. ಎಲೈ ಪ್ರಭುವೆ ! ಈ ಜೀವವು ನಿನ್ನ ಮಾಯೆಯಿಂದ ಮೋಹಿತವಾಗಿ ಎಲ್ಲಾ ದಾರಿಗಳಲ್ಲಿಯೂ ಸುತ್ತುತ್ತದೆ. ಕೃಪೆಯಿಂದ ಕೂಡಿದ ನಿನ್ನ ಕಡೆಗಣ್ಣುಗಳ ನೋಟಕ್ಕೆ ಪಾತ್ರನಾದೊಡನೆಯೇ ಈ ಜನನ ಮರಣಗಳೆಂಬ ಸಮುದ್ರವನ್ನು ದಾಟುತ್ತದೆ.

೧೦೬ ಶ್ರೀ ನಾರದನು ಹೇಳಿದನು–ಈ ರೀತಿಯಾಗಿ ಆ ಗೋವಿಂದನನ್ನು ಸ್ತುತಿಸಿ ಅವನ ಪಾದಗಳಿಗೆ ನಮಸ್ಕರಿಸುತ್ತ ಜಯ ಜಯ ಎಂಬುದಾಗಿ ಹೇಳುತ್ತ ಆ ಪಾದಗಳ ಮೇಲೆ ಬಿದ್ದನು.

೧೦೭. ಆಗ ಶ್ರೀಪತಿಯು ದಂಡದಂತೆ ನಮಸ್ಕಾರ ಮಾಡುತ್ತ ನೆಲದ ಮೇಲೆ ಬಿದ್ದಿರುವ ಆ ಮುನಿಶ್ರೇಷ್ಠನನ್ನು ತೋಳುಗಳಿಂದ ಹಿಡಿದು ಎಬ್ಬಿಸಿ ಗರುಡನ ಮೇಲಕ್ಕೆ ಹತ್ತಿಸಿದನು.

೧೦೮. ಅವನ ಜೊತೆಯಲ್ಲಿ ಅವನ ಕುಟುಂಬದವರನ್ನೂ ಗರುಡನ ಮೇಲೆ ಕೂರಿಸಿಕೊಂಡು ಹೋದನು. ಎಲೈ ಶಿಬಿಯೆ ! ಈ ರೀತಿಯಾಗಿ ಮಧುವನದ ಮಹಿಮೆಯನ್ನು ಹೇಳಿದ್ದೇನೆ.

ಮಾಹಾತ್ಮ್ಯಂ ಸರ್ವಪಾಪಘ್ನಂ ಕಿಮನ್ಯತ್ ಶ್ರೋತುಮಿಚ್ಛಸಿ ।
ಯ ಇದಂ ಶೃಣುಯಾನ್ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ      ॥ ೧೦೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಮಧುವನ ಮಾಹಾತ್ಮ್ಯ ವರ್ಣನಂ ನಾಮ ದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೦೯. ಇದು ಸಮಸ್ತ ಪಾಪವನ್ನು ಹಾಳುಮಾಡುತ್ತದೆ. ಮತ್ತೇನನ್ನು ಹೇಳಬೇಕು ? ಕೇಳು. ಹೇಳುತ್ತೇನೆ. ಇದನ್ನು ಕೇಳಿದ ಮನುಷ್ಯನು ಎಲ್ಲಾ ಪಾಪಗಳಿಂದಲೂ ಬಿಡಲ್ಪಡುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಮಧುವನ ಮಹಿಮೆಯ ವರ್ಣನ ಎಂಬ ಇನ್ನೂರ ಹತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕಾದಶಾಧಿಕದ್ವಿಶತತಮೋಽಧ್ಯಾಯಃ ||



|| ಸೌಭರಿರುವಾಚ ||

ಯುಧಿಷ್ಠಿರೇದಮಾಕರ್ಣ್ಯ ನಾರದಸ್ಯ ವಚಃಶ್ಶುಭಂ |
ಶಿಬಿರೌಶೀನರೋ ರಾಜಾ ವಿನೀತಸ್ತಮುವಾಚ ಹ || ೧ ||

|| ಶಿಬಿರುವಾಚ ||

ಮುನೇ ಮಯಾ ತು ಮಾಹಾತ್ಮ್ಯಂ ಶ್ರುತಂ ಮಧುವನಸ್ಯ ವೈ |
ತ್ವನ್ಮುಖಾತ್ಕಿಂತು ಸಂದೇಹೋ ಹ್ಯೇಕೋಽಸ್ತಿ ಮಮ ಮಾನಸೇ || ೨ ||

ಯೇನ ಧರ್ಮಾತ್ಮನಾ ಸರ್ವೇ ತಾರಿತಾ ನಿಜಬಾಂಧವಾಃ |
ಜನ್ಮದ್ವಯಯುಕ್ತೃತಾ ಹ್ಯಾಸೀತ್ ಸ ಕಥಂ ಸ್ವೈರಿಣೀಸುತಃ || ೩ ||

---

### ಇನ್ನೂರ ಹನ್ನೊಂದನೆಯ ಅಧ್ಯಾಯವು



೧. ಸೌಭರಿಯು ಹೇಳಿದನು–ಎಲೈ ಯುಧಿಷ್ಠಿರನೆ ! ಶಿಬಿಯು ನಾರದನ ಈ ಮಾತನ್ನು ಕೇಳಿ ವಿನಯದಿಂದ ನಾರದನನ್ನು ಕುರಿತು ಇಂತೆಂದನು.

೨. ಶಿಬಿಯು ಹೇಳಿದನು-ಎಲೈ ಋಷಿಯೆ ! ಮಧುವನದ ಮಹಿಮೆಯನ್ನು ಕೇಳಿದೆನು. ಆದರೆ ಅದರ ವಿಷಯದಲ್ಲಿ ನನಗೊಂದು ಸಂದೇಹವಿದೆ.

೩. ಈ ವಿಶ್ರಾಂತಿ ತೀರ್ಥದಲ್ಲಿ ಶ್ರಾದ್ಧವನ್ನು ಮಾಡಿ ತನ್ನ ಹಿಂದಿನವರನ್ನು ಈ ಮುನಿಪುತ್ರನು ಉದ್ಧಾರಮಾಡಿದನೆಂದು ಹೇಳಿದೆಯಲ್ಲ ! ಅವನು ಶ್ರಾದ್ಧ ಮಾಡುವ ವೇಳೆಗೆ ಎರಡು ಜನ್ಮಗಳಾಗಿದ್ದುವು. ಹೀಗಿದ್ದರೆ ಅವನು ಬೇರೆಯವರ ಮಕ್ಕಳಾಗಿರಬೇಕೇ ಹೊರತು ಆ ವ್ಯಭಿಚಾರಿಣಿಯ ಮಗನು ಹೇಗೆ ಆದಾನು ?

ಏತದಾಚಕ್ಷ್ವ ಭಗವನ್ ಸರ್ವಂ ತ್ವಂ ವೇತ್ಸಿ ತತ್ತ್ವತಃ ।
ಅತೀತಂ ವರ್ತಮಾನಂ ಚ ಭವಿಷ್ಯಮಪಿ ನಾರದ ॥ ೪ ॥

॥ ಶ್ರೀ ನಾರದ ಉವಾಚ ॥

ಏಕದಾ ಮುನಯಸ್ಸರ್ವೇ ಹರಿದ್ವಾರೇ ಸಮಾಗತಾಃ ।
ದಶಮ್ಯಾಂ ಜ್ಯೇಷ್ಠಶುಕ್ಲಸ್ಯ ಯುಕ್ತಾಯಾಂ ಸರ್ವಪರ್ವಭಿಃ ॥ ೫ ॥

ತತ್ರ ತೇ ವಿಧಿವತ್ಸರ್ವೇ ಕೃತ್ವಾ ಚ ಸ್ವಕ್ರಿಯಾಂ ಶುಭಾಂ ।
ಹಿಮಾಚಲಶಿಲಾಪೃಷ್ಠೇ ಸ್ವಸ್ಥಚಿತ್ತಾ ಉಪಾವಿಶನ್ ॥ ೬ ॥

ತಾರಾತ್ಮಜೋ ಬುಧಸ್ತತ್ರ ಮುನಿಸಂಘೇ ಸಮಾಗತಃ ।
ಸೌಂದರ್ಯಭರಸಂಯುಕ್ತಃ ಸ್ಮರೋ ಮೂರ್ತ ಇವಾಪರಃ ॥ ೭ ॥

ತಂ ಸಮಾಗತಮಾಲೋಕ್ಯ ಸಮುತ್ತಸ್ಥುರ್ಮುನೀಶ್ವರಾಃ ।
ತೇನಾಭಿವಂದಿತಾ ಮೂರ್ಧ್ನಾ ಪುನಸ್ತೇ ಸಮುಪಾವಿಶನ್ ॥ ೮ ॥

---

೪. ಎಲೈ ನಾರದನೆ ! ನೀನು ಭೂತಭವಿಷ್ಯದ್ವರ್ತಮಾನಗಳೆಲ್ಲವನ್ನೂ ತಿಳಿದಿದ್ದೀಯೆ ! ಆದುದರಿಂದ ಈ ವಿಷಯವನ್ನು ಹೇಳು.

೫. ಶ್ರೀ ನಾರದನು ಹೇಳಿದನು–ಒಂದುಸಾರಿ ಹರಿದ್ವಾರದಲ್ಲಿ ಜ್ಯೇಷ್ಠ ಶುದ್ಧ ದಶಮಿಯದಿನ ಎಲ್ಲಾ ಪರ್ವಗಳೂ ಕೂಡಿರುವಾಗ ಋಷಿಗಳೆಲ್ಲರೂ ಸೇರಿದರು.

೬. ಅಲ್ಲಿ ಅವರೆಲ್ಲರೂ ತಮ್ಮ ತಮ್ಮ ಕ್ರಿಯೆಗಳೆಲ್ಲವನ್ನೂ ಮಾಡಿಕೊಂಡು ಅನಂತರ ಹಿಮವತ್ಪರ್ವತದ ತಪ್ಪಲಿನಲ್ಲಿ ಸಮಾಧಾನ ಮನಸ್ಸಿನಿಂದ ಕುಳಿತು ಕೊಂಡರು.

೭. ಅವರೆಲ್ಲರೂ ಕುಳಿತಿರಲು ತಾರೆಯ ಮಗನಾದ ಬುಧನು ಋಷಿಗಳ ಗುಂಪಿಗೆ ಬಂದನು. ಅವನು ಬಹು ಸುಂದರನಾಗಿಯೂ ಯುವಕನಾಗಿಯೂ ಇದ್ದುದರಿಂದ ಆಕಾರವನ್ನು ಹೊಂದಿ ಬಂದ ಮನ್ಮಥನಂತಿದ್ದನು.

೮. ಆ ಬುಧನು ಬರಲು ಋಷಿಗಳೆಲ್ಲರೂ ಎದ್ದುನಿಂತರು. ಮತ್ತು ಅವರೆಲ್ಲರೂ ತಲೆಯನ್ನು ಬಗ್ಗಿಸಿ ನಮಸ್ಕರಿಸಿದರು. ಮತ್ತೆ ಅವನ ಅನುಮತಿ ಯಿಂದ ಕುಳಿತುಕೊಂಡರು.

ಬುಧಸ್ಯಾದರಮಾಲೋಕ್ಯ ವಿಹಿತಂ ಮುನಿಪುಂಗವೈಃ ।
ಮುನಿಪುತ್ರಸ್ಸ ಪಪ್ರಚ್ಛ ಪಿತರಂ ಸ್ವಮಿತಿ ಪ್ರಭೋ ॥ ೯ ॥

॥ ಮುನಿಪುತ್ರ ಉವಾಚ ॥

ಕೋಽಯಂ ತಾತ ಸಮಾಯಾತಃ ಸೌಂದರ್ಯೇಣಾಪರಸ್ಸ್ಮರಃ ।
ವ್ಯಾಸಾದಿಭಿರ್ಮುನಿವರ್ಯೈರ್ಭೃಶಂ ತಸ್ಯಾದರಃ ಕೃತಃ ॥ ೧೦ ॥

॥ ಶ್ರೀ ನಾರದ ಉವಾಚ ॥

ಇತ್ಯಾಕರ್ಣ್ಯ ಸ ಧರ್ಮಾತ್ಮಾ ಸ್ವಸ್ಯ ಪುತ್ರಸ್ಯ ಭಾಷಿತಂ ।
ಬಭಾಷೇ ಮುನಿಶಾರ್ದೂಲಃ ಪುತ್ರಂ ನಿರ್ಬಂಧಸಂಯುತಂ ॥ ೧೧ ॥

॥ ಪಿತೋವಾಚ ॥

ಬೃಹಸ್ಪತೇಸ್ಸುರಗುರೋಃ ಸುತಸ್ತಾರೋದರೋದ್ಭವಃ ।
ಬುದ್ಧಿಮಾನ್ಬುಧನಾಮಾಯಂ ಶಶಿವಂಶಂಕರಃ ಪರಃ ॥ ೧೨ ॥

---

೯. ಆ ಋಷಿಗಳೆಲ್ಲರೂ ಬುಧನಿಗೆ ಮಾಡಿದ ಗೌರವವನ್ನು ನೋಡಿ ಒಬ್ಬ ಋಷಿಕುಮಾರನು ತನ್ನ ತಂದೆಯನ್ನು ಕುರಿತು ಇಂತೆಂದು ಕೇಳಿದನು.

೧೦. ಮುನಿಕುಮಾರನು ಕೇಳಿದನು–ಎಲೈ ತಂದೆಯೆ ! ಮನ್ಮಥನಂತೆ ಸುಂದರನಾಗಿರುವ ಇಲ್ಲಿಗೆ ಈಗ ಬಂದ ಇವನಾರು ? ವ್ಯಾಸನೇ ಮುಂತಾದ ಋಷಿಗಳೆಲ್ಲರೂ ಆತನಿಗೆ ಬಹುವಾಗಿ ಗೌರವನ್ನು ಮಾಡಿದರಲ್ಲ !

೧೧. ಶ್ರೀ ನಾರದನು ಹೇಳಿದನು–ಆ ಋಷಿಯು ಈ ರೀತಿಯಾಗಿ ತನ್ನ ಮಗನ ಮಾತನ್ನು ಕೇಳಿದನು. ಆ ಮಗನು ಬಾರಿಬಾರಿಗೂ ಬಲಾತ್ಕರಿಸುತ್ತಿರಲು ಆ ಬಲಾತ್ಕರದಿಂವ ಈ ರೀತಿಯಾಗಿ ಹೇಳಿದನು.

೧೨. ತಂದೆಯು ಹೇಳಿದನು–ಈತನು ದೇವಗುರುವಾದ ಬೃಹಸ್ಪತಿಯ ಮಗನು. ತಾರೆಯ ಹೊಟ್ಟೆಯಲ್ಲಿ ಹುಟ್ಟಿದವನು. ಬುದ್ಧಿವಂತನು. ಚಂದ್ರ ವಂಶಕ್ಕೆ ಮೂಲಪುರುಷನು. ಬುಧನೆಂದು ಇವನ ಹೆಸರು.

॥ ಪುತ್ರ ಉವಾಚ ॥

ಕಿಂ ತ್ವಯಾ ಕಥಿತಂ ತಾತ ನಿಸ್ಸಂಬಂಧಪರಂ ವಚಃ ।
ಬೃಹಸ್ಪತೇಸ್ಸುತೋ ಯಸ್ತು ಸ ಕಥಂ ಶಶಿವಂಶಕೃತ್ ॥ ೧೩ ॥

ಜಜ್ಞೇನಸೂಯಯಾ ತಾತ ವಿಧುರತ್ರೇರ್ಮುನೀಶ್ವರಾತ್ ।
ತಸ್ಯ ವಂಶಸ್ಯ ಕರ್ತಾಯಂ ಕಥಂ ಸುರಗುರೋಸ್ಸುತಃ ॥ ೧೪ ॥

ಏಷ ಮೇ ಮಾನಸೇ ತಾತ ಸಂಶಯೋ ವರ್ತತೇ ಮಹಾನ್ ।
ತಮಪಾಕುರು ವಿಪ್ರೇಂದ್ರ ಸಂದಿಹಾನಸ್ಯ ಮೇ ಶಿಶೋಃ ॥ ೧೫ ॥

॥ ಪಿತೋವಾಚ ॥

ಪುರಾ ಬೃಹಸ್ಪತೇರ್ಭಾರ್ಯಾ ತಾರಾ ನಾಮ ಯಶಸ್ವಿನೀ ।
ಚಂದ್ರೇಣಾಪಹೃತಾ ತಾತ ಬಲಾದ್ಬಲವತಾನಘ ॥ ೧೬ ॥

---

೧೩. ಮಗನು ಹೇಳಿದನು-ಎಲೈ ತಂದೆಯೆ! ನೀನು ಹೇಳಿದುವೇನು? ನಿನ್ನಮಾತು ಒಂದಕ್ಕೊಂದಕ್ಕೆ ಸಂಬಂಧವಿರುವುದಿಲ್ಲವಲ್ಲ! ಬೃಹಸ್ಪತಿಯ ಮಗನಾದವನು ಚಂದ್ರನ ವಂಶವನ್ನು ಹೇಗೆ ಬೆಳೆಸುತ್ತಾನೆ?

೧೪. ಎಲೈ ತಂದೆಯೆ! ಚಂದ್ರನು ಅತ್ರಿಯ ದೆಸೆಯಿಂದ ಅನುಸೂಯಾ ದೇವಿಯಲ್ಲಿ ಹುಟ್ಟಿದನು. ಅಂತಹ ಚಂದ್ರನ ವಂಶಕ್ಕೆ ಈ ಬೃಹಸ್ಪತಿಯ ಮಗನು ವಂಶವನ್ನು ವೃದ್ಧಿಮಾಡುವವನು ಹೇಗೆ ತಾನೇ ಆದಾನು?

೧೫. ಇದೇ ನನ್ನ ಮನಸ್ಸಿನಲ್ಲಿರುವ ದೊಡ್ಡ ಸಂದೇಹವು. ಈ ರೀತಿಯಾಗಿ ಸಂಶಯಗೊಂಡಿರುವ ತಿಳುವಳಿಕೆಯಿಲ್ಲದ ನನ್ನ ಸಂದೇಹವನ್ನು ನಿವಾರಣೆ ಮಾಡು.

೧೬. ತಂದೆಯು ಹೇಳಿದನು-ಪೂರ್ವದಲ್ಲಿ ಬೃಹಸ್ಪತಿಯ ಹೆಂಡತಿಯಾದ ತಾರೆ ಎಂಬುವಳನ್ನು ಬಲಿಷ್ಠನಾದ ಚಂದ್ರನು ಬಲಾತ್ಕಾರದಿಂದ ಕದ್ದುಕೊಂಡು ಹೋದನು.

ಅಪಹೃತ್ಯ ತದಾ ನೀತಾ ಸ್ವಗೃಹಂ ವಿಧುನಾ ಗುರೋಃ ।
ಭಾರ್ಯಾ ಸಾ ತು ತಯಾ ಸಾರ್ಧಂ ರಮಿತಂ ತೇನ ವೈ ಚಿರಂ ॥ ೧೭ ॥

ತಸ್ಯಾಂ ಗರ್ಭೋಽಭವತ್ತಾತ ಕಾಲೇನ ಕಿಯತಾ ತದಾ ।
ತತೋ ಬೃಹಸ್ಪತಿರ್ಭಾರ್ಯಾಂ ನಿಜಾಂ ತಾರಾಮಯಾಚತ ॥ ೧೮ ॥

ಚಂದ್ರಮಾಪಿ ಮದಾವಿಷ್ಟೋ ನ ದದೌ ಬಲದರ್ಪಿತಃ ।
ತತೋ ಬೃಹಸ್ಪತಿಸ್ತಾತ ದೇವೈಶ್ಚಕ್ರಾದಿಭಿಸ್ಸಹ ॥ ೧೯ ॥

ಸನ್ನದ್ಧೋಽಯೋದ್ಧುಮಾರೇಭೇ ಸಮೋ ಬಲವದಿಂದುನಾ ।
ಸಹಾಯಾರ್ಥಂ ವಿಧೋಶ್ಶುಕ್ರಃ ಸಮಂ ದಿತಿಜದಾನವೈಃ ॥ ೨೦ ॥

ಸಮಾಗತಸ್ತದಾ ತಾತ ತಸ್ಮಿನ್ ರಣಸಮುದ್ಯಮೇ ।
ತತಸ್ತಾರಾನಿಮಿತ್ತಂ ವೈ ಯುದ್ಧಂ ಪ್ರಾವರ್ತತೋಲ್ಬಣಂ ॥ ೨೧ ॥

---

೧೭. ಆ ಚಂದ್ರನು ಹೀಗೆ ಕದ್ದುಕೊಂಡು ಆಕೆಯನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಆಕೆಯೊಡನೆ ಬಹುಕಾಲದವರೆಗೂ ರಮಿಸಿದನು.

೧೮. ಹೀಗೆ ರಮಿಸುತ್ತಿರಲು ಬಹುಕಾಲದಮೇಲೆ ಆ ತಾರೆಯು ಗರ್ಭಿಣಿಯಾದಳು. ಅನಂತರ ಬೃಹಸ್ಪತಿಯು ತನ್ನ ಹೆಂಡತಿಯನ್ನು ಕಳುಹಿಸಿ ಕೊಡೆಂದು ಚಂದ್ರನನ್ನು ಕೇಳಿದನು.

೧೯. ಮದದಿಂದ ಕೂಡಿರುವ ಚಂದ್ರನು ಬಲದಿಂದ ಕೊಬ್ಬಿದವನಾಗಿ ಆಕೆಯನ್ನು ಕೊಡಲಿಲ್ಲ. ಅನಂತರ ಬೃಹಸ್ಪತಿಯು ಇಂದ್ರನೇ ಮುಂತಾದ ದೇವತೆಗಳೊಡನೆ ಸಿದ್ಧಮಾಡಿಕೊಂಡು ಆ ಬಲಿಷ್ಠನಾದ ಚಂದ್ರನೊಡನೆ ಯುದ್ಧಮಾಡಲು ಬಂದನು.

೨೦-೨೧. ಆ ಚಂದ್ರನ ಸಹಾಯಕ್ಕೋಸ್ಕರ ಶುಕ್ರನು ದೈತ್ಯದಾನವರೊಡನೆ ಆ ಯುದ್ಧದಲ್ಲಿ ಸಿದ್ಧವಾಗಿ ಬಂದನು. ಆಗ ತಾರೆಗೋಸ್ಕರ ಬಹು ಭಯಂಕರವಾದ ಯುದ್ಧವು ನಡೆಯಿತು

**ಕರಿಷ್ಯತೇ ಸರ್ವಜನೈಃ ಪ್ರಥನಂ ತಾರಕಾಮಯಂ ।**
**ತಸ್ಮಿನ್ ಯುದ್ಧೇ ಮಹಾಭೀಮೇ ಹತಾ ದೇವಾಶ್ಚ ದಾನವಾಃ ॥ ೨೨ ॥**

**ನ ಕಸ್ಯ ಚಿಜ್ಜಯಸ್ತಾತ ಬಭೂವ ನ ಪರಾಜಯಃ ।**
**ತತಸ್ಸಮಾಗತೋ ಬ್ರಹ್ಮಾ ಸನ್ನಿವಾರ್ಯೋಲ್ಬಣಂ ರಣಂ ॥ ೨೩ ॥**

**ದದೌ ಬೃಹಸ್ಪತೇಸ್ತಾರಾಂ ಬೋಧಯಿತ್ವಾ ನಿಶಾಪತಿಂ ।**
**ಬೃಹಸ್ಪತಿಸ್ತು ತಾಂ ವೀಕ್ಷ್ಯ ತಾರಾಂ ಗರ್ಭವತೀಂ ತದಾ ॥**
**ಕ್ರುದ್ಧೋ ವಿರಿಂಚೇಃ ಪ್ರತ್ಯಕ್ಷಂ ಸಮಾಜೇ ದೇವದೈತ್ಯೋಃ ॥ ೨೪ ॥**

**॥ ಬೃಹಸ್ಪತಿರುವಾಚ ॥**

**ಶೃಣುಷ್ವ ಮಾಮಕಂ ವಾಕ್ಯಂ ತಾರೇ ತರಳಲೋಚನೇ ।**
**ಕಸ್ಯಾಯಂ ಧ್ರಿಯತೇ ಗರ್ಭೋ ಭವತೀಂದೋರ್ಮಮಾಥವಾ ॥ ೨೫ ॥**

---

೨೨. ಆಗ ಚಂದ್ರನ ಕಡೆಗೆ ನಕ್ಷತ್ರಗಳೂ ಸೇರಿಕೊಂಡುವು. ಇವು ಯುದ್ಧಮಾಡಿದುವು. ಈ ಯುದ್ಧದಲ್ಲಿ ದೇವತೆಗಳು ದಾನವರು ಎಲ್ಲರೂ ಬಹುವಾಗಿ ಸತ್ತರು.

೨೩. ಆಗ ಒಬ್ಬರೂ ಜಯಿಸಲೂ ಇಲ್ಲ. ಒಬ್ಬರೂ ಸೋಲಲೂ ಇಲ್ಲ. ಆಗ ಬ್ರಹ್ಮನು ಇದನ್ನು ನೋಡಿ ಬಂದು ಅವರ ಘೋರವಾದ ಯುದ್ಧವನ್ನು ನಿಲ್ಲಿಸಿದನು.

೨೪. ಆಗ ಬ್ರಹ್ಮನು ಚಂದ್ರನಿಗೆ ಬುದ್ಧಿಯನ್ನು ಹೇಳಿ ತಿಳಿವಳಿಕೆಯನ್ನುಂಟುಮಾಡಿ ಆ ಬೃಹಸ್ಪತಿಗೆ ತಾರೆಯನ್ನು ಕೊಡಿಸಿದನು ಆಗ ಬೃಹಸ್ಪತಿಯು ಹೆಂಡತಿಯನ್ನು ನೋಡಲು ಆಕೆಯು ಗರ್ಭಿಣಿಯಾಗಿದ್ದಳು. ಇದನ್ನು ನೋಡಿ ಆ ದೇವದಾನವರ ಗುಂಪಿನಲ್ಲಿ ಬ್ರಹ್ಮನ ಎದುರಿಗೇ ಬೃಹಸ್ಪತಿಯು ತಾರೆಯಮೇಲೆ ಕೋಪಗೊಂಡನು.

೨೫. ಬೃಹಸ್ಪತಿಯು ಹೇಳಿದನು-ಎಲೈ ಚಂಚಲಾಕ್ಷಿಯಾದ ತಾರೆಯೇ ! ನನ್ನ ಮಾತನ್ನು ಕೇಳು. ನೀನು ಧರಿಸಿರುವ ಗರ್ಭವು ನನ್ನಿಂದ ಹೊಂದಿದುದೇ ? ಅಥವಾ ಚಂದ್ರನಿಂದ ಹೊಂದಿದುದೇ ? ಅದು ಯಾರ ಸಂಬಂಧವಾದುದು ?

|| ಪಿತೋವಾಚ ||

ಏವಂ ಮುಹುರ್ಮುಹುಃ ಸ್ಪೃಷ್ಟಾ ಸಾ ಚ ಲಜ್ಜಾವತೀ ಶುಭಾ ।
ಯದಾ ನ ಕಥಯಾಮಾಸ ಕಿಂಚಿತ್ತಾತ ತದಗ್ರತಃ || ೨೬ ||

ತದಾಯಂ ಪಶ್ಯತಾಂ ತೇಷಾಂ ದೇವಾನಾಂ ಚ ಸುರದ್ವಿಷಾಂ ।
ಉತ್ಪನ್ನಸ್ತ್ವಾಮುವಾಚೇದಂ ಜನನೀಂ ಚ ರುಷಾನ್ವಿತಃ || ೨೭ ||

|| ಬುಧ ಉವಾಚ ||

ಕಸ್ಮಾನ್ನ ಕಥ್ಯತೇ ದುಷ್ಟೇ ಮದೀಯೋ ಜನಕಸ್ತ್ವಯಾ ।
ಲಜ್ಜಾಂ ವಿಹಾಯ ಸಂಪಶ್ಯ ಶಾಪಸ್ಯ ಮಮ ವೈಭವಂ || ೨೮ ||

|| ಪಿತೋವಾಚ ||

ಇತ್ಯುಕ್ತ್ವಾ ಜಲಮಾದಾಯ ಯದಾ ಶಪ್ತುಂ ಸಮುದ್ಯತಃ ।
ತದಾ ಸಾ ಮಂದಮಾಹೇದಂ ಪಿತಾ ತವ ಸುಧಾಕರಃ || ೨೯ ||

---

೨೬-೨೭. ತಂದೆಯು ಹೇಳಿದನು-ಹೀಗೆ ಬೃಹಸ್ಪತಿಯು ಮತ್ತೆ ಮತ್ತೆ ಕೇಳುತ್ತಿದ್ದರೂ ಕೂಡ ಅವರೆಲ್ಲರೆದುರಿಗೂ ನಾಚಿಗೆಗೊಂಡವಳಾಗಿ ಆಕೆಯು ಏನನ್ನೂ ಹೇಳಲೇ ಇಲ್ಲ. ಆಗ ಒಡನೆಯೇ ಆ ದೇವದಾನವರ ಎದುರಿಗೇನೇ ಈತನೂ ಹುಟ್ಟಿ ಕೋಪದಿಂದ ಆ ತಾಯಿಯನ್ನು ಕುರಿತು ಇಂತೆಂದನು.

೨೮. ಬುಧನು ಹೇಳಿದನು-ಎಲೈ ದುಷ್ಟೆಯೇ ! ನನ್ನ ತಂದೆ ಯಾರೆಂಬುದನ್ನು ನೀನೇಕೆ ಹೇಳುವುದಿಲ್ಲ ? ಲಜ್ಜೆಯನ್ನು ಬಿಟ್ಟು ಹೇಳಿದರೆ ಸರಿ. ಇಲ್ಲದಿದ್ದರೆ ನನ್ನ ಶಾಪದ ಮಹಿಮೆಯನ್ನು ನೋಡು.

೨೯. ತಂದೆಯು ಹೇಳಿದನು-ಆ ಬುಧನು ಹೀಗೆಂದು ಹೇಳಿ ಕೈಗೆ ನೀರನ್ನು ತೆಗೆದುಕೊಂಡು ಶಾಪಕೊಡಲು ಸಿದ್ಧನಾದನು. ಆಗ ಆಕೆಯು ಮೆಲ್ಲಗೆ ಧ್ವನಿಮಾಡಿಕೊಂಡು ನಿನ್ನ ತಂದೆಯು ಚಂದ್ರನು ಎಂದಳು.

ಇತ್ಯುಕ್ತೇ ಚ ತದಾ ಸಾಧ್ವ್ಯಾ ಚಂದ್ರಸ್ಸ್ವತನಯಂ ಬುಧಂ ।
ಅಮುಂ ಗೃಹೀತ್ವಾ ಸಾನಂದಂ ಜಗಾಮ ನಿಜಮಂದಿರಂ　　॥ ೩೦ ॥

ಬೃಹಸ್ಪತಿಸ್ತು ತಾಂ ತಾರಾಂ ಗೃಹೀತ್ವಾ ಸ್ವಗೃಹಂ ಯಯೌ ।
ಬ್ರಹ್ಮಾ ದೇವಾಶ್ಚ ದೈತ್ಯಾಶ್ಚ ತೇಽಪಿ ಸ್ವಂ ಸ್ವಂ ಗೃಹಂ ಯಯುಃ ॥ ೩೧ ॥

ಏತತ್ತೇ ಸರ್ವಮಾಖ್ಯಾತಂ ಯತ್ತ್ವಂ ಮಾಂ ಪರಿಪೃಷ್ಟವಾನ್ ।
ಬೃಹಸ್ಪತಿಸ್ತ್ರಿಯಾಂ ಜಾತೋ ಯಥಾಯಂ ಚಂದ್ರವಂಶಕೃತ್　　॥ ೩೨ ॥

॥ ಶ್ರೀ ನಾರದ ಉವಾಚ ॥

ಇತ್ಯಾಕರ್ಣ್ಯ ಪಿತುರ್ವಾಕ್ಯಂ ಜಹಾಸೋಚ್ಚೈರ್ಮುನೇಸ್ಸುತಃ ।
ಉವಾಚ ಚ ಸ್ವಪಿತರಂ ಕುಂಡೋಽಯಂ ಸ್ವೈರಿಣೀಸುತಃ　　॥ ೩೩ ॥

ಉವಾಚ ಚ ಪಿತಾಪುತ್ರಂ ಹಾ ಪುತ್ರೇದಂ ನ ಭಣ್ಯತಾಂ ।
ಸರ್ವಸತ್ತ್ವಾಂತರಜ್ಞೋಽಯಂ ಶಪ್ಸ್ಯತೇ ತ್ವಾಂ ತ್ವದುಕ್ತಿವಿತ್　　॥ ೩೪ ॥

---

೩೦. ಆ ತಾಯಿಯು ಹೀಗೆಂದು ಹೇಳಲು ಚಂದ್ರನು ತನ್ನ ಮಗನಾದ ಬುಧನನ್ನು ಕರೆದುಕೊಂಡು ಆನಂದದಿಂದ ತನ್ನ ಮನೆಗೆ ಹೋದನು.

೩೧. ಬೃಹಸ್ಪತಿಯು ತಾರೆಯನ್ನು ಕರೆದುಕೊಂಡು ಮನೆಗೆ ಹೋದನು. ಬ್ರಹ್ಮನೂ ದೇವದಾನವರೂ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು.

೩೨. ಎಲೈ ಪುತ್ರನೇ ! ನೀನು ಕೇಳಿದುದೆಲ್ಲವನ್ನೂ ಹೇಳಿದ್ದೇನೆ. ಚಂದ್ರ ವಂಶಕ್ಕೆ ಮೂಲಪುರುಷನಾದ ಬುಧನು ಈ ರೀತಿಯಾಗಿ ಬೃಹಸ್ಪತಿಯ ಹೆಂಡತಿಯಾದ ತಾರೆಯಲ್ಲಿ ಹುಟ್ಟಿದನು.

೩೩. ಶ್ರೀ ನಾರದನು ಹೇಳಿದದು-ಆ ಹುಡುಗನು ಹೀಗೆ ತಂದೆಯು ಹೇಳಿದುದನ್ನು ಕೇಳಿ ಗಟ್ಟಿಯಾಗಿ ನಕ್ಕು ಈ ಬುಧನು ಹಾದರಗಿತ್ತಿಯ ಮಗನಾದ ಕುಂಡನು. ಎಂದು ತನ್ನ ತಂದೆಗೆ ಹೇಳಿದನು. (ಗಂಡನು ಬದುಕಿರುವಾಗ ಹೆಂಡತಿಯಲ್ಲಿ ಆಕೆಯ ಹಾದರತನದಿಂದ ಹುಟ್ಟಿದವನಿಗೆ ಕುಂಡನೆಂದು ಹೆಸರು)

೩೪. ಹೀಗೆ ಮಗನ ಮಾತನ್ನು ಕೇಳಿ ತಂದೆಯು ಹಾ ಮಗನೇ ! ಈ ರೀತಿ ಯಾಗಿ ಹೇಳಬೇಡ. ಈ ಬುಧನು ಎಲ್ಲಾ ಪ್ರಾಣಿಗಳೊಳಗೂ ಇದ್ದುಕೊಂಡಿರು ವನು. ನೀನು ಹೇಳಿದುದನ್ನು ತಿಳಿದು ನಿನಗೆ ಶಾಪವನ್ನು ಕೊಟ್ಟಾನು ! ಎಂದನು.

॥ ಶ್ರೀ ನಾರದ ಉವಾಚ ॥

ಇತ್ಯುಕ್ತೇ ತೇನ ಮುನಿನಾ ಚಾಂದ್ರಿರ್ಜ್ಞಾತ್ವಾ ತದೀರಿತಂ ।
ಸರ್ವೇಷಾಂ ಶೃಣ್ವತಾಂ ಪ್ರಾಹ ಮುನೀನಾಮಿತಿ ಭೂಪತೇ ॥ ೩೫ ॥

॥ ಬುಧ ಉವಾಚ ॥

ಶೃಣ್ವನ್ತು ಮುನಿಶಾರ್ದೂಲಾ ಭವಂತೋ ಮಮ ಭಾಷಿತಂ ।
ಯದಿ ಸಾಧ್ವಥವಾಽಸಾಧು ವಿಚಾರಯತ ಮಾ ಚಿರಂ ॥ ೩೬ ॥

ಭವತಾಂ ತತ್ವಬುದ್ಧೀನಾಂ ದರ್ಶನಾರ್ಥಮಿಹಾಗತಃ ।
ಕೃತವಾನ್ ಕಸ್ಯ ಚಿನ್ನಾಹಮಪರಾಧಂ ಮನಾಗಪಿ ॥ ೩೭ ॥

ಅಸೂಯಯಾ ಕಿಮರ್ಥಂ ಮಾಮವಜಾನಂತಿ ದುರ್ಮದಾಃ ।
ಸ್ವಜನ್ಮಸಫಲತ್ವಾಯ ಭವದ್ದರ್ಶನಲಾಲಸಃ ॥ ೩೮ ॥

---

೩೫. ಶ್ರೀ ನಾರದನು ಹೇಳಿದನು–ಆ ಋಷಿಯೂ ಆತನ ಮಗನೂ ಇಂತು ಮಾತನಾಡಿಕೊಳ್ಳಲು ಅದನ್ನು ಆ ಬುಧನು ತಿಳಿದುಕೊಂಡು ಎಲ್ಲಾ ಮುನಿಗಳಿಗೂ ಕೇಳುವಂತೆ ಅವರ ಎದುರಿಗೆ ಇಂತೆಂದನು.

೩೬. ಬುಧನು ಹೇಳಿದನು–ಎಲೈ ಋಷಿಶ್ರೇಷ್ಠರಿರಾ ! ನೀವೆಲ್ಲರೂ ನನ್ನ ಮಾತನ್ನು ಕೇಳಿರಿ. ಅದು ಯೋಗ್ಯವಾದುದೇ ಅಥವಾ ಅಯೋಗ್ಯವಾದ.ದೇ ಎಂಬುದನ್ನು ವಿಚಾರಮಾಡಿರಿ. ಸಾವಕಾಶಮಾಡಬೇಡಿ.

೩೭. ತತ್ವದಲ್ಲಿಯೇ ಮನಸ್ಸನ್ನಿಟ್ಟುಕೊಂಡು ಇರುವ ನಿಮ್ಮಗಳ ದರ್ಶನವನ್ನು ಮಾಡಬೇಕೆಂಬ ಆಸೆಯಿಂದ ನಾನು ಇಲ್ಲಿಗೆ ಬಂದೆನು. ನಾನು ಒಬ್ಬರಿಗೂ ಯಾವುದೊಂದು ವಿಧದಲ್ಲಿಯೂ ಸ್ವಲ್ಪವೂ ತೊಂದರೆಯನ್ನುಂಟು ಮಾಡಲಿಲ್ಲ.

೩೮. ಜನ್ಮವನ್ನು ಸಾರ್ಥಕ ಮಾಡಿಕೊಳ್ಳಲು ನಿಮ್ಮಗಳ ದರ್ಶನವನ್ನು ಮಾಡಲು ಬಂದಿರುವ ನನ್ನನ್ನು ದುಷ್ಟರಾದ ಮದಿಸಿದ ಕೆಲವರು ಅಸೂಯೆಪಟ್ಟುಕೊಂಡು ಏತಕ್ಕೋಸ್ಕರ ಅವಮಾನ ಮಾಡುತ್ತೀರಿ ?

**ಸ್ವಭಾವ ಏವ ದುಷ್ಟಾನಾಂ ಸಾಧೂನಪಿ ನಿರೇನಸಃ ।**
**ಉದ್ವೇಜಯಂತಿ ಯತ್ಕ್ವಾಪಿ ಮಿಷ್ಟವಾಚಃ ಪಿಕಾ ಇವ ॥ ೩೯ ॥**

**ದುಃಸ್ವಭಾವಂ ನ ಮುಂಚಂತಿ ದುಷ್ಟಾಃ ಸತ್ಸಂಗಮಾದಪಿ ।**
**ಗಂಗಾಂಬುಸಂಗಮೇನಾಪಿ ಕ್ಷಾರತಾಮಿವ ನೀರಧಿಃ ॥ ೪೦ ॥**

**ಅಹೋ ವ್ಯಾಧಸ್ಯ ದುಷ್ಟತ್ವಂ ಮುನಿವೃತ್ತೀರ್ಯತೋ ಮೃಗಾನ್ ।**
**ವನೇ ತೃಣಚರಾನ್ ಹಂತಿ ನಿಜಗಾನವಿದೋಽಪಿ ಸಃ ॥ ೪೧ ॥**

**ಮತ್ಸ್ಯೈಃ ಕಿಮಪರಾದ್ಧಂ ಹಿ ಧೀವರಾಣಾಂ ದುರಾತ್ಮನಾಂ ।**
**ಯಜ್ಜಲೇ ಚರತಸ್ತೀರ್ಥೇ ಘ್ನಂತಿ ತತ್ಪ್ರಕೃತಿರ್ಹಿ ಸಾ ॥ ೪೨ ॥**

---

೩೯. ಇಂಪಾಗಿ ಕೂಗುವ ಕೋಗಿಲೆಗಳು ಸತ್ಪುರುಷರಿಗೂ ತಮ್ಮ ಕೂಗಿನಿಂದ ಮನಸ್ಸಿಗೆ ದುಃಖವನ್ನುಂಟುಮಾಡುವಂತೆ ದುಷ್ಟರು ತಪ್ಪಿಲ್ಲದ ಸತ್ಪುರುಷರಿಗೂ ನೋವನ್ನುಂಟುಮಾಡುವುದು ಸ್ವಭಾವವಾಗಿಯೇ ಇದೆ.

೪೦. ಗಂಗೆಯ ನೀರನ್ನು ತಾನು ಹೊಂದಿದರೂ ಸಮುದ್ರವು ತನ್ನ ಉಪ್ಪಾಗಿರುವಿಕೆಯನ್ನು ಬಿಡದಂತೆ ದುಷ್ಟರು ಸತ್ಪುರುಷರ ಸಹವಾಸದಲ್ಲಿದ್ದರೂ ತಮ್ಮ ದುಃಸ್ವಭಾವವನ್ನು ಬಿಡುವುದಿಲ್ಲ.

೪೧. ಕಾಡಿನಲ್ಲಿ ವ್ಯಾಧನು ತಾನು ಹಾಡುತ್ತಿರುವ ಹಾಡಿನ ಮಾಧುರ್ಯವನ್ನು ಗ್ರಹಿಸುವ, ಕಾಡಿನಲ್ಲಿ ಓಡಾಡುವ, ಋಷಿಗಳಂತೆ ಮತ್ತೊಬ್ಬರಿಗೆ ತೊಂದರೆ ಕೊಡದೆ ಆಹಾರವನ್ನು ಸೇವಿಸುತ್ತಿರುವ, ಮೃಗಗಳನ್ನು ಕೊಲ್ಲುತ್ತಾನೆ. ಅವನ ದೌಷ್ಟ್ಯವು ಎಂತಹುದಾಗಿರಬೇಕು?

೪೨. ತೀರ್ಥರೂಪವಾದ ನೀರುಗಳಲ್ಲಿ ವಾಸಿಸುವ ಮೀನುಗಳು ಯಾವ ಅಪರಾಧವನ್ನು ಮಾಡುತ್ತವೆ? ಅಂತಹವುಗಳನ್ನು ಬೆಸ್ತನು ಕೊಂದುಹಾಕುವನಲ್ಲ! ಇದೇ ಆ ದುಷ್ಟರ ಸ್ವಭಾವವು.

ಸಾಧವೋಽಪಿ ನ ಮುಂಚಂತಿ ಸ್ವಭಾವಂ ದುಷ್ಟಸಂಗತಃ |
ನ್ಯತಾ ವಿಷಾಗ್ನಿಯುಕ್ತಸರ್ಪೈಃ ಶ್ರೀಖಂಡಾ ಇವ ಶೀತತಾಂ ॥ ೪೩ ॥

ಪರೋದಯೇಽಪಿ ನೃತ್ಯಂತಿ ಕಿಂ ಸ್ವಪಕ್ಷಸ್ಯ ಸಾಧವಃ |
ಯಥೋನ್ನತ್ತಾ ಮುನಿವರಾ ವಾರಿವಾಹಸ್ಯ ಬರ್ಹಿಣಃ ॥ ೪೪ ॥

ಧಾರಯಂತಿ ಪರಾರ್ಥಂ ಹಿ ನಿಜಾಂಗಮಪಿ ಸಾಧವಃ |
ಪಿತೃದೇವಮನುಷ್ಯಾಣಾಮರ್ಥೇ ಮತ್ಪಿತೃವತ್ಕಲಾಃ ॥ ೪೫ ॥

ನಿಜೋದಯಸ್ತು ಸಾಧೂನಾಂ ಸ್ವಚ್ಛಸ್ಯಾನಂದಹೇತವಃ |
ಯಥಾ ಕುಮುದಪುಷ್ಪಾಣಾಂ ಮತ್ಪಿತುಃ ಶೀತಲತ್ವಿಷಃ ॥ ೪೬ ॥

---

೪೩. ಆದರೆ ಸಾಧುಗಳಾದವರು ಕೂಡ ದುಷ್ಟರ ಸಂಗ ಮಾಡುತ್ತಿದ್ದರೂ ತಮ್ಮ ಸ್ವಭಾವವನ್ನು ಬಿಡುವುದಿಲ್ಲ. ವಿಷದಿಂದ ಅಗ್ನಿಯನ್ನು ಉಂಟುಮಾಡುವ ಸರ್ಪಗಳು ಚಂದನ ವೃಕ್ಷವನ್ನು ಆಶ್ರಯಿಸಿದ್ದರೂ ಆ ಚಂದನವೃಕ್ಷವು ತನ್ನ ಶೀತಲ ಸ್ವಭಾವವನ್ನು ಬಿಡುವುದಿಲ್ಲ.

೪೪. ಸಾಧುಗಳಾದವರು ತಮ್ಮವರಲ್ಲದಿದ್ದವರು ಏಳಿಗೆಗೆ ಬಂದರೆ ಅದರಿಂದಲೂ ಸಂತೋಷಪಡುವಾಗ್ಗೆ ಅವರ ಸಂಬಂಧಗಳಿಗೆ ಉತ್ಕರ್ಷವು ಬಂದಾಗ ಸಂತೋಷಪಡುವರು ಎಂಬುವನ್ನು ಹೇಳಬೇಕಾಗಿಯೇ ಇಲ್ಲ. ಮೋಡವು ಸಮೃದ್ಧಿಯಾಗಿರುವುದನ್ನು ನೋಡಿ ನವಿಲುಗಳು ಕುಣಿಯುವುದಿಲ್ಲವೇನು ?

೪೫. ನನ್ನ ತಂದೆಯಾದ ಚಂದ್ರನು ಪಿತೃಗಳಿಗೂ ದೇವತೆಗಳಿಗೂ ಮನುಷ್ಯರಿಗೂ ಉಪಕಾರವಾಗಲೆಂದೇ ಕಲೆಗಳನ್ನು ಧರಿಸಿರುವಂತೆ ಸಾಧುಗಳು ಇತರರ ಉಪಕಾರಕ್ಕೋಸ್ಕರಲೇ ತಮ್ಮ ಅವಯವಗಳನ್ನು ಧರಿಸಿರುತ್ತಾರೆ. ಇದು ಸಜ್ಜನರ ಸ್ವಭಾವವು.

೪೬. ಕನ್ನೈದಿಲೆಗಳಿಗೆ ನನ್ನ ತಂದೆಯಾದ ಚಂದ್ರನ ಕಾಂತಿಗಳು ಹೇಗೆ ಶೀತಲವಾಗಿವೆಯೋ ಹಾಗೆ ಪರರ ಉತ್ಕರ್ಷವು ಸಾಧುಗಳಿಗೆ ಆನಂದಕ್ಕೆ ಕಾರಣವು.

॥ ಶ್ರೀ ನಾರದ ಉವಾಚ ॥

ಇತ್ಯುದೀರ್ಯ ವಚಃ ಕ್ರೋಧಾದ್ಬುಧಸ್ತಂ ಮುನಿಬಾಲಕಂ ।
ಶಶಾಪೇತಿ ತ್ವಮಪ್ಯಾಶು ಕುಂಡೋ ಭವ ಮಹೀತಲೇ　　॥ ೪೭ ॥

ಏವಮಾಕರ್ಣ್ಯ ತಂ ಶಾಪಂ ಪಿತಾ ಬುಧವಿಸರ್ಜಿತಂ ।
ಸ್ವಪುತ್ರಂ ಪಾತಯಾಮಾಸ ತದಂಘ್ರ್ಯೋಃ ಕ್ಷಮ್ಯತಾಮಿತಿ　　॥ ೪೮ ॥

ಉವಾಚ ಚ ನ ಜಾನಾತಿ ಬಾಲೋಽಯಂ ತವ ವೈಭವಂ ।
ನೋಚಿತಂ ಕ್ರೋಧಕರಣಮಸ್ಮಿನ್ ಬಾಲೇ ಭವಾದೃಶೈಃ　　॥ ೪೯ ॥

ಕುತಶ್ಚಿನ್ಕಾರಣಾತ್ಸಾಧೋಃ ಕ್ರುದ್ಧಸ್ಯ ಪ್ರಕೃತಿಃ ಕ್ಷಮಾ ।
ಹುತಾಶನಪ್ರತಪ್ತಸ್ಯ ಶೀತತ್ವಮಿವ ಚಾಂಬುನಃ　　॥ ೫೦ ॥

ಅತಃ ಕ್ಷಮಾಂ ವಿಧಾಯಾಶು ವಿಧೇಹ್ಯಸ್ಮಿನ್ನನುಗ್ರಹಂ ।
ಬಾಲೇ ವಿವೇಕರಹಿತೇ ಕ್ಷಮಾಸಾರಾ ಹಿ ಸಾಧವಃ　　॥ ೫೧ ॥

---

೪೭. ಶ್ರೀ ನಾರದನು ಹೇಳಿದನು–ಆ ಬುಧನು ಕೋಪದಿಂದ ಈ ಮಾತುಗಳನ್ನು ಹೇಳಿ ಆ ಮುನಿ ಪುತ್ರನನ್ನು ಕುರಿತು ನೀನೂ ಕೂಡ ಭೂಮಿಯಲ್ಲಿ ಕುಂಡನಾಗಿ ಹುಟ್ಟು. ಎಂದು ಶಪಿಸಿದನು.

೪೮. ಬುಧನು ಕೊಟ್ಟ ಈ ಶಾಪವನ್ನು ಆ ಹುಡುಗನ ತಂದೆಯು ಕೇಳಿ ಮಗನನ್ನು ಆ ಬುಧನ ಪಾದಗಳಿಗೆ ಕೆಡವಿ ಕ್ಷಮಿಸಬೇಕೆಂದು ಕೇಳಿಕೊಂಡನು.

೪೯. ಈ ಹುಡುಗನು ಇನ್ನೂ ಚಿಕ್ಕವನು. ನಿನ್ನ ಮಹಿಮೆಯನ್ನು ತಿಳಿಯನು. ಇಂತಹ ಚಿಕ್ಕವರಲ್ಲಿ ತಮ್ಮಂತಹವರು ಕೋಪಗೊಳ್ಳುವುದು ಯುಕ್ತವಲ್ಲ. ಕ್ಷಮಿಸಿರಿ.

೫೦. ಬೆಂಕಿಯಿಂದ ನೀರು ಕುದಿಯುತ್ತಿದ್ದರೂ ಅದರ ಸ್ವಭಾವವಾದ ಶೈತ್ಯವನ್ನು ಅದು ಹೊಂದುವಂತೆ ಸಾಧುವಿಗೆ ಯಾವುದೋ ಕಾರಣದಿಂದ ಕೋಪ ಬರುತ್ತದೆ. ಆದರೆ ಅವನ ಸ್ವಭಾವವು ಶಾಂತವಾದುದು.

೫೧. ಈ ವಿವೇಕವಿಲ್ಲದ ಮಗುವಿನ ವಿಷಯದಲ್ಲಿ ಕ್ಷಮಿಸಿ ಅವನಿಗೆ ಅನುಗ್ರಹವನ್ನು ಮಾಡು. ಸಾಧುಗಳಿಗೆ ಕ್ಷಮೆಯೇ ಸ್ವಭಾವವಾದುದಲ್ಲವೇ !

॥ ಶ್ರೀ ನಾರದ ಉವಾಚ ॥

ಇತ್ಯುಕ್ತಸ್ತೇನ ಮುನಿನಾ ಶೀತಾಂಶುತನಯಸ್ತದಾ ।
ಕ್ರೋಧಂ ತತ್ಯಾಜ ಶಾಂತಾತ್ಮಾ ಚಕ್ರೇ ತಸ್ಮಿನ್ನನುಗ್ರಹಂ ॥ ೫೨ ॥

॥ ಬುಧ ಉವಾಚ ॥

ಅಯಂ ತವ ಮುನೇ ಬಾಲಃ ಕುಂಡತ್ವಂ ಪ್ರಾಪ್ಯ ಭೂತಲೇ ।
ವತ್ತ್ಯಯಜ್ಞೋಪವೀತಸ್ಸಲ್ಲಪ್ಸ್ಯತೇ ಹಿ ನಿಜಾಸ್ಪದಂ ॥ ೫೩ ॥

॥ ಶ್ರೀ ನಾರದ ಉವಾಚ ॥

ಏವಂ ಸ ಮುನಿಪುತ್ರೋ ವೈ ಬುಧಶಾಪಾನ್ನೃಪೋತ್ತಮ ।
ಕುಂಡತ್ವಂ ಪ್ರಾಪ್ತವಾನ್ ಭೂಮೌ ಪಿತರೌ ಯೇನ ತಾರಿತಾಃ ॥ ೫೪ ॥

ಇದಂ ಪವಿತ್ರಂ ಮಾಹಾತ್ಮ್ಯಂ ಶ್ರುತ್ವಾ ಮಧುವನಸ್ಯ ವೈ ।
ಸಮಸ್ತಮಶ್ವಮೇಧಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೫೫ ॥

---

೫೨. ಶ್ರೀ ನಾರದನು ಹೇಳಿದನು–ಆ ಋಷಿಯು ಹೀಗೆಂದು ಕೇಳಿಕೊಳ್ಳುತ್ತಲೂ ಚಂದ್ರನ ಮಗನಾದ ಆ ಬುಧನು ಕೋಪವನ್ನು ಬಿಟ್ಟುಬಿಟ್ಟನು. ಶಾಂತನಾಗಿ ಅವನಿಗೆ ಅನುಗ್ರಹವನ್ನು ತೋರಿಸಿದನು.

೫೩. ಬುಧನು ಹೇಳಿದನು-ಎಲೈ ಋಷಿಯೆ ! ಬಾಲನಾದ ಈ ನಿನ್ನ ಮಗನು ಭೂಮಿಯಲ್ಲಿ ಕುಂಡನಾಗಿ ಹುಟ್ಟುತ್ತಾನೆ. ಅವನಿಗೆ ಉಪನಯನವಾದ ಮೇಲೆ ತನ್ನ ಮೊದಲಿನ ಜಾಗಕ್ಕೆ ಬರುತ್ತಾನೆ.

೫೪. ಶ್ರೀ ನಾರದನು ಹೇಳಿದನು-ಈ ರೀತಿಯಾಗಿ ಆ ಮುನಿ ಪುತ್ರನು ಬುಧನ ಶಾಪದಿಂದ ಈ ಭೂಮಿಯಲ್ಲಿ ಕುಂಡನಾಗಿ ಹುಟ್ಟಿ ತನ್ನ ಪಿತೃಗಳನ್ನು ಉದ್ಧಾರ ಮಾಡಿದನು.

೫೫. ಮಧುವನದ ಈ ಪವಿತ್ರವಾದ ಮಹಿಮೆಯನ್ನು ಕೇಳಿದರೆ ಅಶ್ವಮೇಧದ ಪುಣ್ಯವನ್ನು ಹೊಂದುತ್ತಾನೆ.

ಯೇ ನರಾ ಧಾರಯಂತ್ಯಸ್ಯ ಮಾಹಾತ್ಮ್ಯಸ್ಯಾರ್ಥಮುತ್ತಮಂ |
ಹೃದಯೇ ಯತ್ರ ತತ್ರೈಷಾಂ ವಿಷಯೈರ್ನಾಭಿಭೂಯತೇ　　|| ೫೬ ||

ಯೇ ಪಠಿಷ್ಯಂತಿ ಮಾಹಾತ್ಮ್ಯಂ ಶ್ರೋಷ್ಯಂತಿ ಚ ಮಹಾಧಿಯಃ |
ದೇಹಾಂತೇ ವಿಷ್ಣುಸಾಲೋಕ್ಯಂ ಗಮಿಷ್ಯಂತಿ ನ ಸಂಶಯಃ　　|| ೫೭ ||

ಇದಮನಿಶಪವಿತ್ರಂ ತುಭ್ಯಮಾವರ್ಣಿತಂ ಮೇ
ಮಧುವನಸುಚರಿತ್ರಂ ಶ್ರೀಪತೇಃ ಪ್ರೀತಿಕಾರಿ |
ಕಲಿಕಲುಷಕಲಾಪಚ್ಛೇದನೇ ದಕ್ಷಮಕ್ಷೋ
ತ್ಪಥಗಮನನಿರಾಸೇ ಕಾರಣಂ ಪುಣ್ಯಮೂರ್ತೌ　　|| ೫೮ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಮುನಿಪುತ್ರಸ್ಯ ಕುಂಡತ್ವಪ್ರಾಪ್ತಿ ಹೇತುರ್ನಾಮ ಏಕಾದಶಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೫೬. ಯಾರು ಈ ಮಹಿಮೆಯ ಅರ್ಥವನ್ನು ಮನಸ್ಸಿನಲ್ಲಿ ಯಾವಾಗಲೂ ಇಟ್ಟುಕೊಂಡಿರುತ್ತಾರೆಯೋ ಅವರು ವಿಷಯ ಸುಖಗಳಿಗೆ ಅಧೀನರಾಗುವುದಿಲ್ಲ.

೫೭. ಯಾರು ಈ ಮಹಿಮೆಯನ್ನು ಓದುತ್ತಾರೆಯೋ ಯಾರು ಕೇಳುತ್ತಾರೆಯೋ ಅವರು ಮೃತರಾದನಂತರ ವಿಷ್ಣುವಿನ ಸಾಲೋಕ್ಯವನ್ನು ಹೊಂದುತ್ತಾರೆ. ಸಂಶಯವಿಲ್ಲ.

೫೮. ಶ್ರೀಪತಿಗೆ ಪ್ರೀತಿಯನ್ನುಂಟುಮಾಡುವ ಪವಿತ್ರವಾದ ಕಲಿಯ ದೋಷಗಳನ್ನು ನಾಶಮಾಡುವುದರಲ್ಲಿ ಶಕ್ತವಾದ ಇಂದ್ರಿಯಗಳು ಸ್ವೇಚ್ಛೆಯಾಗಿ ಹೋಗುವುದಕ್ಕೆ ಬಿಡದಿರುವ ಪುಣ್ಯಕ್ಕೆ ಕಾರಣವಾದ ಈ ಮಧುವನದ ಚರಿತ್ರೆಯನ್ನು ನಿನಗೆ ವರ್ಣಿಸಿ ಹೇಳಿದ್ದೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಮುನಿಪುತ್ರನಿಗೆ ಕುಂಡತ್ವವು ಬಂದುದರ ಕಾರಣ ಎಂಬ ಇನ್ನೂರ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

॥ ದ್ವಾದಶಾಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ನಾರದ ಉವಾಚ ॥

ಅತೋ ಮಧುವನಾದ್ರಾಜನ್ನಯಂ ಬದರಿಕಾಶ್ರಮಃ ।
ಏಕಾದಶಧನುರ್ಮಾತ್ರೇ ಭೂಭಾಗೇ ವ್ಯವತಿಷ್ಠತೇ ॥ ೧ ॥

ಅಸ್ಯ ತೀರ್ಥವರಸ್ಯಾಹಂ ಮಹಿಮಾನಂ ಮಹಾದ್ಭುತಂ ।
ವರ್ಣಯಾಮಿ ಪುರಸ್ತಾತ್ತೇ ಯಂ ಶ್ರುತ್ವಾ ಮುಚ್ಯತೇ ಭಯಾತ್ ॥ ೨ ॥

ಏಕಸ್ತು ಮಗಧೇ ರಾಜನ್ ದೇವದಾಸೋ ಹಿ ನಾಮತಃ ।
ಬ್ರಾಹ್ಮಣಃ ಸತ್ಯವಾನ್ದಾನ್ತಃ ಸಾಕ್ಷಾದ್ಧರ್ಮ ಇವಾಪರಃ ॥ ೩ ॥

---

ಇನ್ನೂರ ಹನ್ನೆರಡನೆಯ ಅಧ್ಯಾಯವು.



೧. ಶ್ರೀ ನಾರದನು ಹೇಳಿದನು–ಈ ಮಧುವನಕ್ಕಿಂತಲೂ ಮುಂದೆ ಹನ್ನೊಂದು ಧನುಸ್ಸುಗಳ ಪ್ರಮಾಣದ ದೂರದಲ್ಲಿ ಬದರಿಕಾಶ್ರಮವು ಇರುವುದು.

೨. ಈ ತೀರ್ಥದ ಮಹಿಮೆಯನ್ನೂ ಅದ್ಭುತವನ್ನೂ ವರ್ಣಿಸುತ್ತೇನೆ. ಇದನ್ನು ಕೇಳಿದರೇನೇ ನಿನಗೆ ನರಕಭಯವು ನಾಶವಾಗುತ್ತದೆ.

೩. ಮಗಧ ದೇಶದಲ್ಲಿ ದೇವದಾಸನೆಂಬ ಹೆಸರುಳ್ಳ ಒಬ್ಬ ಬ್ರಾಹ್ಮಣನು ಇದ್ದನು. ಅವನು ಸತ್ಯವಂತನು. ಇಂದ್ರಿಯ ನಿಗ್ರಹಿಯು. ಪ್ರತ್ಯಕ್ಷವಾದ ಧರ್ಮವೇ ರೂಪು ಪಡೆದಂತೆ ಇದ್ದನು.

ನಿಷ್ಣಾತಸ್ಸರ್ವವಿದ್ಯಾಸು ಬೃಹಸ್ಪತಿರಿವಾಪರಃ ।
ಹರಿಸಂತೋಷಕೋ ಭಕ್ತ್ಯಾ ಪ್ರಹ್ಲಾದ ಇವ ದೈತ್ಯರಾಟ್ ॥ ೪ ॥

ಸಸ್ತ್ರೀಕೋಽಪಿ ಸ್ಮರೋಜ್ಜೇತಾ ಪಾರ್ವ್ವತ್ಯಾ ಇವ ವಲ್ಲಭಃ ।
ಸದಾಚಾರಪರೋ ನಿತ್ಯಂ ವಿಶ್ವಾಮಿತ್ರೋ ಮುನಿರ್ಯಥಾ ॥ ೫ ॥

ಮಗಧೇಶಗೃಹೇ ಮಾನ್ಯೋ ದ್ರೋಣವತ್ಕುರುವೇಶ್ಮನಿ ।
ದಾನಶೀಲಸ್ಸುಪಾತ್ರೇಷು ಬಲಿರ್ದೈತ್ಯಾಧಿಪೋ ಯಥಾ ॥ ೬ ॥

ತಸ್ಯ ಭಾರ್ಯೋತ್ತಮಾ ನಾಮ ಲಕ್ಷ್ಮೀರಿವ ಗುಣೋತ್ತಮಾ ।
ಪತಿಶುಶ್ರೂಷಣಪರಾ ಯಥಾ ಜನಕನಂದಿನೀ ॥ ೭ ॥

ತಸ್ಯೈಕಸ್ತು ಸುತೋ ರಾಜನ್ ಅಂಗದೋ ನಾಮ ಬುದ್ಧಿಮಾನ್ ।
ಏಕಾ ಪುತ್ರೀ ತು ವಲಯಾ ನಾಮ ಸಲ್ಲಕ್ಷಣಾನ್ವಿತಾ ॥ ೮ ॥

---

೪. ಎಲ್ಲಾ ವಿದ್ಯೆಗಳಲ್ಲಿಯೂ ಬಹುವಾದ ಜ್ಞಾನವುಳ್ಳವನು. ಬುದ್ಧಿಯಲ್ಲಿ ಮತ್ತೊಬ್ಬನಾದ ಬೃಹಸ್ಪತಿಯಂತೆಯೇ ಇದ್ದನು. ದೈತ್ಯರಾಜನಾದ ಪ್ರಹ್ಲಾದನಂತೆ ಭಕ್ತಿಯಿಂದ ಹರಿಯನ್ನು ಸಂತೋಷಪಡಿಸುತ್ತಿದ್ದನು.

೫. ಪಾರ್ವತಿಯು ಹತ್ತಿರವಿದ್ದರೂ ಹರನು ಮನ್ಮಥನನ್ನು ಜಯಿಸಿರುವಂತೆ ಈತನು ಹೆಂಡತಿಯಿಂದ ಕೂಡಿಕೊಂಡಿದ್ದರೂ ಸ್ಮರನಿಗೆ ಅಧೀನನಾಗದೆ ಇದ್ದನು. ವಿಶ್ವಾಮಿತ್ರ ಮುನಿಯಂತೆ ಯಾವಾಗಲೂ ಸದಾಚಾರವುಳ್ಳವನಾಗಿದ್ದನು.

೬. ದ್ರೋಣನು ಕುರುಗಳ ಮನೆಯಲ್ಲಿ ಪೂಜ್ಯನಾಗಿದ್ದಂತೆ ಮಗಧ ದೇಶದ ರಾಜನ ಮನೆಯಲ್ಲಿ ಈತನಿಗೆ ಗೌರವವಿದ್ದಿತು. ಬಲಿಯು ಸತ್ಪಾತ್ರರಲ್ಲಿ ದಾನ ಮಾಡುವಂತೆ ಇವನು ಒಳ್ಳೆ ಯೋಗ್ಯರಾದವರಲ್ಲಿ ದಾನ ಮಾಡುತ್ತಿದ್ದನು.

೭. ಅವನಿಗೆ ಉತ್ತಮಳೆಂದು ಹೆಸರುಳ್ಳ ಹೆಂಡತಿಯಿದ್ದಳು. ಅವಳು ಲಕ್ಷ್ಮಿಯಂತೆ ಗುಣದಲ್ಲಿಯೂ ಉತ್ತಮಳು. ಜನಕನ ಮಗಳಾದ ಸೀತೆಯಂತೆ ಪತಿಯ ಶುಶ್ರೂಷೆಯಲ್ಲಿಯೇ ಆಸಕ್ತಳಾಗಿದ್ದಳು.

೮. ಅವನಿಗೆ ಒಬ್ಬ ಮಗನಿದ್ದನು. ಅವನ ಹೆಸರು ಅಂಗದನು. ಬಹು ಬುದ್ಧಿವಂತನು. ಒಬ್ಬಳು ಮಗಳೂ ಇದ್ದಳು. ಅವಳ ಹೆಸರು ವಲಯುಳೆಂದು. ಒಳ್ಳೆಯ ಲಕ್ಷಣವಂತಳು.

ತಯೋರ್ಜ್ಯೇಷ್ಠೋಽಭವತ್ ಸುತಃ ಕನ್ಯಾ ತಸ್ಮಾದ್ಭೂಪ ಕನೀಯಸೀ ।
ತಯೋರ್ಯಥಾಕ್ರಮಂ ಚಕ್ರೇ ವಿವಾಹಂ ಸ ದ್ವಿಜೋತ್ತಮಃ ॥ ೯ ॥

ವಿವಾಹಿತಾ ತು ಸಾ ಕನ್ಯಾ ಯಯೌ ಶ್ವಶುರವೇಶ್ಮನಿ ।
ಶುಭಲಕ್ಷಣಸಂಪನ್ನಾ ಕಾಲೇನ ಕಿಯತಾ ನೃಪ ॥ ೧೦ ॥

ಅಂಗದಸ್ತು ಮಹಾಬುದ್ಧಿರ್ಗೃಹಭಾರಂ ಬಭಾರ ಹ ।
ಪಿತೃವತ್ಸರ್ವಶಾಸ್ತ್ರಜ್ಞೋ ಯೌವನಶ್ರೀವಿಭೂಷಿತಃ ॥ ೧೧ ॥

ಏಕದಾ ಸ ತು ವಿಪ್ರೇಂದ್ರಃ ಪುತ್ರಂ ತಂ ಗೃಹಕರ್ಮಣಿ ।
ಕ್ಷಮಂ ವಿಜ್ಞಾಯ ರಾಜೇಂದ್ರ ನಿಜಭಾರ್ಯಾಮುವಾಚ ಹ ॥ ೧೨ ॥

॥ ದೇವದಾಸ ಉವಾಚ ॥

ಸಮಾಕರ್ಣಯ ಮೇ ಸಾಧ್ವಿ ಕಾಲೇಽಸ್ಮಿನ್ನುಚಿತಂ ವಚಃ ।
ತತೋ ಯದುಚಿತಂ ಭದ್ರೇ ತದಹ್ನಾಯ ವಿಧೀಯತಾಂ ॥ ೧೩ ॥

---

೯. ಅವರಲ್ಲಿ ಮಗನೇ ದೊಡ್ಡವನು. ಮಗಳು ಅವನಿಗಿಂತಲೂ ಚಿಕ್ಕವಳು. ಅವರುಗಳಿಗೆ ಅವರವರ ವಯಸ್ಸಿಗೆ ತಕ್ಕಂತೆ ಆತನು ಮದುವೆಯನ್ನು ಮಾಡಿದನು.

೧೦. ಒಳ್ಳೆಯ ಲಕ್ಷಣವತಿಯೂ ಗುಣವತಿಯೂ ಆದ ಆ ಹುಡುಗಿಯು ಮದುವೆಯಾದ ಕೆಲವು ಕಾಲದ ಮೇಲೆ ಗಂಡನ ಮನೆಗೆ ಹೋದಳು.

೧೧. ಅಂಗದನು ತಂದೆಯಂತೆಯೇ ಎಲ್ಲಾ ಶಾಸ್ತ್ರಗಳಲ್ಲಿಯೂ ಪಂಡಿತನಾದನು. ಅವನಿಗೆ ಯೌವನವೂ ಬಂದಿತು. ಅನಂತರ ಬುದ್ಧಿವಂತನಾದ ಆತನು ಮನೆಯ ಗೃಹಕೃತ್ಯವನ್ನೆಲ್ಲಾ ತಾನೇ ವಹಿಸಿಕೊಂಡನು.

೧೨. ಆ ಬ್ರಾಹ್ಮಣನು ಮಗನು ಮನೆಯ ಕೆಲಸಗಳನ್ನು ನೋಡಿಕೊಳ್ಳುವುದರಲ್ಲಿ ಸಮರ್ಥನಾಗಿರುವನೆಂದು ತಿಳಿದು ಒಂದು ಸಾರಿ ತನ್ನ ಹೆಂಡತಿಯನ್ನು ಕುರಿತು ಇಂತೆಂದನು.

೧೩. ದೇವದಾಸನು ಹೇಳಿದನು—ಎಲೈ ಸಾಧ್ವಿಯೆ ! ಕಾಲಕ್ಕೆ ಯೋಗ್ಯವಾಗಿರುವ ಮಾತನ್ನು ಹೇಳುತ್ತೇನೆ. ಕೇಳು. ಆ ಮೇಲೆ ನಿನಗೆ ಯಾವುದು ಯೋಗ್ಯವೆಂದು ತೋರುತ್ತದೆಯೋ ಅದನ್ನು ಬೇಗ ಮಾಡು.

ಏಷಾ ಜರಾ ಸಮಾಯಾತಾ ಶರೀರಂ ಪಾತಯಿಷ್ಯತಿ |
ಅಂಗಾಸ್ಯಾಕಂಪಯಂತೀವ ವಾತ್ಯಾ ಪಕ್ವಫಲಂ ಯಥಾ ॥ ೧೪ ॥

ಅಕ್ಷ್ಣಾಮಪಿ ದ್ಯುತಿಂ ಮಂದಾಂ ನೂನಮೇಷಾ ಕರಿಷ್ಯತಿ |
ನಕ್ಷತ್ರಾಣಾಂ ಸಚಂದ್ರಾಣಾಂ ಪ್ರಾತರ್ವೇಲೇವ ಸುವ್ರತೇ ॥ ೧೫ ॥

ಸ್ಖಲತೋಃ ಪಾದಯೋಃ ಮಂದಾಂ ಗತಿಂ ಪ್ರತಿ ಪದಕ್ರಮಂ |
ಕರಿಷ್ಯತಿ ಜರಾ ಹ್ಯೇಷಾ ಯಥಾ ನಿಗಡಶೃಂಖಲಾ ॥ ೧೬ ॥

ತಸ್ಮಾದೇವ ಜರಾ ಯಾವನ್ನ ಪ್ರೌಢಾ ಜಾಯತೇ ಶುಭೇ |
ಆತ್ಮನಸ್ತಾವದಾವಾಭ್ಯಾಂ ಕರಣೀಯಂ ಹಿತಂ ದ್ರುತಂ ॥ ೧೭ ॥

ಗೃಹಪುತ್ರಸುಹೃದ್ಭ್ರಾತೃಪಿತರೋ ಹಿ ವಿನಶ್ವರಾಃ |
ದ್ರವ್ಯಾದಿಕಂ ಚ ಸುಭಗೇ ತೇಷು ಸಜ್ಜೇತ ನೋ ಬುಧಃ ॥ ೧೮ ॥

---

೧೪. ಈಗ ನಮಗೆ ಈ ಮುಪ್ಪು ಬಂದಿದೆ. ಶರೀರವನ್ನು ನಾಶ ಮಾಡುತ್ತದೆ. ಬಿರುಗಾಳಿಯು ಹಣ್ಣನ್ನು ಅಲ್ಲಾಡಿಸುವಂತೆ ಆ ಜರೆಯು ನನ್ನ ಅವಯವಗಳನ್ನು ಅಲ್ಲಾಡಿಸುತ್ತದೆ.

೧೫. ಬೆಳಗಿನ ಸಮಯವು ಚಂದ್ರನ ಮತ್ತು ನಕ್ಷತ್ರಗಳ ಕಾಂತಿಯನ್ನು ಹೇಗೆ ಮಲಿನವನ್ನಾಗಿ ಮಾಡುತ್ತದೆಯೋ ಹಾಗೆ ಆ ಜರೆಯು ನಮ್ಮಗಳ ಕಣ್ಣಿನ ಕಾಂತಿಯನ್ನು ಮಲಿನವನ್ನಾಗಿ ಮಾಡುತ್ತದೆ.

೧೬. ಕಾಲಿಗೆ ಹಾಕಿದ ಸರಪಣಿಗಳು ಆ ಕಾಲಿನ ನಡಗೆಯನ್ನು ನಿಧಾನವಾಗಿಯೂ ತತ್ತರಿಸುವ ಹಾಗೆಯೂ ಮಾಡುವಂತೆ ಜರೆಯು ಕಾಲಿನ ನಡಗೆಯನ್ನು ಹೆಜ್ಜೆ ಹೆಜ್ಜೆಗೂ ನಿದಾನವಾಗುವಂತೆಯೂ ತಡವರಿಸುವಂತೆಯೂ ಮಾಡುತ್ತದೆ.

೧೭. ಆದ್ದರಿಂದ ನಮ್ಮ ದೇಹಕ್ಕೆ ಬಂದಿರುವ ಈ ಮುಪ್ಪು ಹೆಚ್ಚುವುದರೊಳಗೆ ನಾವಿಬ್ಬರೂ ನಮಗೆ ಹಿತವಾದುದನ್ನು ಬೇಗನೆ ಮಾಡಿಕೊಳ್ಳಬೇಕು.

೧೮. ಮನೆ ಮಕ್ಕಳು ಸ್ನೇಹಿತರು ಸಹೋದರರು ತಾಯಿ ತಂದೆಗಳು ನೆಂಟರು ಹಣ ಮುಂತಾದುವೆಲ್ಲವೂ ಕ್ಷಣಕಾಲದುವು. ನಾಶವಾಗತಕ್ಕವು. ಅವುಗಳಲ್ಲಿ ಜ್ಞಾನಿಗಳು ಆಸಕ್ತರಾಗಬಾರದು.

ಅತೋಽಹಂ ಸರ್ವತೀರ್ಥೇಷು ಪರ್ಯಟನ್ನಿಜಿತೇಂದ್ರಿಯಃ ।
ವಾನಪ್ರಸ್ಥೇನ ವಿಧಿನಾ ವೀಕ್ಷಿಷ್ಯೇ ಹರಿಮೀಶ್ವರಂ ॥ ೧೯ ॥

ತತಸ್ಸನ್ಯಾಸಮಾದಾಯ ಕ್ವಚಿತ್ತೀರ್ಥೋತ್ತಮೇ ಶುಭೇ ।
ಪ್ರಾರಬ್ಧಕರ್ಮಣಾಮಂತೇ ತ್ಯಕ್ಷ್ಯಾಮಿ ಸ್ವಂ ಕಳೇಬರಂ ॥ ೨೦ ॥

ಏವಂ ಚೇತ್ಪ್ರಾಣಮುಕ್ತಿಸ್ಸ್ಯಾತ್ ಮುಕ್ತಿಸ್ಸ್ಯಾನ್ನಾತ್ರ ಸಂಶಯಃ ।
ಮಮ ಶ್ರೀಪತಿಪಾದಾಬ್ಜಸಮ್ಯಕ್ ಸ್ಥಾಪಿತಚೇತಸಃ ॥ ೨೧ ॥

॥ ಉತ್ತಮೋವಾಚ ॥

ಪುಮಾನ್ವಾ ಸ್ತ್ರೀಜನೋ ವಾಪಿ ಕೋ ರಮೇತ ವಿನಶ್ವರೇ ।
ಸಂಸಾರೇ ಮಾಧವಂ ಮುಕ್ತ್ವಾ ನಿತ್ಯಾಶ್ರಮಮಚೇತನಃ ॥ ೨೨ ॥

---

೧೯. ಆದ್ದರಿಂದ ನಾನು ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ತೀರ್ಥಗಳನ್ನು ಸೇವಿಸುತ್ತಾ ವಾನಪ್ರಸ್ಥಾಶ್ರಮದ ವಿಧಿಯಂತೆ ಇದ್ದುಕೊಂಡು ಈಶ್ವರನ ದರ್ಶನವನ್ನು ಮಾಡಬೇಕು.

೨೦. ಕೊನೆಗೆ ಸನ್ಯಾಸವನ್ನು ತೆಗೆದುಕೊಂಡು ಒಂದು ಉತ್ತಮವಾದ ತೀರ್ಥದಲ್ಲಿದ್ದುಕೊಂಡು ಪ್ರಾರಬ್ಧ ಕರ್ಮವು ಸವೆದಮೇಲೆ ಈ ದೇಹವನ್ನು ಬಿಟ್ಟು ಬಿಡುತ್ತೇನೆ.

೨೧. ಶ್ರೀ ಪತಿಯ ಪಾದಗಳನ್ನು ಧ್ಯಾನಮಾಡುತ್ತಿರುವ ನನಗೆ ಈ ರೀತಿಯಲ್ಲಿ ಪ್ರಾಣಗಳು ಹೋದರೆ ಆಗ ನನಗೆ ಮುಕ್ತಿಯು ಬರುತ್ತದೆ. ಅದರಲ್ಲಿ ಸಂಶಯವಿಲ್ಲ.

೨೨. ಉತ್ತಮೆಯು ಹೇಳಿದಳು-ಈ ನಶ್ವರವಾದ ಸಂಸಾರದಲ್ಲಿ ಗಂಡಸಾಗಲಿ ಹೆಂಗಸಾಗಲಿ ಯಾರುತಾನೇ ಆಸಕ್ತಿಯನ್ನು ಹೊಂದಿಯಾರು ? ಮಾಧವನ ಸ್ಮರಣೆಯನ್ನು ಬಿಟ್ಟು ಹಾಗೆ ಸಂಸಾರದಲ್ಲಿ ಆಸಕ್ತನಾದರೆ ಅವನೇ ಬುದ್ಧಿಯಿಲ್ಲದವನು.

ತಸ್ಮಾನ್ಮಾಮಪಿ ಜೀವೇಶ ತ್ವತ್ಪಾದಾಂಬುಜಸೇವಿನೀಂ ।
ನೀತ್ವಾ ಸ್ವಸಂಗಮೇ ತಾವದ್ವಿಶ್ವಾಬ್ಧೇರಾಶು ತಾರಯ　　　　॥ ೨೩ ॥

ಪುತ್ರೋsಯಮಂಗದ ಶ್ರೀಮಾನ್ ಗೃಹಭಾರಸ್ಯ ಧಾರಣೇ ।
ಸಮರ್ಥೋsಭೂತ್ ಸ್ನುಷಾ ಚೇಯಂ ಕಲ್ಯಾಣೀ ತತ್ಸಹಾಯಿನೀ ॥ ೨೪ ॥

ಪುತ್ರೇ ಸಮರ್ಥೇ ಯೋ ಮೂಢಃ ಪುರುಷಸ್ತ್ರೀಜನೋಥವಾ ।
ನ ವಿರಜ್ಯೇತ ಸ ಮೂಢಃ ವಂಚಿತಶ್ಶ್ರೇಯಸಾ ಹಿ ಸಃ　　　　॥ ೨೫ ॥

॥ ಶ್ರೀ ನಾರದ ಉವಾಚ ॥

ಏವಮನ್ಯೋನ್ಯ ಮಾಮನ್ತ್ರ್ಯ ದಂಪತೀ ತೌ ರಹಸ್ತದಾ ।
ಪುತ್ರಮಾಹೂಯ ಕಥಯಾಂಚಕ್ರತುಸ್ತ್ವದಮಂಗದಂ　　　　॥ ೨೬ ॥

---

೨೩. ಆದ್ದರಿಂದ ಎಲೈ ಜೀವಿತೇಶನೇ ! ನಿನ್ನ ಪಾದಗಳನ್ನೇ ಸೇವಿಸುತ್ತಿರುವ ನನ್ನನ್ನೂ ನಿನ್ನ ಜೊತೆಯಲ್ಲಿ ಕರೆದುಕೊಂಡು ಹೋಗಿ ಈ ಜನನ ಮರಣ ರೂಪವಾದ ಸಂಸಾರದಿಂದ ಪಾರು ಮಾಡು.

೨೪. ಆಯುಷ್ಮಂತನಾದ ಮಗನು ಗೃಹಕೃತ್ಯವನ್ನು ನೋಡಿಕೊಳ್ಳುವುದರಲ್ಲಿ ಶಕ್ತನಾಗಿದ್ದಾನೆ. ಮಂಗಳಕರಳಾದ ಈ ಸೊಸೆಯು ಅವನಿಗೆ ಸಂಸಾರ ನಿರ್ವಹಣದಲ್ಲಿ ಸಹಾಯಕಳಾಗಿದ್ದಾಳೆ.

೨೫. ಮಗನು ಸಮರ್ಥನಾದಮೇಲೆ ಹೆಂಗಸಾಗಲಿ ಗಂಡಸಾಗಲಿ ವೈರಾಗ್ಯವನ್ನು ಹೊಂದದಿದ್ದರೆ ಅವರು ಮೂಢರು. ಅವರು ಶ್ರೇಯಸ್ಸಿನಿಂದ ವಂಚಿತರಾದವರು.

೨೬. ಆ ದಂಪತಿಗಳು ಹೀಗೆ ಒಬ್ಬರಿಗೊಬ್ಬರು ಗುಟ್ಟಾಗಿ ಆಲೋಚಿಸಿಕೊಂಡು ಮಗನಾದ ಅಂಗದನನ್ನು ಕರೆದು ಇಂತೆಂದು ಹೇಳಿದರು.

॥ ದಂಪತೀ ಊಚತುಃ ॥

ಜರಾಗಮಶ್ಲಥದ್ಗಾತ್ರಾವಾವಾಂ ವಿದ್ಧಿ ತ್ವಮಂಗದ ।
ಸ್ವಶ್ರೇಯಸೇ ಯತಿಷ್ಯಾವಃ ಕುತ್ರ ಚಿತ್ಪುಣ್ಯಭೂತಲೇ ॥ ೨೭ ॥

ಹರೇರಾರಾಧನಂ ಭಕ್ತ್ಯಾ ಶ್ರೇಯಃ ಪರಮಮುಚ್ಯತೇ ।
ತದರ್ಥಮೇವ ನಿಷ್ಕಾಮಾ ಯತಂತೇ ಸಾಧವೋ ಭುವಿ ॥ ೨೮ ॥

ವಿಷಯೇಷು ನ ಸಂಸಕ್ತಿಃ ಸಮತ್ವಂ ಸರ್ವಜಂತುಷು ।
ಯೇಷಾಂ ಹರ್ಷವಿಷಾದೌ ಚ ನ ಜಾತು ಸುಖದುಃಖಯೋಃ ॥ ೨೯ ॥

ತ ಏವ ಸಾಧವೋ ಲೋಕೇ ಗೋವಿಂದಪದಸೇವಿನಃ ॥
ತೇಷಾಂ ದರ್ಶನಮಾತ್ರೇಣ ಕೃತಾರ್ಥೋ ಜಾಯತೇ ನರಃ ॥ ೩೦ ॥

---

೨೭. ದಂಪತಿಗಳು ಹೇಳಿದರು-ಎಲೈ ಅಂಗದನೆ! ನಮ್ಮಿಬ್ಬರಿಗೂ ಮುಪ್ಪು ಬಂದಿತು. ಅದರಿಂದ ನಮ್ಮ ಮೈಯೆಲ್ಲವೂ ಸುಕ್ಕು ಹಿಡಿದು ಸಡಿಲವಾಗಿದೆ. ನಾವು ಇನ್ನು ಮೇಲೆ ಪರಲೋಕದ ನಮ್ಮ ಶ್ರೇಯಸ್ಸಿಗೆ ಬೇಕಾದುವನ್ನು ಯಾವುದಾದರೂ ಒಂದು ಪುಣ್ಯಸ್ಥಳದಲ್ಲಿದ್ದುಕೊಂಡು ನೋಡಿಕೊಳ್ಳುತ್ತೇವೆ.

೨೮. ಭಕ್ತಿಯಿಂದ ಹರಿಯನ್ನು ಪೂಜಿಸಿದರೆ ಅದೇ ಮನುಷ್ಯನಿಗೆ ಉತ್ತಮೋತ್ತಮವಾದ ಶ್ರೇಯಸ್ಸಾದ ಕೆಲಸವೆಂದು ಹೇಳಲ್ಪಟ್ಟಿದೆ. ಅದಕ್ಕೋಸ್ಕರಲೇ ಸಾಧುಗಳು ಎಲ್ಲದರಲ್ಲಿಯೂ ಆಸೆಯನ್ನು ತೊರೆದು ಅವನ ಪೂಜೆಯನ್ನು ಮಾಡುತ್ತಾರೆ.

೨೯-೩೦. ಯಾರಿಗೆ ವಿಷಯ ಸುಖದಲ್ಲಿ ಆಸೆಯಿರುವುದಿಲ್ಲವೋ ಯಾರು ಎಲ್ಲಾ ಪ್ರಾಣಿಗಳಲ್ಲಿಯೂ ಒಂದೇ ರೀತಿಯಿಂದಿರುವರೋ ಯಾರು ಸುಖ ಬಂದಾಗ ಸಂತೋಷವನ್ನೂ ದುಃಖ ಬಂದಾಗ ಕಳವಳವನ್ನೂ ಹೊಂದದೆ ಗೋವಿಂದನನ್ನು ಸೇವಿಸುತ್ತಾರೆಯೋ ಅವರೇ ಲೋಕದಲ್ಲಿ ಸಾಧುಗಳೆನಿಸಿಕೊಳ್ಳುವರು. ಅವರ ದರ್ಶನದಿಂದಲೇ ಮನುಷ್ಯನು ಕೃತಾರ್ಥನಾಗುತ್ತಾನೆ.

ತೀರ್ಥಾನಿ ಪರ್ಯಟೇ ಧೀರಃ ತದ್ದರ್ಶನಸಮುತ್ಸುಕಃ ।
ಭಾಗ್ಯೋದಯೇನ ಕೇನಾಪಿ ತದ್ದರ್ಶನಮವಾಪ್ನುಯಾತ್ ॥ ೩೧ ॥

ತಸ್ಮಾದ್ಭಾರಂ ಕುಟುಂಬಸ್ಯ ಭುಜಯೋರ್ಯುಗದೀರ್ಘಯೋಃ ।
ಆರೋಪ್ಯ ನೌ ವಿಸರ್ಜಸ್ವ ತೀರ್ಥಯಾತ್ರಾರ್ಥಮಂಗದ ॥ ೩೨ ॥

ತೀರ್ಥಯಾತ್ರಾಪ್ರಸಂಗೇನ ಕದಾಚಿತ್ಸಾಧುದರ್ಶನಂ ।
ಭವೇದ್ಯದಿ ತದಾ ಪುತ್ರ ದ್ವಯೋರ್ನೌ ಸ್ಯಾತ್ಕೃತಾರ್ಥತಾ ॥ ೩೩ ॥

॥ ಶ್ರೀ ನಾರದ ಉವಾಚ ॥

ಇತ್ಯುಕ್ತಃ ಪಿತೃಭ್ಯಾಂ ಪುತ್ರಃ ಸಾಧುವಾದಮವಾದಯತ್ ॥ ೩೪ ॥

॥ ಪುತ್ರ ಉವಾಚ ॥

ಸಮಸ್ತಕುಲನಿಸ್ತಾರೋ ಭವದ್ಭ್ಯಾಮಯಮೀರಿತಃ ।
ಆಶು ಮಾಮವಜಾನೀತಂ ಕಿಂ ಕರೋಮಿ ಭವದ್ಧಿತಂ ॥ ೩೫ ॥

---

೩೧. ಮನುಷ್ಯನು ಧೈರ್ಯವಂತನಾಗಿ ಅವರನ್ನು ಹುಡುಕುತ್ತ ತೀರ್ಥಗಳನ್ನು ಸುತ್ತುತ್ತಿರಬೇಕು. ಯಾವಾಗಲೋ ಒಂದು ಸಾರಿ ಅವನ ಅದೃಷ್ಟದಿಂದಲೂ ಪೂರ್ವಜನ್ಮದ ಪುಣ್ಯದಿಂದಲೂ ಆ ಸಾಧುವಿನ ದರ್ಶನವಾಗುತ್ತದೆ.

೩೨. ಆದ್ದರಿಂದ ಬಲವಾಗಿಯೂ ಉದ್ದವಾಗಿಯೂ ಇರುವ ನಿನ್ನ ತೋಳುಗಳಲ್ಲಿ ಈ ನಮ್ಮ ಕುಟುಂಬದ ಭಾರವನ್ನು ನೀನು ಹೊತ್ತುಕೊಂಡು ನಮ್ಮನ್ನು ತೀರ್ಥಯಾತ್ರೆಗೋಸ್ಕರ ಕಳುಹಿಸಿಕೊಡು.

೩೩. ತೀರ್ಥಯಾತ್ರೆಯನ್ನು ಮಾಡುತ್ತಿರುವಾಗ ಒಂದುಸಾರಿ ಆ ಸಾಧುಗಳ ದರ್ಶನವಾದರೆ ನಮ್ಮಗಳ ಜನ್ಮವು ಆಗ ಸಾರ್ಥಕವಾಗುತ್ತದೆ.

೩೪. ಶ್ರೀ ನಾರದನು ಹೇಳಿದನು—ತಾಯಿತಂದೆಯರು ಹೀಗೆ ಹೇಳಿದುವನ್ನು ಕೇಳಿ ಆ ಮಗನು ಇದು ಬಹು ಯುಕ್ತವಾಗಿದೆ. ಸಾಧು ಸಾಧು ಎಂದನು.

೩೫. ಪುತ್ರನು ಹೇಳಿದನು-ನೀವುಗಳಿಬ್ಬರೂ ನಮ್ಮ ಕುಲಕ್ಕೆಲ್ಲಾ ಉದ್ಧಾರವಾಗುವ ಮಾತನ್ನು ಹೇಳಿದಿರಿ. ನಿಮಗೆ ಅನುಕೂಲವಾದುದನ್ನು ನಾನು ಏನುಮಾಡಬೇಕು ? ಅದನ್ನು ಬೇಗ ಮಾಡುತ್ತೇನೆ. ಹೇಳಿರಿ.

ಅಹಮಾಜ್ಞಾಕರೋ ನಿತ್ಯಂ ಯುವಯೋಃ ಪೂಜ್ಯಪಾದಯೋಃ ।
ಪುಣ್ಯತೀರ್ಥೇಷು ದಾನಾರ್ಥಂ ಗೃಹೀತಧನಮುತ್ತಮಂ ।
ನಯತಂ ಮಾಮಪಿ ಪ್ರೇಷ್ಯಂ ಸೇವಾಯೈ ನಿಜಸಂಗಮೇ ॥ ೩೬ ॥

॥ ಶ್ರೀ ನಾರದ ಉವಾಚ ॥

ಇತ್ಯುಕ್ತ್ವಾ ಧನಮಾದಾಯ ಗತಃ ಕ್ರೋಶದ್ವಯಂ ತಯೋಃ ।
ಸಂಗೇ ಗೃಹಂ ಪ್ರತಿ ತಾಭ್ಯಾಂ ಕಥಂಚಿತ್ಸ ನಿವರ್ತಿತಃ ॥ ೩೭ ॥

ತೌ ಗೃಹೀತ್ವಾ ಧನಂ ಕಿಂಚಿದ್ವಿಷ್ಣೋರ್ನೌ ಪ್ರೀಯತಾಮಿತಿ ।
ಕಂದಮೂಲಫಲಾಹಾರೌ ತತ್ರೋಷಿತ್ವಾ ದಿನತ್ರಯಂ ॥ ೩೮ ॥

ಯದಾ ತಸ್ಮಾತ್ಪ್ರಚಲಿತೌ ದಂಪತೀ ಜಗತೀಪತೇ ।
ತದಾ ಮಾರ್ಗೇ ಮಹಾನ್ ಕಶ್ಚಿತ್ ಸಿದ್ಧಸ್ಸಮ್ಮಿಲಿತಸ್ತಯೋಃ ॥ ೩೯ ॥

---

೩೬. ಪೂಜ್ಯರಾದ ನಿಮ್ಮಗಳಿಗೆ ನಾನು ಯಾವಾಗಲೂ ಸೇವೆಮಾಡುವ ಆಳೆಂಬುದಾಗಿ ತಿಳಿಯಿರಿ. ಪುಣ್ಯತೀರ್ಥಗಳಲ್ಲಿ ದಾನಮಾಡುವುದಕ್ಕೆ ಬಹುವಾಗಿ ಹಣವನ್ನು ತೆಗೆದುಕೊಳ್ಳಿರಿ. ನಿಮ್ಮಗಳ ಸೇವೆಯನ್ನು ಮಾಡಲು ನಿಮ್ಮ ಜೊತೆಯಲ್ಲಿ ಆಳಾದ ನನ್ನನ್ನು ಕರೆದುಕೊಂಡು ಹೋಗಿರಿ.

೩೭. ಶ್ರೀ ನಾರದನು ಹೇಳಿದನು-ಹೀಗೆಂದು ಹೇಳಿ ಹಣವನ್ನು ತೆಗೆದು ಕೊಂಡು ಅವರ ಜೊತೆಯಲ್ಲಿ ಈ ಮಗನು ಎರಡು ಹರಿದಾರಿಗಳವರೆಗೂ ಹೋದನು. ಅನಂತರ ಈ ತಾಯಿತಂದೆಗಳು ಅವನನ್ನು ಹಿಂದಕ್ಕೆ ಕಳುಹಿಸಿ ಬಿಟ್ಟರು.

೩೮. ಆ ತಂದೆತಾಯಿಗಳು ಅವನಿಂದ ಸ್ವಲ್ಪ ಹಣವನ್ನು ತೆಗೆದುಕೊಂಡು ವಿಷ್ಣುವಿಗೆ ಪ್ರೀತಿಯಾಗಲೆಂದು ಗೆಡ್ಡೆಗೆಣಸುಗಳನ್ನೂ ಫಲಗಳನ್ನೂ ತಿನ್ನುತ್ತ ಅಲ್ಲಿ ಮೂರು ದಿನಗಳಿದ್ದರು.

೩೯. ಆ ದಂಪತಿಗಳು ಅಲ್ಲಿಂದ ಮುಂದಕ್ಕೆ ಹೊರಟೊಡನೆಯೇ ದಾರಿಯಲ್ಲಿ ಒಬ್ಬ ಸಿದ್ಧ ಪುರುಷನು ಅವರಿಗೆ ಸಿಕ್ಕಿದನು.

ತಾಭ್ಯಾಮುಭಾಭ್ಯಾಂ ಶಿರಸಾ ವಂದಿತಸ್ಸ ಉಪಾವಿಶತ್ ।
ಉಪವಿಷ್ಟಸ್ತದಾ ತಾಭ್ಯಾಮಿತಿಪೃಷ್ಟಃ ಸ ಸಿದ್ಧರಾಟ್ ।
ಕೋ ಭವಾನ್ ಕುತ ಆಯಾತಃ ಕಿಂ ಚಿಕೀರ್ಷತಿ ತದ್ವದ ॥ ೪೦ ॥

॥ ಸಿದ್ಧ ಉವಾಚ ॥

ಸಿದ್ಧೋಽಹಂ ತಾಪಸಶ್ರೇಷ್ಠ ಕಲ್ಪಗ್ರಾಮೋ ಗೃಹಂ ಮಮ ।
ಇಂದ್ರಪ್ರಸ್ಥಾತ್ಸಮಾಯಾತೋ ದೃಷ್ಟಂ ತತ್ರ ಮಹಾದ್ಭುತಂ ॥ ೪೧ ॥

ತತ್ರಾಸ್ತಿ ಕಪಿಲಃ ಸಿದ್ಧೋ ನಾರಾಯಣಸಮೋ ಗುಣೈಃ ।
ತಸ್ಮಾದಹಂ ಪಠನ್ ಸಾಂಖ್ಯಂ ನಿವಸಾಮಿ ತದಾಶ್ರಮೇ ॥ ೪೨ ॥

ಏಕದಾ ಮದ್ಗುರುಃ ಶ್ರೀಮಾನ್ ಸ್ವಾಶ್ರಮಾತ್ಕಪಿಲೋ ಯಯೌ ।
ಬದರ್ಯಾಖ್ಯಂ ಮಹಾಪುಣ್ಯಂ ಸ್ನಾತುಂ ಸ ಯಮುನಾಜಲೇ ॥ ೪೩ ॥

---

೪೦ ಅವರಿಬ್ಬರೂ ಆತನಿಗೆ ನಮಸ್ಕರಿಸಲು ಆತನು ಅಲ್ಲಿ ಕುಳಿತುಕೊಂಡನು. ಅವನು ಕುಳಿತುಕೊಳ್ಳುತ್ತಲೂ ಆ ದಂಪತಿಗಳು ಅವನನ್ನು ನೀನಾರು? ಎಲ್ಲಿಂದ ಬಂದೆ? ಏನುಮಾಡಬೇಕೆಂದಿದ್ದೀಯೆ? ಅದನ್ನು ಹೇಳು. ಎಂದರು.

೪೧. ಸಿದ್ಧನು ಹೇಳಿದನು–ಎಲೈ ತಾಪಸಶ್ರೇಷ್ಠರಿರಾ! ನಾನು ಒಬ್ಬ ಸಿದ್ಧನು. ನನ್ನ ಮನೆಯು ಕಲ್ಪಗ್ರಾಮದಲ್ಲಿದೆ. ಇಂದ್ರಪ್ರಸ್ಥದಿಂದ ಬಂದೆನು. ಅಲ್ಲಿ ಒಂದು ಅದ್ಭುತವನ್ನು ನೋಡಿದೆನು.

೪೨. ಅಲ್ಲಿ ಕಪಿಲನೆಂಬ ಒಬ್ಬ ಸಿದ್ಧಪುರುಷನಿರುವನು. ಅವನು ಗುಣಗಳಲ್ಲಿ ನಾರಾಯಣನಿಗೆ ಸಮನಾಗಿರುವನು. ನಾನು ಅವನ ಬಳಿಯಲ್ಲಿ ಸಾಂಖ್ಯವನ್ನು ಓದುತ್ತಾ ಅವನ ಆಶ್ರಮದಲ್ಲಿಯೇ ಇದ್ದೇನೆ.

೪೩. ಒಂದುಸಾರಿ ಆ ನನ್ನ ಗುರುವಾದ ಕಪಿಲನು ಬದರಿ ಎಂಬ ಮಹಾಪುಣ್ಯಕ್ಷೇತ್ರದಲ್ಲಿ ಯಮುನೆಯಲ್ಲಿ ಸ್ನಾನಮಾಡಲು ಹೋದನು.

ತತ್ರೈಕೋರಣ್ಯಮಹಿಷಃ ತೃಷಾರ್ತೋ ಯಮುನಾಜಲೇ ।
ಪ್ರವಿಷ್ಟೋ ಜಲಮಾಪೀಯ ಪೂರ್ವಜನ್ಮ ಸ್ವಮಸ್ಮರತ್ ॥ ೪೪ ॥

ಸ್ಮೃತ್ವಾ ಸ ಪೂರ್ವಕರ್ಮಾಣಿ ಮಹಿಷೋರಣ್ಯಸಂಭವಃ ।
ಜಲಾನ್ನಿಸ್ಸೃತ್ಯ ತರಸಾ ವವಂದೇ ಕಪಿಲಂ ಗುರುಂ ॥ ೪೫ ॥

ಉವಾಚ ನರವಾಚಾ ಚ ಮಯಿ ಶೃಣ್ವತಿ ತಾಪಸೇ ।
ಯತ್ತತ್ತೇ ಕಥಯಾಮ್ಯದ್ಯ ಶೃಣು ತ್ವಂ ಪರಮಾದ್ಭುತಂ ॥ ೪೬ ॥

॥ ಮಹಿಷ ಉವಾಚ ॥

ಭೋ ಭೋ ವಿಷ್ಣುಕಲಾಭೂತ ಸಿದ್ಧಾನಾಂ ಪರಮೇಶ್ವರ ।
ಕಿಂ ನಾಮೇದಂ ಮಹಾತೀರ್ಥಂ ನತಾಯ ಕಥಯಸ್ವ ಮೇ ॥ ೪೭ ॥

ಅಸ್ಯ ತೀರ್ಥವರಸ್ಯಾಂಬು ಸ್ಪರ್ಶಾತ್ಪೂರ್ವಜನೇಃ ಸ್ಮೃತಿಃ ।
ಜಾತಾ ಮಮ ಮಹಾಭಾಗ ಪಾಪಸ್ಯಾಪಿ ಚ ಕರ್ಮಣಃ ॥ ೪೮ ॥

---

೪೪. ಅಲ್ಲಿ ಒಂದು ಕಾಡುಕೋಣವು ಬಾಯಾರಿ ಆ ಯಮುನೆಯ ನೀರಿಗೆ ಬಂದು ನೀರನ್ನು ಕುಡಿದು ಬಿಸಿಲಿನ ಝಳವನ್ನು ತಡೆಯಲಾರದೆ ನೀರಿನೊಳಕ್ಕೆ ಹೋಯಿತು. ಒಡನೆಯೇ ಅದಕ್ಕೆ ಪೂರ್ವಜನ್ಮದ ಸ್ಮರಣೆಯು ಬಂದಿತು.

೪೫. ಆ ಕಾಡುಕೋಣನಿಗೆ ಒಡನೆಯೇ ಪೂರ್ವಜನ್ಮದ ಸ್ಮರಣೆಯುಂಟಾಗಲು ಆ ನೀರಿನಿಂದ ಹೊರಕ್ಕೆ ಬಂದು ಅಲ್ಲಿದ್ದ ಈ ಕಪಿಲ ಋಷಿಗೆ ನಮಸ್ಕರಿಸಿತು.

೪೬. ಆಗ ನನಗೂ ಕೇಳುವಂತೆ ಆ ಕೋಣನು ಮನುಷ್ಯರು ಮಾತನಾಡುವಂತೆಯೇ ಮಾತನಾಡಿತು. ಆ ಅದ್ಭುತವನ್ನು ಹೇಳುತ್ತೇನೆ ಕೇಳು.

೪೭. ಕೋಣವು ಹೇಳಿತು-ಎಲೈ ವಿಷ್ಣುವಿನ ಅಂಶವೂ ಸಿದ್ಧನೂ ಆದ ಕಪಿಲೇಶ್ವರನೆ ! ಈ ತೀರ್ಥದ ಹೆಸರೇನು ? ನಮಸ್ಕರಿಸಿ ಕೇಳಿಕೊಳ್ಳುತ್ತಿರುವ ನನಗೆ ಹೇಳು.

೪೮. ಈ ತೀರ್ಥದ ನೀರನ್ನು ಮುಟ್ಟಿದ ಕೂಡಲೇ ನನಗೆ ಪೂರ್ವಜನ್ಮದ ಸ್ಮರಣೆಯೆಲ್ಲವೂ ಬಂದಿತು ಆಗಿನ ಪುಣ್ಯಪಾಪಗಳೆಲ್ಲವೂ ಸ್ಮರಣೆಗೆ ಬಂದುವು.

॥ ಸಿದ್ಧ ಉವಾಚ ॥

ಏವಮಾಕರ್ಣ್ಯ ತದ್ವಾಕ್ಯಂ ಮಹಿಷಸ್ಯ ಮಹಾಮತಿಃ ।
ಜಾನನ್ನಪಿ ಚ ತದ್ವೃತ್ತಂ ವಿಹಸ್ಯೇದಮುವಾಚ ಹ ॥ ೪೯ ॥

॥ ಕಪಿಲ ಉವಾಚ ॥

ಭವಾನ್ ಮಹಿಷಶಾರ್ದೂಲ ಕ ಆಸೀತ್ಪೂರ್ವಜನ್ಮನಿ ।
ತತ್ರ ಕಿಂ ಕೃತವಾನ್ ಕರ್ಮ ಯೋನಿಂ ಯೇ ನಾಪ ಮಾಹಿಷೀಃ ॥ ೫೦ ॥

॥ ಮಹಿಷ ಉವಾಚ ॥

ಶೃಣುಷ್ವ ಮುನಿಶಾರ್ದೂಲ ವೃತ್ತಂ ವೈ ಪೂರ್ವಜನ್ಮನಃ ।
ಅಹಮಾಸಂ ಪುರಾ ರಾಜಾ ಕಲಿಂಗಾಧಿಪತಿರ್ಬಲೀ ॥ ೫೧ ॥

ಸ್ವಪರಾಂ ನೈವ ಜಾನಾಮಿ ಯೋಷಿತಂ ಕಾಮಮೋಹಿತಃ ।
ವಣಿಜಾಂ ಸಾಧುವೃತ್ತೀನಾಂ ಧನಹರ್ತಾ ನಿರೇನಸಾಂ ॥ ೫೨ ॥

---

೪೯. ಸಿದ್ಧನು ಹೇಳಿದನು-ಆ ಕಪಿಲನು ಆ ಕೋಣನ ಈ ಮಾತನ್ನು ಕೇಳಿ ಆದರ ವಿಷಯವನ್ನು ತಿಳಿದಿದ್ದರೂ ನಗುತ್ತಾ ಇಂತೆಂದನು.

೫೦. ಕಪಿಲನು ಹೇಳಿದನು-ಎಲೈ ಮಹಿಷನೇ ! ನೀನು ಪೂರ್ವ ಜನ್ಮದಲ್ಲಿ ಯಾರಾಗಿದ್ದೆ ? ಆಗ ಯಾವ ಪಾಪವನ್ನು ಮಾಡಿದ್ದೆ ? ಈ ಕೋಣನ ಜನ್ಮ ಬರಲು ಕಾರಣವೇನು ?

೫೧. ಕೋಣನು ಹೇಳಿತು-ಎಲೈ ಮುನಿಶ್ರೇಷ್ಠನೇ ! ನನ್ನ ಪೂರ್ವಜನ್ಮದ ವೃತ್ತಾಂತವನ್ನು ಕೇಳು. ನಾನು ಪೂರ್ವಜನ್ಮದಲ್ಲಿ ಕಳಿಂಗ ದೇಶದ ರಾಜನಾಗಿ ಬಲಿಷ್ಠನಾಗಿದ್ದೆನು.

೫೨. ಆವಾಗ ಕಾಮಿಯಾಗಿ ಈಕೆಯು ಪರರ ಹೆಂಗಸು ಈಕೆಯು ನಮ್ಮ ಹೆಂಗಸು ಎಂಬುದನ್ನೇ ತಿಳಿಯದೆ ಅನುಭವಿಸುತ್ತಿದ್ದೆನು. ಅಲ್ಲದೆ ಸರಿಯಾದ ರೀತಿಯಲ್ಲಿರುತ್ತಿದ್ದರೂ ಅಂತಹ ಯೋಗ್ಯರಾದ ವ್ಯಾಪಾರಿಗಳ ಹಣವೆಲ್ಲವನ್ನೂ ಕಿತ್ತುಕೊಳ್ಳುತ್ತಿದ್ದೆನು.

ನಿಶೀಥೇ ನಗರೇ ರಾಜ್ಞ ಗತಭೀಃ ಪರ್ಯಟಾಮ್ಯಹಂ ।
ಸುಂದರೀಭಿಃ ಪರಸ್ತ್ರೀಭಿಃ ಕ್ರೀಡಿತುಂ ರತಿಲೀಲಯಾ ॥ ೫೩ ॥

ಯಸ್ಮಿನ್ ಗೃಹೇ ಸುಂದರೀಂ ನಾರೀಂ ಪಶ್ಯಾಮಿ ಸ್ಮರಮೋಹಿತಃ ।
ವಸಾಮಿ ನಿಶಿ ತತ್ರಾಹಂ ಕ್ಷೇತ್ರೇ ವನಗಜೋ ಯಥಾ ॥ ೫೪ ॥

ಕ್ರೀಡಿತ್ವಾ ತತ್ರ ನಿಶ್ಶಂಕಂ ಧನಂ ಹೃತ್ವಾ ಚ ತದ್ಗೃಹಾತ್ ।
ಸ್ವಗೃಹಂ ಪುನರಾಯಾಮಿ ಕಿಯದ್ಭಿರ್ವಾಸರೈರಹಂ ॥ ೫೫ ॥

ಉಪವಿಷ್ಟಸ್ಸಭಾಮಧ್ಯೇ ದಿವಾ ದೃಷ್ಟ್ವಾ ಪುರಬಾಲಕೌ ।
ಅನಾಯ್ಯ ಬಾಹುಯುದ್ಧೇನ ಯೋಧಯಾಮಿ ನಿಜಾಗ್ರತಃ ॥ ೫೬ ॥

ನಿಯೋಧಯತಿ ಯೋ ಬಾಲಸ್ತಂ ಮತ್ವಾ ಧನಿನಂ ಬಲಾತ್ ।
ಗೃಹ್ಣಾಮಿ ತತ್ಪಿತುರ್ವಿತ್ತಂ ಸ್ವಲ್ಪಂ ವಾ ಭೂರಿ ವಾ ಮುನೇ ॥ ೫೭ ॥

---

೫೩. ಸುಂದರಿಯರಾದ ಹೆಂಗಸರೊಡನೆ ರತಿಲೋಲುಪತೆಯನ್ನು ಹೊಂದಿ ಸುಖಪಡುವುದಕ್ಕೋಸ್ಕರ ಅರ್ಧರಾತ್ರಿಯಲ್ಲಿಯೂ ಹೆದರಿಕೆಯಿಲ್ಲದೆ ಪಟ್ಟಣದಲ್ಲೆಲ್ಲಾ ಸಂಚರಿಸುತ್ತಿದ್ದೆನು.

೫೪. ಕಾಡಾನೆಯು ಯಾವ ಜಾಗದಲ್ಲಿ ಆಹಾರವನ್ನು ಕಂಡರೆ ಅಲ್ಲಿಯೇ ಹೇಗೆ ಆ ರಾತ್ರಿಯೆಲ್ಲಾ ವಾಸಮಾಡುವುದೋ ಹಾಗೆ ನಾನು ಯಾವ ಮನೆಯಲ್ಲಿ ಸುಂದರಿಯರಾದ ಹೆಂಗಸರನ್ನು ಕಂಡರೆ ಆ ಮನೆಯಲ್ಲಿಯೇ ಕಾಮನಿಗೆ ಮನಸೋತು ಇದ್ದು ಬಿಡುತ್ತಿದ್ದೆನು.

೫೫. ಆ ಮನೆಯಲ್ಲಿ ಬಹುಕಾಲದವರೆಗೆ ರತಿಸುಖವನ್ನು ಹೊಂದಿ ಆ ಮನೆಯಲ್ಲಿದ್ದ ಹಣವನ್ನೆಲ್ಲಾ ಕಿತ್ತುಕೊಂಡು ಮತ್ತೆ ಮನೆಗೆ ಬರುತ್ತಿದ್ದೆನು.

೫೬. ಹಗಲು ಹೊತ್ತಿನಲ್ಲಿ ಸಭೆಯಲ್ಲಿ ಕುಳಿತಿರುವಾಗ ಊರಿನ ಇಬ್ಬರು ಬಲಿಷ್ಠರಾದ ಹುಡುಗರನ್ನು ಕರೆಸಿ ನನ್ನ ಎದುರಿಗೆ ಬಾಹುಯುದ್ಧವನ್ನು (ಕುಸ್ತಿಯನ್ನು) ಮಾಡಿಸುತ್ತಿದ್ದೆನು

೫೭. ಹೀಗೆ ಬಾಹುಯುದ್ಧ ಮಾಡುತ್ತಿರುವ ಹುಡುಗರಲ್ಲಿ ಯಾವನು ಗೆದ್ದರೆ ಅವನು ಧನವಂತನೆಂದು ತಿಳಿದು ಅವನ ತಂದೆಯಲ್ಲಿ ಹೆಚ್ಚು ಹಣವಿರಲಿ ಸ್ವಲ್ಪವೇ ಇರಲಿ ಅದನ್ನು ತೆಗೆದುಕೊಂಡು ಬಿಡುತ್ತಿದ್ದೆನು.

ಯಃ ಪರಾಜಯತೇ ತತ್ರ ಕಾತರತ್ವಾನ್ಮಹಾಮುನೇ ।
ನಾಯಮರ್ಹಃ ಪುರೇ ಸ್ಥಾತುಂ ಮಮೇತಿ ವಿನಿಹನ್ಮಿ ತಂ । ॥ ೫೮ ॥

ಏವಂ ಮಯ್ಯಧಮಾಚಾರೇ ವರ್ತಮಾನೇ ಮಹೀಪತೌ ।
ಪೌರಾ ನಗರಮುತ್ಸೃಜ್ಯ ಪ್ರಯಯುರ್ವಿಷಯಾಂತರಂ ॥ ೫೯ ॥

ಏಕದಾ ಮುನಿಶಾರ್ದೂಲೋ ದುರ್ವಾಸಾಃ ಪರ್ಯಟನ್ ಮಹೀಂ ।
ಪುರಂ ಮಮ ಸಮಾಯಾತೋ ದುರ್ವಾಸಾ ರುದ್ರಸಂಭವಃ ॥ ೬೦ ॥

ಮಿಳಿತ್ವಾ ನಾಗರಾಸ್ಸರ್ವೇ ತದಾ ಜಗ್ಮುಸ್ತದಂತಿಕೇ ।
ಪ್ರಣಿಪತ್ಯೇಧಮಾಹುಸ್ತಂ ಸ್ವದುಃಖಜ್ಞಾಪಕಂ ವಚಃ ॥ ೬೧ ॥

॥ ಪೌರಾ ಊಚುಃ ॥

ಅತ್ರೇಯ ಮುನಿಶಾರ್ದೂಲ ಕೃಪಾಂ ಕುರು ಕೃಪಾನಿಧೇ ।
ಅಧರ್ಮನಿರತಂ ಭೂಪಮೇನಂ ಧರ್ಮೇಣ ಯೋಜಯ ॥ ೬೨ ॥

---

೫೮ ಯಾವನು ಹೆದರಿಕೊಂಡು ಸೋತು ಹೋಗುತ್ತಾನೆಯೋ ಅವನು ನನ್ನ ಪಟ್ಟಣದಲ್ಲಿರಲು ಯೋಗ್ಯನಲ್ಲವೆಂದು ಅವನನ್ನು ಕೊಲ್ಲಿಸುತ್ತಿದ್ದೆನು.

೫೯. ರಾಜನಾದ ನಾನು ಈ ರೀತಿಯಾಗಿ ಕೆಟ್ಟ ಕೆಲಸವನ್ನು ಮಾಡುತ್ತಿರಲು ನನ್ನ ಪಟ್ಟಣದವರೆಲ್ಲರೂ ಅವರವರ ಜಾಗವನ್ನು ಬಿಟ್ಟು ಬೇರೆ ಬೇರೆ ಜಾಗಕ್ಕೆ ಹೊರಟು ಹೋದರು.

೬೦. ಒಂದುಸಾರಿ ಮುನಿಶ್ರೇಷ್ಠನಾದ ದುರ್ವಾಸ ಋಷಿಯು ಭೂಮಿಯನ್ನು ಸುತ್ತುತ್ತಾ ಕೋಪಿಯೂ ರುದ್ರನ ಅವತಾರವೂ ಆದ ಆತನು ನನ್ನ ಪಟ್ಟಣಕ್ಕೆ ಬಂದನು.

೬೧ ಆಗ ನನ್ನ ಪಟ್ಟಣದಲ್ಲಿರುವವರೆಲ್ಲರೂ ಸೇರಿಕೊಂಡು ಅವನ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿ ತಾವು ಹೊಂದಿರುವ ಕಷ್ಟದ ವಿಷಯಗಳನ್ನು ತಿಳಿಸಿದರು.

೬೨. ಪಟ್ಟಣಿಗರು ಹೇಳಿದರು-ಎಲೈ ಅತ್ರಿಪುತ್ರನಾದ ಮುನಿಶ್ರೇಷ್ಠನೆ ! ನಮ್ಮಲ್ಲಿ ದಯೆಯನ್ನು ತೋರಿಸು. ಅಧರ್ಮದಲ್ಲಿ ಆಸಕ್ತನಾಗಿರುವ ಈ ನಮ್ಮ ರಾಜನು ಧರ್ಮದಾರಿಯಲ್ಲಿ ಹೋಗುವಂತೆ ಮಾಡು.

ಭಾಗ್ಯೋದಯೇನ ಕೇನಾಪಿ ಭವಾನಸ್ಮಾಕಮಾಗತಃ |
ಉದ್ವೇಲಾದ್ಭೂಪದುಃಖಾಬ್ಧೇಃ ಅಸ್ಮಾಂಸ್ತಾರಯ ಪೋತವಾನ್ ॥ ೬೩ ॥

ಧನಂ ಲೋಭವತಾ ತೇನ ಹೃತಂ ನೋ ಮುನಿಪುಂಗವ |
ದೂಷಿತಾಶ್ಚ ಸ್ತ್ರಿಯಃ ಸಾಧ್ವ್ಯಃ ಸಕಾಮೇನ ನೀರೇನಸಾಂ ॥ ೬೪ ॥

ದಶವತ್ಸರದೇಶೀಯಾ ಬಹವಶ್ಶಿಶವೋ ಹತಾಃ |
ಅಗಣ್ಯೈರ್ದುರ್ಗುಣ್ಯನಿಧಿರೇಷ ಭೂಪೋ ಮಹಾಮುನೇ ॥ ೬೫ ॥

॥ ಮಹಿಷ ಉವಾಚ ॥

ಏವಮಾಕರ್ಣ್ಯ ಪೌರಾಣಾಂ ವಚಸ್ಸಮುನಿರತ್ರಿಜಃ |
ದಂಡ್ಯೋಯಮಿತಿ ಸಂಚಿಂತ್ಯ ಸಭಾಸ್ಥಂ ಮಾಮುಥಾಯಯೌ ॥ ೬೬ ॥

ದೃಷ್ಟ್ವಾ ಹಿ ತಂ ಸಮಾಯಾಂತಮವಧೂತಂ ದಿಗಂಬರಂ ।
ಅವಾರಯಮಹಂ ಭೃತ್ಯೈರ್ನ ತ್ವಯಂ ದರ್ಶನೋಚಿತಃ ॥ ೬೭ ॥

---

೬೩. ನೀನು ನಮ್ಮ ಯಾವುದೋ ಒಂದು ಭಾಗ್ಯವಶದಿಂದ ಇಲ್ಲಿಗೆ ಬಂದಿದ್ದೀಯೆ. ಈ ಎಲ್ಲೆಮೀರಿದ ರಾಜನೆಂಬ ಸಮುದ್ರದಿಂದ ನೀನು ದೋಣಿಯಂತಾಗಿ ನಮ್ಮನ್ನು ಪಾರುಗಾಣಿಸು.

೬೪. ಈ ಲೋಭಿಯಾದ ರಾಜನು ನಮ್ಮ ಹಣವೆಲ್ಲವನ್ನೂ ಕಸಿದು ಕೊಂಡಿರುವನು. ಕಾಮಿಯಾದ ಅವನು ಗೃಹಸ್ಥರಾದ ನಮ್ಮಗಳ ಪತಿವ್ರತಾ ಸ್ತ್ರೀಯರನ್ನು ಕೆಡಿಸಿರುವನು.

೬೫. ಹತ್ತುವರ್ಷದ ಹುಡುಗರನ್ನು ಬಹು ಮಂದಿಯನ್ನು ಕೊಂದು ಹಾಕಿರುವನು. ಈ ರಾಜನು ಬಹುವಾದ ದುರ್ಗುಣಗಳುಳ್ಳವನು. ಇವನನ್ನು ಸರಿಯಾದ ಸ್ಥಿತಿಯಲ್ಲಿ ಇರಿಸು.

೬೬. ಮಹಿಷನು ಹೇಳಿದನು–ಆಗ ಆ ದುರ್ವಾಸನು ಪಟ್ಟಣಿಗರ ಮಾತನ್ನು ಕೇಳಿ ಇವನು ಶಿಕ್ಷಾರ್ಹನು. ಎಂದು ಯೋಚಿಸಿ ಸಭೆಯಲ್ಲಿರುವ ನನ್ನ ಬಳಿಗೆ ಬಂದನು.

೬೭. ಅವಧೂತನೂ ದಿಗಂಬರೂ ಆದ ಆತನು ಬರುತ್ತಿರುವುದನ್ನು ನೋಡಿ ಇವನನ್ನು ನೋಡಬಾರದೆಂದು ಆಳುಗಳಿಂದ ತಡೆಸಿದೆನು.

ರೇಣುನಾ ಸರ್ವಲಿಪ್ತಾಂಗೋ ಮಹಿಷಾಕೃತಿರೇವ ವೈ ।
ವಾರ್ಯತಾಮಿತಿ ಪಾರ್ಶ್ವಸ್ಥಾ ಬಹುಶೋಽಹಂ ಸಮಾದಿಶಂ ॥ ೧೮ ॥

ತತಸ್ತೇ ತರಸಾ ಭೃತ್ಯಾಸ್ತಂ ವಾರಯಿತುಮಭ್ಯಗುಃ ।
ಹುಂಕಾರೇಣೈವ ತಾನ್ ಸರ್ವಾನ್ ಸ ಚಕ್ರೇ ಭಸ್ಮಸಾನ್ಮುನಿಃ ॥ ೧೯ ॥

ಯಜ್ಞಾಶ್ವಂ ರಕ್ಷತಸ್ತಸ್ಯ ಪಿತುಸ್ತ್ವಮಿವ ಸಾಗರಾನ್ ।
ಸರ್ವಶಸ್ತಾನಹಂ ಭೃತ್ಯಾನ್ ಭಸ್ಮೀಭೂತಾಂಸ್ತು ತೇಜಸಾ ॥ ೨೦ ॥

ಆಲಕ್ಷ್ಯ ಸಹಸೋತ್ಥಾಯ ಗೃಹಮಾವೇಷ್ಟುಮುದ್ಯತಃ ।
ರೇ ರೇ ಪಾಪೇತಿ ಸಂಬೋಧ್ಯ ತತೋ ಮಾಂ ಮುನಿಸತ್ತಮಃ ॥ ೨೧ ॥

ಶಶಾಪೇತಿ ಮಹಾರಣ್ಯೇ ಮಹಿಷೋ ಭವ ಸಾಂಪ್ರತಂ ।
ತೇನಾಹಮಿತಿ ಶಪ್ತೋ ವೈ ಮುಕ್ತ್ವಾ ರಾಜತನುಂ ತದಾ ॥ ೨೨ ॥

ಮರುದೇಶೇ ಮಹಾರಣ್ಯೇ ಜಾತೋಽಹಂ ಮಹಿಷೋ ಮುನೇ ।
ಚಿರಕಾಲಮಹಂ ತತ್ರ ನ್ಯವಸಂ ಮುನಿಪುಂಗವ ॥ ೨೩ ॥

---

೧೮. ಮೈಕೈಗಳಿಗೆಲ್ಲಾ ಧೂಳು ಬಳಿದುಕೊಂಡು ಕೋಣನಂತಿರುವನು. ಇವನನ್ನು ನನ್ನ ಬಳಿಗೆ ಬಿಡಬೇಡಿ. ಎಂದು ಹತ್ತಿರದಲ್ಲಿದ್ದವರಿಗೆ ಅಪ್ಪಣೆ ಮಾಡಿದೆನು.

೧೯. ಅನಂತರ ನನ್ನ ಅಪ್ಪಣೆಯಂತೆ ಆ ಆಳುಗಳು ತಡೆಯಲು ಹೋದರು. ಆತನು ಹುಂಕಾರದಿಂದಲೇ ಅವರೆಲ್ಲರನ್ನೂ ಬೂದಿಯನ್ನಾಗಿ ಮಾಡಿದನು.

೨೦-೨೩. ಯಜ್ಞದ ಕುದುರೆಯನ್ನು ನೋಡಲು ಹೋಗಿರುವ ಸಗರನ ಮಕ್ಕಳಂತೆ ಭಸ್ಮವಾಗಿ ಹೋದ ಆ ಆಳುಗಳನ್ನು ನೋಡಿ ಆ ಋಷಿಯ ತೇಜಸ್ಸು ಉಗ್ರವಾದುದೆಂದು ತಿಳಿದು ಅವನಿಗೆ ತಿಳಿಯದಂತೆ ಎದ್ದು ಮನೆಯೊಳಕ್ಕೆ ಹೋಗಲು ಪ್ರಯತ್ನಪಟ್ಟೆನು. ಆಗ ಲೊ! ಲೊ! ಪಾಪಿಯೆ! ಎಂದು ನನ್ನನ್ನು ಕರೆಯುತ್ತಾ ಆ ಮುನಿಯು ನೀನು ಮಹಾರಣ್ಯದಲ್ಲಿ ಕೋಣನಾಗೆಂದು ನನಗೆ ಶಾಪವನ್ನು ಕೊಟ್ಟನು. ಅವನು ಹಾಗೆ ಶಪಿಸಿದಕೂಡಲೇ ನಾನು ರಾಜದೇಹವನ್ನು ಬಿಟ್ಟು ಒಂದು ದೊಡ್ಡ ಅರಣ್ಯದ ಮರುಪ್ರದೇಶದಲ್ಲಿ ಕೋಣನಾಗಿ ಹುಟ್ಟಿದೆನು. ಬಹುಕಾಲದವರೆಗೂ ಅಲ್ಲಿದ್ದುಕೊಂಡಿದ್ದೆನು.

ಅತ್ರಾಗತಃ ಕೃತೇನಾಹಂ ಪುಣ್ಯೇನ ತದಪಿ ಶೃಣು ।
ವಾಪೀಕೂಪಸರಸ್ಯಸ್ತು ಬಹವಃ ಕಾರಿತಾ ಮಯಾ ॥ ೭೪ ॥

ಸಹಕಾರಾದಿವೃಕ್ಷಾಣಾಮಾರೋಪೋ ವಿಹಿತಃ ಪಥಿ ।
ಪುಣ್ಯೇನಾನೇನ ಮೇ ದೇವ ಪಾತೋ ನ ನರಕೇಭವತ್ ॥ ೭೫ ॥

ತೀರ್ಥಸ್ಯ ಚ ಮಯಾ ಪ್ರಾಪ್ತೋ ಹ್ಯಮುಷ್ಯ ಜಲಸಗಮಃ ।
ಏತತ್ತೇ ಕಥಿತಂ ಸರ್ವಂ ಪೂರ್ವಜನ್ಮಶುಭಾಶುಭಂ ॥ ೭೬ ॥

ಯೇನ ತೀರ್ಥಂ ಮಯಾ ಪ್ರಾಪ್ತಮೇತದ್ಯೋನಿಶ್ಚ ಮಾಹಿಷೀ ।
ಅಸ್ಯ ತೀರ್ಥವರಸ್ಯಾಂಬುಸ್ಪರ್ಶಾಜ್ಜಾತಿಸ್ಮರೋಭವಂ ।
ಕಥಮಸ್ಯಾ ಅಸದ್ಯೋನೇರ್ಮುಕ್ತಿಃ ಸ್ಯಾತ್ತನ್ಮೇ ವದ । ೭೭ ॥

॥ ಕಪಿಲ ಉವಾಚ ॥

ಏತತ್ತೀರ್ಥಂ ಮಹಾಪುಣ್ಯಂ ಬದರ್ಯಾಖ್ಯಂ ರಮಾಪತೇಃ ।
ಅತ್ರ ಸ್ನಾಹಿ ದ್ರುತ ಕಾಮಂ ಸ್ವಚಿತ್ತಸ್ಯ ಹಿ ಲಪ್ಸ್ಯಸೇ ॥ ೭೮ ॥

---

೭೪-೭೫. ನಾನು ಹಿಂದಿನ ಜನ್ಮದಲ್ಲಿ ಬಾವಿ ಕಟ್ಟಿ ಕೊಳಗಳನ್ನು ಬಹಳವಾಗಿ ಕಟ್ಟಿಸಿದ್ದೆನು. ಮಾವಿನಮರವೇ ಮುಂತಾದ ಅನೇಕ ಮರಗಳನ್ನು ನೆಡಿಸಿದ್ದೆನು. ಈ ರೀತಿಯಾಗಿ ಮಾಡಿದ ಪುಣ್ಯದಿಂದ ನನಗೆ ನರಕವಾಸವು ಬರಲಿಲ್ಲ. ಯಾವುದೋ ಒಂದು ಪುಣ್ಯವಿಶೇಷದಿಂದ ನಾನು ಇಲ್ಲಿಗೆ ಬಂದೆನು.

೭೬. ಆ ಪುಣ್ಯವಿಶೇಷದಿಂದ ಈ ತೀರ್ಥದ ಸಹವಾಸವು ಸಿಕ್ಕಿತು. ಈ ರೀತಿಯಾಗಿ ನನ್ನ ಪೂರ್ವಜನ್ಮದ ಪಾಪಪುಣ್ಯಗಳನ್ನು ನಿನಗೆ ಹೇಳಿದ್ದೇನೆ.

೭೭. ಈ ಬಗೆಯಾಗಿ ಈ ತೀರ್ಥವನ್ನು ಹೊಂದಲು ಕಾರಣವನ್ನೂ ಈ ಕೋಣನ ಜನ್ಮವು ಬರಲು ಕಾರಣವನ್ನೂ ಹೇಳಿದೆನು ಈ ತೀರ್ಥದ ನೀರನ್ನು ಮುಟ್ಟಿದುದರಿಂದ ಪೂರ್ವಜನ್ಮದ ಸ್ಮರಣೆಯು ಬಂದಿತು. ಈ ಕೆಟ್ಟಯೋನಿಯಿಂದ ನಾನು ಪಾರಾಗುವ ಬಗೆ ಹೇಗೆ ? ಎಂಬುದನ್ನು ನನಗೆ ತಿಳಿಸು.

೭೮. ಕಪಿಲನು ಹೇಳಿದನು-ಈ ತೀರ್ಥವು ವಿಷ್ಣುವಿನ ತೀರ್ಥವು. ಇದಕ್ಕೆ ಬದರೀ ತೀರ್ಥವೆಂದು ಹೆಸರು. ಇಲ್ಲಿ ಬೇಗ ಸ್ನಾನಮಾಡು ನಿನ್ನ ಮನಸ್ಸಿನಲ್ಲಿರುವಂತೆ ಎಲ್ಲವನ್ನೂ ಹೊಂದುತ್ತೀಯೆ.

|| ಸಿದ್ಧ ಉವಾಚ ||

ಏತಚ್ಛ್ರುತ್ವಾ ವಚಸ್ತಸ್ಯ ಮಹೇಷಸ್ಯ ಮಹಾಮುನೇ ।
ತತ್ರ ತೀರ್ಥವರೇ ಸ್ನಾತುಂ ಪ್ರಾವಿಶತ್ಸ್ವರ್ಗವಾಂಛಯಾ || ೭೯ ||

ಸ್ನಾತ್ವಾ ಸ್ವರ್ಗೇಚ್ಛಯಾ ತಸ್ಮಿನ್ ಜಲಾತ್ತಟಮುಪಾಗತೇ ।
ತತ್ಕ್ಷಣಂ ಗಜಮಾರುಹ್ಯ ಶಕ್ರಸ್ಸ್ವರ್ಗಾತ್ಸಮಾಯಯೌ || ೮೦ ||

|| ಇಂದ್ರ ಉವಾಚ ||

ಹೇ ಕಲಿಂಗಪತೇ ನೈಜಂ ದೇಹಂ ಜಹಿಹಿ ಮಾಹಿಷಂ ।
ಪ್ರತಿಲಭ್ಯ ವಪುರ್ದಿವ್ಯಂ ಸಮವಾಯಾಹಿ ಮೇ ದಿವಂ ।
ತ್ವಯಾ ಸ್ವರ್ಗೇಚ್ಛಯಾ ಸ್ನಾತಂ ಪ್ರಾಪ್ತಂ ತತ್ತೇ ಸುರಾಸ್ಪದಂ || ೮೧ ||

|| ಸಿದ್ಧ ಉವಾಚ ||

ಇತ್ಯುಕ್ತಸ್ಯ ತದಾ ತೇನ ತ್ಯಕ್ತ್ವಾ ದೇಹಂ ತು ಮಾಹಿಷಂ ।
ದಿವ್ಯಂ ವಪುಸ್ಸಮಾಸಾದ್ಯ ಗಜರಾಜಂ ಸಮಾರುಹತ್ || ೮೨ ||

---

೭೯. ಸಿದ್ಧನು ಹೇಳಿದನು-ಆ ಋಷಿಯ ಮಾತನ್ನು ಕೇಳಿ ಆ ಕೋಣನು ಆ ತೀರ್ಥದಲ್ಲಿ ಸ್ನಾನಮಾಡಿ ಸ್ವರ್ಗವನ್ನು ಹೊಂದುವ ಇಚ್ಛೆಯಿಂದ ಒಳಕ್ಕೆ ಇಳಿಯಿತು.

೮೦. ಸ್ವರ್ಗವು ಸಿಕ್ಕಬೇಕೆಂಬ ಇಚ್ಛೆಯಿಂದ ಅದರಲ್ಲಿ ಸ್ನಾನ ಮಾಡಿ ದಡದ ಮೇಲಕ್ಕೆ ಹತ್ತಲು ಒಡನೆಯೇ ಇಂದ್ರನು ಐರಾವತದ ಮೇಲೆ ಕುಳಿತು ಕೊಂಡು ಸ್ವರ್ಗದಿಂದ ಬಂದನು.

೮೧. ಇಂದ್ರನು ಹೇಳಿದನು-ಎಲೈ ಕಲಿಂಗಪತಿಯೆ! ಈ ಕೋಣನ ಶರೀರವನ್ನು ಬಿಟ್ಟು ಬಿಡು. ಆ ನನ್ನ ಸ್ವರ್ಗದವರಿಗಿರುವ ದೇಹವನ್ನು ಹೊಂದಿ ನನ್ನೊಡನೆ ಸ್ವರ್ಗಕ್ಕೆ ಬಾ. ನೀನು ಈ ತೀರ್ಥದಲ್ಲಿ ಸ್ವರ್ಗವು ಬರಲೆಂಬ ಇಚ್ಛೆಯಿಂದ ಸ್ನಾನಮಾಡಿದೆ. ಅಂತಹ ಸ್ವರ್ಗವು ನಿನಗೆ ಲಭಿಸಿದೆ.

೮೨. ಸಿದ್ಧನು ಹೇಳಿದನು-ಇಂದ್ರನು ಹೀಗೆ ಹೇಳುತ್ತಲೂ ಆ ಕೋಣನ ಶರೀರವನ್ನು ಬಿಟ್ಟು ಆತನು ದೇವಲೋಕದವರ ದೇಹವನ್ನು ಹೊಂದಿ ಆನೆಯ ಮೇಲೆ ಕುಳಿತುಕೊಂಡನು.

ಗಜರಾಜಂ ಸಮಾರುಹ್ಯ ಸ್ಥಿತ್ವಾ ಚ ಗಗನೇ ಕ್ಷಣಂ ।
ಪ್ರಣಮ್ಯ ಶಿರಸಾ ದೇವಂ ತುಷ್ಟಾವ ಕಪಿಲಂ ಮುನಿಂ ॥ ೮೩ ॥

॥ ಕಲಿಂಗಪ ಉವಾಚ ॥

ನಮಸ್ತೇ ಪರಮೇಶಾನ ಕೇವಲಜ್ಞಾನಹೇತವೇ ।
ಸೇತವೇ ವೇದವಿದ್ಯಾನಾಂ ರಿಪವೇ ತದ್ವಿರೋಧಿನಾಂ ॥ ೮೪ ॥

ತ್ವತ್ತಃ ಪ್ರವೃತ್ತಿಃ ಸಾಂಖ್ಯಸ್ಯ ಜಾತಾ ತತ್ವಾವಬೋಧಿನೀ ।
ದೇಹಿನಾಂ ಮಾಯಯಾ ಗ್ರಸ್ತಃ ಚೇತಸಾಮಪಿ ತೇ ವಿಭೋ ॥ ೮೫ ॥

ಯೇ ವೇದವಿಹಿತಂ ತ್ಯಕ್ತ್ವಾ ವರ್ತಂತೇ ಸ್ವೇಚ್ಛಯಾ ಮುನೇ ।
ತಾನ್ ದಂಡಯಸಿ ದಂಡ್ಯಾಂಸ್ತ್ವಂ ಮಜ್ಜಯಸ್ತಿರ್ಯಗಾದಿಷು ॥ ೮೬ ॥

---

೮೩. ಆ ಆನೆಯ ಮೇಲೆ ಹತ್ತಿಕೊಂಡು ಒಂದು ಕ್ಷಣಕಾಲ ಅಂತರಿಕ್ಷದಲ್ಲಿದ್ದುಕೊಂಡು ಆ ಸ್ವಾಮಿಯಾದ ಕಪಿಲ ಋಷಿಗೆ ನಮಸ್ಕರಿಸಿ ಅವನನ್ನು ಸ್ತೋತ್ರ ಮಾಡಿದನು.

೮೪. ಕಲಿಂಗರಾಜನು ಹೇಳಿದನು–ಎಲೈ ಪರಮೇಶ್ವರನೇ ! ನಿನಗೆ ನಮಸ್ಕಾರವು. ಕೇವಲ ಜ್ಞಾನಕ್ಕೆ ಕಾರಣನಾದ ನಿನಗೆ ನಮಸ್ಕಾರವು. ವೇದಗಳಿಗೆ ಸ್ಥಾನವಾದ ನಿನಗೆ ನಮಸ್ಕಾರವು. ವೇದಕ್ಕೆ ವಿರೋಧವಾದಿಗಳಾದ ಪಾಷಂಡಿಗಳಿಗೆ ವಿರೋಧಿಯಾದ ನಿನಗೆ ನಮಸ್ಕಾರವು.

೮೫. ತತ್ವ ಸ್ವರೂಪವನ್ನು ತಿಳಿಸುವ ಸಾಂಖ್ಯವು ನಿನ್ನಿಂದಲೇ ಹೊರಕ್ಕೆ ಬಂದಿತು. ಅದು ಈ ಮಾಯೆಯಿಂದ ತೊಂದರೆ ಪಡುತ್ತಿರುವ ಪ್ರಾಣಿಗಳಿಗೆ ಬಹು ಉಪಕಾರವಾಗಿ ತತ್ವವನ್ನು ತಿಳಿಸುತ್ತದೆ.

೮೬ ಎಲೈ ಮುನಿಯೆ ! ಯಾರು ವೇದ ವಿಹಿತವಾದ ಕರ್ಮವನ್ನು ಮಾಡದೆ ಮನಸ್ಸಿಗೆ ಬಂದಂತಿರುತ್ತಾರೆಯೋ ಅಂತಹ ದುಷ್ಟರನ್ನು ದಂಡಿಸುತ್ತೀಯೆ.

ಇಂದ್ರಾದಯೋ ಲೋಕಪಾಲಾಃ ಸರ್ವೇ ತ್ವದಧಿಕಾರಿಣಃ ।
ತ್ವದಿಚ್ಛಾಮನುವರ್ತಂತೇ ಭೀತಾ ದಂಡಕೃತೋ ಹಿ ತೇ　　　॥ ೮೭ ॥

ತ್ರಯೀಧರ್ಮವಿರೋದ್ಧಾರಃ ಪೂರ್ವದೇವಾ ಯುಗೇ ಯುಗೇ ।
ಅವತೀರ್ಯ ವಿನಾಶಾಯ ಹತಾಃ ಸರ್ವಾತ್ಮನಾ ತ್ವಯಾ　　　॥ ೮೮ ॥

ಯೇ ಯೇ ತ್ವಯಾ ಹತಾ ನಾಥ ಚಕ್ರಿಣಾ ತ್ರಿದಶಾರಯಃ ।
ತೇ ತೇ ತಮೋಮಯೀಂ ಹಿತ್ವಾ ತನುಂ ವೈಕುಂಠಮಾಯಯುಃ ॥ ೮೯ ॥

ಅಜ್ಞಾಪಯ ಜಗನ್ನಾಥ ಗಂತುಂ ಮಾಂ ತ್ರಿದಶಾಲಯಂ ।
ಅನುಗ್ರಹಾಣ ಶಕ್ರಂ ಚ ನಮಂತಂ ವೀಕ್ಷಣಾಮೃತೈಃ　　　॥ ೯೦ ॥

ಪ್ರಸಾದಾತ್ತವ ದೇವೇಶ ಬದರ್ಯಾಖ್ಯಸ್ಯ ಚ ಪ್ರಭೋ ।
ತೀರ್ಥಸ್ಯ ಸ್ವತನುಂ ಹಿತ್ವಾ ತಾಮಸೀಂ ಸಾತ್ವಿಕೀಂ ಗತಃ　　　॥ ೯೧ ॥

---

೮೭. ಇಂದ್ರನೇ ಮುಂತಾದ ಲೋಕ ಪಾಲಕರುಗಳೆಲ್ಲರೂ ನಿನ್ನಿಂದ ನಿಯಮಿತರಾದ ಅಧಿಕಾರಿಗಳು. ಅವರು ನಿನ್ನ ಇಚ್ಛೆಯಂತೆಯೇ ನಡೆಯುತ್ತಾರೆ. ಅವರು ನಿನಗೆ ಹೆದರಿಕೊಂಡು ಇತರರನ್ನು ಶಿಕ್ಷಿಸುತ್ತಾರೆ.

೮೮. ವೇದೋಕ್ತವಾದ ಧರ್ಮಗಳಿಗೆ ವಿರೋಧಿಗಳಾದ ದಾನವರು ಪ್ರತಿಯುಗದಲ್ಲಿಯೂ ಹುಟ್ಟುತ್ತಾರೆ. ಅಂತಹವರನ್ನು ಸರ್ವಾತ್ಮನಾದ ನೀನು ಒಂದೊಂದು ಯುಗದಲ್ಲಿಯೂ ಕೊಂದುಹಾಕುತ್ತೀಯೆ.

೮೯. ಎಲೈ ನಾಥನೆ! ದೇವತೆಗಳಿಗೆ ಶತ್ರುವಾದ ದಾನವರನ್ನು ನೀನು ಯಾರು ಯಾರನ್ನು ಕೊಂದಿರುವೆಯೋ ಅವರೆಲ್ಲರೂ ತಮೋರೂಪವಾದ ಆ ಶರೀರವನ್ನು ಬಿಟ್ಟು ವೈಕುಂಠವನ್ನು ಹೊಂದಿರುವರು.

೯೦. ಎಲೈ ಜಗನ್ನಾಥನೆ! ನಾನು ಸ್ವರ್ಗಲೋಕಕ್ಕೆ ಹೋಗುತ್ತೇನೆ. ಅನುಮತಿಯನ್ನು ಕೊಡು. ನಿನ್ನನ್ನು ನಮಸ್ಕರಿಸುತ್ತಿರುವ ಈ ಇಂದ್ರನನ್ನು ಕಡೆಗಣ್ಣಿನ ನೋಟದಿಂದ ನೋಡಿ ಅನುಗ್ರಹಿಸು.

೯೧. ಎಲೈ ಸ್ವಾಮಿಯೇ! ನಿನ್ನ ಮತ್ತು ಈ ಬದರಿಯ ತೀರ್ಥದ ಅನುಗ್ರಹದಿಂದ ತಮೋಗುಣದಿಂದ ಕೂಡಿದ ನಿಂದ್ಯವಾದ ಈ ದೇಹವನ್ನು ಬಿಟ್ಟು ಸಾತ್ವಿಕ ಗುಣದಿಂದ ಕೂಡಿದ ಉತ್ತಮ ದೇಹವನ್ನು ಹೊಂದಿದೆನು.

ಇಂದ್ರೇಣ ಸಹ ನಾಗೇಂದ್ರಮಾರುಹ್ಯ ತ್ರಿದಶಾಲಯಂ ।
ಗಚ್ಛಾಮಿ ಸ್ವೇಚ್ಛಯಾ ನಾಥ ಕೃಪಾತಸ್ತೇ ಕೃಪಾನಿಧೇ ॥ ೯೨ ॥

॥ ಸಿದ್ಧ ಉವಾಚ ॥

ಇತ್ಯಭಿಷ್ಟೂಯ ದೇವೇಶಂ ಕಪಿಲಂ ಸ ಕಲಿಂಗಪಃ ।
ನಮಸ್ಕೃತ್ಯ ಚ ತತ್ಪಾದೌ ಜಗಾಮ ತ್ರಿದಶಾಲಯಂ ॥ ೯೩ ॥

ಏತನ್ಮಯಾದ್ಭುತಂ ವಿಪ್ರ ದೃಷ್ಟಂ ಬದರಿಕಾಶ್ರಮೇ ।
ಗುರುಂ ಶುಶ್ರೂಷಮಾಣೇನ ಪಾಪಸ್ಯಾಪಿ ವಿಮೋಕ್ಷಣಂ ॥ ೯೪ ॥

ನಾತಃ ಪರಂ ತ್ರಿಲೋಕ್ಯಾಂ ತು ತೀರ್ಥಂ ಸರ್ವಾರ್ಥದಾಯಕಂ ।
ಯಾಹಿ ತತ್ರೈವ ಸಸ್ತ್ರೀಕಃ ಪರಂ ಶ್ರೇಯೋ ಯದೀಚ್ಛಸಿ ॥ ೯೫ ॥

ಅಹಂ ಯಾಮಿ ಸಮಾನೇತುಂ ಬದರ್ಯಾಖ್ಯಂ ಗೃಹಾತ್ ದ್ವಿಜ ।
ವೃದ್ಧಂ ಸ್ವಕೀಯಂ ಪಿತರಂ ನಿಸ್ಸ್ಪೃಹಂ ಮೋಕ್ಷಕಾಮುಕಂ ॥ ೯೬ ॥

---

೯೨. ಎಲೈ ಕೃಪಾನಿಧಿಯೇ! ಇಂದ್ರನೊಡನೆ ಈ ಐರಾವತವನ್ನು ಹತ್ತಿಕೊಂಡು ನಿನ್ನ ಕೃಪೆಯಿಂದ ದೊರಕಿದ ಸ್ವರ್ಗಕ್ಕೆ ಸುಖವಾಗಿ ಹೋಗುತ್ತೇನೆ.

೯೩. ಸಿದ್ಧನು ಹೇಳಿದನು—ಆ ಕಳಿಂಗದ ದೊರೆಯು ಈ ರೀತಿಯಾಗಿ ಸ್ವಾಮಿಯಾದ ಆ ಕಪಿಲನನ್ನು ಹೊಗಳಿ ಆತನ ಪಾದಗಳಿಗೆ ನಮಸ್ಕರಿಸಿ ಸ್ವರ್ಗಕ್ಕೆ ಹೋದನು.

೯೪. ಎಲೈ ಬ್ರಾಹ್ಮಣನೆ! ನಾನು ಗುರುವನ್ನು ಶುಶ್ರೂಷೆ ಮಾಡುತ್ತ ಇದ್ದಾಗ ಪಾಪನಾಶಕವಾದ ಈ ಅದ್ಭುತವಾದ ಕಾರ್ಯವನ್ನು ಆ ಬದರಿಕಾಶ್ರಮದಲ್ಲಿ ನೋಡಿದೆನು.

೯೫. ಈ ತೀರ್ಥಕ್ಕಿಂತಲೂ ಕೇಳಿದುದನ್ನು ಕೊಡುವ ತೀರ್ಥವು ಮೂರು ಲೋಕದಲ್ಲಿ ಒಂದೂ ಇಲ್ಲ. 'ನಿನಗೆ ಒಳ್ಳೆಯದಾಗಬೇಕೆಂಬ ಮನಸ್ಸಿದ್ದರೆ ನಿನ್ನ ಹೆಂಡತಿಯೊಡನೆ ನೀನೂ ಅಲ್ಲಿಗೆ ಹೋಗು.

೯೬. ನಾನೂ ಕೂಡ ಮನೆಗೆ ಹೋಗುತ್ತಿದ್ದೇನೆ. ಅಲ್ಲಿ ಮುದುಕನಾದ ನನ್ನ ತಂದೆಯಿರುವನು. ಅವನು ಆಸೆಯೆಲ್ಲವನ್ನೂ ತೊರೆದು ಮೋಕ್ಷವನ್ನು ಅಪೇಕ್ಷಿಸುತ್ತಿರುವನು. ಅವನನ್ನು ಈ ಬದರೀ ತೀರ್ಥಕ್ಕೆ ಕರೆದುಕೊಂಡು ಬರುತ್ತೇನೆ.

|| ನಾರದ ಉವಾಚ ||

ಇತಿ ತೀರ್ಥವರಸ್ಯಾಸ್ಯ ಬದರ್ಯಾಖ್ಯಸ್ಯ ಭೂಪತೇ |
ಮಹಿಮಾನಂ ಸಮುತ್ಕೀರ್ಯ ಸ ಸಿದ್ಧಃ ಸ್ವಗೃಹಂ ಯಯೌ || ೯೭ ||

ಅಥ ಕಾಲೇನ ಕಿಯತಾ ಸ ಸಿದ್ಧಸ್ಸಹ ಭಾರ್ಯಯಾ |
ತೀರ್ಥಾನಿ ಪರ್ಯಟ್ಯ ಧೀರ ಇಂದ್ರಪ್ರಸ್ಥೇಭ್ಯಗಾದಿಹ || ೯೮ ||

ತೇನೈವ ವಪುಷಾ ರಾಜ ನೀತವಾಂಸ್ತೌ ನಿಜಾಲಯಂ |
ಸ ಸಿದ್ಧೋಽಪಿ ಸ್ವಪಿತರಂ ಗೃಹಾದಾನೀಯ ಸತ್ವರಂ || ೯೯ ||

ತತ್ರೈವ ಸ್ನಾಪಯಾಮಾಸ ತತ್ತೀರ್ಥೇ ಮೋಕ್ಷಕಾಮುಕಂ |
ಸೋಽಪಿ ಶ್ರೀವಾಸುದೇವೇನ ವೃದ್ಧಸ್ಸಿದ್ಧಪಿತಾ ತದಾ |
ತತೋ ನೀತೋ ನಿಜಗೃಹಂ ವೃಂದಾರಕವಿವಂದಿತಃ || ೧೦೦ ||

---

೯೭. ನಾರದನು ಹೇಳಿದನು-ಈ ರೀತಿಯಾಗಿ ಆ ಸಿದ್ಧನು ಬದರೀ ತೀರ್ಥದ ಮಹಿಮೆಯನ್ನು ಹೇಳಿ ತನ್ನ ಮನೆಗೆ ಹೊರಟು ಹೋದನು.

೯೮. ಅನಂತರ ಆ ಸಿದ್ಧನು ಹೆಂಡತಿಯೊಡನೆ ಬಹು ಕಾಲದವರೆಗೆ ಅನೇಕ ತೀರ್ಥಗಳಲ್ಲಿ ಸಂಚರಿಸುತ್ತಾ ಕೊನೆಗೆ ಇಂದ್ರಪ್ರಸ್ಥಕ್ಕೆ ಬಂದನು.

೯೯. ದೇವದಾಸನಾದ ಆ ಸಿದ್ಧನು ಹೆಂಡತಿಯೊಡನೆ ಆ ಇಂದ್ರ ಪ್ರಸ್ಥದಲ್ಲಿ ಅದೇ ಶರೀರದಿಂದ ವಿಷ್ಣುವಿನ ಸ್ಥಾನವಾದ ವೈಕುಂಠಕ್ಕೆ ಹೋದನು. ಇತ್ತ ಈ ಸೇವಕನಾದ ಸಿದ್ಧನು ತನ್ನ ಮುದುಕನಾದ ತಂದೆಯನ್ನು ಕರೆದುಕೊಂಡು ಮೋಕ್ಷವನ್ನು ಅಪೇಕ್ಷಿಸುವ ಆತನನ್ನು ಆ ತೀರ್ಥದಲ್ಲಿಯೇ ಸ್ನಾನಮಾಡಿಸಿದನು.

೧೦೦. ಆ ಸಿದ್ಧನ ತಂದೆಯಾದ ಆ ಮುದುಕನನ್ನು ವಾಸುದೇವನು ದೇವತೆಗಳು ತನ್ನನ್ನು ಹೊಗಳುತ್ತಿರಲು ತನ್ನ ಮನೆಗೆ ಕರೆದುಕೊಂಡು ಹೋದನು.

ಇಂದ್ರಪ್ರಸ್ಥಾನ್ತರಗತಮಿದಂ ಸದ್ಬದರ್ಯಾಖ್ಯಮೀಶಃ ।
ಸ್ನಾನಾದ್ದದ್ಯಾದಖಿಲಜನತಾಮಾನಸೇಷ್ಟಂ ಪದಾರ್ಥಂ ॥
ಮಾಹಾತ್ಮ್ಯಂ ತೇ ನಯನತಿಮತೇ ವರ್ಣಿತಂ ತಸ್ಯ ಪೂತಂ ।
ಯಚ್ಛ್ರುತ್ವಾ ವೈ ಪತತಿ ನ ಜನೋ ಮಾತೃಗರ್ಭೇ ಕದಾಚಿತ್ ॥ ೧೦೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಬದರಿಕಾಶ್ರಮ ಮಾಹಾತ್ಮ್ಯಂ ನಾಮ ದ್ವಾದಶಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೧೦೧. ಇಂದ್ರ ಪ್ರಸ್ಥಕ್ಕೆ ಸೇರಿರುವ ಈ ಬದರೀ ತೀರ್ಥವು ತನ್ನಲ್ಲಿ ಸ್ನಾನ ಮಾಡಿದ ಮಾತ್ರದಿಂದಲೇ ಎಲ್ಲಾ ಪ್ರಾಣಿಗಳಿಗೂ ಇಷ್ಟವಾದುದನ್ನು ಕೊಡುತ್ತದೆ. ಅಂತಹ ಕ್ಷೇತ್ರದ ಮಹಿಮೆಯನ್ನು ನಿನಗೆ ವಿವರಿಸಿದ್ದೇನೆ. ಅದು ಪವಿತ್ರವಾದುದು. ಇದನ್ನು ಕೇಳಿದರೇನೇ ಜನರು ಮತ್ತೆ ಗರ್ಭವಾಸವನ್ನು ಹೊಂದುವುದಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಬದರಿಕಾಶ್ರಮದ ಮಹಿಮೆ ಎಂಬ ಇನ್ನೂರ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

॥ ತ್ರಯೋದಶಾಧಿಕದ್ವಿಶತತಮೋಽಧ್ಯಾಯಃ ॥



॥ ಶಿಬಿರುವಾಚ ॥

ವರ್ಣಿತಂ ಮೇ ತ್ವಯಾ ಸಾಧೋ ಮಾಹಾತ್ಮ್ಯಂ ಬದರೀಭವಂ ।
ಯನ್ನಿಶಮ್ಯ ಮನೋ ಯಾತಿ ಮಮ ನಿರ್ಮಲತಾಂ ಮುನೇ ॥ ೧ ॥

ಏತದದ್ಭುತಮಾಹಾತ್ಮ್ಯಂ ಶಕ್ರಪ್ರಸ್ಥಾಖ್ಯಮುತ್ತಮಂ ।
ಸಕಲಂ ಮುನಿಶಾರ್ದೂಲ ಚತುರ್ವರ್ಗಪ್ರದಾಯಕಂ ॥ ೨ ॥

ಭುವಿ ನಾತಃ ಪರಂ ತೀರ್ಥಂ ತಿರಶ್ಚಾಮಪಿ ಮುಕ್ತಿದಂ ।
ಶ್ರೇಷ್ಠಂ ಸಕಲಪಾಪಘ್ನಂ ದರ್ಶನಾದೇವ ನಾರದ ॥ ೩ ॥

---

ಇನ್ನೂರ ಹದಿಮೂರನೆಯ ಅಧ್ಯಾಯವು.



೧. ಶಿಬಿಯು ಹೇಳಿದನು-ಎಲೈ ನಾರದನೇ ! ಬದರೀ ತೀರ್ಥದ ಮಹಿಮೆಯನ್ನು ನೀನು ವರ್ಣಿಸಿದೆ. ಅದನ್ನು ಕೇಳುವುದರಿಂದ ನನ್ನ ಮನಸ್ಸು ಬಹುವಾಗಿ ಶಾಂತವಾಗಿದೆ.

೨. ಎಲೈ ಋಷಿಶ್ರೇಷ್ಠನೇ! ಈ ಇಂದ್ರಪ್ರಸ್ಥದ ಮಹಿಮೆಯು ಅದ್ಭುತವಾಗಿರುವುದು. ಮತ್ತು ಉತ್ತಮವಾಗಿಯೂ ಇರುವುದು ಧರ್ಮ ಅರ್ಥ ಕಾಮ ಮೋಕ್ಷಗಳೆಲ್ಲವನ್ನೂ ಕೊಡುತ್ತದೆ.

೩. ಕೀಳು ಜಾತಿಯ ಪ್ರಾಣಿಗಳಿಗೂ ಕೂಡ ಮುಕ್ತಿಯನ್ನು ಕೊಡುವ ತೀರ್ಥವು ಭೂಮಿಯಲ್ಲಿ ಇದಕ್ಕಿಂತ ಮತ್ತೊಂದಿಲ್ಲ ಶ್ರೇಷ್ಠವಾದುದು. ನೋಡಿದ ಮಾತ್ರದಿಂದಲೇ ಎಲ್ಲ ಪಾಪಗಳನ್ನೂ ನಾಶಮಾಡುತ್ತದೆ.

ಏತದಂತರ್ಗತಸ್ಯಾಸ್ಯ ಹರಿದ್ವಾರಸ್ಯ ನಾರದ ।
ಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ತ್ವತ್ತಸ್ಸಂತೋಷಕಾರಕಾತ್ ॥ ೪ ॥

ಮಾಮುದ್ಧರ ಮುನೇ ದೀನಮವಿದ್ಯಾಕಾಮುಕರ್ಮಭಿಃ ।
ವರ್ಣನೇನಾಸ್ಯ ತೀರ್ಥಸ್ಯ ಶಕ್ರಪ್ರಸ್ಥಗತಸ್ಯ ವೈ ॥ ೫ ॥

॥ ಶ್ರೀ ನಾರದ ಉವಾಚ ॥

ಆಕರ್ಣಯ ಮಹಾಭಾಗ ವರ್ಣಯಾಮಿ ತವಾಗ್ರತಃ ।
ಹರಿದ್ವಾರಸ್ಯ ಮಹಾತ್ಮ್ಯಮಶ್ವಮೇಧಫಲಪ್ರದಂ ॥ ೬ ॥

ಅತ್ರೈಕಃ ಶ್ವಪಚಃ ಪಾಪೋ ಯಥಾ ಸ್ವರ್ಗತಿಮಾಪ್ತವಾನ್ ।
ತತ್ತೇಹಂ ಕಥಯಾಮ್ಯದ್ಯ ಶೃಣುಷ್ವೈಕಮನಾಃ ಪ್ರಭೋ ॥ ೭ ॥

ಧರ್ಮಕ್ಷೇತ್ರೇ ಕುರುಕ್ಷೇತ್ರೇ ಕಾಲಿಂಗ ಇತಿ ವಿಶ್ರುತಃ ।
ಶ್ವಪಚಃ ಪಾಪಕರ್ಮಾ ವೈ ವಸತಿ ಸ್ಮ ಪುರಾದ್ಬಹಿಃ ॥ ೮ ॥

---

೪. ಈ ಶಕ್ರಪ್ರಸ್ಥದ ಎಲ್ಲೆಗೆ ಸೇರಿದ ಹರಿದ್ವಾರದ ಮಹಿಮೆಯನ್ನು ವರ್ಣಿಸು. ಸಂತೋಷವಾಗಿ ಹೇಳುವ ನಿನ್ನಿಂದ ಕೇಳಬೇಕೆನ್ನಿಸುತ್ತದೆ.

೫. ಈ ಇಂದ್ರಪ್ರಸ್ಥದಲ್ಲಿರುವ ಹರಿದ್ವಾರ ಮುಂತಾದುವುಗಳ ಮಹಿಮೆಯನ್ನು ಹೇಳಿ ನನ್ನನ್ನು ಉದ್ಧರಿಸು. ನಾನು ಅಜ್ಞಾನಕ್ಕೆ ಒಳಗಾಗಿ ಕಾಮ್ಯಕರ್ಮಗಳನ್ನು ಮಾಡುತ್ತಿದ್ದೇನೆ.

೬. ಶ್ರೀ ನಾರದನು ಹೇಳಿದನು–ಕೇಳುವುದರಿಂದಲೇ ಅಶ್ವಮೇಧಯಾಗದ ಫಲವನ್ನು ಕೊಡುವ ಹರಿದ್ವಾರದ ಮಹಿಮೆಯನ್ನು ಹೇಳುತ್ತೇನೆ. ಅದನ್ನು ಕೇಳಿ ಕೃತಾರ್ಥನಾಗು.

೭. ಈ ತೀರ್ಥದಲ್ಲಿ ಪಾಪಿಯಾದ ಒಬ್ಬ ಚಂಡಾಲನು ಮೋಕ್ಷವನ್ನು ಹೊಂದಿದನು. ಅದನ್ನು ನಿನಗೆ ಹೇಳುತ್ತೇನೆ ಒಂದೇ ಮನಸ್ಸಿನಿಂದ ಕೇಳು.

೮. ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಕಾಲಿಂಗನೆಂದು ಒಬ್ಬ ಪ್ರಸಿದ್ಧನಾದ ಚಂಡಾಲನು ಊರಿನಿಂದ ಹೊರಗೆ ವಾಸಮಾಡುತ್ತಿದ್ದನು.

ಪಂಚಷಡ್ವರ್ಷದೇಶೀಯಾನ್ ಬಾಲಾನ್ನಗರವಾಸಿನಾಂ ।
ಪ್ರಸಹ್ಯ ವಂಚಯಿತ್ವಾ ಚ ವನೇ ನೀತ್ವಾ ಜಘಾನ ಸಃ ॥ ೯ ॥

ತೇಷಾಮಲಂಕಾರಮಯಂ ರಜತಂ ಹೇಮವನ್ನೃಪ ।
ರತ್ನಾದಿಕಂ ಚ ಕಾಯಸ್ಥಂ ಹತ್ವಾ ತಾನ್ ಜಗೃಹೇ ತತಃ ॥ ೧೦ ॥

ಪಿವೇಶ ಸಾಧುನಿಲಯೇ ರಾತ್ರೌ ಧನಜಿಹೀರ್ಷಯಾ ।
ಪಥಿಕಾನ್ ಧನಮಾಲಕ್ಷ್ಯ ಸಂಜಘ್ನೇ ನಿರ್ಜನೇ ವನೇ ॥ ೧೧ ॥

ಕುರುಕ್ಷೇತ್ರೇ ಸಮಾಯಾತಾ ಏಕದಾ ರವಿಪರ್ವಣಿ ।
ನಾನಾದಿಗ್ಭ್ಯೋ ಜನಾ ರಾಜನ್ ನಾನಾದಾನಜಿಹೀರ್ಷಯಾ ॥ ೧೨ ॥

ತಸ್ಮಿನ್ ಯಥಾವಿಧಿ ಸ್ನಾತ್ವಾ ರವಿಪರ್ವಣಿ ಭೂಪತೇ ।
ದಾನಂ ದತ್ವಾ ಯಥಾವಚ್ಚ ಲೋಕಾಃ ಸ್ವಾನ್ ಸ್ವಾನ್
ಗೃಹಾನ್ ಯಯುಃ ॥ ೧೩ ॥

---

೯. ಅವನು ಆ ಪಟ್ಟಣಿಗರ ಐದು ಆರು ವರ್ಷದ ಮಕ್ಕಳನ್ನು ಮೋಸ ಪಡಿಸಿ ಕಾಡಿಗೆ ಕರೆದುಕೊಂಡು ಹೋಗಿ ಅಲ್ಲಿ ಅವನ್ನು ಕೊಲ್ಲುತ್ತಿದ್ದನು.

೧೦. ಆ ಹುಡುಗರನ್ನು ಕೊಂದು ಅವುಗಳ ಮೈಮೇಲಿರುವ ಚಿನ್ನ ಬೆಳ್ಳಿ ರತ್ನಗಳ ಒಡವೆಯನ್ನು ತೆಗೆದುಕೊಳ್ಳುತ್ತಿದ್ದನು.

೧೧. ಹಣವನ್ನು ಕದಿಯುವ ಆಸೆಯಿಂದ ರಾತ್ರಿವೇಳೆಗಳಲ್ಲಿ ಗೃಹಸ್ಥರ ಮನೆಗಳಿಗೆ ನುಗ್ಗುತ್ತಿದ್ದನು ಪ್ರಯಾಣಿಕರಲ್ಲಿ ಹಣವಿರುವುದನ್ನು ನೋಡಿದರೆ ಅವರನ್ನು ಆ ನಿರ್ಜನವಾದ ಕಾಡಿನಲ್ಲಿ ಕೊಲ್ಲುತ್ತಿದ್ದನು.

೧೨. ಒಂದು ಸಾರಿ ಸೂರ್ಯಗ್ರಹಣವು ಬರಲು ಕುರುಕ್ಷೇತ್ರಕ್ಕೆ ಎಲ್ಲಾ ಕಡೆಯಿಂದಲೂ ಸ್ನಾನ ಮಾಡುವುದಕ್ಕೂ ದಾನ ತೆಗೆದುಕೊಳ್ಳುವುದಕ್ಕೂ ಜನಗಳು ಬಂದರು.

೧೩. ಆಗ ಆ ಕುರುಕ್ಷೇತ್ರದಲ್ಲಿ ಜನರು ಶಾಸ್ತ್ರದ ವಿಧಿಯಂತೆ ಸ್ನಾನಮಾಡಿ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು.

ಏಕಃ ಕಶ್ಚಿದ್ವಿಶಾಂ ಶ್ರೇಷ್ಠೋ ಧನೇನ ಮಹತಾ ಯುತಃ |
ಪಶ್ಚಾತ್ಸರ್ವಜನೇಭ್ಯಸ್ತು ಜಚಾಲ ಸ್ವಗೃಹಂ ಪ್ರತಿ ॥ ೧೪ ॥

ಅಶ್ವವಾರಃ ಪದಾತೀನಾಂ ವಿಂಶತಿಂ ಪುರತೋ ದಧತ್ |
ಕಾಳಿಂಗಃ ಸ ಮಹಾಪಾಪಸ್ತಮನುಪ್ರಸ್ಥಿತಸ್ತದಾ ॥ ೧೫ ॥

ಕತಿಚಿದ್ವಸತೀರ್ಗತ್ವಾ ಸಹ ತೇನ ವಿಶಾಽಧಮಃ ।
ಸೋಽಂತ್ಯಜಸ್ತದ್ಧನಂ ಹರ್ತುಂ ನ ಲೇಭೇ ಸಮಯಂ ನೃಪ ॥ ೧೬ ॥

ಬಲೇನಾಪಿ ಗೃಹೀತುಂ ನ ಕ್ಷಮೋಽಭೂತ್ತಸ್ಯ ಸ ಶ್ರಿಯಂ ।
ವೈಶ್ಯಸ್ತು ಜನವಿಂಶತ್ಯಾ ಸಂಯುಕ್ತಸ್ತು ಸ ಏಕಲಃ ॥ ೧೭ ॥

ಅತ್ರಾಗತಸ್ಸ ಪಾಪಾತ್ಮಾ ವೈಶ್ಯಸ್ಯಾರ್ಥೇನ ಪಾರ್ಥಿವ |
ನಿಶೀಥೇ ಶಿಬಿರಂ ತಸ್ಯ ಧನಂ ಹರ್ತುಂ ಸಮಾವಿಶತ್ ॥ ೧೮ ॥

---

೧೪. ಆಗ ಒಬ್ಬ ಸೆಟ್ಟಿಯು ಬಹು ಧನವನ್ನು ತೆಗೆದುಕೊಂಡು ಹರಿದ್ವಾರಕ್ಕೆ ಬಂದನು. ಅವನು ಎಲ್ಲರೂ ಹೊರಟುಹೋದಮೇಲೆ ತಾನು ಬಂದನು.

೧೫. ಆ ಸೆಟ್ಟಿಯು ತನ್ನ ಜೊತೆಯಲ್ಲಿ ಇಪ್ಪತ್ತು ಜನ ಕುದುರೆಯವರನ್ನು ಕರೆದುಕೊಂಡು ಬಂದಿದ್ದನು. ಆ ಮಹಾ ಪಾಪಿಯಾದ ಕಳಿಂಗನು ಆ ವೈಶ್ಯನನ್ನು ಹಿಂಬಾಲಿಸುತ್ತಾ ಹೊರಟನು.

೧೬. ಆ ಪಾಪಿಯಾದ ಕಾಳಿಂಗನು ಕೆಲವು ಮಜಲುಗಳವರೆಗೂ ಹಿಂದೆಯೇ ಹೋದನು. ಆದರೂ ಅವನನ್ನು ಕೊಳ್ಳೆ ಹೊಡೆದು ಹಣವನ್ನು ದೋಚಿಕೊಳ್ಳಲು ಸಮಯವೇ ಸಿಕ್ಕಲಿಲ್ಲ.

೧೭. ಬಹುವಾಗಿ ತನ್ನ ಯುಕ್ತಿಯನ್ನೂ ಬಲವನ್ನೂ ಉಪಯೋಗಿಸಿದರೂ ತಾನೊಬ್ಬನಾಗಿ ವೈಶ್ಯನು ಪರಿವಾರದಿಂದ ಕೂಡಿಕೊಂಡಿದ್ದರಿಂದ ಸುಲಿಗೆ ಮಾಡಲು ಸಾಧ್ಯವಾಗಲಿಲ್ಲ.

೧೮. ಆ ವೈಶ್ಯನ ಹಣವನ್ನು ಕದಿಯಬೇಕೆಂಬ ಆಸೆಯಿಂದ ಆ ಪಾಪಿಯಾದ ಕಳಿಂಗನು ಈ ಹರಿದ್ವಾರಕ್ಕೂ ಬಂದನು. ಒಂದು ದಿನ ರಾತ್ರಿಯಲ್ಲಿ ಆ ಹಣವನ್ನು ಕದಿಯಲು ಆ ಸೆಟ್ಟಿಯ ಬೀಡಾರಕ್ಕೆ ನುಗ್ಗಿದನು.

ಏಕೇನ ತಸ್ಯ ವೈಶ್ಯಸ್ಯ ಜನೇನ ಸ ತು ಲಕ್ಷಿತಃ ।
ಪ್ರವಿಶನ್ನೇವ ಪಾಪಾತ್ಮಾ ದದತಾ ಪ್ರಹರಂ ಸ್ವಕಂ ॥ ೧೯ ॥

ತಮಾಲಕ್ಷ್ಯ ಸಮಿಪಸ್ಥಂ ಸ ಜನಃ ಪ್ರಹರಪ್ರದಃ ।
ಉಭಯೋಃ ಪಾದಯೋ ರಾರ್ಜ ಸ್ವಯಮೇವ ಗೃಹೀತವಾರ್ನ ॥ ೨೦ ॥

ತೌ ಗೃಹೀತ್ವಾ ಜನಾನನ್ಯಾನ್ ಬೋಧಯರ್ನ್ ಪ್ರಹರಪ್ರದಃ ।
ಹಸ್ತೇನೈವ ತು ಪಾಪೇನ ಚೌರೇಣಾಘಾತಿತೋ ಹಿ ಸಃ ॥ ೨೧ ॥

ಹತ್ವಾ ಪಲಾಯಮಾನಸ್ತು ಗೃಹೀತೋನ್ಯೈರ್ಜನೈಸ್ತದಾ ।
ಗೃಹೀತಾರಂ ಪುನರ್ಹತ್ವಾ ಸಹಸಾ ಸ ಪಲಾಯಿತಃ ॥ ೨೨ ॥

ಏಕೇನ ಕೇನ ಚಿದ್ರಾರ್ಜ ಸೇವಕೇನ ಧನುರ್ಭೃತಾ ।
ದೂರಾದೇವ ಶರೇಣಾಶು ಧಾರ್ವ ಸನ್ನಿಹತೋಧಮಃ ॥ ೨೩ ॥

---

೧೯. ಆ ಕೂಡಲೇ ಆ ವೈಶ್ಯನ ಒಬ್ಬ ಆಳು ಅವನನ್ನು ನೋಡಿದನು. ಒಡನೆಯೇ ಆ ಸೇವಕನು ಈ ಕಳಿಂಗನಿಗೆ ಏಟುಗಳನ್ನು ಕೊಟ್ಟನು.

೨೦. ಆ ಏಟು ಕೊಟ್ಟ ಆಳು ಇವನನ್ನು ನೋಡಿದ ಒಡನೆಯೇ ಎರಡು ಕಾಲುಗಳನ್ನು ಹಿಡಿದುಕೊಂಡು ಓಡದಂತೆ ಮಾಡಿದನು.

೨೧. ಆತನು ಓಡದಂತೆ ಕಾಲುಗಳನ್ನು ಬಲವಾಗಿ ಹಿಡಿದುಕೊಂಡು ಎಲ್ಲರನ್ನೂ ಎಚ್ಚರಗೊಳಿಸಿ ಎಬ್ಬಿಸಿದನು. ಆಗ ಆ ಕಳ್ಳನು ಈತನ ಹಿಡಿತವನ್ನು ಬಿಡಿಸಿಕೊಳ್ಳಲು ಕೈಗಳಿಂದ ಆ ಆಳನ್ನು ಹೊಡೆದನು.

೨೨. ಹೀಗೆ ಆ ಆಳಿಗೆ ಏಟುಗಳನ್ನು ಕೊಟ್ಟು ಅವನಿಂದ ಬಿಡಿಸಿಕೊಂಡು ಓಡುತ್ತಿರಲು ಅಲ್ಲಿದ್ದ ಜನರಲ್ಲಿ ಮತ್ತೊಬ್ಬನು ಹಿಡಿದುಕೊಂಡನು. ಅಲ್ಲಿ ಹಿಡಿದು ಕೊಂಡವನನ್ನು ಮತ್ತೆ ಹೊಡೆದು ವೇಗವಾಗಿ ಓಡಿಹೋದನು.

೨೩. ಆಗ ಆ ಸೇವಕರಲ್ಲಿ ಒಬ್ಬನು ಧನುಸ್ಸನ್ನು ಧರಿಸಿಕೊಂಡಿದ್ದನು. ಅವನು ಈ ಕಳ್ಳನು ಓಡಿಹೋಗುತ್ತಿದ್ದರೂ ದೂರದಿಂದಲೇ ಹೊಡೆದನು.

ಹತಮಾತ್ರಃ ಶರೇಣಾಶು ತತ್ಯಾಜ ಸ ಚ ಜೀವಿತಂ ।
ತೌ ಚ ದೃಷ್ಟ್ವಾ ನಿಹತೌ ರಾಜನ್ ವೈಶ್ಯಸ್ಯಾನುಚರಾವುಭೌ ॥ ೨೪ ॥

ತೇ ತ್ರಯೋ ವರಯಾನಾನಿ ಗಣಾನೀತಾನಿ ಭೂಪತೇ ।
ಸಮಾರುಹ್ಯ ದಿವಿ ಸ್ಥಿತ್ವಾ ವೈಶ್ಯಮೇತದ್ಬಭಾಷಿರೇ ॥ ೨೫ ॥

॥ ಕಾಲಿಂಗವೈಶ್ಯಾನುಚರಾ ಊಚುಃ ॥

ಭೋ ಭೋ ವೈಶ್ಯಪತೇ ಸಾಧೋ ತೀರ್ಥಮೇತದನುತ್ತಮಂ ।
ಇಂದ್ರಪ್ರಸ್ಥೇ ಹರಿದ್ವಾರಂ ಶಿವಕೃತ್ಪಾಪಿನಾಮಪಿ ॥ ೨೬ ॥

ವಯಂ ತ್ರಯಃ ಸುತೀರ್ಥೇಽಸ್ಮಿನ್ನಪಮೃತ್ಯುಗತಾ ಅಪಿ ।
ಗಚ್ಛಾಮಸ್ತ್ರಿದಿವಂ ವೈಶ್ಯ ಸಾಂಪ್ರತಂ ಶಿವಮಸ್ತು ತೇ ॥ ೨೭ ॥

॥ ಶ್ರೀ ನಾರದ ಉವಾಚ ॥

ಇತ್ಯುಕ್ತ್ವಾ ತೇ ಯಯುಃ ಸ್ವರ್ಗಂ ಶಿಬೇ ಶಿವಕೃತಾಂ ಪದಂ ।
ಯತ್ರೇಚ್ಛಯಾ ಹಿ ಲಭ್ಯಂತೇ ಭೋಗ್ಯವಸ್ತೂನ್ಯನೇಕಶಃ ॥ ೨೮ ॥

---

೨೪-೨೫. ಹಾಗೆ ಬಾಣದಿಂದ ಹೊಡೆದೊಡನೆಯೇ ಅವನು ಪ್ರಾಣವನ್ನು ಬಿಟ್ಟನು. ಇತ್ತ ಈ ಕಳ್ಳನಿಂದ ಏಟುತಿಂದ ಇಬ್ಬರೂ ಸತ್ತುಹೋದರು. ಈ ಮೂವರೂ ಸತ್ತೊಡನೆಯೇ ಗಣಗಳು ಅಂತರಿಕ್ಷದಲ್ಲಿ ತಂದಿದ್ದ ವಿಮಾನದಲ್ಲಿ ಕುಳಿತುಕೊಂಡರು. ಆ ವಿಮಾನದಲ್ಲಿ ಕುಳಿತುಕೊಂಡು ಆ ವೈಶ್ಯನನ್ನು ಕುರಿತು ಇಂತೆಂದರು.

೨೬. ಕಾಳಿಂಗನೂ ವೈಶ್ಯನ ಆಳುಗಳೂ ಹೇಳಿದರು—ಎಲೈ ಸಾಧುವಾದ ವೈಶ್ಯನೇ ! ಈ ಇಂದ್ರಪ್ರಸ್ಥದಲ್ಲಿರುವ ಹರಿದ್ವಾರ ತೀರ್ಥವು ಉತ್ತಮ ತೀರ್ಥವು. ಪಾಪಿಗಳಿಗೂ ಕೂಡ ಮಂಗಳವನ್ನುಂಟುಮಾಡುತ್ತದೆ.

೨೭. ನಮ್ಮ ಮೂವರಿಗೆ ಅಪಮೃತ್ಯುವು ಬಂದರೂ ಕೂಡ ಈ ತೀರ್ಥದಲ್ಲಿ ಸತ್ತುದರಿಂದ ನಾವು ಸ್ವರ್ಗಕ್ಕೆ ಹೋಗುತ್ತಿದ್ದೇವೆ. ನಿನಗೆ ಮಂಗಳವಾಗಲಿ.

೨೮. ಶ್ರೀ ನಾರದನು ಹೇಳಿದನು—ಎಲೈ ಶಿಬಿಯೆ ! ಅವರು ಹೀಗೆಂದು ಹೇಳಿ ಪುಣ್ಯವಂತರಿಗೆ ಸಿಕ್ಕುವ ಸ್ವರ್ಗಕ್ಕೆ ಹೋದರು. ಅವರಿಗೆ ಅಲ್ಲಿ ಭೋಗ್ಯ ವಸ್ತುಗಳು ಬಹುವಾಗಿ ಸಿಕ್ಕುತ್ತಿದ್ದುವು.

**ಅಥ ರಾತ್ರ್ಯಾಂ ವ್ಯತೀತಾಯಾಂ ಪ್ರಾತರತ್ರ ವಿಶಾಂ ವರಃ ।**
**ಸ್ವಭೃತ್ಯದೇಹಯೋಃ ಕೃತ್ವಾ ದಾಹಮಸ್ಥೀನ್ಯಪಾತಯತ್ ॥ ೨೯ ॥**

**ತೀರ್ಥೇಽತ್ರ ಪಾತ್ಯಮಾನೇಷು ಭೃತ್ಯೌ ತಾವಸ್ಥಿಷು ಪ್ರಭೋ ।**
**ಸ್ವರ್ಗಾತ್ಪುನರಿಹಾಯಾತೌ ತಂ ವೈಶ್ಯಮಿದಮೂಚತುಃ ॥ ೩೦ ॥**

**॥ ಭೃತ್ಯೌ ಊಚತುಃ ॥**

**ಭೋ ಭೋ ವೈಶ್ಯಪತೇ ಸಾಧೋ ತೀರ್ಥೇಽತ್ರ ಮರಣಾದ್ಭುವಿ ।**
**ಪಾಪಾನಾಮಪಿ ಜಂತೂನಾಂ ಸ್ವರ್ಗಪ್ರಾಪ್ತಿರ್ನ ಸಂಶಯಃ ॥ ೩೧ ॥**

**ಸ್ಥಲೇ ಮೃತಸ್ಯ ಜಂತೋಶ್ಚ ಪತಂತ್ಯಸ್ಥೀನಿ ವಾರಿಣಿ ।**
**ತೀರ್ಥಸ್ಯಾಸ್ಯ ತದಾ ವೈಶ್ಯ ಸತ್ಯಲೋಕೇ ಸ್ಥಿತಿರ್ಭವೇತ್ ॥ ೩೨ ॥**

**ಸ್ಥಲೇ ಮೃತಾಭ್ಯಾಮಾವಾಭ್ಯಾಮಸ್ಥಿಪಾತೇನ ವಾರಿಣಿ ।**
**ಸಂಪ್ರಾಪ್ತಾ ಬ್ರಹ್ಮಣೋ ಲೋಕೇ ಸ್ಥಿತಿರಾಬ್ರಹ್ಮಸಂಸ್ಥಿತೇಃ ॥ ೩೩ ॥**

---

೨೯. ರಾತ್ರಿ ಕಳೆದು ಬೆಳಗಾದಮೇಲೆ ಆ ವೈಶ್ಯನು ಆ ಸೇವಕರ ಹೆಣಗಳನ್ನು ತರಿಸಿ ಸುಡಿಸಿ ಮೂಳೆಗಳನ್ನು ತೀರ್ಥದಲ್ಲಿ ಹಾಕಿಸಿದನು.

೩೦. ಆ ಸೇವಕರ ಮೂಳೆಗಳನ್ನು ಈ ತೀರ್ಥದಲ್ಲಿ ಹಾಕಿದೊಡನೆಯೇ ಆ ಆಳುಗಳು ಸ್ವರ್ಗದಿಂದ ಮತ್ತೆ ಇಲ್ಲಿಗೆ ಬಂದು ವೈಶ್ಯನನ್ನು ಕುರಿತು ಇಂತೆಂದರು.

೩೧. ಆಳುಗಳು ಹೇಳಿದರು–ಎಲೈ ಸಾಧುವಾದ ವೈಶ್ಯನೆ ! ಭೂಮಿಯಲ್ಲಿ ಈ ತೀರ್ಥದಲ್ಲಿ ಸತ್ತರೆ ಪಾಪಿಗಳಿಗೂ ಕೂಡ ಸ್ವರ್ಗವು ಸಿಕ್ಕುತ್ತದೆ. ಸಂಶಯವಿಲ್ಲ.

೩೨. ಎಲೈ ವೈಶ್ಯನೆ ! ಭೂಮಿಯಲ್ಲಿ ಸತ್ತ ಮನುಷ್ಯನ ಮೂಳೆಗಳು ಈ ತೀರ್ಥದ ನೀರಿನಲ್ಲಿ ಬಿದ್ದರೆ ಆತನು ಸತ್ಯಲೋಕದಲ್ಲಿ ಸುಖಿಸುವನು.

೩೩. ನಾವಿಬ್ಬರೂ ಈ ಪ್ರದೇಶದಲ್ಲಿ ಭೂಮಿಯಲ್ಲಿ ಸತ್ತೆವು. ನಮ್ಮ ಮೂಳೆಯನ್ನು ಈ ತೀರ್ಥದ ನೀರಿನಲ್ಲಿ ನೀನು ಹಾಕಿದೆ. ಇದರಿಂದ ನಮಗೆ ಬ್ರಹ್ಮಲೋಕದಲ್ಲಿ ವಾಸವು ಸಿಕ್ಕಿತು. ಅಲ್ಲಿ ನಾವು ಬ್ರಹ್ಮನಿರುವವರೆಗೂ ವಾಸಿಸುತ್ತೇವೆ.

ಸ್ಥಲೇ ಮೃತಸ್ಯ ಚೋರಸ್ಯ ಪೇತುರಸ್ಥೀನಿ ನಾಂಬುನಿ |
ಯತೋऽತಃ ಸ ವಿಶಾಂ ನಾಥ ತಸ್ಥೌ ವೃಂದಾರಕಾಲಯೇ ॥ ೩೪ ॥

ತಸ್ಯಾಪಿ ದೇಹಮನ್ವಿಷ್ಯ ತೀರ್ಥೇऽಸ್ಮಿನ್ನಾಶು ಪಾತಯ |
ಯಥಾ ಸೋऽಪಿ ಸುರಶ್ರೇಷ್ಠಃ ಪ್ರಾಪ್ನುಯಾನ್ನೌ ಗತಿಂ ಪರಂ ॥ ೩೫ ॥

ಉಪಕಾರಸ್ಸದಾ ಕಾರ್ಯಃ ಪರೇಷಾಮಪಿ ಸಾಧುಭಿಃ |
ಅಪಕಾರೋ ನ ಮನ್ತವ್ಯಃ ಕೃತೋ ಭೃಶಮಸಜ್ಜನೈಃ ॥ ೩೬ ॥

॥ ಶ್ರೀ ನಾರದ ಉವಾಚ ॥

ಇತ್ಯುಕ್ತ್ವಾ ತೌ ಮಹಾಭಾಗೌ ಗತೌ ಹರಿಪುರೀಂ ಪ್ರತಿ |
ಹರಿದ್ವಾರಸ್ಯ ತೀರ್ಥಸ್ಯ ಸಲಿಲೇ ಚಾಸ್ಥಿಪಾತನಾತ್ ॥ ೩೭ ॥

---

೩೪. ಇಲ್ಲಿ ಆ ಕಳ್ಳನು ನೆಲದಮೇಲೆ ಸತ್ತನು. ಆತನ ಮೂಳೆಗಳನ್ನು ಇಷ್ಲಿನ ತೀರ್ಥದಲ್ಲಿ ಹಾಕಲಿಲ್ಲ. ಆದ್ದರಿಂದ ಅವನಿಗೆ ಸತ್ಯಲೋಕವಾದ ವೈಕುಂಠಲೋಕವು ಲಭಿಸದೆ ದೇವಲೋಕದಲ್ಲಿಯೇ ಇರುವನು.

೩೫. ಎಲೈ ವೈಶ್ಯನೇ ! ಅವನ ದೇಹವನ್ನು ಹುಡುಕಿಸಿ ಅದನ್ನು ಈ ತೀರ್ಥದಲ್ಲಿ ಹಾಕು. ಅವನೂ ಕೂಡ ನಮ್ಮಂತೆ ಉತ್ತಮಗತಿಯಾದ ವೈಕುಂಠ ಲೋಕವನ್ನು ಹೊಂದಲಿ.

೩೬. ಸಾಧುಗಳಾದವರು ಇತರರಿಗೆ ಯಾವಾಗಲೂ ಉಪಕಾರವನ್ನು ಮಾಡುತ್ತಿರಬೇಕು. ಆ ದುಷ್ಟರು ಮಾಡಿರುವ ಅಪಕಾರವನ್ನು ಗಮನಕ್ಕೆ ತೆಗೆದುಕೊಳ್ಳಲೇ ಬಾರದು.

೩೭. ಶ್ರೀ ನಾರದನು ಹೇಳಿದನು–ಅವರಿಬ್ಬರೂ ಹೀಗೆಂದು ಹೇಳಿ ವೈಕುಂಠಕ್ಕೆ ಹೊರಟುಹೋದರು. ಈ ವೈಕುಂಠಪ್ರಾಪ್ತಿಯು ಹರಿದ್ವಾರದ ನೀರಿನಲ್ಲಿ ಮೂಳೆಗಳನ್ನು ಹಾಕಿದುದರಿಂದ ಬಂದಿತು. ಆದ್ದರಿಂದ ಅದರ ಮಹಿಮೆಯು ಅಗಾಧವಾದುದು.

ಸ ವೈಶ್ಯಸ್ತು ಮಹಾಭಾಗಸ್ತಸ್ಯ ಚೌರಸ್ಯ ವಿಗ್ರಹಂ |
ದಗ್ಧುಮನ್ವೇಷಯಾಮಾಸ ನ ಲೇಭೇ ತಂ ತು ಭೂಪತೇ ॥ ೩೮ ॥

ಪುನರಾವೃತ್ಯ ತತ್ರೈವ ಸರ್ವತೀರ್ಥಶಿರೋಮಣೌ |
ಹರಿದ್ವಾರೇ ಮಹಾರಾಜ ಸ ಸಸ್ನಾವಿತಿ ವಾಂಛಯಾ ॥ ೩೯ ॥

ಅಹಮುತ್ಪಾದ್ಯ ಸತ್ಪುತ್ರಾನ್ ಧರ್ಮಾರ್ಜಿತಧನೇನ ಚ |
ಸಂತೋಷ್ಯ ವಿಪ್ರಾನ್ ಬಂಧೂಂಶ್ಚ ವಿಷ್ಣುಮಾರಾಧ್ಯ ಸೇವಯಾ ॥ ೪೦ ॥

ತ್ವಯ್ಯೇವ ಮರಣಂ ಪ್ರಾಪ್ಯ ಗಚ್ಛಾಮಿ ಹರಿಮಂದಿರಂ |
ತೀರ್ಥರಾಜ ನಮಸ್ತುಭ್ಯಮೇತತ್ಕರ್ತವ್ಯಮಸ್ತಿ ತೇ ॥ ೪೧ ॥

ಇತಿ ಕಾಮನಯಾ ರಾಜನ್ ಸ ವೈಶ್ಯಸ್ತತ್ರ ಕಾಮದೇ |
ತೀರ್ಥೇ ಸ್ನಾತ್ವಾ ಯತಸ್ಸರ್ವೈರ್ಭೃತ್ಯೈಃ ಸಮಮಗಾದ್ಗೃಹಂ ॥ ೪೨ ॥

ತತ್ರ ಗತ್ವಾ ಸ ಪತ್ನ್ಯಾಂ ತು ಪುತ್ರಾನುತ್ಪಾದ್ಯ ಬುದ್ಧಿಮಾನ್ |
ಧರ್ಮೋಪಾರ್ಜಿತವಿತ್ತೇನ ತೋಷಯಾಮಾಸ ಬಾಂಧವಾನ್ ॥ ೪೩ ॥

---

೩೮. ಆಗ ಪುಣ್ಯಾತ್ಮನಾದ ಆ ವೈಶ್ಯನು ಇದನ್ನು ಕೇಳಿ ಆ ಕಳ್ಳನ ದೇಹವನ್ನು ಸುಡಬೇಕೆಂದು ಹುಡುಕಿಸಲು ಅದು ಸಿಕ್ಕಲೇ ಇಲ್ಲ.

೩೯-೪೧. ಆ ವೈಶ್ಯನು ಮತ್ತೆ ಬಂದು ಆ ತೀರ್ಥದಲ್ಲಿ ಸ್ನಾನಮಾಡಿದನು. ಅವನು ಈ ರೀತಿಯಾಗಿ ಸಂಕಲ್ಪಮಾಡಿಕೊಂಡನು. ನನಗೆ ಯೋಗ್ಯರಾದ ಮಕ್ಕಳಾಗಬೇಕು. ಧರ್ಮದಿಂದ ಹಣವನ್ನು ಸಂಪಾದಿಸಬೇಕು. ಆ ಹಣದಿಂದ ಬ್ರಾಹ್ಮಣರನ್ನೂ ಬಂಧುಗಳನ್ನೂ ತೃಪ್ತಿಪಡಿಸಬೇಕು. ವಿಷ್ಣುವಿನ ಸೇವೆಯನ್ನು ಮಾಡಬೇಕು. ಅನಂತರ ನಿನ್ನಲ್ಲಿಗೆ ಬಂದು ಮರಣವನ್ನು ಹೊಂದಿ ಹರಿ ಮಂದಿರವಾದ ವೈಕುಂಠವನ್ನು ಹೊಂದಬೇಕು. ಎಲೈ ತೀರ್ಥರಾಜನೇ! ನಿನಗೆ ನಮಸ್ಕಾರವು. ಈ ಕೆಲಸವನ್ನು ನೀನು ಮಾಡಿಕೊಡಬೇಕು.

೪೨-೪೩. ಆ ವೈಶ್ಯನು ಈ ರೀತಿಯಾಗಿ ಸಂಕಲ್ಪವನ್ನು ಮಾಡಿಕೊಂಡು ಇಷ್ಟಾರ್ಥವನ್ನು ಕೊಡುವ ಆ ತೀರ್ಥದಲ್ಲಿ ಸ್ನಾನಮಾಡಿ ತನ್ನ ಆಳುಗಳೊಡನೆ ಹೋದನು. ಅನಂತರ ತನ್ನ ಹೆಂಡತಿಯಲ್ಲಿಯೇ ಆ ವೈಶ್ಯನು ಮಕ್ಕಳನ್ನು ಪಡೆದು ಧರ್ಮದಿಂದ ಹಣವನ್ನೂ ಸಂಪಾದಿಸಿ ಬ್ರಾಹ್ಮಣರನ್ನೂ ಬಂಧುಗಳನ್ನೂ ತೃಪ್ತಿಪಡಿಸಿದನು.

ಭಕ್ತ್ಯಾ ಪರಮಯಾ ರಾಜನ್ನಾರಾಧ್ಯ ಕಮಲಾಪತಿಂ ।
ತೀರ್ಥೇಽಸ್ಮಿನ್ ಮರಣಂ ಪ್ರಾಪ್ಯ ಯತೋ
ವೈಕುಂಠಮಾಪ್ನುಯಾತ್ ॥ ೪೪ ॥

ಜನಸ್ತತ್ಫಲಮಾಪ್ನೋತಿ ಶೃಣ್ವನ್ಮಾಹಾತ್ಮ್ಯಮಸ್ಯ ತು ।
ಗೋಪೀಚಂದನದಾನೇನ ಬ್ರಹ್ಮಪತ್ರೇಷು ಭೋಜನಾತ್ ॥ ೪೫ ॥

ಯತ್ತತ್ಫಲಂ ಮಹಿಮ್ನೋಽಸ್ಯ ಶ್ರವಣಾದೇವ ಕಾರ್ತಿಕೇ ।
ಜಾಗರೇಣ ಚ ಬೋಧಿನ್ಯಾಂ ಪ್ರಹರೇ ಪಶ್ಚಿಮೇ ನೃಪ ॥ ೪೬ ॥

ಯತ್ಫಲಂ ತನ್ಮಹಿಮ್ನೋಽಸ್ಯ ತೀರ್ಥಸ್ಯಾಕರ್ಣನಾದ್ಭವೇತ್ ।
ಹರಿದ್ವಾರಸ್ಯ ಸದೃಶಂ ಶಕ್ರಪ್ರಸ್ಥಗತಸ್ಯ ವೈ ॥ ೪೭ ॥

ನ ತೀರ್ಥಂ ಪೃಥಿವೀಲೋಕೇ ಚತುರ್ವರ್ಗಫಲಪ್ರದಂ ॥ ೪೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಹರಿದ್ವಾರ ವರ್ಣನಂ ನಾಮ ತ್ರಯೋದಶಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೪೪. ಅನಂತರ ಭಕ್ತಿಯಿಂದ ಶ್ರೀವಿಷ್ಣುವನ್ನು ಪೂಜಿಸಿ ಕೊನೆಗೆ ಈ ತೀರ್ಥದಲ್ಲಿಯೇ ಮರಣವನ್ನು ಹೊಂದಿ ವೈಕುಂಠವನ್ನು ಹೊಂದಿದನು.

೪೫–೪೮. ಗೋಪಿಚಂದನವನ್ನು ದಾನಮಾಡಿದರೆ ಯಾವ ಪುಣ್ಯವು ಬರುತ್ತದೆಯೋ ಅದನ್ನೂ ಅರಳಿಯಲೆಯಲ್ಲಿ ಊಟಮಾಡುವುದರಿಂದ ಯಾವ ಪುಣ್ಯವು ಬರುತ್ತದೆಯೋ ಆ ಪುಣ್ಯವನ್ನೂ ಕಾರ್ತಿಕಮಾಸದ ಪ್ರಬೋಧಿನಿ ಏಕಾದಶಿಯಲ್ಲಿ ಕೊನೆಯ ಯಾಮದಲ್ಲಿ ಜಾಗರಣ ಮಾಡಿದರೆ ಯಾವ ಪುಣ್ಯವು ಬರುವುದೋ ಅದನ್ನೂ ಈ ಹರಿದ್ವಾರದ ಮಹಿಮೆಯನ್ನು ಕೇಳುವುದರಿಂದ ಹೊಂದುತ್ತಾನೆ. ಇಂದ್ರಪ್ರಸ್ಥದಲ್ಲಿರುವ ಈ ಹರಿದ್ವಾರಕ್ಕೆ ಸಮಾನವಾದ ತೀರ್ಥವು ಭೂಮಿಯಲ್ಲಿ ಮತ್ತಾವುದೂ ಇಲ್ಲ. ಅದರಂತೆ ಧರ್ಮಾರ್ಥಕಾಮ ಮೋಕ್ಷಗಳನ್ನು ಕೊಡುವುದೂ ಮತ್ತಾವುದೂ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಹರಿದ್ವಾರ ವರ್ಣನ ಎಂಬ ಇನ್ನೂರ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರ್ದಶಾಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ನಾರದ ಉವಾಚ ॥

**ಭೂಯಃ ಶೃಣು ಮಹಾಭಾಗ ಮಾಹಾತ್ಮ್ಯಂ ಪರಮಾದ್ಭುತಂ ।**
**ಅತ್ರ ಸ್ಥಿತಸ್ಯ ತೀರ್ಥಸ್ಯ ಪುಷ್ಕರಸ್ಯ ಶಿವಪ್ರದಂ ॥ ೧ ॥**

**ಪ್ರಸಾದಾತ್ತಸ್ಯ ತೀರ್ಥಸ್ಯ ವಿಷ್ಣುಸ್ಸರ್ವಸುರೇಶ್ವರಃ ।**
**ಪ್ರಸನ್ನಃ ಪುಂಡರೀಕಸ್ಯ ಮಾಸಮೇಕಂ ಗೃಹೇಽವಸತ್ ॥**
**ಅತ್ರ ಮುಕ್ತಿಂ ತ್ವದನುಜೋ ಲೇಭೇ ಪಾಪರತೋಽಪಿ ಹಿ ॥ ೨ ॥**

---

### ಇನ್ನೂರ ಹದಿನಾಲ್ಕನೆಯ ಅಧ್ಯಾಯವು



೧. ಶ್ರೀ ನಾರದನು ಹೇಳಿದನು-ಎಲೈ ಶಿಬಿಯೇ ! ಇಲ್ಲಿರುವ ಮಂಗಳಕರವಾದ ಪುಷ್ಕರತೀರ್ಥದ ಮಹಿಮೆಯನ್ನು ಹೇಳುತ್ತೇನೆ. ಅದರ ಅದ್ಭುತವಾದ ಮಹಿಮೆಯನ್ನು ಕೇಳು.

೨. ಆ ತೀರ್ಥದ ಮಹಿಮೆಯಿಂದ ಸರ್ವದೇವಾಧಿಪನಾದ ವಿಷ್ಣುವು ಪ್ರಸನ್ನನಾಗಿ ಪುಂಡರೀಕನ ಮನೆಯಲ್ಲಿ ಒಂದು ತಿಂಗಳವರೆಗೆ ಇದ್ದನು. ಇಲ್ಲಿಯೇ ಅವನ ತಮ್ಮನೂ ಪಾಪಿಯಾದರೂ ಮೋಕ್ಷವನ್ನು ಹೊಂದಿದನು.

॥ ಶಿಬಿರುವಾಚ ॥

ಕಃ ಪುಂಡರೀಕೋ ಧರ್ಮಾತ್ಮಾ ಕೃತಂ ತೇನ ಚ ಕರ್ಮ ಕಿಂ ।
ಯೇನ ಪ್ರಸನ್ನೋ ಭಗವಾನ್ ತದ್ಗೃಹೇ ಮಾಸಮಾವಸತ್ ॥ ೩ ॥

ಕಥಂ ತದನುಜಃ ಪ್ರಾಪ ಪಾಪಾತ್ಮಾ ಶ್ರೀಹರೇಃ ಪದಂ ।
ತೀರ್ಥಸ್ಯಾಸ್ಯ ಪ್ರಸಾದೇನ ಸರ್ವಮಾಖ್ಯಾಹಿ ಮೇ ಮುನೇ ॥ ೪ ॥

॥ ಶ್ರೀ ನಾರದ ಉವಾಚ ॥

ವಿದರ್ಭನಗರೇ ರಾಜನ್ ಮಾಲವಾಖ್ಯೋ ಮಹಾಯಶಾಃ ।
ಬ್ರಾಹ್ಮಣೋ ಬ್ರಹ್ಮವಿಚ್ಛಾಂತೋ ವಿದ್ವಾನ್ವಿಷ್ಣುಪರಾಯಣಃ ॥ ೫ ॥

ದೇವರ್ಷಿಪಿತೃಭೂತಾನಾಂ ಮನುಷ್ಯಾಣಾಂ ಚ ಪೋಷಕಃ ।
ವಿಷಯೇಷು ನ ಸಂಸಕ್ತೋ ಲೋಭಮೋಹಾದಿವರ್ಜಿತಃ ॥ ೬ ॥

---

೩. ಶಿಬಿಯು ಹೇಳಿದನು-ಆ ಧರ್ಮಾತ್ಮನಾದ ಪುಂಡರೀಕನಾರು? ಅವನು ಯಾವ ಕೆಲಸವನ್ನು ಮಾಡಿದನು? ಅವನಿಗೆ ಪ್ರಸನ್ನನಾಗಿ ಸ್ವಾಮಿಯು ಅವನ ಮನೆಯಲ್ಲಿರಲು ಕಾರಣವೇನು? ಎಲ್ಲವನ್ನೂ ತಿಳಿಸು.

೪. ಅವನ ತಮ್ಮನು ಪಾಪಿಯಾಗಿದ್ದರೂ ಶ್ರೀಹರಿಯ ಸ್ಥಾನವನ್ನು ಹೇಗೆ ಹೊಂದಿದನು? ಈ ತೀರ್ಥದ ಅನುಗ್ರಹದಿಂದ ಅವೆಲ್ಲವೂ ಹೇಗೆ ಉಂಟಾದುವು? ಇದೆಲ್ಲವನ್ನೂ ಹೇಳು. ಇದರ ಮಹಿಮೆಯನ್ನು ಕೇಳುತ್ತಿದ್ದರೂ ನನಗೆ ಸಾಕೆಂಬ ಸಂತೋಷವೇ ಉಂಟಾಗುವುದಿಲ್ಲ.

೫. ಶ್ರೀ ನಾರದನು ಹೇಳಿದನು-ವಿದರ್ಭದೇಶದ ರಾಜಧಾನಿಯಲ್ಲಿ ಮಾಲವನೆಂಬ ಒಬ್ಬ ಯಶಸ್ವಿಯಾದ ಬ್ರಾಹ್ಮಣನಿದ್ದನು. ಅವನು ವೇದ ವೇದಾಂಗಗಳನ್ನು ಬಲ್ಲವನು. ಶಾಂತನು. ತಿಳಿವಳಿಕೆಯುಳ್ಳವನು. ವಿಷ್ಣುಭಕ್ತನು.

೬. ದೇವತೆಗಳು ಪಿತೃಗಳು ಋಷಿಗಳು ಇವರಿಗೆ ಯಜ್ಞ ಯಾಗಗಳಿಂದಲೂ ತರ್ಪಣದಿಂದಲೂ ಮನುಷ್ಯರಿಗೆ ಆಶ್ರಯಾದಿಗಳನ್ನು ಕೊಟ್ಟು ಅನ್ನ ಹಾಕುವುದರಿಂದಲೂ ಸಂತೋಷಪಡಿಸುತ್ತ ಕಾಪಾಡುತ್ತಿದ್ದನು. ವಿಷಯ ಸುಖಗಳಲ್ಲಿ ಆಶೆಯಿರಲಿಲ್ಲ. ಲೋಭಮೋಹಗಳನ್ನು ಬಿಟ್ಟಿದ್ದನು.

ಸ ಏಕದಾ ಮಹಾಭಾಗ ಸಿಂಹಸ್ಥ್ರಾಪ್ತೇ ಬೃಹಸ್ಪತೌ ।
ಗೋದಾವರೀಂ ಮಹಾಪುಣ್ಯಾಂ ಸ್ನಾತುಂ ಪ್ರಾತರ್ಜಗಾಮ ಹ ॥ ೭ ॥

ದಾತುಂ ತತ್ರ ಸುವರ್ಣಸ್ಯ ಗೃಹಾನ್ನಿನ್ಯೇ ಪಲಾಯುತಂ ।
ಗಚ್ಛನ್ ಪಥಿ ಸ ಧರ್ಮಾತ್ಮಾ ಮನಸ್ಯೈತದಚಿಂತಯತ್ ॥ ೮ ॥

॥ ಮಾಲವ ಉವಾಚ ॥

ಗೃಹಾದ್ದಾನಾರ್ಥಮಾನೀತಂ ಮಯಾ ಹೇಮಪಲಾಯುತಂ ।
ಯಸ್ಮೈ ಕಸ್ಮೈ ನ ದಾತವ್ಯಂ ದಾತವ್ಯಂ ಪೂಜ್ಯಸಾಧವೇ ॥ ೯ ॥

ನಿಷ್ಕಿಂಚನಾಯ ವಿಪ್ರಾಯ ಪಾತ್ರಾಯಾನುಪಕಾರಿಣೇ ।
ಪೂಜ್ಯಾಯ ದೇಶಕಾಲೇ ಚ ದತ್ತಮಕ್ಷಯತಾಂ ವ್ರಜೇತ್ ॥ ೧೦ ॥

---

೭. ಒಂದುಸಾರಿ ಆತನು ಬೃಹಸ್ಪತಿಯು ಸಿಂಹರಾಶಿಯಲ್ಲಿರುವಾಗ ಪುಣ್ಯಪ್ರದವಾದ ಗೋದಾವರಿಯಲ್ಲಿ ಸ್ನಾನಮಾಡಲು ಒಂದುದಿನ ಬೆಳಗ್ಗೆ ಹೋದನು.

೮. ಆ ಗೋದಾವರಿಯಲ್ಲಿ ದಾನಮಾಡಲು ಒಂದುಸಾವಿರ ಪಲ ಚಿನ್ನವನ್ನು ತೆಗೆದುಕೊಂಡು ಹೊರಟನು. ಆತನು ದಾರಿಯಲ್ಲಿ ಹೋಗುತ್ತ ಮನಸ್ಸಿನಲ್ಲಿ ಇಂತೆಂದು ಆಲೋಚಿಸಿದನು.

೯. ಮಾಲವನು ಹೇಳಿದನು–ಮನೆಯಿಂದ ದಾನಕ್ಕೋಸ್ಕರವೆಂದು ಒಂದುಸಾವಿರ ಪಲ ಚಿನ್ನವನ್ನು ತಂದಿದ್ದೇನೆ. ಇದನ್ನು ಅಯೋಗ್ಯರಾದವರಿಗೆ ಕೊಡಬಾರದು. ಪೂಜ್ಯನಾದ ಒಬ್ಬ ಸಾಧುವಿಗೆ ಕೊಡಬೇಕು.

೧೦. ಬಡವನಾಗಿರತಕ್ಕ ಆತನಿಂದ ನಾವು ಉಪಕಾರವನ್ನು ಹೊಂದದಿರತಕ್ಕ ಪೂಜ್ಯನಾದ ಬ್ರಾಹ್ಮಣನಿಗೆ ದೇಶಕಾಲಗಳನ್ನು ನೋಡಿ ಕೊಟ್ಟರೆ ಆ ಹಣವು ಅಕ್ಷಯವಾಗಿ ಆಗುತ್ತದೆ.

ಉಂಛವೃತ್ತ್ಯಾ ಸಮಾನೀತಂ ದತ್ವಾ ದುರ್ವಾಸಸೇ ಮುನಿಃ ।
ಶಿಲೋಂಛವೃತ್ತಿರ್ಧರ್ಮಾತ್ಮಾ ಸ್ವಂ ತ್ಯಕ್ತ್ವಾಗಾತ್ಪರಂ ಪದಂ ॥ ೧೧ ॥

ದಾನವೇಂದ್ರೋ ಬಲೀ ರಾಜಾ ಪಾತ್ರಂ ವಿಜ್ಞಾಯ ವಾಮನಂ ।
ವಿಪಕ್ಷಾಯಾಪ್ಯದಾತ್ತಸ್ಮೈ ತ್ರಿಲೋಕೀಂ ಸ್ವಭುಜಾರ್ಜಿತಾಂ ॥ ೧೨ ॥

ತಸ್ಮಾತ್ಪಾತ್ರಾಯ ದಾತವ್ಯಂ ಧನಂ ಧರ್ಮಾರ್ಜಿತಂ ಮಯಾ ।
ಗೋವಿಂದತುಷ್ಟಯೇ ಸಮ್ಯಕ್ ವಾಂಛನೀಯಂ ನ ತತ್ಫಲಂ ॥ ೧೩ ॥

ಪುಂಡರೀಕಸ್ತು ಧರ್ಮಾತ್ಮಾ ಭಾಗಿನೇಯೋ ಗಜಾಹ್ವಯಾತ್ ।
ಆಯಾಸ್ಯತಿ ಮಯಾಹೂತಃ ಸರ್ವಪಾತ್ರಶಿರೋಮಣಿಃ ॥ ೧೪ ॥

---

೧೧. ಶಿಲೋಂಛವೃತ್ತಿಯಿಂದ ತಂದ ಪದಾರ್ಥವನ್ನು ಋಷಿಯು ದುರ್ವಾಸಋಷಿಗೆ ಕೊಟ್ಟು ಆ ಪುಣ್ಯದಿಂದ ತಾನು ಸತ್ತನಂತರ ಪರಮಪದವನ್ನು ಹೊಂದಿದನು. ವಿಶೇಷ—ಉಂಛವೃತ್ತಿಯೆಂದರೆ (ತನಗೆ ಆ ದಿನಕ್ಕೆ ಉದರ ಭರಣಕ್ಕೆ ಬೇಕಾದಷ್ಟನ್ನು ಮಾತ್ರ ಬಿಕ್ಷೆ ಬೇಡಿ ತರುವುದು. ಶಿಲೋಂಛವೃತ್ತಿ ಯೆಂದರೆ ಮನೆಗಳಲ್ಲಿ ಒರಳು ಬೀಸುವಕಲ್ಲುಗಳಲ್ಲಿ ಕುಟ್ಟುವಾಗಲೂ ಬೀಸುವಾಗಲೂ ಅವುಗಳಲ್ಲಿ ಬಿಟ್ಟಿರುವುದನ್ನು ಎಲ್ಲವೂ ಮುಗಿದಮೇಲೆ ಬಂದು ಅದನ್ನು ತೆಗೆದುಕೊಂಡು ಹೋಗಿ ಜೀವನಮಾಡುವುದು.)

೧೨. ದಾನವೇಂದ್ರನಾದ ಬಲಿಯು ವಾಮನನನ್ನು ಯೋಗ್ಯವಾದ ಪಾತ್ರವನ್ನಾಗಿ ತಿಳಿದುಕೊಂಡು ಅವನು ತನಗೆ ಶತ್ರುವಾದರೂ ತಾನಾಗಿಯೇ ಸಂಪಾದಿಸಿದ ಮೂರುಲೋಕಗಳನ್ನೂ ದಾನಮಾಡಿದನು.

೧೩. ಆದ್ದರಿಂದ ಧರ್ಮದಿಂದ ಸಂಪಾದಿಸಿದ ಧನವನ್ನು ಪಾತ್ರನಿಗೆ ಕೊಡಬೇಕು. ಆಗ ಗೋವಿಂದನಿಗೆ ಅರ್ಪಣವಾಗಲೆಂದು ಕೊಟ್ಟು ಅದರ ಫಲವನ್ನು ಅಪೇಕ್ಷಿಸಬಾರದು.

೧೪. ನನ್ನ ಸೋದರಿಯ ಮಗನಾದ ಪುಂಡರೀಕನು ಹಸ್ತಿನಾಪಟ್ಟಣ ದಲ್ಲಿರುವನು. ಅವನು ಯೋಗ್ಯನಾದವನು. ಪಾತ್ರರಲ್ಲಿ ಶ್ರೇಷ್ಠನು. ನಾನು ಕರೆದರೆ ಅವನು ಬರುವನು.

**ಆನೀತಸ್ಯ ಧನಸ್ಯಾರ್ಧಂ ತಸ್ಮೈ ಪಾತ್ರಾಯ ಸೂನವೇ ।**
**ಸ್ವಸುರ್ದಾಸ್ಯಾಮಿ ಶೇಷಂ ತು ಶ್ರೋತ್ರಿಯೇಭ್ಯೋ ಯಥಾವಿಧಿ ॥ ೧೫ ॥**

**॥ ಶ್ರೀ ನಾರದ ಉವಾಚ ॥**

**ಏವಂ ವಿಚಿಂತ್ಯ ಧರ್ಮಾತ್ಮಾ ಮಾಲವಸ್ಸ ದ್ವಿಜೋತ್ತಮಃ ।**
**ಕತಿಭಿರ್ವಾಸರೈಃ ಪ್ರಾಪ್ತಃ ಪುಣ್ಯಾಂ ಗೋದಾವರೀಂ ನೃಪ ॥ ೧೬ ॥**

**ಮಿಲಿತಸ್ತತ್ರ ಧರ್ಮಾತ್ಮಾ ಪುಂಡರೀಕಸ್ಸ್ವಸುಸ್ಸುತಃ ।**
**ತಸ್ಯ ವೈ ಪೂರ್ವಮಾಯಾತೋ ಮಾಲವಸ್ಯ ಮಹಿಪತೇ ॥ ೧೭ ॥**

**ಸ ತತ್ರ ವಿಧಿನಾ ಸ್ನಾತ್ವಾ ಸಿಂಹಸಂಕ್ರಮವಾಸರೇ ।**
**ಪುಂಡರೀಕಾಯ ವಿತ್ತಾರ್ಧಂ ದದೌ ಮೇ ಪ್ರಿಯತಾಂ ಹರಿಃ ॥ ೧೮ ॥**

**ಪುಂಡರೀಕೋಽಪಿ ಧರ್ಮಾತ್ಮಾ ಸ್ನಾತ್ವಾ ಗೋದಾವರೀಜಲೇ ।**
**ಸ್ವವಿತ್ತಸ್ಯ ಚತುರ್ಥಾಂಶಂ ಶ್ರೋತ್ರಿಯೇಭ್ಯೋ ದದೌ ಮುದಾ ॥ ೧೯ ॥**

---

೧೫. ನಾನು ಈಗ ತಂದಿರುವ ಹಣದಲ್ಲಿ ಅರ್ಧವನ್ನು ಆ ನನ್ನ ಸೋದರಿಯ ಮಗನಿಗೆ ಕೊಡುತ್ತೇನೆ. ಉಳಿದ ಅರ್ಧವನ್ನು ಇಲ್ಲಿರುವ ಶ್ರೋತ್ರಿಯರಿಗೆ ಕೊಡುತ್ತೇನೆ. ಎಂದು ಆಲೋಚಿಸಿದನು.

೧೬. ಶ್ರೀ ನಾರದನು ಹೇಳಿದನು–ಆ ಮಾಲವನು ಈ ರೀತಿಯಾಗಿ ಯೋಚಿಸುತ್ತ ಕೆಲವು ದಿನಗಳು ಪ್ರಯಾಣಮಾಡಿ ಆ ಗೋದಾವರಿಯನ್ನು ಹೊಂದಿದನು.

೧೭. ಧರ್ಮಾತ್ಮನೂ ಸೋದರಿಯ ಮಗನೂ ಆದ ಆ ಪುಂಡರೀಕನು ಆ ಮಾವನು ಬರುವುದಕ್ಕೆ ಮೊದಲೇ ಬಂದು ಕಾದಿದ್ದು ಅವನನ್ನು ಹೊಂದಿದನು.

೧೮. ಸಿಂಹ ಸಂಕ್ರಮಣವಾದ ಆ ದಿನದಲ್ಲಿ ಶಾಸ್ತ್ರರೀತಿಯಂತೆ ಸ್ನಾನ ಮಾಡಿ ಆ ಹಣವಲ್ಲಿ ಅರ್ಧವನ್ನು ತೆಗೆದುಕೊಂಡು ನನ್ನ ವಿಷಯದಲ್ಲಿ ಹರಿಯು ಸಂತೋಷಪಡಲಿ. ಎಂದು ಆ ಪುಂಡರೀಕನಿಗೆ ಕೊಟ್ಟನು.

೧೯. ಅನಂತರ ಆ ಪುಂಡರೀಕನೂ ಗೋದಾವರಿಯಲ್ಲಿ ಸ್ನಾನಮಾಡಿ ತಾನು ತೆಗೆದುಕೊಂಡ ಹಣದಲ್ಲಿ ಕಾಲುಭಾಗವನ್ನು ತೆಗೆದುಕೊಂಡು ಸಂತೋಷದಿಂದ ಶ್ರೋತ್ರಿಯರಾದವರಿಗೆ ದಾನ ಮಾಡಿದನು.

ಸ ತತ್ರ ವಿಧಿವತ್ ಸ್ನಾತ್ವಾ ದತ್ವಾ ದಾನಂ ಚ ಶಕ್ತಿತಃ ।
ಗಚ್ಛಂತಂ ಸ್ವಗೃಹಾನ್ ರಾಜನ್ನಿತ್ಯುವಾಚ ಸ್ವಸುಸ್ಸುತಃ ॥ ೨೦ ॥

॥ ಮಾಲಜ ಉವಾಚ ॥

ಗುರೂನ್ ಪ್ರತಿ ನಮಸ್ಕಾರೋ ವಾಚ್ಯ ಆಶೀರ್ಲಘೂನ್ಯಪಿ ।
ಯಥಾ ತ್ರ ಯೋ ಹಿ ಸಂಯೋಗಃ ಕ್ಷಣಿಕೋಽಯಂ ಬಭೂವ ಹ ॥ ೨೧ ॥

ಏವಂ ಹಿ ಸರ್ವಜನ್ತೂನಾಂ ಪುತ್ರದಾರಾದಿಭಿಸ್ಸಹ ।
ತಸ್ಮಾತ್ ಕ್ಷಣಿಕಸಂಯೋಗಾತ್ ಸಂಸಾರಾದ್ಯಃ ಸುಧೀರ್ನರಃ ॥ ೨೨ ॥

ವಿರಜ್ಯೇತ ಕೃಪಾಪಾತ್ರಂ ಸ ಹರೇಃ ಸ್ಯಾದ್ವಿನಿಶ್ಚಿತಂ ।
ಕೃಪಾತಃ ಶ್ರೀಹರೇಃ ಪ್ರಾಣೀ ತತ್ಸಂಗನಿರತೋ ಭವೇತ್ ॥ ೨೩ ॥

ತತಸ್ತಸ್ಯ ಹರೇರ್ಲೀಲಾಶ್ರವಣೇಚ್ಛಾ ಹಿ ಜಾಯತೇ ।
ಶ್ರುತ್ವಾ ಚ ಕೀರ್ತಿತಾಸ್ಸದ್ಭಿಃ ಹರಿಲೀಲಾ ಅಪಿ ಸ್ವಯಂ ॥ ೨೪ ॥

---

೨೦. ಅನಂತರ ಆ ಮಾಲವನೂ ಕೂಡ ಸ್ನಾನಮಾಡಿ ಶಕ್ತ್ಯನುಸಾರವಾಗಿ ದಾನಗಳನ್ನು ಕೊಟ್ಟು ತನ್ನ ಮನೆಗೆ ಹೋಗುತ್ತಿರುವ ಸೋದರ ಅಳಿಯನನ್ನು ಕುರಿತು ಇಂತೆಂದನು.

೨೧. ಮಾಲವನು ಹೇಳಿದನು–ಎಲೈ ಪುಂಡರೀಕನೆ! ದೊಡ್ಡವರಿಗೆಲ್ಲಾ ನಮಸ್ಕಾರವನ್ನು ಹೇಳು. ಚಿಕ್ಕವರಿಗೆಲ್ಲಾ ಆಶೀರ್ವಾದವನ್ನು ಹೇಳು. ಇಲ್ಲಿ ನಾವಿಬ್ಬರೂ ಸೇರಿರುವುದು ಕ್ಷಣಕಾಲದ ವಿಷಯವಾಯಿತು. ಮತ್ತು ಶಾಶ್ವತವಲ್ಲದ್ದು.

೨೨-೨೩. ನಾವು ಇಲ್ಲಿ ಸೇರಿದಂತೆಯೇ ಪ್ರಾಣಿಗಳೆಲ್ಲವೂ ಹೆಂಡತಿ ಮಕ್ಕಳೊಡನೆ ಸೇರುವುದು ಕ್ಷಣಿಕವು ಅದ್ದರಿಂದ ಈ ಕ್ಷಣಿಕಸಂಯೋಗವುಳ್ಳ ಸಂಸಾರದಿಂದ ಯಾವ ಮನುಷ್ಯನು ವೈರಾಗ್ಯಹೊಂದಿ ಬೇರ್ಪಡುತ್ತಾನೆಯೋ ಅವನೇನೇ ಹರಿಯ ಕೃಪೆಗೆ ಪಾತ್ರನಾಗುತ್ತಾನೆ. ಇದು ನಿಶ್ಚಯವು. ಪ್ರಾಣಿಯು ಶ್ರೀಹರಿಯ ಕೃಪೆ ಬಂದಮೇಲೆ ಅವನ ಸೇವೆಯಲ್ಲಿ ಆಸಕ್ತನಾಗಬೇಕು.

೨೪. ಆ ಹರಿಯ ಕೃಪೆಯಿಂದಲೇ ಹರಿಯ ಲೀಲೆಯಾದ ಕಥೆಗಳನ್ನು ಕೇಳುವುದರಲ್ಲಿ ಬುದ್ಧಿಯು ಹುಟ್ಟುತ್ತದೆ. ಅನಂತರ ಸತ್ಪುರುಷರು ಹೊಗಳಿರುವ ಕೀರ್ತನೆಗಳನ್ನು ಅವನು ತಾನೂ ಹಾಡುತ್ತಾನೆ.

ಸಸ್ಪೃಹಂ ಕೀರ್ತಯತ್ಯೇವ ತತಸ್ಸ್ಮರತಿ ಕೇವಲಂ ।
ತತಸ್ತಸ್ಯ ಭವೇತ್ಪ್ರೇಮ ಗೋವಿಂದಪದಸೇವನೇ ॥ ೨೫ ॥

ಭಜಂಸ್ತತ ಸ್ತರತ್ಯಾಶು ಪೋತೇನೇವ ಮಹಾರ್ಣವಂ ।
ಏತದರ್ಥಂ ಹಿ ಸಾಧೂನಾಂ ಜ್ಞಾನಿನಾಂ ಕರ್ಮಿಣಾಂ ತಥಾ ।
ಯತೋ ಭವತಿ ಧರ್ಮಾತ್ಮನ್ನಪಿ ತ್ವಂ ಯತ್ನವಾನ್ ಭವ ॥ ೨೬ ॥

॥ ಶ್ರೀ ನಾರದ ಉವಾಚ ॥

ಏವಮುಕ್ತ್ವಾ ಸ ವೈದರ್ಭಃ ಸುತಂ ಕಥಮಪಿ ಸ್ವಸುಃ ।
ವಿಸೃಜ್ಯಾಶ್ರುಮುಖೋ ಬಾಷ್ಪಪರ್ಯಾಕುಲದೃಶಂ ಯಯೌ ॥ ೨೭ ॥

ಪುಂಡರೀಕೋಽಪಿ ಧರ್ಮಾತ್ಮಾ ಚಚಾಲ ಸ್ವಗೃಹಂ ಪ್ರತಿ ।
ಕತಿಭಿರ್ವಾಸರೈ ರಾಜನ್ನಾಗತೋಽತ್ರ ಶುಭಾಸ್ಪದೇ ॥ ೨೮ ॥

---

೨೫. ಮೊದಲು ಆಸೆಯಿಂದ ತಾನು ಹಾಡುತ್ತಾನೆ. ಅನಂತರ ಅವನನ್ನೇ ಸ್ಮರಿಸುತ್ತಾನೆ. ಅನಂತರ ಗೋವಿಂದನ ಪಾದಸೇವೆಯಲ್ಲಿ ಆಸೆಯು ಹುಟ್ಟುತ್ತದೆ.

೨೬. ಈ ರೀತಿ ಸ್ವಾಮಿಯನ್ನು ಭಜಿಸುತ್ತಲಿದ್ದು ದೋಣಿಯಿಂದ ಸಮುದ್ರವನ್ನು ದಾಟುವಂತೆ ಈ ಸಂಸಾರವನ್ನು ದಾಟುತ್ತಾನೆ. ಈ ರೀತಿಯಾದ ಸಂಸಾರವನ್ನು ದಾಟುವುದಕ್ಕೋಸ್ಕರವೇ ಸಾಧುಗಳೂ ಜ್ಞಾನಿಗಳೂ ಕರ್ಮ ಮಾಡುವವರೂ ಪ್ರಯತ್ನ ಪಡುತ್ತಿರುವುದು. ಅದೇ ರೀತಿಯಾಗಿ ನೀನೂ ಕೂಡ ಪ್ರಯತ್ನಪಡು.

೨೭. ಶ್ರೀ ನಾರದನು ಹೇಳಿದನು-ವೈದರ್ಭನಾದ ಮಾಲವನು ಹೀಗೆ ಸೋದರಳಿಯನಿಗೆ ಬುದ್ಧಿಯನ್ನು ಹೇಳಿ ಕಣ್ಣಿನಲ್ಲಿ ನೀರನ್ನು ತಂದುಕೊಂಡನು. ಇದನ್ನು ಕೇಳಿ ಆ ಪುಂಡರೀಕನಿಗೂ ಕಣ್ಣಿನಲ್ಲಿ ನೀರು ಬಂದಿತು. ಅತ್ತ ಆ ಮಾಲವನು ಇವನನ್ನು ಬಿಟ್ಟು ಹೊರಟುಹೋದನು.

೨೮-೨೯. ಇತ್ತ ಪುಂಡರೀಕನು ತನ್ನ ಮನೆಗೆ ಬಂದನು. ಕೆಲವು ದಿನಗಳಾದ ಮೇಲೆ ಈ ಮಂಗಳಕರವಾದ ಪುಷ್ಕರಕ್ಕೆ ಪುಂಡರೀಕನ ಕೊನೆಯ

ಭರತಾಖ್ಯಂ ಕನೀಯಾಂಸಂ ಭ್ರಾತರಂ ಪತಿತಂ ಭುವಿ |
ಶ್ವಸನ್ತಂ ಕ್ಷತನಿರ್ಗಚ್ಛದ್ರುಧಿರಾಕ್ತಮುವೈಕ್ಷತ || ೨೯ ||

ಪಪ್ರಚ್ಛ ಚ ರುದನ್ನುಚ್ಚೈಃ ಭ್ರಾತಃ ಕೇನೇದೃಶೀಂ ದಶಾಂ |
ಗಮಿತೋಽಸಿ ಕಿಮರ್ಥಂ ವಾ ಗೃಹಾದಿಹ ಸಮಾಗತಃ || ೩೦ ||

|| ಶ್ರೀ ನಾರದ ಉವಾಚ ||

ಇತಿ ಪೃಚ್ಛತಿ ರಾಜೇಂದ್ರ ಪುಂಡರೀಕೇ ಸ ಪೀಡಯಾ |
ಮಹತ್ಯಾ ಭರತಸ್ಸದ್ಯಃ ಪೀಡತೋಽಸೂನಮುಂಚತ || ೩೧ ||

ಅಪಾತರತ್ತದಾಯಾನಮನೇಕಂ ಸಗಣಮುದ್ಭುತಂ |
ಆಕಾಶಾತ್ಪಶ್ಯತಾಂ ಭೂಪ ಜನಾನಾಂ ತದ್ಗುರೋರಪಿ || ೩೨ ||

ತದಾರುಹ್ಯ ಸ ದಿವ್ಯಾಂಗೋ ಭರತಃ ಪಾಪಕಾರ್ಯಪಿ |
ಉವಾಚ ವಚನಂ ಶ್ರೇಷ್ಠಂ ಭ್ರಾತರಂ ವಿನಯನ್ನಿದಂ || ೩೩ ||

---

ತಮ್ಮನಾದ ಭರತನೆಂಬುವನು ಬಂದು ನೆಲದ ಮೇಲೆ ಬಿದ್ದಿದ್ದನು. ಮೈಯ್ಯೆಲ್ಲವೂ ಗಾಯವಾಗಿ ಅದರಿಂದ ರಕ್ತವು ಬರುತ್ತಿದ್ದಿತು. ಇದನ್ನು ತಡೆಯಲಾರದೆ ನಿಟ್ಟುಸಿರು ಬಿಡುತ್ತಿದ್ದನು. ಹೀಗಿರುವ ಇವನನ್ನು ಪುಂಡರೀಕನು ನೋಡಿದನು.

೩೦. ಆಗ ಪುಂಡರೀಕನು ಅಳುತ್ತ ಎಲೈ ಸೋದರನೇ ನಿನಗೆ ಯಾರು ಈ ಅವಸ್ಥೆ ಬರುವಂತೆ ಮಾಡಿದರು ? ಮನೆಯಿಂದ ಇಲ್ಲಿಗೇಕೆ ಬಂದೆ ? ಎಂದು ಕೇಳಿದನು.

೩೧. ಶ್ರೀ ನಾರದನು ಹೇಳಿದನು–ಈ ಪುಂಡರೀಕನು ತಮ್ಮನನ್ನು ಹೀಗೆ ಕೇಳುತ್ತಿರುವಷ್ಟರಲ್ಲಿಯೇ ಅವನು ಆ ಹುಣ್ಣಿನ ನೋವನ್ನು ತಡೆಯಲಾರದೆ ಪ್ರಾಣಗಳನ್ನು ಬಿಟ್ಟು ಬಿಟ್ಟನು.

೩೨. ಒಡನೆಯೇ ಅಲ್ಲಿದ್ದ ಜನಗಳೂ ಅವನ ಅಣ್ಣನೂ ನೋಡುತ್ತಿರುವ ಹಾಗೆಯೇ ಗಣಗಳಿಂದ ಕೂಡಿದ ಒಂದು ವಿಮಾನವು ಆಕಾಶದಿಂದ ಬಂದಿತು.

೩೩. ಆ ಭರತನು ಪಾಪಿಯಾದರೂ ಕೂಡ ಉತ್ತಮವಾದ ದೇಹವನ್ನು ಹೊಂದಿ ಆ ವಿಮಾನವನ್ನು ಹತ್ತಿಕೊಂಡು ಕುಳಿತು ಸೋದರನಾದ ಪುಂಡರೀಕನನ್ನು ಕುರಿತು ವಿನಯದಿಂದ ಇತೆಂದನು.

|| ಭರತ ಉವಾಚ ||

ಪುಂಡರೀಕ ಮಹಾಬುದ್ಧೇ ತೀರ್ಥಸ್ಯಾಸ್ಯ ಪ್ರಸಾದತಃ |
ಪುಷ್ಕರಸ್ಯ ಮಯಾ ಪ್ರಾಪ್ತಾ ಪಾಪಿನಾಪಿ ದಿವಿ ಸ್ಥಿತಿಃ || ೩೪ ||

ಮದೀಯಂ ದಾರುಣಂ ಕರ್ಮ ಭ್ರಾತರ್ಜಾನಾಸಿ ಯದ್ಯಪಿ |
ತಥಾಪಿ ಕಥಯಾಮ್ಯದ್ಯ ಕಿಂಚಿದಜ್ಞಾತಮಸ್ತಿ ತೇ || ೩೫ ||

ಯಥಾ ಮಯಾ ಪ್ರಭಾವತ್ಯಾ ವೇಶ್ಯಯಾ ರಮಿತಂ ಸಹ |
ತದ್ಗೃಹೇ ವ್ಯಯಿತಂ ಭೂರಿ ಧನಂ ಚ ಮದಿರಾ ಕೃತೇ || ೩೬ ||

ದ್ಯೂತೇನ ಹಾರಿತಂ ಯಚ್ಚ ಚೌರಕರ್ಮಸಮಾರ್ಜಿತಂ |
ಶಿವರಾತ್ರ್ಯಾಂ ಮಯಾ ಶಂಭುನಿರ್ಮಾಲ್ಯಂ ಯಚ್ಚ ಭಕ್ಷಿತಂ || ೩೭ ||

ಯತ್ಕೃತೇ ಭವತಾ ವಿಪ್ರೋ ಜಂಬುಕೋ ನಾಮ ದೂಷಿತಃ |
ಏತನ್ಮಯಾ ಕೃತಂ ಕರ್ಮ ವಿದಿತಂ ಪುಂಡರೀಕ ತೇ || ೩೮ ||

ಗೋದಾವರೀಂ ಗತೇ ಭ್ರಾತಸ್ತ್ವಯಿ ಯತ್ಕೃತವಾನಹಂ |
ನ ತತ್ತೇ ವಿದಿತಂ ಕರ್ಮ ಕಥಯಾಮಿ ತದಪ್ಯಹಂ || ೩೯ ||

---

೩೪. ಭರತನು ಹೇಳಿದನು–ಎಲೈ ಮಹಾಬುದ್ಧಿಯುಳ್ಳ ಪುಂಡರೀಕನೇ ! ಈ ತೀರ್ಥದ ಪ್ರಸಾದದಿಂದ ಪಾಪಿಯಾಗಿದ್ದರೂ ನನಗೆ ಸ್ವರ್ಗವಾಸವು ಸಿಕ್ಕಿತು.

೩೫. ಅಣ್ಣನಾದ ನಿನಗೆ ನಾನು ಮಾಡಿದ ಕೆಟ್ಟಕೆಲಸಗಳೆಲ್ಲವೂ ತಿಳಿದೇ ಇವೆ. ಅದರಲ್ಲಿಯೂ ಕೂಡ ನಿನಗೆ ತಿಳಿಯದೆ ಇರುವುವು ಕೆಲವಿವೆ. ಅವನ್ನು ನಿನಗೆ ಹೇಳುತ್ತೇನೆ.

೩೬-೩೮. ಪ್ರಭಾವತಿಯಾದ ಸೂಳೆಯೊಡನೆ ರಮಿಸಿದೆನು. ಅವಳ ಮನೆಯಲ್ಲಿಯೇ ಮದ್ಯಪಾನಕ್ಕೋಸ್ಕರ ಬಹು ಹಣವನ್ನು ವ್ಯಯಮಾಡಿದೆನು. ಕಳ್ಳತನದಿಂದ ಹಣವನ್ನು ತಂದು ಅದನ್ನು ಜೂಜಿನಲ್ಲಿ ಸೋಲುತ್ತಿದ್ದೆನು. ಶಿವ ರಾತ್ರಿಯ ದಿನ ಶಿವನಿರ್ಮಾಲ್ಯವನ್ನು ತಿಂದೆನು. ನೀನು ಜಂಬುಕನೆಂಬ ಬ್ರಾಹ್ಮಣನನ್ನು ಯಾವುದಕ್ಕೆ ದೂಷಿಸಿದ್ದೆಯೋ ಅವೆಲ್ಲವನ್ನೂ ನಾನು ಮಾಡಿದ್ದೇನೆ. ಅವೆಲ್ಲವೂ ನಿನಗೆ ತಿಳಿದೇ ಇದೆ.

೩೯. ಎಲೈ ಸೋದರನೇ ! ನೀನು ಗೋದಾವರಿಗೆ ಹೋದಾಗ ನಾನು ಮಾಡಿದ ಕೆಟ್ಟ ಕೆಲಸಗಳು ನಿನಗೆ ತಿಳಿದಿಲ್ಲ. ಅವನ್ನು ಹೇಳುತ್ತೇನೆ.

ಚಲಿತೇ ತ್ವಯ್ಯತಿಕ್ರಾಂತೋ ಯದಾ ಪಕ್ಷಸ್ತದಾಹ್ಯಹಂ |
ಶ್ರುತವಾನಿತಿ ಲೋಕೇಭ್ಯೋ ವಚನಂ ಹೃದಿ ದುಸ್ಸಹಂ ॥ ೪೦ ॥

ಪುಂಡರೀಕೋ ಧನಂ ದಾತುಮಾ ಹೂತೋ ಮಾತುಲೇನ ಹಿ |
ನಿಜಸೋದರಮಾಹತ್ಯ ಪುಂಡರೀಕಂ ತದಾಹೃತಂ ॥ ೪೧ ॥

ಗೃಹೀಷ್ಯಾಮಿ ಧನಂ ಭೂರಿ ಮಾತುಲೇನ ಸಮರ್ಪಿತಂ |
ಮಹತಾ ವಸುನಾ ತೇನ ತೋಷಯಾಮಿ ಪ್ರಭಾವತೀಂ ॥ ೪೨ ॥

ದುರೋದರೇಣ ಕ್ರೀಡಾಮಿ ಸ್ವೇಚ್ಛಯಾ ತದ್ವಿದೈಸ್ಸಹ |
ಇತ್ಯಾಲೋಚ್ಯ ತದಧ್ವಾನಂ ನಿರುಧ್ಯಾಹಮಿಹ ಸ್ಥಿತಃ ॥ ೪೩ ॥

ಹತ್ವಾ ತ್ವಾಂ ಚ ಧನಂ ಭೂರಿ ಗೃಹೀತುಂ ಚ ಮಹಾಮತೇ |
ಅತಿಕ್ರಾಂತೇ ಜನೇ ಭ್ರಾತಃ ಕುತಶ್ಚಿತ್ಸಾರ್ಥ ಆಗತಃ ॥ ೪೪ ॥

ವಣಿಜಾಮತ್ರ ಸುಪ್ತೋऽಹಂ ರಾತ್ರೌ ತತ್ರ ಮಹಾಮತೇ |
ಅಥ ಕಶ್ಚಿನ್ನಿಶೀಥೇ ತು ತಸ್ಕರೋ ವಣಿಜಾಂ ಧನಂ ॥ ೪೫ ॥

---

೪೦-೪೩. ನೀನು ಗೋದಾವರಿಯನ್ನು ಕುರಿತು ಹೋದಮೇಲೆ ಒಂದು ಪಕ್ಷವು (ಹದಿನೈದು ದಿನಗಳು) ಕಳೆಯಿತು. ಆಗ ಜನಗಳು ಸೋದರಮಾವನಾದ ಮಾಲವನು ಪುಂಡರೀಕನಿಗೆ ಹಣವನ್ನು ಕೊಡಲು ಕರೆಸಿದ್ದಾನೆ. ಎಂದು ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿದೆನು. ಒಡನೆಯೇ ನಾನು ನನ್ನ ಅಣ್ಣನಾದ ಪುಂಡರೀಕನನ್ನು ಕೊಂದು ಅವನ ಬಳಿಯಲ್ಲಿರುವ ಮಾಲವನು ಕೊಟ್ಟಿರುವ ಅಪಾರವಾದ ಹಣವನ್ನು ತೆಗೆದುಕೊಳ್ಳಬೇಕು. ಹಾಗೆ ತಂದ ಬಹು ಹಣದಿಂದ ಪ್ರಭಾವತಿಯನ್ನು ಸಂತೋಷಗೊಳಿಸಬೇಕು. ಅಲ್ಲದೆ ಒಳ್ಳೊಳ್ಳೆಯ ಜೂಜುಗಾರರೊಡನೆ ಇಷ್ಟಬಂದಂತೆ ಆಟವಾಡಬೇಕು ಎಂಬುದಾಗಿ ಯೋಚಿಸಿ ನೀನು ಬರುವ ದಾರಿಯನ್ನು ಅಡ್ಡಗಟ್ಟಿ ಇಲ್ಲಿದ್ದೆನು.

೪೪. ನಿನ್ನನ್ನು ಕೊಂದು ಬಹುವಾದ ಹಣವನ್ನು ತೆಗೆದುಕೊಳ್ಳಲು ನಾನು ಇಲ್ಲಿದ್ದಾಗ ಜನಗಳೆಲ್ಲರೂ ಹೊರಟುಹೋದಮೇಲೆ ಒಂದು ವರ್ತಕರ ಗುಂಪು ಈ ದಾರಿಯಲ್ಲಿ ಬಂದಿತು.

೪೫-೪೬. ಅವರೆಲ್ಲರೂ ಬರುತ್ತಿದ್ದಾಗ ರಾತ್ರಿಯಲ್ಲಿ ನಾನು ಇಲ್ಲಿ ಮಲಗಿದ್ದೆನು. ಆಗ ರಾತ್ರಿಯಲ್ಲಿ ಒಬ್ಬ ಕಳ್ಳನು ಆ ವರ್ತಕರ ಹಣವನ್ನು ಕದಿಯಲು

ಹಟ್ಟಂ ತತ್ರ ಸಮಾವಿಷ್ಟಃ ಸಾರ್ಥೇ ಜನಸಮಾಕುಲೇ ।
ನೀತ್ವಾ ಯದಾ ಧನಂ ಕಿಂಚಿತ್ಸ ಚೌರಸ್ತು ಪಲಾಯಿತಃ ।
ತಮನ್ವಧಾವನ್ಸಹಸಾ ಕ್ರೋಶಂತ ಇವ ಸೇವಕಾಃ ॥ ೪೬ ॥

॥ ಸೇವಕಾ ಊಚುಃ ॥

ಗೃಹ್ಯತಾಂ ಗೃಹ್ಯತಾಮೇಷಃ ಚೌರೋಽಯಂ ಯಾತಿ ಸತ್ವರಂ ।
ಮಧ್ಯಾದ್ಬಹೂನಾಮಸ್ಮಾಕಮಪಹೃತ್ಯ ಧನಂ ಬಹು ॥ ೪೭ ॥

॥ ಭರತ ಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಪುರತಸ್ತು ತಮನ್ವಹಂ ।
ಅಧಾವಂ ಸಹಸಾ ಭ್ರಾತಃ ತದ್ಗ್ರಹೀತುಂ ಜಿಹೀರ್ಷಯಾ ॥ ೪೮ ॥

ತತಸ್ತೇ ವಣಿಜಾಂ ಭೃತ್ಯಾ ಜ್ಞಾತ್ವಾ ಮಾಂ ತಸ್ಯ ರಕ್ಷಕಂ ।
ಪ್ರಜಹುಸ್ತರಸಾ ಸರ್ವೇ ಸಖಡ್ಗಂ ಖಡ್ಗಪಾಣಯಃ ॥ ೪೯ ॥

ತೇಷು ಕಶ್ಚಿತ್ ದ್ವಿಜಶ್ರೇಷ್ಠೋ ಬ್ರಾಹ್ಮಣೋಽಹಮಿತಿ ಬ್ರುವನ್ ।
ಖಡ್ಗೇನ ಶಿತಧಾರೇಣ ಮಯಾ ಪಾಪೀಯಸಾ ಹತಃ ॥ ೫೦ ॥

---

ಗುಂಪಿನ ಒಳಕ್ಕೆ ನುಗ್ಗಿದನು. ಅಲ್ಲಿ ಸ್ವಲ್ಪ ಹಣವನ್ನು ಕದ್ದುಕೊಂಡು ಆ ಕಳ್ಳನು ಓಡಿಹೋದನು. ಆಗ ಆಳುಗಳು ಕೂಗುತ್ತ ಅವನ ಹಿಂದೆಯೇ ಓಡಿಹೋದರು.

೪೭. ಸೇವಕರು ಹೇಳಿದರು-ಹಿಡಿದುಕೊಳ್ಳಿರಿ. ಹಿಡಿದುಕೊಳ್ಳಿರಿ. ಇವನು ಕಳ್ಳನು. ವೇಗದಿಂದ ಓಡಿಹೋಗುತ್ತಿದ್ದಾನೆ. ನಮ್ಮ ಗುಂಪಿನೊಳಕ್ಕೆ ನುಗ್ಗಿ ಮಧ್ಯದಲ್ಲಿ ಒಬ್ಬರ ಹಣವನ್ನೆಲ್ಲಾ ಕದ್ದುಕೊಂಡು ಹೋಗುತ್ತಿದ್ದಾನೆ.

೪೮. ಭರತನು ಹೇಳಿದನು_ಅವರ ಈ ಮಾತನ್ನು ಕೇಳಿ ಅವನನ್ನು ಹಿಡಿದುಕೊಳ್ಳಲು ಅವರಿಗಿಂತಲೂ ಮೊದಲು ನಾನು ಓಡಲು ಮೊದಲು ಮಾಡಿದೆನು.

೪೯. ಆಗ ಆ ವರ್ತಕರ ಆಳುಗಳು ನನ್ನನ್ನು ಆ ಕಳ್ಳನ ಕಡೆಯ ಕಾವಲುಗಾರನೆಂದು ತಿಳಿದು ಅವರ ಕೈಯ್ಯಲ್ಲಿದ್ದ ಕತ್ತಿಯಿಂದ ಹೊಡೆದರು.

೫೦. ಅವರೊಳಗೆ ಒಬ್ಬನು ಬ್ರಾಹ್ಮಣನಿದ್ದನು. ಅವನು ನಾನು ಬ್ರಾಹ್ಮಣನು. ಎಂದು ಹೇಳುತ್ತಿದ್ದರೂ ನಾನು ಅವನನ್ನು ನನ್ನ ಹರಿತವಾದ ಕತ್ತಿಯಿಂದ ಕೊಂದೆನು.

ವಣಿಜಾಂ ಸೇವಕೈಸ್ತೈಸ್ತು ಖಡ್ಗಧಾರೈರಹಂ ಹತಃ ।
ಗತಾಸ್ತೇ ವಣಿಜಃ ಪ್ರಾತಃ ನಿಜಗಂತವ್ಯನೀವೃತಂ ॥ ೫೧ ॥

ತತೋ ಭವಾನಿಹ ಪ್ರಾಪ್ತಃ ಶ್ವಸನ್ತಂ ಮಾಂ ದದರ್ಶ ಹ ।
ಚಲದ್ರುಧಿರಲಿಪ್ತಾಂಗಂ ಪೀಡಾಮೋಹವಿಚೇತನಂ ॥ ೫೨ ॥

ಇತ್ಯೇತತ್ಕಥಿತಂ ಭ್ರಾತಃ ಯದರ್ಥಮಹಮಾಗತಃ ।
ಅಪಮೃತ್ಯುಂ ಯಥಾ ಪ್ರಾಪ್ತಃ ತಚ್ಚಾಪಿ ಕಥಿತಂ ಮಯಾ ॥ ೫೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಪುಷ್ಕರ ಮಾಹಾತ್ಮ್ಯ ಕಥನಂ ನಾಮ ಚತುರ್ದಶಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೫೧. ಅದನ್ನು ನೋಡಿ ಆ ವರ್ತಕರ ಸೇವಕರು ನನ್ನನ್ನೂ ಹರಿತವಾದ ಕತ್ತಿಯಿಂದ ಹೊಡೆದರು. ಆ ಮೇಲೆ ಬೆಳಗ್ಗೆ ಆ ವರ್ತಕರು ಅವರು ಹೋಗಬೇಕಾದ ಸ್ಥಳಕ್ಕೆ ಹೊರಟುಹೋದರು.

೫೨. ಆಮೇಲೆ ನೀನು ಇಲ್ಲಿಗೆ ಬಂದೆ. ಶ್ವಾಸವೆಳೆಯುತ್ತಿರುವ ಮೈಯೆಲ್ಲಾ ರಕ್ತವಾಗಿ ಸೋರುತ್ತಿರುವ ಜ್ಞಾನವಿಲ್ಲದಿರುವ ನನ್ನನ್ನು ನೋಡಿದೆ

೫೩. ಎಲೈ ಸಹೋದರನೇ ! ನಾನು ಇಲ್ಲಿಗೆ ಬರಲು ಕಾರಣವನ್ನು ಹೇಳಿದೆನು. ಮತ್ತು ನಾನು ಇಲ್ಲಿಗೆ ಬಂದು ಅಪಮೃತ್ಯುವನ್ನು ಹೊಂದಿದ ಬಗೆಯನ್ನೂ ಹೇಳಿದೆನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಪುಷ್ಕರ ಮಹಿಮೆಯ ಕಥನ ಎಂಬ ಇನ್ನೂರ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚದಶಾಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ನಾರದ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಪುಂಡರೀಕೋ ಮಹಾಮುನಾಃ ।
ಉವಾಚ ನಿಜಬಂಧುಂ ತಂ ಶೃಣ್ವತಾಂ ನಿಜಸಂಗಿನಾಂ ॥ ೧ ॥

॥ ಪುಂಡರೀಕ ಉವಾಚ ॥

ಕೇನ ಪುಣ್ಯೇನ ತೀರ್ಥೇಽಸ್ಮಿನ್ ಮೃತ್ಯುರ್ಭರತ ತೇ ಽ ಭವತ್ ।
ಯದಿ ಜಾನಾಸಿ ತದ್ಬ್ರೂಹಿ ಪಾಪಂ ವಿಖ್ಯಾತಮೇವ ತೇ ॥ ೨ ॥

॥ ಭರತ ಉವಾಚ ॥

ಪುಂಡರೀಕ ಶೃಣುಷ್ವೇದಂ ಕಥಯಾಮಿ ತವಾಗ್ರತಃ ।
ಏತತ್ತೀರ್ಥಪ್ರದಂ ಪುಣ್ಯಂ ಕೃತಂ ಯದಿಹ ಜನ್ಮನಿ ॥ ೩ ॥

---

### ಇನ್ನೂರ ಹದಿನೈದನೆಯ ಅಧ್ಯಾಯವು.



೧. ಶ್ರೀ ನಾರದನು ಹೇಳಿದನು-ಸಹೋದರನಾದ ಭರತನ ಮಾತನ್ನು ಕೇಳಿ ಪುಂಡರೀಕನು ತನ್ನವರೆಲ್ಲರೂ ಕೇಳುತ್ತಿರುವಂತೆ ಇಂತೆಂದನು.

೨. ಪುಂಡರೀಕನು ಹೇಳಿದನು-ಎಲೈ ಭರತನೇ! ನೀನು ಮಾಡಿದ ಯಾವ ಪುಣ್ಯದಿಂದ ಈ ಕ್ಷೇತ್ರದಲ್ಲಿ ನಿನಗೆ ಮರಣವು ಸಂಭವಿಸಿತು ? ಅದು ನಿನಗೆ ಗೊತ್ತಿದ್ದರೆ ಹೇಳು. ನಿನ್ನ ಪಾಪವಂತೂ ಎಲ್ಲರಿಗೂ ತಿಳಿದೇ ಇರುವುದು.

೩. ಭರತನು ಹೇಳಿದನು-ಎಲೈ ಪುಂಡರೀಕನೇ ! ಈ ತೀರ್ಥದಲ್ಲಿ ಪ್ರಾಣ ಬಿಡಲು ನಾನು ಮಾಡಿರುವ ಈ ಜನ್ಮದ ಪುಣ್ಯವನ್ನೇ ಹೇಳುತ್ತೇನೆ. ಕೇಳು.

ಏಕದಾ ತು ಧನಂ ಜಿತ್ವಾ ಸಮಾಗಚ್ಛನ್ನಿಜಂ ಗೃಹಂ ।
ಅಪಶ್ಯಂ ಮೃತಕಂ ಬಾಲಂ ಮೃತಸ್ಯಾನಾಥಮಾಪಣೇ ॥ ೪ ॥

ನಿಧಾಯ ತಮಹಂ ಮೂರ್ಧ್ನಿ ನೀತ್ವಾ ಗಂಗಾತಟೇ ಶುಭೇ ।
ವಸ್ತ್ರಾದಿಭಿರಲಂಕೃತ್ಯ ಚಕ್ರೇ ದಾಹಾದಿಸತ್ಕ್ರಿಯಾಂ ॥ ೫ ॥

ದ್ಯೂತೇನ ಯದ್ಜಿತಂ ದ್ರವ್ಯಂ ತತ್ಸರ್ವಂ ವ್ಯಯಿತಂ ಮಯಾ ।
ತೇನ ಪುಣ್ಯೇನ ಪ್ರಾಪ್ತಂ ಮೇ ತೀರ್ಥಮೇತಚ್ಛುಭಾವಹಂ ॥ ೬ ॥

॥ ಶ್ರೀ ನಾರದ ಉವಾಚ ॥

ಸಂಸ್ಕಾರೇ ವಿಹಿತೇ ರಾಜನ್ ಭರತಃ ಪಾಪವಾನಪಿ ।
ತೀರ್ಥಸ್ಯಾಸ್ಯ ಪ್ರಸಾದೇನ ಪುಷ್ಕರಸ್ಯ ಗತೋ ದಿವಂ ॥ ೭ ॥

---

೪. ನಾನು ಒಂದುಸಾರಿ ದ್ಯೂತದಲ್ಲಿ ಬಹುವಾದ ಹಣವನ್ನು ಗೆದ್ದುಕೊಂಡು ಅಂಗಡಿ ಬೀದಿಯಿಂದ ಮನೆಗೆ ಬರುತ್ತಿದ್ದೆನು. ಆಗ ಆ ಅಂಗಡಿ ಬೀದಿಯಲ್ಲಿ ಒಂದು ಮಗುವು ಸತ್ತುಹೋಗಿದ್ದಿತು. ಅದಕ್ಕೆ ಯಾರೂ ದಿಕ್ಕಿರಲಿಲ್ಲ.

೫. ಆ ಹೆಣವನ್ನು ತಲೆಯ ಮೇಲೆ ಹೊತ್ತುಕೊಂಡು ಗಂಗಾನದಿಯ ದಡಕ್ಕೆ ಹೋಗಿ ಬಟ್ಟೆ ಮುಂತಾದುವುಗಳಿಂದ ಅದನ್ನು ಅಲಂಕರಿಸಿ ಚಿತೆಯನ್ನು ಒಡ್ಡಿ ಸುಟ್ಟು ಮುಂದಿನ ಕೆಲಸಗಳನ್ನು ಮಾಡಿದೆನು.

೬. ಆಗ ಜೂಜಿನಲ್ಲಿ ಗೆದ್ದಿದ್ದ ಹಣವೆಲ್ಲವನ್ನೂ ಅದಕ್ಕೋಸ್ಕರವಾಗಿ ವಿನಿಯೋಗಿಸಿದೆನು. ಆ ಪುಣ್ಯದಿಂದ ನನಗೆ ಈ ಉತ್ತಮವಾದ ಈ ತೀರ್ಥವು ಸಿಕ್ಕಿತು. ನೀನೂ ಕೂಡ ನನ್ನ ದೇಹಕ್ಕೆ ದಾಹವೇ ಮುಂತಾದ ಸಂಸ್ಕಾರಗಳನ್ನು ಮಾಡು.

೭. ಶ್ರೀ ನಾರದನು ಹೇಳಿದನು-ಪುಂಡರೀಕನು ಆ ಭರತನ ಶವಕ್ಕೆ ಸಂಸ್ಕಾರಗಳನ್ನು ಮಾಡಲು ಅವನು ಪಾಪಿಯಾಗಿದ್ದರೂ ಈ ತೀರ್ಥದ ಅನುಗ್ರಹದಿಂದ ಸ್ವರ್ಗಕ್ಕೆ ಹೋದನು.

ಮಾಸಮೇಕಂ ಯಥಾ ವಿಷ್ಣುಃ ಪುಂಡರೀಕಗೃಹೇ ಹರಿಃ ।
ಉವಾಸಾಸ್ಯ ಪ್ರಸಾದೇನ ತೀರ್ಥಸ್ಯ ತದಪಿ ಶೃಣು ॥ ೮ ॥

ಅತ್ರ ತೀರ್ಥೇ ಸ ಧರ್ಮಾತ್ಮಾ ಭರತಸ್ಯಾಪಿ ಸದ್ಗತಿಂ ।
ದೃಷ್ಟ್ವೇತಿ ಹೃದಯೇ ಮೇನೇ ತೀರ್ಥಮೇತತ್ತು ಕಾಮದಂ ॥ ೯ ॥

ಅತ್ರೇತಿ ವಾಂಛಯಾ ಸಸ್ನೌ ಪುಂಡರೀಕಸ್ಸಪಂಡಿತಃ ।
ಮಾಘಮಾಸಂ ಸ್ವರೂಪೇಣ ಹರಿರ್ವಸತು ಮೇ ಗೃಹೇ ॥ ೧೦ ॥

ಏವಂ ಸ್ನಾತ್ವಾ ಸ ಕಾಮೇನ ಯಯೌ ನಿಜಗೃಹಂ ಪ್ರತಿ ।
ತೀರ್ಥೇಽತ್ರ ನೃಪತಿಶ್ರೇಷ್ಠ ಪುಂಡರೀಕೋಽಖಿಲಾರ್ಥದೇ ॥ ೧೧ ॥

ಬಂಧುಭ್ಯೋ ಮರಣಂ ಭ್ರಾತುರ್ಭರತಸ್ಯ ಜಗಾದ ಹ ।
ತೇಽಪಿ ಶ್ರುತ್ವಾ ಶುಚಂ ಚಕ್ರುಃ ಮಾಯಯಾವೃತಬುದ್ಧಯಃ ॥ ೧೨ ॥

---

೮. ವಿಷ್ಣುವು ಒಂದು ತಿಂಗಳವರೆಗೆ ಅವನ ಮನೆಯಲ್ಲಿ ವಾಸಮಾಡಿಕೊಂಡಿದ್ದನು. ಅದು ಈ ತೀರ್ಥದ ಪ್ರಭಾವದಿಂದಲೇ, ಅದನ್ನು ಹೇಳುತ್ತೇನೆ. ಕೇಳು.

೯. ಈ ತೀರ್ಥದಲ್ಲಿ ಭರತನಿಗೆ ಸದ್ಗತಿಯು ಬಂದುದನ್ನು ನೋಡಿ ಆ ಪುಂಡರೀಕನು ಈ ತೀರ್ಥವು ಇಷ್ಟಾರ್ಥಗಳೆಲ್ಲವನ್ನೂ ಕೊಡತಕ್ಕುದು. ಎಂದು ತಿಳಿದುಕೊಂಡನು.

೧೦. ಪಂಡಿತನಾದ ಆ ಪುಂಡರೀಕನು ಹರಿಯು ನನ್ನ ಮನೆಯಲ್ಲಿ ತನ್ನ ನಿಜರೂಪದಿಂದ ಮಾಘಮಾಸ ಪೂರ್ತಿಯಾಗಿ ಇರಬೇಕು ಎಂದು ಸಂಕಲ್ಪ ಮಾಡಿಕೊಂಡು ಈ ಪುಷ್ಕರ ತೀರ್ಥದಲ್ಲಿ ಸ್ನಾನವನ್ನು ಮಾಡಿದನು.

೧೧. ಈ ರೀತಿಯಾಗಿ ಸಂಕಲ್ಪಿಸಿ ಇಷ್ಟಾರ್ಥವನ್ನು ಪೂರ್ತಿಗೊಳಿಸುವ ಈ ಪುಷ್ಕರದಲ್ಲಿ ಸ್ನಾನಮಾಡಿ ಪುಂಡರೀಕನು ಮನೆಗೆ ಹೋದನು.

೧೨. ಅನಂತರ ಪುಂಡರೀಕನು ಬಂಧುಗಳಿಗೆ ಭರತನು ಸತ್ತುಹೋದುದನ್ನು ತಿಳಿಸಿದನು. ಅವರು ಅದನ್ನು ಕೇಳಿ ಮಾಯೆಗೊಳಗಾಗಿ ದುಃಖಿಸಿದರು.

ಪುಂಡರೀಕ ಸ್ತದಾ ಕುರ್ವ್ವ ಗೃಹೇ ಸ್ವಸ್ಮಿನ್ನಿಜಕ್ರಿಯಾಃ |
ಉವಾಸೇತಿ ಮಹಾನಂದಸ್ತುಪಸ್ಯಾಯಾಸ್ಯತೇ ಹರಿಃ || ೧೩ ||

ಪೂರ್ಣಿಮಾಯಾಮಥೋ ಪೌಷ್ಯಾಂ ಚಕ್ರೇ ಸ ಪರಮೋತ್ಸವಂ |
ಮತ್ವೇತಿ ಶ್ವೋ ಗೃಹೇ ಮಹ್ಯಂ ಹರಿರಾಯಾಸ್ಯತಿ ಧ್ರುವಂ || ೧೪ ||

ಶ್ರೀಖಂಡಜಲಸೇಕೇನ ಗೋಮಯಾಲೇಪನೇನ ಚ |
ಮುಕ್ತಾಚೂರ್ಣಚತುಷ್ಕೇಣ ಸಮಸ್ಕುರುತ ಕೇತನಂ || ೧೫ ||

ಶತದ್ವಯಂ ಬ್ರಾಹ್ಮಣಾನಾಂ ನಾನಾಭೋಜ್ಯೈರಭೋಜಯತ್ |
ಬಹ್ವೀಭಿರ್ದಕ್ಷಿಣಾಭಿಶ್ಚ ತಾನೇವ ಸಮತೋಷಯತ್ || ೧೬ ||

ನಾನಾವಾದಿತ್ರಕುಶಲೈಃ ಕಲಕಂಠೈಶ್ಚ ಗಾಯನೈಃ |
ರಜನ್ಯಾಂ ಸ್ವಜನೈರ್ಗಾಯನ್ ಚಕ್ರೇ ಜಾಗರಣಂ ತಥಾ || ೧೭ ||

---

೧೩. ಪುಂಡರೀಕನು ಮನೆಯಲ್ಲಿ ತನ್ನ ನಿತ್ಯಕರ್ಮಗಳನ್ನು ಮಾಡಿಕೊಂಡು ಮಾಘಮಾಸದಲ್ಲಿ ಹರಿಯು ಮನೆಗೆ ಬರುವನೆಂದು ತಿಳಿದು ಬಹುವಾದ ಆನಂದದಿಂದ ಇದ್ದನು

೧೪. ನಾಳೆಯ ದಿವಸ ನನ್ನ ಮನೆಗೆ ಹರಿಯು ಬರುವನೆಂದು ಪುಷ್ಯ ಶುದ್ಧ ಹುಣ್ಣಿಮೆಯ ದಿವಸ ಮನೆಯಲ್ಲಿ ದೊಡ್ಡದೊಂದು ಉತ್ಸವವನ್ನು ಮಾಡಿದನು.

೧೫-೧೬. ಮನೆಯನ್ನೆಲ್ಲಾ ಗೋವಿನ ಸಗಣಿಯಿಂದ ಸಾರಿಸಿ ಶ್ರೀ ಖಂಡವನ್ನು ತೇದು ಅದರ ನೀರಿನಿಂದ (ಗಂಧದ ನೀರಿನಿಂದ) ಮನೆಯೆಲ್ಲವೂ ಸುವಾಸನೆ ಬರುವಂತೆ ಮಾಡಿದನು. ಮುತ್ತುಗಳಿಂದಲೂ ರಂಗವಲ್ಲಿಯೇ ಮುಂತಾದ ಹಿಟ್ಟುಗಳಿಂದಲೂ ಮನೆಯನ್ನು ಅಲಂಕರಿಸಿ ಇನ್ನೂರು ಜನ ಬ್ರಾಹ್ಮ ರಿಗೆ ಊಟಕ್ಕೆ ಹೇಳಿ ಅವರಿಗೆ ಅನೇಕ ಬಗೆಯಾದ ಪದಾರ್ಥಗಳಿಂದ ಊಟ ಮಾಡಿಸಿ ಸಂತೋಷಪಡಿಸಿದನು ಅವರಿಗೇನೆ ಬಹುವಾಗಿ ದಕ್ಷಿಣೆ ಕೊಟ್ಟು ಸಂತೋಷಪಡಿಸಿದನು.

೧೭. ಅನೇಕ ಬಗೆಯಾದ ವಾದ್ಯಗಳಲ್ಲಿ ಕುಶಲರಾದವರಿಂದ ಹಾಡಿಸುತ್ತಾ ರಾತ್ರಿಯೆಲ್ಲವೂ ತನ್ನ ಜನರೊಡನೆ ಗಾನಮಾಡುತ್ತ ಜಾಗರಣೆ ಮಾಡುತ್ತ ಇದ್ದನು.

ಅಥ ಪ್ರಭಾತೇ ತಾನ್ ಸರ್ವಾನ್ ಗಾಯನಾದೀನ್ ವಿಸೃಜ್ಯ ಸಃ
ಗೋವಿಂದಾಗಮನಾಕಾಂಕ್ಷೀ ಗೃಹಮಧ್ಯ ಉಪಾವಿಶತ್ || ೧೮ ||

ಅಥ ತಸ್ಯ ಗೃಹಾಭ್ಯಾಶೇ ನಿವರ್ತ್ಯ ನಿಜವಾಹನಂ |
ಪ್ರಾವಿಶದ್ಗೃಹಮಧ್ಯೇ ತು ಕರ್ತುಂ ಸ್ವಜನವಾಂಛಿತಂ || ೧೯ ||

ಸ ಪುಂಡರೀಕಸ್ತಂ ದೃಷ್ಟ್ವಾ ಮಾಧವಂ ಸಮುಪಾಗತಂ |
ಉತ್ಥಾಯಾಸನತಸ್ತೂರ್ಣಂ ವವಂದೇ ಶಿರಸಾ ನೃಪ || ೨೦ ||

ಉವಾಚ ಚ ಸ ಧರ್ಮಾತ್ಮಾ ಗೋವಿಂದಾಲೋಕನಿರ್ವೃತಃ |
ಸಂಪೂಜ್ಯಾರ್ಘ್ಯಾದಿದಾನೇನ ವಿಷ್ಟರೇ ತಂ ನಿವೇಶಿತಂ || ೨೧ ||

|| ಪುಂಡರೀಕ ಉವಾಚ ||

ಭವತಾ ಭವತಾಪಘ್ನಂ ಸುಸ್ಪಷ್ಟಂ ತದನುಷ್ಠಿತಂ |
ತಾವದತ್ರ ತ್ವಯಾ ವಿಷ್ಣೋ ಸ್ಥೀಯತಾಂ ಸ್ಥಿತಿಕಾರಿಣಾ || ೨೨ ||

---

೧೮. ಬೆಳಗಾಗುತ್ತಲೂ ಆ ಗಾಯಕರೆಲ್ಲರನ್ನೂ ಕಳುಹಿಸಿಬಿಟ್ಟು ಗೋವಿಂದನು ಬರುವನು. ಎಂದು ನಿರೀಕ್ಷಿಸುತ್ತ ಮನೆಯ ಮಧ್ಯದಲ್ಲಿಯೇ ಕುಳಿತಿದ್ದನು.

೧೯. ಆಗ ಅವನ ಮನೆಯ ಪಕ್ಕದಲ್ಲಿಯೇ ತನ್ನ ವಾಹನವನ್ನು ಬಿಟ್ಟು ತನ್ನ ಭಕ್ತನ ಇಷ್ಟವನ್ನು ನೆರವೇರಿಸಲು ಹರಿಯು ಅವನ ಮನೆಯೊಳಕ್ಕೆ ಹೋದನು.

೨೦. ಆಗ ಮಾಧವನು ಬಂದುದನ್ನು ಪುಂಡರೀಕನು ನೋಡಿ ಪೀಠದಿಂದ ಬೇಗನೇ ಮೇಲಕ್ಕೆದ್ದು ಆ ಹರಿಗೆ ತಲೆ ಬಗ್ಗಿಸಿ ನಮಸ್ಕರಿಸಿದನು.

೨೧. ಗೋವಿಂದನನ್ನು ನೋಡಿ ತೃಪ್ತಿಗೊಂಡ ಆತನು ಅರ್ಘ್ಯಪಾದ್ಯಗಳಿಂದ ಅವನನ್ನು ಪೂಜಿಸಿ ಒಂದು ಪೀಠದಲ್ಲಿ ಕುಳ್ಳಿರಿಸಿ ಇಂತೆಂದನು.

೨೨. ಪುಂಡರೀಕನು ಹೇಳಿದನು—ಎಲೈ ಸ್ವಾಮಿಯೇ! ನೀನು ಸಂಸಾರದ ತಾಪವನ್ನು ನಾಶಮಾಡತಕ್ಕವನು. ಅದರಂತೆಯೇ ಮಾಡಿದ್ದೀಯೆ! ನಿಶ್ಚಯವು. ನಿನ್ನನ್ನು ನೋಡಿದುದರಿಂದ ನಾನು ಪವಿತ್ರನಾಗಿದ್ದೇನೆ. ಪುನೀತನಾದ ಈ ನನ್ನ ತಪಸ್ಸು ಮುಗಿಯುವವರೆಗೂ ಲೋಕಶ್ರೇಷ್ಠನಾದ ನೀನು ಇಲ್ಲಿಯೇ ಇರಬೇಕು.

ಯಾವದಸ್ಯ ಪುನೀತಸ್ಯ ಸಮಾಪ್ತಿಸ್ತಪಸೋ ಭವೇತ್ ।
ಯತ್ರ ತ್ವಂ ಸೇವಕಾಸ್ತೇ ಚ ವಸಂತಿ ಪರಿಚರ್ಯಯಾ ॥ ೨೩ ॥

ತತ್ರೈವ ಖಲು ವೈಕುಂಠಃ ಸರ್ವದೋಷವಿವರ್ಜಿತಃ ।
ಯದ್ಗೃಹೇ ತವ ಕರ್ಮಾಣಿ ವರ್ಣ್ಯಂತೇ ಸಾಧುಭಿರ್ವಿಭೋ ॥ ೨೪ ॥

ಹರಿರ್ನಿವಸತೇ ತತ್ರ ಸನ್ಮುಖಾದಿತಿ ನಶ್ಶ್ರುತಂ ।
ಯೇಷಾಂ ವಚಸಿ ತೇ ನಾಮ ಹೃದಿ ರೂಪಂ ಚ ತ ಸುಂದರಂ ॥ ೨೫ ॥

ಕರ್ಣಯೋಶ್ಚ ಗುಣಾರೋಪಸ್ತ ಏವ ಖಲು ಸಾಧವಃ ।
ಭವತೋ ಭವತಿ ಸ್ವಾಂತಂ ಯೇಷಾಂ ಶುಶ್ರೂಷಣೇ ವಿಭೋ ॥ ೨೬ ॥

ಉತ್ತಮಾಂಗೇ ಚ ನಿರ್ಮಾಲ್ಯಂ ತ ಏವ ಖಲು ಸಾಧವಃ ।
ಯೇಷಾಂ ಬುದ್ಧಿಸ್ಸಮಾ ಶತ್ರೌ ಮಿತ್ರೇ ಚ ಕಮಲಾಪತೇ ॥ ೨೭ ॥

---

೨೩. ಎಲೈ ಗೋವಿಂದನೇ ! ಯಾವ ಜಾಗದಲ್ಲಿ ನೀನೂ ನಿನ್ನ ಆಳುಗಳೂ ವಾಸಮಾಡುತ್ತೀರೋ ಆ ಜಾಗವೇ ಒಂದು ದೋಷವೂ ಇಲ್ಲದ ವೈಕಂಠವು.

೨೪. ಎಲೈ ವಿಭುವೇ ! ಯಾವ ಮನೆಯಲ್ಲಿ ಸಾಧುಗಳು ನಿನ್ನ ಕಾರ್ಯಗಳನ್ನು ವರ್ಣಿಸುತ್ತಾರೆಯೋ ಅಲ್ಲಿಯೇ ಹರಿಯು ಇರುತ್ತಾನೆ. ಎಂಬುದಾಗಿ ಸತ್ಪುರುಷರ ಬಾಯಿಂದ ಕೇಳಿದ್ದೇನೆ.

೨೫. ಯಾರು ಬಾಯಲ್ಲಿ ನಿನ್ನ ನಾಮವನ್ನೇ ಹಾಡುತ್ತ ಹೃದಯದಲ್ಲಿಯೂ ಅದನ್ನೇ ಧ್ಯಾನಿಸುತ್ತ, ಕಿವಿಗಳಲ್ಲಿಯೂ ಕೂಡ ಅದನ್ನೇ ಕೇಳುತ್ತಿರುತ್ತಾರೆಯೋ ಅವರೇ ಸಾಧುಗಳು.

೨೬. ಯಾರು ವಿಷ್ಣುನಾಮಗಳನ್ನು ಕೇಳುವುದರಲ್ಲಿ ಮನಸ್ಸು ಆಸೆಗೊಂಡು ಕೇಳುತ್ತಾರೆಯೋ ಮತ್ತು ಹರಿಭಕ್ತರನ್ನು ಸೇವಿಸುವುದರಲ್ಲಿ ಆಸೆಹೊಂದಿ ತಲೆಯಮೇಲೆ ಹರಿಯ ನಿರ್ಮಾಲ್ಯವನ್ನು ಧರಿಸಿರುವರೋ ಅವರೇ ಸಾಧುಗಳು.

೨೭. ಎಲೈ ಕಮಲಾಪತಿಯೇ ! ಯಾರು ಶತ್ರುಗಳಲ್ಲಿಯೂ ಮಿತ್ರರಲ್ಲಿಯೂ ಒಂದೇ ರೀತಿಯಾಗಿದ್ದಾರೆಯೋ ಯಾರ ಮನಸ್ಸು ಸೋಲುಗೆಲುವುಗಳಲ್ಲಿಯೂ ಒಂದೇ ರೀತಿಯಾಗಿರುತ್ತದೆಯೋ ಮತ್ತು ಯಾರು ಕ್ಷಯವೃದ್ಧಿಗಳಲ್ಲಿಯೂ ಒಂದೇ ರೀತಿಯಾಗಿರುವರೋ ಅವರೇ ಸಾಧುಗಳು.

ಜಯಾಪಚಯಯೋಶ್ಚೈವ ತ ಏವ ಖಲು ಸಾಧವಃ |
ಯೇಷಾಂ ವಿಕುರುತೇ ಚೇತೋ ನ ವಿಕಾರಸ್ಯ ಕಾರಣೇ || ೨೮ ||

ಸತಿ ಲಕ್ಷ್ಮೀಪತೇ ನೂನಂ ತ ಏವ ಭೂವಿ ಸಾಧವಃ |
ಯತ್ರ ತ್ವಂ ಸಾಧವಸ್ತತ್ರ ಸಂತೋ ಯತ್ರ ತತೋ ಭವಾನ್ |
ಅತೋ ವಿಜ್ಞಾಪಯಾಮಿ ತ್ವಾಂ ಮಾಘೇ ಮಮ ಗೃಹೇ ವಸ || ೨೯ ||

॥ ಶ್ರೀ ನಾರದ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಪುಂಡರೀಕಸ್ಯ ಮಾಧವಃ ।
ಉವಾಚ ವಚನಂ ಭಾಸಾ ದಂತಾನಾಂ ಭಾಸಯನ್ ದಿಶಃ || ೩೦ ||

॥ ಶ್ರೀ ಭಗವಾನು ವಾಚ ॥

ಸಾಧೂನಾಮುತ್ತಮಸ್ಸಾಧುಸ್ತ್ವಂ ಪೃಥಿವ್ಯಾಂ ಮಹಾಮತೇ |
ಯತ್ತ್ವಯಾ ಪುಷ್ಕರೇ ತೀರ್ಥೇ ಸ್ನಾತಂ ಮತ್ಸಂಗವಾಂಛಯಾ ॥ ೩೧ ॥

---

೨೮. ವಿಕಾರಕ್ಕೆ ಕಾರಣವಿದ್ದರೂ ಯಾರ ಮನಸ್ಸು ವಿಕಾರವನ್ನು ಹೊಂದುವುದಿಲ್ಲವೊ ಅವರೇನೇ ಭೂಮಿಯಲ್ಲಿ ಸಾಧುಗಳೆನಿಸಿಕೊಳ್ಳುತ್ತಾರೆ.

೨೯. ಸಾಧುಗಳು ಎಲ್ಲಿರುವರೋ ಅಲ್ಲಿ ನೀನಿರುತ್ತೀಯೆ. ಸತ್ಪುರುಷರು ಇರುವಲ್ಲಿ ಎಲ್ಲಾ ಕಡೆಯಲ್ಲಿಯೂ ನೀನಿದ್ದೀಯೆ. ಆದ್ದರಿಂದ ಮಾಘಮಾಸದಲ್ಲಿ ನನ್ನ ಮನೆಯಲ್ಲಿ ವಾಸಮಾಡು. ಎಂದು ಕೇಳಿಕೊಳ್ಳುತ್ತೇನೆ.

೩೦. ಶ್ರೀ ನಾರದನು ಹೇಳಿದನು-ಮಾಧವನು ಆ ಪುಂಡರೀಕನ ಈ ಮಾತನ್ನು ಕೇಳಿ ಹಲ್ಲಿನ ಕಾಂತಿಯಿಂದ ದಿಕ್ಕುಗಳನ್ನು ಬೆಳಕು ಮಾಡುತ್ತ ಇಂತೆಂದು ಹೇಳಿದನು.

೩೧ ಶ್ರೀ ಭಗವಂತನು ಹೇಳಿದನು-ಎಲೈ ಪುಂಡರೀಕನೆ ! ನೀನು ಸಾಧುಗಳೊಳಗೆಲ್ಲಾ ಉತ್ತಮವಾದ ಸಾಧುವು. ನೀನು ಪುಷ್ಕರ ತೀರ್ಥದಲ್ಲಿ ನನ್ನ ಸಹವಾಸವನ್ನು ಅಪೇಕ್ಷಿಸಿ ಸ್ನಾನಮಾಡಿದೆ.

ಉತ್ತಿಷ್ಠ ಜಾಹ್ನವೀತೋಯೇ ಮಾಘಸ್ನಾನಂ ಕುರು ದ್ವಿಜ ।
ಮಾಘಾಂತೇ ಸ್ನಾಪಯಾಮಿ ತ್ವಾ ಪೂರ್ಣಿಮಾಯಾಂ ತು ಪುಷ್ಕರೇ॥೩೨॥

ಪ್ರಯಾಗೇ ಮಾಘಮಾಸೇ ತು ಪೂರ್ಣಂ ಯತ್ ಸ್ನಾನಜಂ ಫಲಂ।
ತತ್ಸರ್ವಂ ಪುಷ್ಕರೇ ತೀರ್ಥೇ ದಿನೈಕಸ್ನಾನತೋ ಭವೇತ್ ॥ ೩೩ ॥

॥ ಶ್ರೀ ನಾರದ ಉವಾಚ ॥

ಏವಮುಕ್ತಸ್ಸ ವಿಪ್ರೇಂದ್ರಃ ಪುಂಡರೀಕೋ ಮುರಾರಿಣಾ ।
ಕಿಂಚಿದಭ್ಯುದಿತೇ ಸೂರ್ಯೇ ಸ್ನಾನಂ ಗಂಗಾಜಲೇಕರೋತ್ ॥ ೩೪ ॥

ಪ್ರತ್ಯಕ್ಷಂ ಪುಂಡರೀಕಾಕ್ಷಂ ಪುಂಡರೀಕಸ್ಸಮಾರ್ಚಯತ್ ।
ತುಲಸೀವಿಕಸತ್ಪುಷ್ಪಯವಕುಂಕುಮಚಂದನೈಃ ॥ ೩೫ ॥

ಧೂಪೈರಗರುಜೈರಂಗವಾಸಿತಾಂಗಂ ರಮಾಪತಿಂ ।
ನೀರಾಜಯತಿ ಕರ್ಪೂರದೀಪಕೈಃ ಪಂಚಭಿಸ್ಸ ಸಃ ॥ ೩೬ ॥

---

೩೨. ಎಲೈ ಬ್ರಾಹ್ಮಣನೇ! ಏಳು. ಗಂಗಾನದಿಯಲ್ಲಿ ಸ್ನಾನವನ್ನು ಮಾಡು. ಮಾಘದ ಕೊನೆಯ ಪೂರ್ಣಿಮೆಯಲ್ಲಿ ನಿನಗೆ ಪುಷ್ಕರದಲ್ಲಿ ಸ್ನಾನವನ್ನು ಮಾಡಿ ಸುತ್ತೇನೆ.

೩೩. ಪ್ರಯಾಗದಲ್ಲಿ ಮಾಘಮಾಸದಲ್ಲಿ ಸ್ನಾನಮಾಡುವ ಪೂರ್ಣಫಲ ವನ್ನು ಪುಷ್ಕರದಲ್ಲಿ ಒಂದು ದಿನದಲ್ಲಿ ಸ್ನಾನಮಾಡುವುದರಿಂದ ಹೊಂದಬಹುದು.

೩೪. ಶ್ರೀನಾರದನು ಹೇಳಿದನು-ಶ್ರೀವಿಷ್ಣುವು ಇಂತೆಂದು ಹೇಳುತ್ತಲೂ ಆ ಪುಂಡರೀಕನು ಸೂರ್ಯನು ಅರ್ಧೋದಯವಾಗಲು ಗಂಗೆಯಲ್ಲಿ ಸ್ನಾನವನ್ನು ಮಾಡಿದನು.

೩೫. ಪುಂಡರೀಕನು ವಿಷ್ಣುವನ್ನು ಪ್ರತ್ಯಕ್ಷವಾಗಿಯೇ ತುಲಸಿಯೇ ಮುಂತಾದ ಅರಳಿದ ಹೂಗಳಿಂದಲೂ ಯವ ಕುಂಕುಮಕೇಸರೀ ಚಂದನ ಗಳಿಂದಲೂ ಪೂಜಿಸಿದನು.

೩೬. ಧೂಪ ಅಗಿಲು ಮುಂತಾದ ವಾಸನಾ ದ್ರವ್ಯಗಳಿಂದಲೂ ಅವನ ಮೈಯನ್ನು ಸುವಾಸನೆ ಬರುವಂತೆ ಮಾಡಿ ಕರ್ಪೂರ ದೀಪವೇ ಮುಂತಾದ ಐದು ಬಗೆಯ ಆರತಿಗಳಿಂದಲೂ ಆ ಪುಂಡರೀಕನು ಪೂಜಿಸಿ ಆರತಿಯನ್ನು ಬೆಳಗಿದನು.

ಚತುರ್ವಿಧಮಯೈರ್ಭೋಜ್ಯೈರ್ಭೋಜಯಿತ್ವಾ ಜಗದ್ಗುರುಂ ।
ಸುಪ್ತಂ ಸ ಮಣಿಪರ್ಯಂಕೇ ಚಾಮರೈಸ್ತಮವೀಜಯತ್ ॥ ೩೭ ॥

ಪಾದಸಂವಾಹನಂ ಜಾತು ಚಕ್ರೇ ತಸ್ಯ ರಮಾಪತೇಃ ।
ಜಾತು ಕರ್ಪೂರರಸಂಯುಕ್ತಂ ದದೌ ತಾಂಬೂಲವೀಟಿಕಾಂ ॥ ೩೮ ॥

ಉಷ್ಣೀಷಂ ಬದ್ಧತಸ್ತಸ್ಯ ಶ್ರೀಪತೇಃ ಪುರತಸ್ತದಾ ।
ತಸ್ಥೌ ಜಾತು ಸ ವಿಪ್ರೇಂದ್ರಃ ಕರೇಣಾನೀಯ ದರ್ಪಣಂ ॥ ೩೯ ॥

ಏವಂ ನಿಜಗೃಹೇ ತಸ್ಯ ವಸತಸ್ಸ ಭವಚ್ಛಿದಃ ।
ಸಪರ್ಯಾಂ ವಿಧಿವದ್ವಿಪ್ರೋ ಮಾಘಂ ನಿನ್ಯೇ ಸಮಸ್ತಕಂ ॥ ೪೦ ॥

---

೩೭. ಭೋಜ್ಯ ಲೇಹ್ಯ ಚೋಷ್ಯ ಪೇಯಗಳೆಂಬ ನಾಲ್ಕು ಬಗೆಯಾದ ಭೋಜನಗಳಿಂದ ಆ ಸ್ವಾಮಿಯನ್ನು ಊಟಮಾಡಿಸಿ ಚಿನ್ನದ ಮಂಚದ ಮೇಲೆ ಮಲಗಿಸಿ ಚಾಮರಗಳಿಂದ ಬೀಸಿದನು. (ಭೋಜ್ಯ= ಚಿತ್ರಾನ್ನ, ಕೇಸರೀಭಾತು ಮುಂತಾದುವು. ಲೇಹ್ಯ= ನಂಜಿಕೊಳ್ಳುವ ಲೇಹ್ಯದ ತರಹ ಚಟ್ನಿ ಮುಂತಾದುವು. ಚೋಷ್ಯ= ಸೊರೆದು ನೆಕ್ಕಿಕೊಳ್ಳುವ ಗೊಜ್ಜು ಮಜ್ಜಿಗೆಹುಳಿ ಮುಂತಾದುವು. ಪೇಯ= ಉತ್ತಮವಾದ ಹಾಲು ಪಾಯಸ ಪಾನಕ ಮುಂತಾದುವುಗಳು)

೩೮. ಒಂದೊಂದು ಸಾರಿ ಆ ರಮಾಪತಿಯ ಕಾಲುಗಳನ್ನು ಒತ್ತುತ್ತಿರುವನು. ಒಂದೊಂದು ಸಾರಿ ಕರ್ಪೂರದಿಂದ ಕೂಡಿಕೊಂಡಿರುವ ತಾಂಬೂಲವನ್ನು ಕೊಡುತ್ತಿರುವನು.

೩೯. ಒಂದುಸಾರಿ ಆ ರಮಾಪತಿಯು ತಲೆಗೆ ರುಮಾಲನ್ನು ಕಟ್ಟುತ್ತಾ ನಿಂತುಕೊಂಡಿರಲು ಪುಂಡರೀಕನು ಕೈಯ್ಯಿಂದ ಕನ್ನಡಿಯನ್ನು ಹಿಡಿದು ತೋರಿಸುತ್ತಿದ್ದನು.

೪೦. ಈ ರೀತಿಯಾಗಿ ತನ್ನ ಮನೆಯಲ್ಲಿ ವಾಸಿಸುತ್ತಿರುವ ಆ ಸಂಸಾರ ತಾರಕನಾದ ಸ್ವಾಮಿಗೆ ಆ ಮನುಷ್ಯನು ವಿಧಿಪೂರ್ವಕವಾಗಿ ಸೇವೆಮಾಡುತ್ತಾ ಮಾಘಮಾಸವನ್ನೆಲ್ಲಾ ಕಳೆದನು.

ಅಥ ಮಾಘಾವಸಾನೇ ಂ ಪೂರ್ಣಿಮಾಯಾಂ ರಮಾಪತೇಃ ।
ಸ್ಮೃತಿಮಾತ್ರಾಗತಂ ತಾರ್ಕ್ಷ್ಯಮಪಶ್ಯತ್ಪುರತಃ ಸ್ಥಿತಂ ।
ತಂ ದೃಷ್ಟ್ವಾ ಪುಂಡರೀಕಾಕ್ಷಃ ಪುಂಡರೀಕಮುವಾಚ ಹ ॥ ೪೧ ॥

॥ ಶ್ರೀ ಭಗವಾನುವಾಚ ॥

ಶ್ರೂಯತಾಂ ಭೋ ದ್ವಿಜಶ್ರೇಷ್ಠ ಯದ್ವಚೋಽಹಂ ವದಾಮಿ ತೇ ।
ಇಂದ್ರಪ್ರಸ್ಥಗತೇ ತೀರ್ಥೇ ಪುಷ್ಕರೇ ತೇ ಯದೃಚ್ಛಯಾ ॥ ೪೨ ॥

ಸ್ನಾನಾತ್ತತ್ತೇ ಮಯಾ ದತ್ತಂ ಯನ್ಮಾಸಮುಷಿತಂ ಮಯಾ ।
ಅದ್ಯ ಪಕ್ಷೀಂದ್ರಮಾರುಹ್ಯ ಮಯಾ ಸಹ ಮಹಾಮತೇ ॥ ೪೩ ॥

ವ್ರಜ ತೀರ್ಥಶಿರೋರತ್ನಂ ತದೇವ ಪ್ರತಿ ಪುಷ್ಕರೇ ।
ಚತುರ್ವರ್ಗಪ್ರದೇ ತಸ್ಮಿನ್ ಸ್ನಾನಂ ಕುರ್ವನ್ಯದಿಚ್ಛಸಿ ॥ ೪೪ ॥

ಪಾಪೋಽಪಿ ಭರತಸ್ತೇ ವೈ ಭ್ರಾತಾ ಯತ್ರ ಮೃತೋ ಗತಃ ।
ಸ್ವರ್ಗಂ ಸ್ವರ್ಗಸುಖಾಕಾಂಕ್ಷೀ ಕಿಮನ್ಯತ್ತಸ್ಯ ವರ್ಣ್ಯತೇ ॥ ೪೫ ॥

---

೪೧. ಅನಂತರ ಮಾಘಮಾಸದ ಕೊನೆಯ ಪೂರ್ಣಿಮೆಯ ದಿನದಲ್ಲಿ ಸ್ವಾಮಿಯು ಸ್ಮರಿಸಿಕೊಂಡ ಒಡನೆಯೇ ಗರುಡನು ಎದುರಿಗೆ ಬಂದು ನಿಂತುಕೊಂಡನು. ಹೀಗೆ ಗರುಡನು ಬರಲು ವಿಷ್ಣುವು ಅವನನ್ನು ನೋಡಿ ಪುಂಡರೀಕನನ್ನು ಕುರಿತು ಇಂತೆಂದನು.

೪೨-೪೫. ಶ್ರೀ ಭಗವಂತನು ಹೇಳಿದನು-ಎಲೈ ಪುಂಡರೀಕನೇ ! ಕೇಳು. ಇಂದ್ರಪ್ರಸ್ಥದಲ್ಲಿರುವ ಪುಷ್ಕರತೀರ್ಥದಲ್ಲಿ ಸ್ನಾನಮಾಡಿದೆ. ಆಗ ಒಂದು ತಿಂಗಳು ನಿನ್ನ ಮನೆಯಲ್ಲಿ ವಾಸವಾಗಿರುವಿಕೆಯನ್ನು ಕೊಟ್ಟೆನು. ಈಗ ಈ ಗರುಡನನ್ನು ಹತ್ತಿಕೊಂಡು ನನ್ನೊಡನೆ ಬಾ. ಆ ಉತ್ತಮತೀರ್ಥವಾದ ಪುಷ್ಕರದಲ್ಲಿ ಸ್ನಾನಮಾಡು. ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಕೊಡುವ ಆ ತೀರ್ಥದಲ್ಲಿ ನೀನು ಸ್ನಾನಮಾಡು. ನೀನು ಯಾವುಯಾವುದನ್ನು ಅಪೇಕ್ಷಿಸುತ್ತೀಯೋ ಅವೆಲ್ಲವನ್ನೂ ನಾನು ನಿನಗೆ ಕೊಡುತ್ತೇನೆ. ಏತಕ್ಕೆಂದರೆ ನಾನೇ ನಿನ್ನ ಅಧೀನನಾಗಿದ್ದೇನೆ. ಪಾಪಿಯಾದ ಆ ನಿನ್ನ ತಮ್ಮ ಭರತನೂ ಕೂಡ ಅಲ್ಲಿ ಸತ್ತು ಸ್ವರ್ಗಸುಖವನ್ನು ಅಪೇಕ್ಷಿಸಿ ಸ್ವರ್ಗಕ್ಕೆ ಹೋದನು. ಎಂದ ಮೇಲೆ ಅದರ ವಿಷಯವನ್ನು ವರ್ಣಿಸುವುದೇನಿದೆ ?

|| ಶ್ರೀ ನಾರದ ಉವಾಚ ||

ಏವಮುಕ್ತ್ವಾ ಸ ದೇವೇಂದ್ರೋ ಬ್ರಾಹ್ಮಣೇಂದ್ರಂ ನರೇಂದ್ರ ತಂ ।
ಪತಗೇಂದ್ರಂ ಸಮಾರೋಪ್ಯ ಸರ್ವತೀರ್ಥೇಂದ್ರಮಾಗಮತ್ || ೪೬ ||

ಪುಂಡರೀಕಸ್ಯ ದೇಹಾತ್ತು ತೇನ ತತ್ಪ್ರಾಣವಾಯುನಾ ।
ಸಮಂ ಜ್ಯೋತಿಸ್ಸುನಿರ್ಗತ್ಯ ಗೋವಿಂದಪದಮಾವಿಶತ್ || ೪೭ ||

ಏವಂ ಪುಷ್ಕರತೀರ್ಥೇಽಸ್ಮಿನ್ನಿಂದ್ರಪ್ರಸ್ಥಗತೇ ನೃಪ ।
ಸ್ನಾನೇನ ಪುಂಡರೀಕಸ್ತು ಲೇಭೇ ಸಾಯುಜ್ಯಮೀಶ್ವರೇ || ೪೮ ||

ಏವಂ ತೀರ್ಥಾನುರೋಧೇನ ಗೋವಿಂದೋಽಪಿ ಚ ತದ್ಗೃಹೇ ।
ಮಾಸಮೇಕಂ ತದಾ ರಾಜನ್ನುವಾಸ ನಿಜಬಂಧುವತ್ || ೪೯ ||

ಕೇನ ವರ್ಣಯಿತುಂ ಶಕ್ಯೋ ಮಹಿಮಾ ಪುಷ್ಕರಸ್ಯ ವೈ ।
ಶಕ್ರಪ್ರಸ್ಥಗತಸ್ಯಾಸ್ಯ ಕೋಟ್ಯಂಶೋ ವರ್ಣಿತೋ ಮಯಾ || ೫೦ ||

---

೪೬. ಶ್ರೀ ನಾರದನು ಹೇಳಿದನು-ದೇವೇಂದ್ರನಾದ ಆ ವಿಷ್ಣುವು ಬ್ರಾಹ್ಮಣೋತ್ತಮನಾದ ಆ ಪುಂಡರೀಕನನ್ನು ಪಕ್ಷೀಂದ್ರನಾದ ಗರುಡನಮೇಲೆ ಕುಳ್ಳಿರಿಸಿಕೊಂಡು ತೀರ್ಥೇಂದ್ರನಾದ ಆ ಪುಷ್ಕರಕ್ಕೆ ಕರೆದುಕೊಂಡು ಹೋದನು.

೪೭. ಅಲ್ಲಿ ಹೋಗಿ ಸ್ನಾನಮಾಡಲು ಪುಂಡರೀಕನ ದೇಹದಿಂದ ಪ್ರಾಣವಾಯುವು ಹೊರಟಿತು. ಅದರ ಜೊತೆಯಲ್ಲಿ ಒಂದು ಉತ್ತಮವಾದ ದಿವ್ಯ ತೇಜಸ್ಸು ಹೊರಹೊರಟು ಗೋವಿಂದನ ಪಾದಕಮಲವನ್ನು ಸೇರಿತು.

೪೮. ಈ ರೀತಿಯಾಗಿ ಇಂದ್ರಪ್ರಸ್ಥದಲ್ಲಿರುವ ಪುಷ್ಕರದ ಸ್ನಾನದಿಂದ ಪುಂಡರೀಕನು ಆ ಸ್ವಾಮಿಯ ಸಾಯುಜ್ಯವನ್ನು ಹೊಂದಿದನು.

೪೯. ಈ ರೀತಿಯಾಗಿ ಆ ತೀರ್ಥದ ಮಹಿಮೆಗೆ ಒಳಪಟ್ಟು ಗೋವಿಂದನೂ ಕೂಡ ಆ ಪುಂಡರೀಕನ ಮನೆಯಲ್ಲಿ ಒಂದು ತಿಂಗಳಕಾಲ ಅವನ ಬಂಧುವಿನಂತೆ ವಾಸವಾಗಿದ್ದನು.

೫೦. ಈ ರೀತಿಯಾದ ಪುಷ್ಕರದ ಮಹಿಮೆಯನ್ನು ಯಾರಿಂದ ತಾನೇ ವರ್ಣಿಸಲು ಸಾಧ್ಯವಾದೀತು ? ಆದರೂ ನಾನು ವರ್ಣಿಸಿರುವುದು ಕೋಟಿಯ ಪಾಲಿನ ಮಹಿಮೆಯಲ್ಲಿ ಒಂದುಪಾಲು ಅಷ್ಟೆ. !

**ಮಾಹಾತ್ಮ್ಯಶ್ರವಣಾದಸ್ಯ ಶ್ರದ್ಧಯಾ ಲಭತೇ ನರಃ ।**
**ಅಶ್ವಮೇಧಕ್ರತುಫಲಂ ಪಠನಾದಪಿ ಭೂಪತೇ ॥ ೫೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಪುಷ್ಕರ ಮಾಹಾತ್ಮ್ಯ ಕಥನಂ ನಾಮ ಪಂಚದಶಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೫೧. ಈ ಪುಷ್ಕರದ ಮಹಿಮೆಯನ್ನು ಶ್ರದ್ಧೆಯಿಂದ ಮನುಷ್ಯನು ಕೇಳಿದರೂ ಓದಿದರೂ ಅಶ್ವಮೇಧ ಯಾಗದ ಫಲವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಪುಷ್ಕರ ಮಹಿಮೆಯ ಕಥನ ಎಂಬ ಇನ್ನೂರ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷೋಡಶಾಧಿಕದ್ವಿಶತತಮೋऽಧ್ಯಾಯಃ ॥



॥ ಶ್ರೀ ನಾರದ ಉವಾಚ ॥

**ಶಿಬೇಸ್ಯ ತೀರ್ಥರಾಜಸ್ಯ ಪ್ರಯಾಗಸ್ಯ ತವಾಗ್ರತಃ ।**
**ಮಹಿಮಾನಂ ಮಹಾಪುಣ್ಯಂ ಶ್ರದ್ಧಯಾ ವರ್ಣಯಾಮಿ ತೇ ॥ ೧ ॥**

**ವಿಶ್ವಾವಸುರ್ಮಹೀಪಾಲ ಗಂಧರ್ವೋ ಲೋಕವಿಶ್ರುತಃ ।**
**ಏತದಾ ಸ ಗತೋ ಗಾತುಂ ಸುಮೇರೌ ಬ್ರಹ್ಮಣಸ್ಸಭಾಂ ॥ ೨ ॥**

**ತತ್ರ ಸರ್ವೈಸ್ಸುರಶ್ರೇಷ್ಠಮುಪವಿಷ್ಟಂ ಸುವಿಷ್ಟರೇ ।**
**ಜುಷ್ಟಂ ಸುರಗಣೈರ್ಭೂಪ ವಿಶ್ವಾವಸುರವೈಕ್ಷತ ॥ ೩ ॥**

---

## ಇನ್ನೂರ ಹದಿನಾರನೆಯ ಅಧ್ಯಾಯವು



೧. ಶ್ರೀ ನಾರದನು ಹೇಳಿದನು–ಎಲೈ ಶಿಬಿಯೇ ! ತೀರ್ಥರಾಜನಾದ ಪ್ರಯಾಗದ ಮಹಿಮೆಯನ್ನು ಹೇಳುತ್ತೇನೆ. ಅದು ಮಹಾಪುಣ್ಯವಾದುದು. ಶ್ರದ್ಧೆಯಿಂದ ಹೇಳುತ್ತೇನೆ.

೨. ಎಲೈ ದೊರೆಯೇ ! ವಿಶ್ವಾವಸುವೆಂಬ ಗಂಧರ್ವನು ಲೋಕಪ್ರಸಿದ್ಧನಾಗಿರುವನು. ಒಂದುಸಾರಿ ಅವನು ಗಾನಮಾಡಲು ಬ್ರಹ್ಮನ ಸಭೆಗೆ ಹೋದನು.

೩. ಆ ಬ್ರಹ್ಮನ ಸಭೆಯಲ್ಲಿ ಒಳ್ಳೆ ಆಸನದಲ್ಲಿ ಕುಳಿತು ದೇವಗಣಗಳಿಂದ ಸೇವಿಸಲ್ಪಡುತ್ತಿರುವನಾದ ಬ್ರಹ್ಮನನ್ನೂ ನೋಡಿದನು.

ಬ್ರಹ್ಮಾಸನಸಮೀಪೇ ತು ವರಾಸನಗತಂ ನೃಪ |
ದ್ವಿತೀಯ ಮಿವ ಲೋಕೇಶಮಿಂದ್ರಪ್ರಸ್ಥಂ ಸ ಐಕ್ಷತ ॥ ೪ ॥

ಸುರರಾಜತೀರ್ಥರಾಜೌ ಬ್ರಹ್ಮೇಂದ್ರಪ್ರಸ್ಥಯೋರ್ನೃಪ ।
ಚಾಮರೋದ್ಧೂನನಂ ಮೂರ್ಧ್ನಿ ಕುರ್ವನ್ತೌ ಸ ದದರ್ಶ ಹ ॥ ೫ ॥

ಅನ್ಯಾನಿ ದೇವತೀರ್ಥಾನಿ ತಯೋರ್ದೂರೇ ಮಹೀಪತೇ |
ಸ್ಥಿತಾನಿ ತೇನ ದೃಷ್ಟಾನಿ ಬದ್ಧಾಂಜಲಿಪುಟಾನಿ ತು ॥ ೬ ॥

ತಯೋರಗ್ರೇ ಜಗೌ ರಾಜನ್ ಗಾಂಧರ್ವಂ ರಾಗಮುತ್ತಮಂ |
ತೀರ್ಥೈಸ್ಸಮಮಗಾತ್ಸತ್ಯಲೋಕಂ ದೇವಾನ್ವಿಸೃಜ್ಯ ಹಿ ॥ ೭ ॥

ಅಥ ವಿಶ್ವಾವಸುರ್ಧೀಮಾನ್ ದೃಷ್ಟ್ವಾ ತೀರ್ಥಸ್ಯ ವೈಭವಂ |
ಇಂದ್ರಪ್ರಸ್ಥಸ್ಯ ರಾಜೇಂದ್ರ ಹಾಹಾಮೇತದುವಾಚ ಹ ॥ ೮ ॥

---

೪. ಬ್ರಹ್ಮನ ಆಸನದ ಹತ್ತಿರ ಒಂದು ಶ್ರೇಷ್ಠವಾದ ಆಸನದಲ್ಲಿ ಇಂದ್ರಪ್ರಸ್ಥನು ಕುಳಿತಿದ್ದನು. ಎರಡನೆಯ ಇಂದ್ರನಂತೆ ಕುಳಿತಿರುವ ಇಂದ್ರಪ್ರಸ್ಥನನ್ನು ಆ ವಿಶ್ವಾವಸುವು ನೋಡಿದನು.

೫. ಆ ಸಭೆಯಲ್ಲಿ ದೇವರಾಜನು ಬ್ರಹ್ಮನ ತಲೆಯ ಮೇಲೂ ತೀರ್ಥರಾಜನು ಇಂದ್ರಪ್ರಸ್ಥನ ತಲೆಯ ಮೇಲೂ ಚಾಮರವನ್ನು ಬೀಸುತ್ತಿದ್ದುದನ್ನೂ ನೋಡಿದನು.

೬. ಉಳಿದ ದೇವತೆಗಳೂ ತೀರ್ಥಗಳೂ ಅವರಿಗಿಂತಲೂ ದೂರದಲ್ಲಿ ನಿಂತು ಕೈ ಕಟ್ಟಿಕೊಂಡಿರುವುದನ್ನು ಆ ವಿಶ್ವಾವಸುವು ನೋಡಿದನು.

೭. ಆಗ ಅವರಿಬ್ಬರ ಎದುರಿನಲ್ಲಿಯೂ ಆ ವಿಶ್ವಾವಸುವು ಉತ್ತಮವಾದ ಸಂಗೀತದ ರಾಗವನ್ನು ಹಾಡಿದನು. ಅನಂತರ ದೇವತೆಗಳನ್ನು ಬಿಟ್ಟು ತೀರ್ಥಗಳ ಸಂಗಡ ಆ ಬ್ರಹ್ಮನು ಸತ್ಯಲೋಕಕ್ಕೆ ಹೋದನು.

೮. ಆಗ ವಿಶ್ವಾವಸುವು ಇಂದ್ರಪ್ರಸ್ಥ ತೀರ್ಥದ ವೈಭವವನ್ನು ನೋಡಿ ಹಾಹಾ ಎಂಬ ಗಂಧರ್ವನನ್ನು ಕುರಿತು ಇಂತೆಂದು ಹೇಳಿದನು.

॥ ವಿಶ್ವಾವಸುರುವಾಚ ॥

ಭೋ ಭೋ ಗಂಧರ್ವಶಾರ್ದೂಲ ತೀರ್ಥಮೇತನ್ಮಹಾದ್ಭುತಂ ।
ಇಂದ್ರಪ್ರಸ್ಥಾಖ್ಯಮೇತಸ್ಮಿನ್ ಸಂಸಾರೇ ತೀರ್ಥರಾಶಿಷು ॥ ೯ ॥

ಚರಾಚರಗುರುರ್ಬ್ರಹ್ಮಾ ಸುರವಂದ್ಯಪದಾಂಬುಜಃ ।
ತಸ್ಯಾಸನಸಮೀಪಸ್ಥಂ ಯದತಿಷ್ಠತ್ಸಮಾಸನಂ ॥ ೧೦ ॥

ತೀರ್ಥರಾಜೋಽಪಿ ಪೃಷ್ಠಸ್ಥ ಶ್ಚಾಮರಂ ಯಸ್ಯ ಮಸ್ತಕೇ ।
ಅಧುನೋದ್ಧೃತ್ಯವತ್ತತ್ರ ತೀರ್ಥೇಷ್ವನ್ಯೇಷು ಕಾ ಕಥಾ ॥ ೧೧ ॥

ಪೃಥಿವ್ಯಾಂ ಯಾನಿ ತೀರ್ಥಾನಿ ತ್ರಿವರ್ಗಫಲದಾನಿ ಚ ।
ಇಂದ್ರಪ್ರಸ್ಥಮಿದಂ ತೀರ್ಥಂ ಚತುರ್ವರ್ಗಫಲಪ್ರದಂ ॥ ೧೨ ॥

ಅತ್ರ ಸ್ಥಿತಾನಿ ತೀರ್ಥಾನೀ ತಾದೃಶಾನಿ ಗುಣೈರ್ಧ್ರುವೈಃ ।
ಶೇಷೇಣಾಪಿ ನ ಶಕ್ಯಂತೇ ಸ್ತೋತುಂ ತೇಷಾಂ ಮಹಾಗುಣಾನ್ ॥ ೧೩ ॥

---

೯. ವಿಶ್ವಾವಸುವು ಹೇಳಿದನು-ಎಲೈ ಗಂಧರ್ವ ಶ್ರೇಷ್ಠನೇ ! ಈ ಇಂದ್ರಪ್ರಸ್ಥವೆಂಬ ತೀರ್ಥವು ಬಹು ಅದ್ಭುತವಾದುದು. ಈ ಪ್ರಪಂಚದಲ್ಲಿರುವ ತೀರ್ಥರಾಶಿಗಳಲ್ಲೆಲ್ಲಾ ಇದು ಬಹಳ ಉತ್ತಮವಾದುದು

೧೦. ಚರಾಚರ ಗುರುವೂ ದೇವತೆಗಳಿಂದ ವಂದ್ಯವಾದ ಪಾದಗಳು ಉಳ್ಳವನೂ ಆದ ಬ್ರಹ್ಮನು ಆ ತೀರ್ಥದ ಆಸನದ ಪಕ್ಕದಲ್ಲಿಯೇ ಆಸನವನ್ನು ಹಾಕಿಕೊಂಡು ಕುಳಿತಿದ್ದನು.

೧೧. ತೀರ್ಥರಾಜನೂ ಕೂಡ ಹಿಂದುಗಡೆಯಲ್ಲಿ ನಿಂತುಕೊಂಡು ಆ ಇಂದ್ರಪ್ರಸ್ಥತೀರ್ಥದ ತಲೆಯಮೇಲೆ ಚಾಮರವನ್ನು ಬೀಸುತ್ತಿದ್ದನು. ಎಂದ ಮೇಲೆ ಮಿಕ್ಕ ತೀರ್ಥಗಳ ವಿಷಯವನ್ನು ಹೇಳತಕ್ಕದ್ದೇನಿದೆ !

೧೨. ಭೂಮಿಯಲ್ಲಿರುವ ಎಲ್ಲಾ ತೀರ್ಥಗಳೂ ಧರ್ಮ ಅರ್ಥ ಕಾಮಗಳನ್ನು ಕೊಡುತ್ತವೆ. ಈ ಇಂದ್ರಪ್ರಸ್ಥವಾದರೋ ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಕೊಡುತ್ತದೆ.

೧೩. ಈ ಇಂದ್ರಪ್ರಸ್ಥದಲ್ಲಿರುವ ತೀರ್ಥಗಳು ಅವುಗಳ ಉತ್ಕೃಷ್ಟವಾದ ಗುಣಗಳಿಂದ ಪ್ರಸಿದ್ಧವಾಗಿವೆ ಅವುಗಳ ಗುಣಗಳನ್ನು ಶೇಷನೂ ಕೂಡ ವರ್ಣಿಸಲಾರನು.

॥ ನಾರದ ಉವಾಚ ॥

ಏವಂ ವಿಶ್ವಾವಸುರ್ಧೀಮಾನ್ ದೃಷ್ಟ್ವೇಂದ್ರಪ್ರಸ್ಥವೈಭವಂ ।
ಗತ್ವಾ ತಸ್ಯ ಗೃಹಂ ರಾಜನ್ ಪಾವನಂ ಸರ್ವಕಾಮದಂ ॥ ೧೪ ॥

ಯಥಾ ದೇವೇಷು ಸರ್ವೇಷು ಶಕ್ರಃಶ್ರೇಷ್ಠಶ್ಶಚೀಪತಿಃ ।
ತಸ್ಮಾದ್ಬ್ರಹ್ಮಾ ಚ ತೀರ್ಥೇಷು ಪ್ರಯಾಗೋಽಯಂ ತಥಾ ವರಃ ॥ ೧೫ ॥

ತಸ್ಮಾದಪಿ ಮಹಾರಾಜ ಶಕ್ರಪ್ರಸ್ಥಮಿದಂ ವರಂ ।
ಅಸ್ಯಾಂತರಗತೋ ಯೋಽಯಂ ಪ್ರಯಾಗೋ ನೃಪ ದೃಶ್ಯತೇ ॥ ೧೬ ॥

ಕಥಯಾಮ್ಯತ್ರ ಯದ್ವೃತ್ತಂ ಮೋಹಿನ್ಯಾಃ ಪಣ್ಯಯೋಷಿತಃ ।
ನರ್ಮದಾಸರಿತಸ್ತೀರೇ ಪುರೀ ಮಾಹಿಷ್ಮತೀ ನೃಪ ॥ ೧೭ ॥

ಮೋಹಿನೀ ನಾಮ ತತ್ರಾಸೀದ್ವೇಶ್ಯಾ ಬಹುಧನಾನ್ವಿತಾ ।
ರೂಪಯೌವನಸಂಪನ್ನಾ ನಿಷ್ಣಾತಾ ನೃತ್ಯಗೀತಯೋಃ ॥ ೧೮ ॥

---

೧೪. ನಾರದನು ಹೇಳಿದನು—ಎಲೈ ರಾಜನೇ ! ಬುದ್ಧಿವಂತನಾದ ವಿಶ್ವಾವಸುವು ಇಂದ್ರಪ್ರಸ್ಥದ ಈ ರೀತಿಯಾದ ವೈಭವವನ್ನು ನೋಡಿದನು. ಆ ಬ್ರಹ್ಮನ ಬಳಿಯಲ್ಲಿಯೂ ಕೂಡ ಪಾವನವೂ ಸರ್ವ ಇಷ್ಟಗಳನ್ನು ಕೊಡುವುದೂ ಆಗಿರುವ ಇದನ್ನು ನೋಡಿ ಕೊಂಡಾಡಿದನು.

೧೫–೧೮. ದೇವತೆಗಳಲ್ಲೆಲ್ಲಾ ಶಚೀಪತಿಯಾದ ಇಂದ್ರನು ಸರ್ವಶ್ರೇಷ್ಠನು. ಆ ಇಂದ್ರನಿಗಿಂತಲೂ ಬ್ರಹ್ಮನು ಮತ್ತೂ ಶ್ರೇಷ್ಠನು. ಅಂತೆಯೇ ತೀರ್ಥಗಳಲ್ಲಿ ಪ್ರಯಾಗವು ಶ್ರೇಷ್ಠವಾದುದು. ಅದಕ್ಕಿಂತಲೂ ಇಂದ್ರಪ್ರಸ್ಥವು ಇನ್ನೂ ಶ್ರೇಷ್ಠವಾದುದು. ಎಲೈ ದೊರೆಯೇ ! ಈ ಇಂದ್ರಪ್ರಸ್ಥದೊಳಗೆ ಒಂದು ಪ್ರಯಾಗ ತೀರ್ಥವಿರುವುದು. ಎಂದು ಹೇಳಿದೆನಲ್ಲ ! ಅದರಲ್ಲಿ ನಡೆದ ಮೋಹಿನಿಯೆಂಬ ಒಬ್ಬ ಸೂಳೆಯ ವಿಷಯವನ್ನು ಹೇಳುತ್ತೇನೆ. ಕೇಳು. ನರ್ಮದಾ ನದಿಯ ದಡದಲ್ಲಿ ಮಾಹಿಷ್ಮತಿ ಎಂಬ ಒಂದು ಪಟ್ಟಣವು ಇರುವುದು. ಅದರಲ್ಲಿ ಮೋಹಿನಿಯೆಂಬ ಒಬ್ಬ ಸೂಳೆಯಿದ್ದಳು. ಅವಳು ಬಹು ಧನಿಕಳು. ರೂಪವತಿಯು ನೃತ್ಯಗೀತಗಳಲ್ಲಿ ಬಹು ಬುದ್ಧಿವಂತಳು.

**ತಯಾ ಬಹೂನಿ ಪಾಪಾನಿ ಕೃತಾನಿ ಧನಲುಬ್ಧಯಾ ।**
**ಬ್ರಹ್ಮಹತ್ಯಾಃ ಕೃತಾಃ ಸಪ್ತ ದಾಸ್ಯಶ್ಚ ಬಹವೋ ಹತಾಃ ॥ ೧೯ ॥**

**ತಾಸಾಂ ಚ ಪಾತಿತಾ ಗರ್ಭಾಃ ಬಹುಶಃ ಪಾಪಯಾ ತಯಾ ।**
**ಏವಂ ತಯಾ ಸ್ವತಾರುಣ್ಯಂ ಗಮಿತಂ ಪಾಪಕರ್ಮಭಿಃ ॥ ೨೦ ॥**

**ತತೋ ಜರಾ ಕಿಯತ್ಕಾಲೇ ತದ್ದೇಹೇ ಸಮುಪದ್ಯತ ।**
**ಜರಾಗ್ರಸ್ತಶರೀರಾ ಸಾ ನಿವೃತ್ತವಿಷಯಸ್ಪೃಹಾ ॥ ೨೧ ॥**

**ನ ಚಕ್ರೇ ಮಾನಸಂ ಯೂನಾಂ ತೇ ಚ ತಾಂ ಪ್ರತಿ ಭೂಪತೇ ।**
**ಪಾಪಾರ್ಜಿತಂ ಧನಂ ಸ್ವೀಯಂ ನ ವಿಶ್ವಸಿತಿ ಕಸ್ಯ ಚಿತ್ ॥ ೨೨ ॥**

**ನ ದತ್ತೇ ನ ಸ್ವಯಂ ಭುಂಕ್ತೇ ನ ನಿಕ್ಷಿಪತಿ ಕುತ್ರಚಿತ್ ।**
**ಏಕದಾ ಸಾ ನಿಶೀಥೇ ತು ವಿಬುಧ್ಯೇತಿ ವ್ಯಚಿಂತಯತ್ ॥ ೨೩ ॥**

---

೧೯-೨೦. ಹಣದ ಆಸೆಯಿಂದ ಬಹುಪಾಪಗಳನ್ನು ಮಾಡಿರುವಳು. ಏಳು ಬ್ರಹ್ಮಹತ್ಯೆಗಳನ್ನು ಮಾಡಿರುವಳು. ಅನೇಕಜನ ದಾಸಿಯರನ್ನು ಕೊಂದಿರುವಳು. ಪಾಪಿನಿಯಾದ ಅವಳು ದಾಸಿಯರ ಗರ್ಭಗಳನ್ನು ಬಹುವಾಗಿ ಔಷಧಿಯನ್ನು ಕೊಟ್ಟು ನಾಶಮಾಡಿರುವಳು. ಈ ರೀತಿಯಾಗಿ ಆಕೆಯು ಹಣಕ್ಕೋಸ್ಕರ ಪಾಪಕೆಲಸಗಳಿಂದ ತನ್ನ ತಾರುಣ್ಯವನ್ನು ಕಳೆದಳು.

೨೧. ಹೀಗಿರಲು ಅವಳಿಗೆ ಮುಪ್ಪು ಬಂದಿತು. ಆಗ ದೇಹವೆಲ್ಲವೂ ಮುದಿತನದಿಂದ ಕೂಡಿಕೊಂಡಿತು. ಅದರಿಂದ ಭೋಗದಲ್ಲಿ ಆಸೆಯನ್ನು ಬಿಟ್ಟುಬಿಟ್ಟಳು.

೨೨. ಆಕೆಯು ಯುವಕರಮೇಲೆ ಮನಸ್ಸಿಡುವುದನ್ನು ಬಿಟ್ಟಳು. ಯುವಕರು ಈಕೆಯ ಮೇಲೆ ಮನಸ್ಸಿಡುವುದನ್ನು ಬಿಟ್ಟು ಬಿಟ್ಟರು. ತನ್ನ ಹಣವು ಪಾಪದಿಂದ ಸಂಪಾದಿಸಲ್ಪಟ್ಟದ್ದಾದರೆ ಅದನ್ನು ಯಾವನೂ ನಂಬುವುದಿಲ್ಲ.

೨೩. ಅದನ್ನು ದಾನಮಾಡುವುದೂ ಇಲ್ಲ. ತಾನು ಅನುಭವಿಸುವುದೂ ಇಲ್ಲ. ಎಲ್ಲಿಯೂ ಇಡುವುದೂ ಇಲ್ಲ. ಇದು ಆ ಪಾಪ ಧನದ ಸ್ವಭಾವವು. ಹೀಗಿರುತ್ತಿರಲು ಆಕೆಯು ಒಂದು ದಿನ ಅರ್ಧರಾತ್ರಿಯಲ್ಲಿ ಈ ರೀತಿಯಾಗಿ ಯೋಚಿಸಿದಳು.

॥ ಮೋಹಿನ್ಯು ವಾಚ ॥

ಮೃತಾಯಾಂ ಮಯಿ ಕಸ್ಯೇದಂ ಧನಂ ಪಾಪೈರುಪಾರ್ಜಿತಂ ।
ತನ್ನಯಿಷ್ಯತಿ ಮಾಂ ಘೋರಂ ನರಕಂ ಭೃಶದಾರುಣಂ ॥ ೨೪ ॥

ದಾಸ್ಯಸ್ತಾಸಾಂ ಚ ಭರ್ತಾರಸ್ತದ್ಭೋಕ್ಷ್ಯಂತಿ ಧನಂ ಮಮ ।
ಮಯ್ಯೈವ ಸದ್ಗತಿಸ್ತಸ್ಯ ಕಥಂ ನ ಕ್ರಿಯತೇಧುನಾ ॥ ೨೫ ॥

॥ ಶ್ರೀ ನಾರದ ಉವಾಚ ॥

ಏವಂ ವಿಚಿಂತ್ಯ ಸಾ ಧರ್ಮೇ ವಿಧಾಯ ಮತಿಮುತ್ತಮಾಂ ।
ಚಕಾರಾರಾಮಸರಸೀವಾಪೀಕೂಪಸುರಾಲಯಾನ್ ॥ ೨೬ ॥

ಅಭಿತಃ ಪುರಮಾಧತ್ತೇ ಪ್ರಪಾಃ ಪಥಿಕಹೇತವೇ ।
ನಿದಾಘೇ ಚ ಮಹಾರಾಜ ತೇಭ್ಯೋನ್ನಂ ಪ್ರದದೌ ಚ ಸಾ ॥ ೨೭ ॥

---

೨೪. ಮೋಹಿನಿಯು ಹೇಳಿದಳು-ನಾನು ಈ ಹಣವನ್ನು ಪಾಪ ಕೆಲಸದಿಂದ ಸಂಪಾದಿಸಿದ್ದೇನೆ. ನಾನು ಸತ್ತಮೇಲೆ ಇದು ಯಾರಿಗೆ ಸೇರಬೇಕು ? ಈ ಪಾಪದ ಹಣವು ನನ್ನನ್ನು ಘೋರವಾದ ನರಕಕ್ಕೆ ಹಾಕುತ್ತದೆ.

೨೫. ಈ ಹಣವನ್ನು ನನ್ನ ದಾಸಿಯರೂ ಅವರ ಒಡೆಯಂದಿರೂ ಅನುಭವಿಸುತ್ತಾರೆ. ಆದ್ದರಿಂದ ನಾನೇನೇ ಆ ಹಣಕ್ಕೆ ಒಳ್ಳೆಯ ಗತಿಯನ್ನು ಏಕೆ ಮಾಡಬಾರದು ?

೨೬. ಶ್ರೀ ನಾರದನು ಹೇಳಿದನು-ಆಕೆಯು ಈ ರೀತಿಯಾಗಿ ಯೋಚಿಸಿ ಧರ್ಮದ ವಿಷಯದಲ್ಲಿ ಮನಸ್ಸನ್ನು ಮಾಡಿಕೊಂಡು ತೋಟ ಕೊಳ ಭಾವಿ ಕಟ್ಟಿ ದೇವಸ್ಥಾನಗಳನ್ನು ಕಟ್ಟಿಸಿದಳು.

೨೭. ಅವಳು ತಮ್ಮ ಊರಿನ ಸುತ್ತಲೂ ಪ್ರಯಾಣಿಕರಿಗೋಸ್ಕರ ಅರವಟ್ಟಿಗೆಗಳನ್ನು ಬಿಸಿಲುಕಾಲದಲ್ಲಿ ಇಡಿಸಿದಳು. ಅಲ್ಲದೆ ಅವರಿಗೆ ಅನ್ನವನ್ನೂ ಹಾಕಿಸಿದಳು.

ಧರ್ಮಶಾಲಾಂ ಗೃಹಾಭ್ಯಾಸೇ ನಿವೇಶಾಯ ವಿದೇಶಿನಾಂ ।
ವಿದಧೇ ಸಾ ಪುನಸ್ತೇಭ್ಯೋ ದದಾವಾಹಾರಮುತ್ತಮಂ　　॥ ೨೮ ॥

ಏವಂ ಪ್ರವರ್ತಮಾನಾ ಹಿ ಧರ್ಮೇ ಸಾ ಭೂಪ ಮೋಹಿನೀ ।
ಜ್ವರಾತುರಾಭವತ್ಕಾಲೇ ಕ್ವಚಿಚ್ಚೇತಿ ವ್ಯಚಿಂತಯುತ್　　॥ ೨೯ ॥

ಧರ್ಮಾರ್ಥೇ ಹಿ ಮಯಾ ವಿತ್ತಂ ವ್ಯಯಿತಂ ಭೂರಿ ಯದ್ಯಪಿ ।
ತಥಾಪಿ ಸ್ವರ್ಣರೂಪ್ಯಾದಿ ಪ್ರಚುರಂ ವರ್ತತೇ ಪರಂ　　॥ ೩೦ ॥

ಶ್ರೋತ್ರಿಯೇಭ್ಯೋ ದದಾಮ್ಯೇತತ್ ಜ್ಞಾನೇನೇತಿ ವ್ಯಚಿಂತಯುತ್ ।
ವಿಚಿಂತ್ಯೇತಿ ಸಮಾಹೂತಾ ಮೋಹಿನ್ಯಾ ನಗರದ್ವಿಜಾಃ　　॥ ೩೧ ॥

ನಾಗತಾಸ್ತೇ ಮಹೀಪಾಲ ಜ್ಞಾತ್ವಾ ಘೋರಂ ಪ್ರತಿಗ್ರಹಂ ।
ಯದಾ ತದಾ ದ್ವಿಭಾಗಂ ಚ ಚಕ್ರೇ ತತ್ತದ್ಧನಂ ಸ್ವಕಂ　　॥ ೩೨ ॥

---

೨೮. ಪರಸ್ಥಳದವರು ಇಳಿದುಕೊಳ್ಳುವುದಕ್ಕೋಸ್ಕರ ಮನೆಯ ಹತ್ತಿರದಲ್ಲಿಯೇ ಧರ್ಮಛತ್ರಗಳನ್ನು ಕಟ್ಟಿಸಿದಳು. ಅಲ್ಲದೆ ಆ ಛತ್ರಗಳಲ್ಲಿ ಉತ್ತಮವಾದ ಆಹಾರವನ್ನು ಹಾಕಿಸುತ್ತಿದ್ದಳು.

೨೯. ಆ ಮೋಹಿನಿಯು ಈ ರೀತಿಯಾಗಿ ಧರ್ಮಗಳನ್ನು ಮಾಡುತ್ತ ಒಂದುಸಾರಿ ಜ್ವರದಿಂದ ಬಾಧಿತಳಾದಳು ಆಗ ಇಂತೆಂದು ಯೋಚಿಸಿದಳು.

೩೦. ನಾನೇನೋ ಇದುವರೆಗೂ ಧರ್ಮಕ್ಕೋಸ್ಕರ ಬಹಳವಾದ ಹಣವನ್ನು ವ್ಯಯಮಾಡಿದೆನು. ಆದರೂ ಕೂಡ ನನ್ನ ಬಳಿಯಲ್ಲಿ ಚಿನ್ನ ಬೆಳ್ಳಿ ಮುಂತಾದ ಒಡವೆಗಳೂ ಹಣವೂ ಇನ್ನೂ ಬಹುವಾಗಿರುವುದು.

೩೧. ನನಗೆ ಜ್ಞಾನವಿರುವಾಗಲೇ ಈ ಹಣವನ್ನು ಶ್ರೋತ್ರಿಯರಿಗೆ ಕೊಡುತ್ತೇನೆಂದು ಯೋಚಿಸಿ ಆ ಊರಿನಲ್ಲಿದ್ದ ಶ್ರೋತ್ರಿಯ ಬ್ರಾಹ್ಮಣರನ್ನೆಲ್ಲಾ ಕರೆಸಿದಳು.

೩೨. ಆಗ ಆ ಊರಿನ ಬ್ರಾಹ್ಮಣರು ಈಕೆಯು ಕೊಡುವ ದಾನವು ಬಹು ಘೋರವಾದುದು. ಎಂದು ತಿಳಿದುಕೊಂಡು ಆ ಬ್ರಾಹ್ಮಣರೊಬ್ಬರೂ ಬರಲಿಲ್ಲ. ಅವರು ಬರದಿದ್ದುದನ್ನು ತಿಳಿದು ಆಕೆಯು ತನ್ನಲ್ಲಿದ್ದ ಹಣವನ್ನು ಎರಡು ಭಾಗವನ್ನಾಗಿ ಭಾಗಿಸಿದಳು.

ಏಕೋ ಭಾಗಃ ಸ್ವದಾಸೀನಾಂ ದತ್ತೋಽನ್ಯಶ್ಚ ವಿದೇಶಿನಾಂ ।
ಸ್ವಯಂ ತು ನಿರ್ಧನಾ ರಾಜನ್ನಭವತ್ಸಾ ತು ಮೋಹಿನೀ ॥ ೩೩ ॥

ತಥಾ ಸಮಾಗತಂ ಮೃತ್ಯುಂ ವಿಜ್ಞಾಯಾನ್ತಕಮನ್ತಿಕೇ ।
ಮುಕ್ತಾ ದಾಸ್ಯೋ ಧನಂ ನೀತ್ವಾ ಯಥೇಷ್ಟಗತಯೋಽಭರ್ವ ॥ ೩೪ ॥

ಇತಿ ಮತ್ವಾ ಯದಾ ಹ್ಯೇಷಾ ಜ್ವರಮುಕ್ತಾ ಭವಿಷ್ಯತಿ ।
ತದಾ ಯನ್ನೋ ಧನಂ ದತ್ತಂ ನೂನಮಾದಾಸ್ಯತೇ ಹಿ ತತ್ ॥ ೩೫ ॥

ಅಥ ಸಾ ಲಂಘನಾನ್ಯಷ್ಟಾದಶ ಕೃತ್ವಾ ಮಹೀಪತೇ ।
ನಿಜಾಯುಷಸ್ತು ಶೇಷೇಣ ಜ್ವರಮುಕ್ತಾ ತದಾಭವತ್ ॥ ೩೬ ॥

ಏಕಾ ಜರದ್ಗವಾ ನಾಮ ಸಖೀ ತಸ್ಯಾ ಮಹೀಪತೇ ।
ಸಾ ತಾಮುಪಚಚಾರಾಶು ಪಥ್ಯಾದಿಭಿರತಂದ್ರಿತಾಂ ॥ ೩೭ ॥

---

೩೩. ಅದರಲ್ಲಿ ಒಂದು ಭಾಗವನ್ನು ತನ್ನ ದಾಸಿಯರಿಗೂ ಮತ್ತೊಂದು ಭಾಗವನ್ನು ಪರಸ್ಥಳದವರಿಗೂ ಕೊಟ್ಟು ಕೊನೆಗೆ ಆ ಮೋಹಿನಿಯು ತಾನು ಏನನ್ನೂ ಇಟ್ಟುಕೊಳ್ಳದೆ ಹೋದಳು.

೩೪-೩೫. ಅವರೆಲ್ಲರೂ ಈ ರೀತಿಯಾಗಿ ಅವಳಿಗೆ ಮೃತ್ಯುವು ಬಂದಿರುವುದನ್ನೂ ಸ್ವಲ್ಪಕಾಲದಮೇಲೆ ಸಾಯುವಳೆಂಬುದನ್ನೂ ತಿಳಿದುಕೊಂಡರು. ಆ ಮೋಹಿನಿಯೂ ಕೂಡ ನಾನು ಇನ್ನು ಒಡನೆಯೇ ಸಾಯುತ್ತೇನೆ. ಎಂದು ತಿಳಿದು ಆ ದಾಸಿಯರೆಲ್ಲರನ್ನೂ ದಾಸ್ಯದಿಂದ ಬಿಟ್ಟು ಬಿಟ್ಟಳು. ಅನಂತರ ಆ ದಾಸಿಯರೂ ಕೂಡ ಒಂದು ವೇಳೆ ಇವಳಿಗೆ ಜ್ವರವು ಬಿಟ್ಟು ಆರೋಗ್ಯವು ಬಂದರೆ ನಮ್ಮ ಹಣವನ್ನು ತೆಗೆದುಕೊಳ್ಳುವಳು. ಎಂದು ಯೋಚಿಸಿ ಬೇರೆ ಬೇರೆ ಕಡಗೆ ಹೊರಟು ಹೋದರು.

೩೬. ಆಮೇಲೆ ಆಕೆಯು ಹದಿನೆಂಟುದಿನ ಉಪವಾಸಮಾಡಲು ಆಯುಸ್ಸು ಇನ್ನೂ ಉಳಿದಿದ್ದುದರಿಂದ ಆ ಜ್ವರವು ಬಿಟ್ಟು ಆರೋಗ್ಯವಂತಳಾದಳು.

೩೭. ಆಗ ಆ ಸೂಳೆಯು ಜರದ್ಗವಳೆಂಬ ಒಬ್ಬಳು ಸಖಿಯು ಆಕೆಯ ಪಥ್ಯ ಮುಂತಾದುವುಗಳನ್ನು ಕಾಲಕಾಲಕ್ಕೆ ಮಾಡಿ ಜಾಗರೂಕತೆಯಿಂದ ಉಪಚರಿಸುತ್ತಾ ಇದ್ದಳು.

ಕಿಯದ್ಭಿರ್ವಾಸರೈಃ ಸಾತು ಪೂರ್ಣಾಹಾರಾನ್ವ್ಯಜಾಯತ ।
ತಸ್ಯಾ ಜರದ್ಗವಾಯಾಸ್ತು ಗೃಹೇ ಭುಂಕ್ತೇಸ್ಮ ಲಜ್ಜಯಾ ॥ ೩೮ ॥

ಮಯಾ ಸ್ಥಿತಂ ಸುಖೇನಾತ್ರ ದುಃಖಮದ್ಯ ಸಮಾಗತಂ ।
ದಾರಿದ್ರ್ಯೈನ್ನ ಮಯಾ ಸ್ಥೇಯಂ ಸಾ ಚಿಂತ್ಯೇತಿ ಗತಾನ್ಯತಃ ॥ ೩೯ ॥

ಗಚ್ಛನ್ತೀ ಸಾ ವನೇ ರಾಜನ್ ಮೋಹಿನೀ ಪುರತಸ್ಕರೈಃ ।
ಇತಿ ಮತ್ವಾ ಥ ನಿಹತಾ ಗೃಹೀತ್ವಾ ಯಾತ್ಯಸೌ ಧನಂ ॥ ೪೦ ॥

ಧನಮಪ್ರಾಪ್ಯ ತೈಸ್ತಸ್ಯಾಃ ಸಕಾಶಾತ್ಪುರತಸ್ಕರೈಃ ।
ಶ್ವಸತೀ ಸಾ ಪರಿತ್ಯಕ್ತ್ವಾ ತಸ್ಮಿನ್ನೇವ ವನೇ ನೃಪಾ ॥ ೪೧ ॥

ಅಥ ವೈಖಾನಸಃ ಕಶ್ಚಿತ್ ಪ್ರಯಾಗಸ್ಯಾಸ್ಯ ವೈ ಜಲಂ ।
ಬಿಭ್ರುತ್ಕಮಂಡಲೌ ರಾಜನ್ನತ್ರಾರಣ್ಯೇ ಸಮಾಯಯೌ ॥ ೪೨ ॥

---

೩೮. ಅವಳು ಕೆಲವುದಿನಗಳಮೇಲೆ ಪೂರ್ತಿಯಾದ ಆಹಾರವನ್ನು ತೆಗೆದುಕೊಳ್ಳುವಂತಾದಳು. ಆ ಜರದ್ಗರೆಯ ಮನೆಯಲ್ಲಿಯೇ ಬಹು ನಾಚಿಕೆ ಪಟ್ಟುಕೊಂಡೇ ಊಟಮಾಡುತ್ತಿದ್ದಳು.

೩೯. ಈ ಊರಿನಲ್ಲಿ ನಾನು ಸುಖವಾಗಿದ್ದೆನು. ಈಗ ದುಃಖವು ಪ್ರಾಪ್ತವಾಗಿದೆ. ಸುಖವಾಗಿದ್ದ ಈ ಜಾಗದಲ್ಲಿ ದಾರಿದ್ರ್ಯದಿಂದ ಇರಬಾರದು. ಹೀಗೆಂದು ಯೋಚಿಸಿ ಆಕೆಯು ಬೇರೆಕಡೆಗೆ ಹೊರಟುಹೋದಳು.

೪೦. ಹೀಗೆಂದು ಯೋಚಿಸಿ ಆಕೆಯು ಬೇರೆಯ ಸ್ಥಳಕ್ಕೆ ಹೋಗುತ್ತಿರಲು ಆ ಊರಿನ ಕಳ್ಳರು ಈಕೆಯು ಹಣವನ್ನು ತೆಗೆದುಕೊಂಡು ಹೋಗುತ್ತಿರುವಳೆಂದು ಯೋಚಿಸಿ ಆಕೆಯನ್ನು ಕೊಂದುಬಿಟ್ಟರು.

೪೧. ಅವರಿಗೆ ಅವಳ ಹತ್ತಿರ ಹಣವು ಸಿಕ್ಕದಿರಲು ಅವಳು ಏಟನ್ನು ತಡೆಯಲಾರದೆ ದುಃಖಪಟ್ಟುಕೊಂಡು ಶ್ವಾಸಬಿಡುತ್ತಿರುವಂತೆಯೇ ಆ ಕಾಡಿನಲ್ಲಿ ಬಿಟ್ಟು ಬಿಟ್ಟು ಹೊರಟು ಹೋದರು.

೪೨. ಆಗ ಒಬ್ಬ ವೈಖಾನಸ ಋಷಿಯು ಈ ಪ್ರಯಾಗ ತೀರ್ಥದ ನೀರನು ಕಮಂಡಲುವಿನಲ್ಲಿ ತುಂಬಿಕೊಂಡು ಈಕೆಯು ಬಿದ್ದಿರುವಲ್ಲಿಯೇ ಬರುತ್ತಾ ಇದ್ದನು.

**ಅಥ ತಾಂ ಪತಿತಾಂ ವೀಕ್ಷ್ಯ ಶಸ್ತ್ರವಿಕ್ಷತವಿಗ್ರಹಾಂ ।**
**ಯಾಚಮಾನಾಮಿದಂ ರಾಜ್ಞ ಜೀವನಂ ಹಸ್ತ ಸಂಜ್ಞಯಾ ॥ ೪೩ ॥**

**॥ ವೈಖಾನಸ ಉವಾಚ ॥**

**ಕಾ ತ್ವಂ ಕೇನ ಶಿತೈಶ್ಶಸ್ತ್ರೈಃ ಸಕ್ಷತೀಕೃತವಿಗ್ರಹಾ ।**
**ಏಕಾಕಿನೀ ಕಿಮರ್ಥಂ ವಾ ನಿರ್ಜನಾರಣ್ಯಮಾಗತಾ ॥ ೪೪ ॥**

**ಇಂದ್ರಪ್ರಸ್ಥಗತಸ್ಯೇದಂ ಪ್ರಯಾಗಸ್ಯ ಜಲಂ ಶುಭಂ ।**
**ಭಾಗ್ಯೋದಯೇನ ಕೇನಾಪಿ ಪ್ರಾಪಿತಂ ಪ್ರಿಯಕಾಮ್ಯಯಾ ॥ ೪೫ ॥**

**॥ ಶ್ರೀ ನಾರದ ಉವಾಚ ॥**

**ಇತ್ಯುಕ್ತ್ವಾ ತೇನ ಸಾ ವಕ್ತುಮಕ್ಷಮಾ ವ್ಯಾದದೇ ಮುಖಂ ।**
**ಪಾತುಂ ತದ್ವಾರಿ ಮಹಿಷೀ ಭವೇಯಮಿತಿ ವಾಂಛಯಾ ॥ ೪೬ ॥**

---

೪೩. ಅಲ್ಲಿ ಆ ಮೋಹಿನಿಯು ಕತ್ತಿಯ ಏಟಿನಿಂದ ಗಾಯಗೊಂಡು ಬಿದ್ದಿರುವುದನ್ನು ನೋಡಿದನು. ಆಕೆಯು ನೀರು ಬೇಕೆಂಬುದಾಗಿ ಕೈಸನ್ನೆಯಿಂದ ತೋರಿಸಿದಳು.

೪೪ ವೈಖಾನಸನು ಹೇಳಿದನು-ನೀನು ಯಾರು ? ನಿನ್ನನ್ನು ಕತ್ತಿಯಿಂದ ಕಡಿದು ಗಾಯಮಾಡಿದರು ಯಾರು ? ನೀನು ಒಬ್ಬಂಟಿಗಳಾಗಿಯೇ ಈ ಜನ ಸಂಚಾರವಿಲ್ಲದ ಕಾಡಿಗೇಕೆ ಬಂದೆ ?

೪೫. ಈ ಕಮಂಡಲುವಿನಲ್ಲಿ ಇರುವ ಇಂದ್ರಪ್ರಸ್ಥಕ್ಕೆ ಸೇರಿದ ಪ್ರಯಾಗದ ತೀರ್ಥವು ನಿನ್ನ ಯಾವುದೋ ಒಂದು ಅದೃಷ್ಟ ವಿಶೇಷದಿಂದ ಇಲ್ಲಿಗೆ ತಂದಂತಾಗಿದೆ.

೪೬. ಶ್ರೀ ನಾರದನು ಹೇಳಿದನು-ಅವನು ಹೀಗೆನ್ನುತ್ತಲೂ ಅವಳು ಮಾತನಾಡಲಾರದೇನೇ ಬಾಯನ್ನು ತೆಗೆದಳು. ಆಗ ಆಕೆಯು ನಾನು ಯಾವನಾದರೂ ಒಬ್ಬನ ಹೆಂಡತಿಯಾಗಬೇಕೆಂಬ ಯೋಚನೆಯನ್ನು ಇಟ್ಟು ಕೊಂಡಿದ್ದಳು.

ಅಥೈತಸ್ಯ ಪ್ರಯಾಗಸ್ಯ ಪಾತಿತೇಂಬುನಿ ತನ್ಮುಖೇ ।
ತತ್ಯಾಜ ಜೀವಿತಂ ಸಾ ತು ಮೋಹಿನೀ ಗಣಿಕಾ ನೃಪ ॥ ೪೭ ॥

ಪ್ರಾಣಪ್ರಯಾಣಕಾಲೇ ತು ಮಹಿಷೀತ್ವಮವಾಂಛಯತ್ ।
ಅತಸ್ಸಾ ಮಹಿಷೀ ಜಾತಾ ದ್ರಾವಿಡೇ ವೀರವರ್ಮಣಃ ॥ ೪೮ ॥

ಸಂಭೂಯ ಕೇರಳಾಧೀಶಗೃಹೇ ತೀರ್ಥಾಂಬುಪಾನತಃ ।
ಕುಲಶೀಲಧನೈಶ್ವರ್ಯಸಂಯುಕ್ತಸ್ಯ ಮಹಿಪತೇಃ ॥ ೪೯ ॥

ಹೇಮಗೌರಂ ತತಸ್ಸಾಂಗಂ ಬಭಾರ ಕಮಲೇಕ್ಷಣಾ ।
ಅತಸ್ತಸ್ಯಾಃ ಪಿತಾ ನಾಮ ಹೇಮಾಂಗೀತಿ ಚಕಾರ ಹ ॥ ೫೦ ॥

ಏಕದಾ ಸಾ ತು ಹೇಮಾಂಗೀ ಹೇಮಾಭರಣಭೂಷಿತಾ ।
ಕಲಾಯಾಸ್ಸ್ವವಯಸ್ಯಾಯಾ ಮಂತ್ರಿಪುತ್ರ್ಯಾ ಗೃಹಂ ಯಯೌ ॥ ೫೧ ॥

---

೪೭. ಈ ಪ್ರಯಾಗದ ತೀರ್ಥವು ಬಾಯಿಗೆ ಬಿದ್ದೊಡನೆಯೇ ಆ ಮೋಹಿನಿಯು ಪ್ರಾಣವನ್ನು ಬಿಟ್ಟಳು.

೪೮. ಪ್ರಾಣವು ಹೋಗುವ ಕಾಲದಲ್ಲಿ ಆಕೆಯು ರಾಜನ ಹೆಂಡತಿಯಾಗ ಬೇಕೆಂದು ಅಪೇಕ್ಷಿಸಿದುದರಿಂದ ದ್ರಾವಿಡ ದೇಶದ ವೀರವರ್ಮನಿಗೆ ಹೆಂಡತಿಯಾದಳು.

೪೯. ಆಕೆಯು ಆ ತೀರ್ಥವನ್ನು ಕುಡಿದುದರಿಂದ ಕುಲ ಶೀಲ ಧನ ಐಶ್ವರ್ಯಗಳಿಂದ ಕೂಡಿದ ಕೇರಳದೇಶದ ರಾಜನ ಮನೆಯಲ್ಲಿ ಹುಟ್ಟಿದಳು.

೫೦. ಆಕೆಯು ಚಿನ್ನಾಗಿದ್ದು ಚಿನ್ನದಂತೆ ಹೊಂಬಣ್ಣವಾದ ವರ್ಣವುಳ್ಳವಳಾಗಿದ್ದುದರಿಂದ ಆಕೆಯ ತಂದೆಯು ಹೇಮಾಂಗೀ ಎಂದೇ ಅನ್ವರ್ಥವಾದ ಹೆಸರನ್ನು ಇಟ್ಟನು.

೫೧. ಒಂದು ಸಾರಿ ಆ ಹೇಮಾಂಗಿಯು ಚಿನ್ನದ ಒಡವೆಗಳನ್ನು ಹಾಕಿಕೊಂಡು ಕಲೆಯೆಂಬ ತನ್ನ ಸಖಿಯಾದ ಮಂತ್ರಿಯ ಮಗಳ ಮನೆಗೆ ಹೋದಳು.

ತತ್ರ ಯಾವಕತೈಲೇನ ಸ್ನಾಪಿತಾ ಭೋಜಿತಾ ಚ ಸಾ ।
ವಿವಿಧಾನ್ನೈಸ್ತದಾ ರಾಜನ್ ನಿವಿಷ್ಟಾ ವರವಿಷ್ಟರೇ ॥ ೫೨ ॥

ಪುಷ್ಪೋದ್ಗ್ರಥಿತಧಮ್ಮಿಲ್ಲಾ ಕ್ಷಾಮಕ್ಷೌಮವಿಭೂಷಿತಾ ।
ಕಲಾಂ ಪ್ರೋವಾಚ ದಧತೀ ಮುಖೇ ತಾಂಬೂಲವೀಟಿಕಾಂ ॥ ೫೩ ॥

॥ ಹೇಮಾಂಗ್ಯುವಾಚ ॥

ಕಲೇ ಕಲಯ ಮದ್ವಾಕ್ಯಂ ಕೋಕಿಲಾಕಲಭಾಷಿಣೀ ।
ಗೃಹೇ ಯದದ್ಭುತಂ ವಸ್ತು ತವ ಮಾಮಭಿದರ್ಶಯ ॥ ೫೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಇಂದ್ರಪ್ರಸ್ಥ ಮಾಹಾತ್ಮ್ಯ ಕಥನಂ ನಾಮ ಷೋಡಶಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೫೨. ಅಲ್ಲಿ ಆ ಮಂತ್ರಿಯ ಮನೆಯವರು ಅರಗಿನ ಎಣ್ಣೆಯೇ ಮುಂತಾದ ಸುವಾಸನೆಯುಳ್ಳ, ಉತ್ತಮವಾದ ತೈಲಗಳಿಂದ ಅಭ್ಯಂಜನಮಾಡಿಸಿ ಉತ್ತಮವಾದ ಊಟವನ್ನು ಮಾಡಿಸಿದರು. ಊಟವಾದ ಮೇಲೆ ಒಂದು ಉತ್ತಮವಾದ ಪೀಠ ದಲ್ಲಿ ಕುಳಿತುಕೊಂಡಳು.

೫೩. ಅಲ್ಲಿ ಹೆರಳನ್ನು ಹಾಕಿಸಿಕೊಂಡು, ಅದಕ್ಕೆ ಹೂವನ್ನು ಮುಡಿದು ಕೊಂಡು ಬಹು ಸೂಕ್ಷ್ಮವಾದ ರೇಷ್ಮೆಯ ಬಟ್ಟೆಯನ್ನುಟ್ಟುಕೊಂಡು, ಬಾಯಿಗೆ ತಾಂಬೂಲವನ್ನು ಹಾಕಿಕೊಂಡು ಅಗಿಯುತ್ತಾ ಸಖಿಯಾದ ಕಲೆಯನ್ನು ಕುರಿತು ಇಂತೆಂದಳು.

೫೪. ಹೇಮಾಂಗಿಯು ಹೇಳಿದಳು-ಕೋಗಿಲೆಯ ಧ್ವನಿಯಂತೆ ಮಾತ ನಾಡುವ ಎಲೈ ಕಲೆಯೇ! ನನ್ನ ಮಾತನ್ನು ಕೇಳು. ನಿನ್ನ ಮನೆಯಲ್ಲಿ ಅಪೂರ್ವವಾದ ಪದಾರ್ಥಗಳಿದ್ದರೆ ಅವನ್ನು ನನಗೆ ತೋರಿಸು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಇಂದ್ರಪ್ರಸ್ಥ ಮಹಿಮೆಯ ಕಥನ ಎಂಬ ಇನ್ನೂರ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತದಶಾಧಿಕದ್ವಿಶತತಮೋಽಧ್ಯಾಯಃ ॥



### ॥ ಶ್ರೀ ನಾರದ ಉವಾಚ ॥

ಇತ್ಯುಕ್ತ್ವಾ ಸಾ ಕಲಾ ರಾಜಂಸ್ತಯಾ ನೃಪತಿಭಾರ್ಯಯಾ ।
ಸ್ವಕೋಶಾತ್ ಸ್ವರ್ಣಮಂಜೂಷಾಮಾನಾಯ್ಯ ವಿದಧೇ ಪುರಃ ॥ ೧ ॥

ಉವಾಚ ಚ ಮಹಾರಾಜಭಾರ್ಯೇಽಸ್ಯಾಂ ಮಹದದ್ಭುತಂ ।
ಪುಸ್ತಕಂ ವರ್ತತೇ ದೇವಿ ತತ್ರ ಚಿತ್ರಾಣಿ ಸಂತಿ ವೈ ॥ ೨ ॥

ಉದ್ಘಾಟ್ಯ ದೃಶ್ಯತಾಂ ಕಿಂಚಿತ್ಕಿಂ ಕಿಮಸ್ತ್ಯತ್ರ ಪುಸ್ತಕೇ ।
ರಂಸ್ಯತೇ ತೇ ಮನೋ ನೂನಂ ತತ್ರಸ್ಥಾಲೇಖ್ಯದರ್ಶನೇ ॥ ೩ ॥

---

### ಇನ್ನೂರ ಹದಿನೇಳನೆಯ ಅಧ್ಯಾಯವು.



೧. ನಾರದನು ಹೇಳಿದನು–ಆ ಹೇಮಾಂಗಿಯು ಹೀಗೆನ್ನುತ್ತಲೂ ಕಲೆಯು ತನ್ನ ಪೆಟ್ಟಿಗೆಯಲ್ಲಿದ್ದ ಒಂದು ಚಿನ್ನದ ಪೆಟ್ಟಿಗೆಯನ್ನು ತೆಗೆದು ಆಕೆಯ ಮುಂದಿಟ್ಟಳು.

೨. ಎಲೈ ಮಹಾರಾಣಿಯೇ! ಇದರಲ್ಲಿ ಬಹು ಆಶ್ಚರ್ಯಕರವಾದ ಪದಾರ್ಥವು ಇವೆ. ಇದರಲ್ಲಿ ಒಂದು ಪುಸ್ತಕವಿದೆ. ಅವರಲ್ಲಿ ಬಗೆ ಬಗೆಯ ಚಿತ್ರವಿದೆ.

೩. ಆ ಪೆಟ್ಟಿಗೆಯನ್ನು ತೆಗೆದು ಅದರೊಳಗಿರುವ ಪುಸ್ತಕವನ್ನು ಬಿಚ್ಚಿ ಏನೇನಿದೆ? ಎಂದು ನೋಡು. ಆ ಚಿತ್ರಗಳನ್ನು ನೋಡಿದರೆ ನಿನ್ನ ಮನಸ್ಸು ಖಂಡಿತವಾಗಿಯೂ ಸಂತೋಷಗೊಳ್ಳುತ್ತದೆ.

|| ಶ್ರೀ ನಾರದ ಉವಾಚ ||

ಇತ್ಯುಕ್ತ್ವಾ ಭೂಪಪತ್ನೀ ಸಾ ದಾಸ್ಯಾ ತಾಮುದಘಾಟಯತ್ |
ಮಂಜೂಷಾಂ ತತ್ರ ಸಂಸ್ಥಂ ಚ ಪುಸ್ತಕಂ ಪಾಣಿನಾಗ್ರಹೀತ್ || ४ ||

ತತ್ರಾವಲೋಕಯಾಮಾಸ ಸಾವತಾರಾ‌ನ್ ಸಮಾಸತಃ |
ಪೂರ್ವಂ ತತಸ್ತು ಭೂಗೋಳಂ ಪಂಚಾಶತ್ಕೋಟಿಯೋಜನಂ || ೫ ||

ತತ್ರಾಂಧಕಾರಸಂಯುಕ್ತಾ ಭೂಮಿರ್ದೃಷ್ಟಾ ಚ ಕಾಂಚನೀ |
ಏತಯೋರಂತರೇ ರಾಜನ್ ಲೋಕಾಲೋಕಶ್ಚ ಪರ್ವತಃ || ೬ ||

ಸಪ್ತದ್ವೀಪಾಸ್ತತೋ ದೃಷ್ಟಾಃ ಸಮುದ್ರೈಸ್ಸಪ್ತಭಿರ್ವೃತಾಃ |
ಏತೇಷು ನದ್ಯಶ್ಶೈಲಾಶ್ಚ ಖಂಡಾನಿ ತು ಮಹಾಮತೇ || ೭ ||

ಏತದ್ಭಾರತಖಂಡಂ ಸಾ ಪಶ್ಯಂತೀ ಭೂಪತಿಪ್ರಿಯಾ |
ಯಮುನಾಜಾಹ್ನವೀಮುಖ್ಯಾಃ ಸರಿತಃ ಸಮುವೈಕ್ಷತ || ೮ ||

---

४. ಶ್ರೀ ನಾರದನು ಹೇಳಿದನು-ಹೀಗೆಂದು ಹೇಳಲು ಆ ರಾಣಿಯು ತನ್ನ ದಾಸಿಯ ಕೈಯ್ಯಲ್ಲಿ ಆ ಪೆಟ್ಟಿಗೆಯ ಬಾಗಿಲನ್ನು ತೆಗೆಯಿಸಿ ಅವರೊಳಗಿರುವ ಸಣ್ಣ ಪೆಟ್ಟಿಗೆಯನ್ನೂ ಪುಸ್ತಕಗಳನ್ನೂ ತಾನೇ ಕೈಯ್ಯಲ್ಲಿ ತೆಗೆದುಕೊಂಡಳು.

೫. ಅದರಲ್ಲಿ ಮೊದಲು ಅವತಾರಗಳು ಸಂಗ್ರಹವಾಗಿದ್ದುವು. ಅನಂತರ ಭೂಗೋಳವು ಐವತ್ತುಕೋಟಿ ಯೋಜನಗಳ ಅಗಲದಷ್ಟು ಬರೆಯಲ್ಪಟ್ಟಿದ್ದಿತು.

೬. ಅದರ ಮಧ್ಯದಲ್ಲಿ ಕತ್ತಲೆಯಿಂದ ಕೂಡಿಕೊಂಡಿರುವ ಭೂಮಿಯನ್ನು ನೋಡಿದಳು. ಮತ್ತೊಂದು ಚಿನ್ನದ ಭೂಮಿಯೂ ಅಲ್ಲಿದ್ದಿತು. ಆ ಕತ್ತಲೆ ಚಿನ್ನದ ಭೂಮಿಗಳಿಗೆ ಮಧ್ಯದಲ್ಲಿ ಲೋಕಾಲೋಕವೆಂಬ ಪರ್ವತವು ಇದ್ದಿತು.

೭. ಅನಂತರ ಏಳು ದ್ವೀಪಗಳನ್ನು ನೋಡಿದಳು. ಅವು ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿದ್ದುವು. ಇವುಗಳಲ್ಲಿ ನದಿಗಳೂ ಬೆಟ್ಟಗಳೂ ಇದ್ದುವಲ್ಲದೆ ಖಂಡಗಳೂ ಇದ್ದುವು.

೮. ಅನಂತರ ಈ ಭರತಖಂಡವನ್ನು ನೋಡಿದಳು. ಆ ರಾಣಿಯು ಭರತಖಂಡವನ್ನು ನೋಡುತ್ತಿರುವಂತೆಯೇ ಯಮುನೆ, ಗಂಗೆ ಮುಂತಾದ ನದಿಗಳೂ ಆಕೆಗೆ ಗೋಚರವಾದುವು.

ಯಮುನಾತೀರಗಂ ರಾಜನ್ನಿಂದ್ರಪ್ರಸ್ಥಮಿದಂ ಶುಭಂ ।
ದದರ್ಶ ಸಾ ಮಹಾಭಾಗಾ ತೀರ್ಥವ್ರಜಯುತಂ ನೃಪ ॥ ೯ ॥

ಅತ್ರ ತೀರ್ಥಮಿದಂ ದೃಷ್ಟ್ವಾ ಪ್ರಯಾಗಂ ಬ್ರಹ್ಮನಿರ್ಮಿತಂ ।
ಪೂರ್ವಜನ್ಮಕೃತಂ ಕರ್ಮ ಸಾ ಸಸ್ಮಾರ ಮನಸ್ವಿನೀ ॥ ೧೦ ॥

ತತಸ್ತೂಷ್ಣೀಂ ಸಮುತ್ಥಾಯ ತೂರ್ಣಂ ಸಾ ಸ್ವಗೃಹಂ ಯಯೌ ।
ನಿಶ್ಚಿತ್ಯೇತಿ ನ ಭೋಕ್ಷ್ಯಾಮಿ ತತಃ ಪ್ರಸ್ಥಾಯ ತೀರ್ಥಕಂ ॥ ೧೧ ॥

ತದೈವ ಸಾ ತು ಹೇಮಾಂಗೀ ಮಹೀಗುಪ್ತಮಸುಪ್ರಿಯಂ ।
ವೀರವರ್ಮಾಣಮಾಹೇದಂ ತೀರ್ಥರಾಜಪ್ರಿಯಾ ಸತೀ ॥ ೧೨ ॥

॥ ಹೇಮಾಂಗ್ಯುವಾಚ ॥

ಭೋ ಭೋ ಪ್ರಾಣಪತೇ ವಾಕ್ಯಂ ಮದೀಯಂ ಶೃಣು ಧರ್ಮದಂ ।
ವಿಧೇಹಿ ಚ ಮಹಾಭಾಗ ತೂರ್ಣಂ ಪೂರ್ಣೋ ಭವಿಷ್ಯಸಿ ॥ ೧೩ ॥

---

೯. ಅನಂತರ ಯಮುನೆಯ ದಡದಲ್ಲಿರುವ ಇಂದ್ರಪ್ರಸ್ಥವನ್ನು ನೋಡಿದಳು. ಇಂದ್ರಪ್ರಸ್ಥದಲ್ಲಿ ಅನೇಕ ತೀರ್ಥಗಳಿದ್ದುದನ್ನು ನೋಡಿದಳು.

೧೦. ಅದರಲ್ಲಿ ಬ್ರಹ್ಮನಿರ್ಮಿತವಾದ ಪ್ರಯಾಗವನ್ನು ನೋಡಿ ಆಕೆಯು ಪೂರ್ವಜನ್ಮದ ಕರ್ಮಗಳನ್ನು ಸ್ಮರಿಸಿಕೊಂಡಳು.

೧೧. ಅನಂತರ ಸುಮ್ಮನೆ ಮೇಲಕ್ಕೆ ಎದ್ದು ಬೇಗನೆ ತನ್ನ ಮನೆಗೆ ಹೊರಟುಹೋದಳು. ಆಗ ಇಲ್ಲಿ ನಾನು ಊಟಮಾಡುವುದೇ ಇಲ್ಲ. ಆ ಹರಿದ್ವಾರಕ್ಕೆ ಹೋದನಂತರ ಊಟಮಾಡುತ್ತೇನೆ. ಎಂದು ನಿಶ್ಚಯಿಸಿಕೊಂಡಳು.

೧೨. ಒಡನೆಯೇ ಆ ಹೇಮಾಂಗಿಯು ರಾಜನೂ, ಪ್ರಾಣಪ್ರಿಯನೂ ಆದ ಆ ವೀರವರ್ಮನನ್ನು ಕುರಿತು ತೀರ್ಥರಾಜನಲ್ಲಿ ಮನಸ್ಸುಳ್ಳವಳಾಗಿ ಇಂತೆಂದಳು.

೧೩. ಹೇಮಾಂಗಿಯು ಹೇಳಿದಳು–ಎಲೈ ಪ್ರಾಣಕಾಂತನೇ ! ಧರ್ಮದಿಂದ ಕೂಡಿದ ನನ್ನ ಮಾತನ್ನು ಕೇಳು. ಮತ್ತು ಅದರಂತೆ ಬೇಗನೆ ಮಾಡು. ನಿನ್ನ ಇಷ್ಟಗಳೆಲ್ಲವೂ ಕೈಗೂಡುತ್ತವೆ.

ಪುರಾಹಂ ಮೋಹಿನೀ ನಾಮ ವೇಶ್ಯಾ ಚ ಬಹುಪಾಪಕೃತ್ ।
ಯೌವನೇ ವಾರ್ಧಕೇ ಕಿಂಚಿದ್ಧರ್ಮೇ ಜಾತಾ ಮತಿರ್ಮಮ ॥ ೧೪ ॥

ಪಾಪೇನೋಪಾರ್ಜಿತಂ ವಿತ್ತಂ ಧರ್ಮೇಣ ವ್ಯಯಿತಂ ಮಯಾ ।
ನಿರ್ಧನಾಹಂ ಯದಾ ರಾಜನ್ನಿರ್ಗತಾ ನಿಜಪತ್ತನಾತ್ ॥ ೧೫ ॥

ತದಾ ಮಾಂ ನಿರ್ಜನೇರಣ್ಯೇ ಯಾನ್ತೀಂ ಜಘ್ನುಶ್ಚ ತಸ್ಕರಾಃ ।
ವೃಥಾ ದಾರಿದ್ರ್ಯಸಂತಪ್ತಾಂ ಪಾಪಾ ಧನಜಿಘೃಕ್ಷಯಾ ॥ ೧೬ ॥

ಶಿತಶಸ್ತ್ರಕ್ಷತಾಂಗೀಂ ಮಾಂ ಶ್ವಸತೀಂ ಗತಚೇತನಾಂ ।
ವಿಸೃಜ್ಯ ತಸ್ಕರಾಸ್ತತ್ರ ಗತಾ ಹತಮನೋರಥಾಃ ॥ ೧೭ ॥

ತತೋ ವೈಖಾನಸೋ ಹ್ಯೇಕಃ ಪ್ರಯಾಗಸ್ಯ ಜಲಂ ವಹನ್ ।
ಇಂದ್ರಪ್ರಸ್ಥಗತಸ್ಯೈವ ವನೇ ತತ್ರ ಸಮಾಗತಃ ॥ ೧೮ ॥

---

೧೪ ಹಿಂದಿನ ಜನ್ಮದಲ್ಲಿ ನಾನು ಮೋಹಿನಿಯೆಂಬ ಹೆಸರುಳ್ಳ ಸೂಳೆಯಾಗಿದ್ದೆನು. ಯೌವನದಲ್ಲಿ ಬಹು ಪಾಪವನ್ನು ಮಾಡಿದೆನು. ಆದರೆ ಮುಪ್ಪಿನಲ್ಲಿ ಧರ್ಮದಲ್ಲಿ ಬುದ್ಧಿ ಹುಟ್ಟಿ ಧರ್ಮವನ್ನು ಮಾಡಿದೆನು.

೧೫. ಪಾಪದಿಂದ ಸಂಪಾದಿಸಿದ ಹಣವನ್ನು ಧರ್ಮದಲ್ಲಿ ವ್ಯಯಮಾಡಿದೆನು. ಕೊನೆಗೆ ಹಣವೆಲ್ಲವೂ ಮುಗಿಯಲು ಪಟ್ಟಣದಿಂದ ಹೊರಟೆನು.

೧೬. ಆಗ ಒಂದು ನಿರ್ಜನವಾದ ಕಾಡಿನಲ್ಲಿ ಕಳ್ಳರು ನನ್ನನ್ನು ಹಣದ ಆಸೆಯಿಂದ ವ್ಯರ್ಥವಾಗಿ ಕೊಂದರು. ನನ್ನಲ್ಲಿ ಆಗ ಹಣವಿರಲಿಲ್ಲ.

೧೭. ಹರಿತವಾದ ಕತ್ತಿಯಿಂದ ಹೊಡೆದು ಗಾಯಗಳನ್ನು ಮಾಡಿ ದುಃಖಪಡುತ್ತ ಜ್ಞಾನವಿಲ್ಲದಿದ್ದ ನನ್ನನ್ನು ಬಿಟ್ಟು ಆ ಕಳ್ಳರು ನಿರಾಶರಾಗಿ ಹೊರಟುಹೋದರು.

೧೮. ಆಗ ಒಬ್ಬ ವೈಖಾನಸಋಷಿಯು ಇಂದ್ರಪ್ರಸ್ಥದಲ್ಲಿರುವ ಪ್ರಯಾಗದ ನೀರನ್ನು ಹೊತ್ತುಕೊಂಡು ಆ ಕಾಡಿನ ದಾರಿಯಲ್ಲಿ ಬಂದನು.

**ತತ್ರ ಮಾಂ ಪತಿತಾಂ ದೃಷ್ಟ್ವಾ ತದವಸ್ಥಾಂ ಸ ತಾಪಸಃ |**
**ಕಾ ತ್ವಂ ಕುತಃ ಕಿಮರ್ಥಂ ವಾ ಹತಾ ಕೇನೇತಿ ಪೃಷ್ಟವಾನ್ || ೧೯ ||**

**ತದಾ ಕಿಮಪಿ ನೋಕ್ತಂ ಮೇ ಪ್ರಾರ್ಥಿತಂ ಪುಣ್ಯ ಮಂಬು ತತ್ |**
**ತೇನ ತನ್ಮೇ ಮುಖೇ ಕ್ಷಿಪ್ತಂ ತತೋಽಹಂ ದೇಹಮುತ್ಸೃಜಂ || ೨೦ ||**

**ಪ್ರಾಣ ಪ್ರಯಾಣಕಾಲೇ ತು ವಾರಿ ತತ್ಸರ್ವಕಾಮದಂ |**
**ಶ್ರುತ್ವೇತಿ ವಾಂಛಿತವತೀ ಮಹಿಷೀ ಸ್ಯಾಮಿತಿ ಪ್ರಭೋ || ೨೧ ||**

**ತಸ್ಯ ತೀರ್ಥಾಂಭಸೋ ರಾಜ ಪ್ರಸಾದಾತ್ತೇ ಗೃಹೇಶ್ವರೀ |**
**ಜಾತಾಹಂ ಸತ್ಕುಲಾಚಾರಶೀಲಾಪಾರಪಯೋನಿಧಿಃ || ೨೨ ||**

**ಸಾಂಪ್ರತಂ ದ್ರಷ್ಟುಮಿಚ್ಛಾಮಿ ಶಕ್ರಪ್ರಸ್ಥಗತಂ ನೃಪ |**
**ಪ್ರಯಾಗಂ ತೀರ್ಥರಾಜಂ ತಂ ಭವತಾ ಸಹ ಕಾಮದಂ || ೨೩ ||**

---

೧೯. ಅಲ್ಲಿ ನಾನು ಆ ಅವಸ್ಥೆಯಲ್ಲಿ ಬಿದ್ದಿರುವುದನ್ನು ನೋಡಿ ಆ ವೈಖಾನಸನು ನೀನಾರು? ಎಲ್ಲಿಂದ ಬಂದೆ? ನಿನ್ನನ್ನೇಕೆ ಹೊಡೆದರು? ಎಂದು ಕೇಳಿದನು.

೨೦. ನಾನು ಆಗ ಏನು ಹೇಳಲೂ ಆಗಲಿಲ್ಲ. ಆ ಪುಣ್ಯತೀರ್ಥವನ್ನು ಕೇಳಿದೆನು. ಅವನು ಅದನ್ನು ನನ್ನ ಬಾಯಲ್ಲಿ ಹಾಕಿದನು. ಅನಂತರ ನನ್ನ ಪ್ರಾಣಗಳು ಹೋದುವು.

೨೧. ಆತನಿಂದ ಆ ತೀರ್ಥವು ಇಷ್ಟಾರ್ಥವನ್ನು ಕೊಡುತ್ತದೆಂದು ತಿಳಿದು ಪ್ರಾಣಹೋಗುವಾಗ ರಾಜನ ಹೆಂಡತಿಯಾಗಬೇಕೆಂದು ಅಪೇಕ್ಷಿಸಿದೆನು.

೨೨. ಎಲೈ ರಾಜನೇ ! ಆ ತೀರ್ಥದ ನೀರಿನ ಅನುಗ್ರಹದಿಂದ ಒಳ್ಳೆಯ ಆಚಾರವುಳ್ಳ ಕುಲಶೀಲವಂತರ ಮನೆಯಲ್ಲಿ ಹುಟ್ಟಿ ನಿನ್ನ ಹೆಂಡತಿಯಾಗಿ ನಿನ್ನ ಮನೆಗೆ ಒಡೆಯಳಾದೆನು.

೨೩. ಈಗ ನಾನು ಆ ಇಂದ್ರಪ್ರಸ್ಥದಲ್ಲಿರುವ ಆ ಪ್ರಯಾಗ ತೀರ್ಥವನ್ನು ನಿನ್ನೊಡನೆ ದರ್ಶನಮಾಡಲು ಅಪೇಕ್ಷೆ ಪಡುತ್ತಿದ್ದೇನೆ.

ಪ್ರಸ್ಥಾಸ್ಯೇಹಂ ಯದಾ ರಾಜಂಸ್ತೀರ್ಥರಾಜಂ ಪ್ರತಿ ಪ್ರಭೋ ।
ತದಾಹಮನ್ನಂ ಭೋಕ್ಷ್ಯಾಮಿ ಮಯೇತಿ ವಿಹಿತಃ ಪಣಃ ॥ ೨೪ ॥

॥ ರಾಜೋವಾಚ ॥

ಕಥಮೇತದ್ವಿಜಾನೀಯಾಂ ತ್ವದುಕ್ತಂ ಚಲಲೋಚನೇ ।
ಪ್ರತೀತಂ ಕುರು ಮೇ ಭದ್ರೇ ತ್ವದುಕ್ತಂ ಕರವಾಣ್ಯಹಂ ॥ ೨೫ ॥

॥ ಶ್ರೀ ನಾರದ ಉವಾಚ ॥

ಇತ್ಯುಕ್ತೇ ತೇನ ಭೂಪೇನ ಖೇ ವಾಗಿತ್ಯಭೂತ್ತದಾ ॥ ೨೬ ॥

॥ ಆಕಾಶವಾಣ್ಯುವಾಚ ॥

ಸತ್ಯಮುಕ್ತಂ ವಚೋ ರಾಜನ್ನನಯಾ ತವ ಭಾರ್ಯಯಾ ।
ಇಂದ್ರಪ್ರಸ್ಥಗತೇ ಪುಣ್ಯೇ ಪ್ರಯಾಗೇ ತೀರ್ಥಪುಂಗವೇ ।
ತತ್ರ ಗತ್ವಾ ಕುರು ಸ್ನಾನಂ ಲಪ್ಸ್ಯಸೇ ಯದ್ಯದಿಚ್ಛಸಿ ॥ ೨೭ ॥

---

೨೪. ಆ ತೀರ್ಥರಾಜನಾದ ಪ್ರಯಾಗವನ್ನು ನೋಡಲು ಇಲ್ಲಿಂದ ಹೊರಟ ಮೇಲೆಯೇ ಊಟಮಾಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಿಕೊಂಡಿದ್ದೇನೆ.

೨೫. ರಾಜನು ಹೇಳಿದನು-ಎಲೈ ಚಂಚಲಾಕ್ಷಿಯೇ! ನೀನು ಹೇಳಿದ ಈ ಮಾತನ್ನು ನಾನು ಹೇಗೆ ನಂಬಲಿ? ಮೊದಲು ಅದನ್ನು ನಂಬುವಂತೆ ಮಾಡು. ಅನಂತರ ನೀನು ಹೇಳಿದಂತೆ ಮಾಡುತ್ತೇನೆ.

೨೬. ಶ್ರೀ ನಾರದನು ಹೇಳಿದನು-ಆ ರಾಜನು ಹೀಗೆ ಹೇಳುತ್ತಲು ಆಗ ಆಕಾಶವಾಣಿಯು ಇಂತೆಂದು ಹೇಳಿತು.

೨೭. ಆಕಾಶವಾಣಿಯು ಹೇಳಿತು-ಎಲೈ ರಾಜನೇ! ಈ ನಿನ್ನ ಹೆಂಡತಿಯು ಹೇಳಿದ ಮಾತು ನಿಜವಾದುದು. ಇಂದ್ರಪ್ರಸ್ಥದಲ್ಲಿರುವ ತೀರ್ಥರಾಜನಾದ ಪ್ರಯಾಗತೀರ್ಥದಲ್ಲಿ ನೀನು ಹೋಗಿ ಸ್ನಾನಮಾಡಿದರೆ ನಿನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ಹೊಂದುತ್ತೀಯೆ.

|| ಶ್ರೀ ನಾರದ ಉವಾಚ ||

ನಿಶಮ್ಯೇತಿ ತತೋ ವಾಣೀಂ ನೃಪೋ ಗಗನಸಂಭವಾಂ ।
ದಂಡವತ್ಪತಿತೋ ಭೂಮೌ ತದ್ವಕ್ತಾರಂ ನಮಾಮ್ಯಹಂ || ೨೮ ||

ಅಥ ಮಂತ್ರಿಣಮಾಹೂಯ ರಾಜ್ಯಮಾರೋಪ್ಯ ತತ್ರ ವೈ ।
ತಯಾ ಸಹ ಸಮಾರುಹ್ಯ ರಥಂ ತೀರ್ಥವರಂ ಯಯೌ || ೨೯ ||

ಕತಿಭಿರ್ವಾಸರೈ ರತ್ರ ಹೇಮಾಂಗ್ಯಾ ಸಹ ತಂ ಯಯೌ ।
ಉಪಜಹ್ರೇ ತೀರ್ಥರಾಜೇ ಕ್ಷೀರಂ ಭಾರ್ಯಾಯುತೋ ನೃಪಃ || ೩೦ ||

ಸಸ್ನತುಸ್ತೌ ಶಿವೇ ತೀರ್ಥೇ ದಂಪತೀ ತತ್ರ ಕಾಮದೇ ।
ಪ್ರಯಾಗಸ್ನಾನಪುಣ್ಯೇನ ವೈಕುಂಠಪ್ರೀತಿರಸ್ತು ಮೇ || ೩೧ ||

ಪ್ರತೀಚ್ಛಯಾ ಸ್ನಾತಮಾತ್ರೇ ಮಿಥುನೇ ತತ್ರ ಭೂಪತೇ ।
ಆಗತೌ ಸುರಶಾರ್ದೂಲೌ ಹಂಸಪಕ್ಷೀಂದ್ರವಾಹನೌ || ೩೨ ||

---

೨೮. ಶ್ರೀ ನಾರದನು ಹೇಳಿದನು-ಆಗ ಆ ರಾಜನು ಆಕಾಶದಿಂದ ಹೊರಟ ಆ ಮಾತನ್ನು ಕೇಳಿ ಭೂಮಿಯಲ್ಲಿ ದಂಡ ನಮಸ್ಕಾರವನ್ನು ಮಾಡಿ ಅದನ್ನು ಹೇಳಿದವನಿಗೆ ನಮಸ್ಕಾರ ಮಾಡಿದನು.

೨೯. ಅನಂತರ ಮಂತ್ರಿಯನ್ನು ಕರೆದು ಅವನಿಗೆ ರಾಜ್ಯಭಾರವನ್ನು ವಹಿಸಿ ಆಕೆಯೊಡನೆ ರಥದಲ್ಲಿ ಕುಳಿತುಕೊಂಡು ಪ್ರಯಾಗಕ್ಕೆ ಹೊರಟನು.

೩೦. ಕೆಲವು ದಿನಗಳ ಮೇಲೆ ಆ ರಾಜದಂಪತಿಗಳಿಬ್ಬರೂ ಅಲ್ಲಿಗೆ ಬಂದರು. ಮೊದಲು ಆ ತೀರ್ಥರಾಜನಿಗೆ ಹಾಲನ್ನು ನಿವೇದನ ಮಾಡಿದರು.

೩೧. ಆಗ ರಾಜದಂಪತಿಗಳಿಬ್ಬರೂ ಆ ಪವಿತ್ರವಾದ ಇಷ್ಟಾರ್ಥಗಳನ್ನು ಕೊಡುವ ಪ್ರಯಾಗ ತೀರ್ಥದಲ್ಲಿ ನಮಗೆ ವೈಕುಂಠದಲ್ಲಿ ಪ್ರೀತಿಯುಂಟಾಗಲೆಂದು ಹೇಳಿ ಸ್ನಾನವನ್ನು ಮಾಡಿದರು.

೩೨. ಆ ದಂಪತಿಗಳು ಆ ರೀತಿ ಇಚ್ಛಿಸಿಪಟ್ಟು ಸ್ನಾನಮಾಡಿದ ಒಡನೆಯೇ ಹಂಸ ಗರುಡನ ಮೇಲೆ ಕುಳಿತ ಇಬ್ಬರು ದೇವತೆಗಳು ಅಲ್ಲಿಗೆ ಬಂದರು. (ಹರಿ ಬ್ರಹ್ಮರು ಬಂದರು.)

ಆಗತೌ ತೌ ಸಮಾಲೋಕ್ಯ ವೀರವರ್ಮಾ ಸ ಭೂಪತಿಃ ।
ಪ್ರಣಮ್ಯ ಶಿರಸಾ ದೇವೌ ತುಷ್ಟಾವೈಕಾಗ್ರಮಾನಸಃ ॥ ೩೩ ॥

॥ ರಾಜೋವಾಚ ॥

ನಮೋ ವಾಂ ಸುರಶಾರ್ದೂಲೌ ಬಿಭ್ರದ್ಭ್ಯಾಂ ಮಸಿತಾರುಣೇ ।
ವಪುಷೀ ಕ್ಷೌಮವಾಸಾಂಸಿ ಹೇಮಸಿಂಧೂರಭಾನಿ ಚ ॥ ೩೪ ॥

ವಂದೇ ಯುವಾಂ ಸತ್ತ್ವರಜಃ ಪ್ರಧಾನೌ
ಚರಾಚರಸ್ಯ ಸ್ಥಿತಿಸರ್ವಹೇತೂ ।
ವೈಕುಂಠಸತ್ಯಾದ್ಭುತಲೋಕನಾಥೌ
ಚತುರ್ದ್ವಿಬಾಹೂ ಖಗರಾಜವಾಹೌ ॥ ೩೫ ॥

ವೈರಾಗ್ಯಸಂರಾಗವತಾಂ ಜನಾನಾಂ
ಸನ್ಮುಕ್ತಿಭುಕ್ತಿ ಪ್ರತಿಪಾದಕೌ ವಾ ।
ವೃಂದಾರಕೈರ್ವಂದಿತಪಾದಪದ್ಮೌ
ಸದ್ಭಾವನಮ್ರೇಣ ನಮಾಮಿ ಮೂರ್ಧ್ನಾ ॥ ೩೬ ॥

---

೩೩. ಆ ರಾಜನಾದ ವೀರವರ್ಮನು ಬಂದ ಅವರನ್ನು ನೋಡಿ ನಮಸ್ಕರಿಸಿ ಒಂದೇ ಮನಸ್ಸಿನಿಂದ ಸ್ತುತಿಸಿದನು.

೩೪. ರಾಜನು ಹೇಳಿದನು–ಕಪ್ಪು ಮತ್ತು ಕೆಂಪು ಬಣ್ಣದಿಂದ ಕೂಡಿದ ದೇಹವುಳ್ಳ ಹೊಂಬಣ್ಣದ ಮತ್ತು ಕೆಂಪು ಬಣ್ಣದ ರೇಷ್ಮೆಯ ಬಟ್ಟೆಯನ್ನು ಹೊದ್ದಿರುವ ಎಲೈ ದೇವತಾಶ್ರೇಷ್ಠರಿರಾ ! ನಿಮಗೆ ನಮಸ್ಕಾರವು.

೩೫. ಸತ್ವಗುಣ ರಜೋಗುಣ ಪ್ರಧಾನವಾಗಿರುವ ಚರಾಚರಗಳಿಗೆ ಜೀವಿಸುವುದಕ್ಕೆ ಕಾರಣರಾದ ವೈಕುಂಠ ಮತ್ತು ಸತ್ಯಲೋಕಗಳಿಗೆ ಒಡೆಯರಾದ ನಾಲ್ಕು ತೋಳುಗಳುಳ್ಳ ಗರುಡನ ಮೇಲೆ ಮತ್ತು ಹಂಸದ ಮೇಲೆ ಕುಳಿತಿರುವ ನಿಮ್ಮನ್ನು ನಮಸ್ಕರಿಸುತ್ತೇನೆ.

೩೬. ವೈರಾಗ್ಯವುಳ್ಳ ಜನರಿಗೆ ಮುಕ್ತಿಯನ್ನೂ ಸಂಸಾರದಲ್ಲಿ ಆಸೆಯುಳ್ಳವರಿಗೆ ಅನ್ನವನ್ನೂ ಕೊಡುವ ದೇವತೆಗಳಿಂದ ನಮಸ್ಕರಿಸಲ್ಪಟ್ಟ ಪಾದಗಳುಳ್ಳ ನಿಮ್ಮನ್ನು ತಲೆಯನ್ನು ಬಗ್ಗಿಸಿ ನಮಸ್ಕರಿಸುತ್ತೇನೆ.

ಗೋವಿಂದವೃಂದಾರಕವಂದ್ಯಪಾದ
ನ ಕೋಪಿ ಜಾನಾತಿ ತವ ಸ್ವರೂಪಂ ।
ಯತಃ ಪರಸ್ತ್ವಂ ಪ್ರಕೃತೇಶ್ಚ ಪುಂಸೋ
ಮನೋವಚೋಭ್ಯಾಮಪಿ ದೂರವರ್ತೀ ॥ ೩೭ ॥

ಧನ್ಯಸ್ಸ ಲೋಕೇ ಪುರುಷಃ ಪರಾತ್ಮ
ಯೋವಿಶ್ವಮೇತತ್ ಕ್ಷಣಿಕಂ ವಿಚಿಂತ್ಯ ।
ಅನನ್ಯಚೇತಾ ಭಜತಿ ತ್ವದೀಯಂ
ಪಾದಾರವಿಂದಂ ಮುನಿವೃಂದವಂದ್ಯಂ ॥ ೩೮ ॥

ತ್ವತ್ಪಾದಸೇವನಂ ನಾಮ ತೀರ್ಥಮೇತಚ್ಚ ದುರ್ಲಭಂ ।
ಜನಾನಾಂ ಭಜಮಾನಾನಾಂ ವಾಂಛಿತಾರ್ಥಫಲಪ್ರದಂ ॥ ೩೯ ॥

ತಥಾಪ್ಯೇತದ್ದ್ವಯಂ ಸೇವ್ಯಂ ಮುಕ್ತಯೇ ನಾನ್ಯಲಬ್ಧಯೇ ।
ಅನ್ಯಕಾಮನಯಾ ಯಸ್ತು ಸೇವತೇ ಸ ತು ವಂಚಿತಃ ॥ ೪೦ ॥

---

೩೭. ಗೋವನ್ನು ಸಂರಕ್ಷಿಸುತ್ತಿರುವ ಗೊಲ್ಲರ ರೂಪರಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟ ಪಾದಗಳುಳ್ಳವನೇ ! ನಿನ್ನ ಸ್ವರೂಪವನ್ನು ಒಬ್ಬನೂ ತಿಳಿದಿಲ್ಲ. ನೀನು ಈ ಪ್ರಕೃತಿಗಿಂತಲೂ ಬೇರೆಯಾಗಿ ದೂರದಲ್ಲಿದ್ದುಕೊಂಡಿರತಕ್ಕವನು. ಮಾತಿಗೂ ಮನಸ್ಸಿಗೂ ಕೂಡ ಸಿಕ್ಕದೆ ದೂರದಲ್ಲಿರತಕ್ಕವನು.

೩೮. ಎಲೈ ಪರಮಾತ್ಮನೇ ! ಯಾವನು ಈ ಪ್ರಪಂಚವು ಕ್ಷಣಿಕವು ಎಂದು ತಿಳಿದು ಬೇರೆಯ ಪದಾರ್ಥದಲ್ಲಿ ಮನಸ್ಸಿಡದೆ ಮುನಿಗಳಿಂದ ನಮಸ್ಕೃತವಾದ ನಿನ್ನ ಪಾದಕಮಲಗಳನ್ನು ಭಜಿಸುತ್ತಾನೆಯೋ ಆತನೇ ಲೋಕದಲ್ಲಿ ಧನ್ಯನೆನಿಸಿಕೊಳ್ಳುತ್ತಾನೆ.

೩೯. ನಿನ್ನ ಪಾದದ ಸೇವನೆ ಎಂಬ ಈ ತೀರ್ಥವು ಲೋಕದಲ್ಲಿ ಸಿಕ್ಕುವುದು ದುರ್ಲಭವು. ಅದು ನಿನ್ನನ್ನು ಭಜಿಸುವ ಜನಗಳಿಗೆ ಇಷ್ಟಾರ್ಥವನ್ನು ಕೊಡುತ್ತದೆ.

೪೦ ನಿನ್ನ ಪಾದಗಳನ್ನೂ ಈ ಪ್ರಯಾಗವನ್ನೂ ಎರಡನ್ನೂ ಸೇವಿಸಬೇಕು. ಆದರೆ ಇವನ್ನು ಮುಕ್ತಿಗೋಸ್ಕರ ಸೇವಿಸಬೇಕೇ ಹೊರತು ಮತ್ತಾವುದಕ್ಕೂ ಸೇವಿಸಬಾರದು. ಮುಕ್ತಿಯನ್ನು ಬಿಟ್ಟು ಬೇರೆಯ ಆಸೆಯಿಂದ ಸೇವಿಸಿದರೆ ಅವನು ಮೋಸಹೋದಂತಾಗುತ್ತಾನೆ.

ಸಂತೋ ಭವಂತಮಾಸೇವ್ಯ ತೀರ್ಥಂ ಚೇತಚ್ಚ ಮುಕ್ತಿದಂ ।
ನಾನ್ಯದಿಚ್ಛಂತ್ಯತಿಕ್ರಮ್ಯ ಸರ್ವಲೋಕಾನ್ ಯಿಯಾಸವಃ ॥ ೪೧ ॥

॥ ಶ್ರೀ ನಾರದ ಉವಾಚ ॥

ಇತ್ಯಭಿಷ್ಟೂಯ ದೇವೇಶಂ ಲೋಕೇಶಂ ಸ ಚ ಭೂಪತಿಃ ।
ತಸ್ಥೌ ಯದಾ ತದಾ ರಾಜ್ಞೀ ಹೇಮಾಂಗೀ ಸಾ ಜಗಾದ ಹ ॥ ೪೨ ॥

॥ ಹೇಮಾಂಗ್ಯುವಾಚ ॥

ಪದ್ಮಾಪತೇ ಪದ್ಮಪಲಾಶಲೋಚನ
ಬ್ರಹ್ಮನ್ ಮರಾಳಾಸನ ಭಾರತೀಗುರೋ ।
ನಮೋ ಯುವಾಭ್ಯಾಂ ಯದಿ ದೀನಚೇತಸೌ
ಪ್ರಸೀದತಂ ತಾರಯತಂ ಭವಾಬ್ಧೇಃ ॥ ೪೩ ॥

ತೀರ್ಥಸ್ಯಾಸ್ಯ ಪ್ರಸಾದೇನ ಜಾತಾಹಂ ಮಹಿಷೀ ಪ್ರಭೋ ।
ಯುವಯೋರ್ದರ್ಶನಂ ಜಾತಂ ದೇವಾನಾಮಪಿ ದುರ್ಲಭಂ ॥ ೪೪ ॥

---

೪೧. ಸತ್ಪುರುಷರಾದವರು ನಿನ್ನನ್ನೂ ಈ ಮುಕ್ತಿದಾಯಕವಾದ ಈ ತೀರ್ಥವನ್ನೂ ಸೇವಿಸಿದರೆ ಮುಕ್ತಿಯನ್ನು ಹೊರತಾಗಿ ಬೇರೆ ಏನನ್ನೂ ಅಪೇಕ್ಷಿಸುವುದಿಲ್ಲ. ಆದರೆ ಎಲ್ಲಾ ಲೋಕಗಳನ್ನೂ ಅತಿಕ್ರಮಿಸಿ ವೈಕುಂಠಕ್ಕೆ ಹೋಗುತ್ತಾರೆ.

೪೨. ಶ್ರೀ ನಾರದನು ಹೇಳಿದನು–ಆ ರಾಜನು ಲೋಕಕ್ಕೆಲ್ಲ ಒಡೆಯನಾದ ಆ ಸ್ವಾಮಿಯನ್ನು ಸ್ತುತಿಸಿ ಸುಮ್ಮನಾದನಂತರ ಆ ಹೇಮಾಂಗಿಯು ಹೀಗೆಂದು ಹೇಳಿದಳು.

೪೩. ಹೇಮಾಂಗಿಯು ಹೇಳಿದಳು-ಕಮಲಾಕ್ಷನಾದ ರಮಾಪತಿಯೇ! ಹಂಸದ ಮೇಲೆ ಕುಳಿತುಕೊಳ್ಳುವ ಸರಸ್ವತೀ ಪತಿಯಾದ ಬ್ರಹ್ಮನೇ ! ನಿಮ್ಮಿಬ್ಬರಿಗೂ ನಮಸ್ಕಾರವು. ದೀನವಾದ ಮನಸ್ಸುಳ್ಳ ನಮ್ಮನ್ನು ಈ ಸಂಸಾರ ಸಾಗರದಿಂದ ದಾಟಿಸಿರಿ. ಪ್ರಸನ್ನರಾಗಿರಿ.

೪೪. ಎಲೈ ಪ್ರಭುವೇ ! ಈ ತೀರ್ಥದ ಅನುಗ್ರಹದಿಂದ ನಾನು ರಾಜಪತ್ನಿಯಾಗಿ ಹುಟ್ಟಿದೆನು. ದೇವತೆಗಳಿಗೂ ಸಿಕ್ಕದ ನಿಮ್ಮಗಳ ದರ್ಶನವು ಈ ತೀರ್ಥದ ಪ್ರಭಾವದಿಂದಲೇ ಆಯಿತು.

ಯುವಾಮಖಿಲಚಿತ್ತಜ್ಞೌ ದತ್ತಂ ನೌ ಮಾನಸೇಪ್ಸಿತಂ ।
ಸ್ನಾನಕಾಲೇ ಯದಾವಾಭ್ಯಾಂ ವಿಹಿತಂ ಪಾರಮಾರ್ಥಿಕಂ ॥ ೪೫ ॥

॥ ಶ್ರೀ ನಾರದ ಉವಾಚ ॥

ಏವಂ ತಾಭ್ಯಾಮುಭಾಭ್ಯಾಂ ತೌ ಸಂಸ್ತುತೌ ದೇವಪುಂಗವೌ ।
ಪ್ರಸನ್ನವದನೌ ಭೂತ್ವಾ ಪ್ರೋಚತುರ್ದಂಪತೀ ಪ್ರತಿ ॥ ೪೬ ॥

॥ ಹರಿಬ್ರಹ್ಮಾಣೌ ಊಚತುಃ ॥

ಧನ್ಯಾ ತ್ವಮಸಿ ಹೇಮಾಂಗಿ ಯತೋಽಯಂ ತಾರಿತಃ ಪತಿಃ ।
ಸ್ವಯಂ ರಾಜ್ಯಸುಖಾಸಕ್ತಚಿತ್ತೋಽಪ್ಯೇತತ್ಸಮಾಗಮಾತ್ ॥ ೪೭ ॥

ರಾಜ್ಞಾಂ ವಿಷಯಸಕ್ತಾನಾಂ ದುರ್ಲಭಾ ಮುಕ್ತಿರೀದೃಶೀ ।
ತ್ವದ್ಭರ್ತುರ್ಯಾದೃಶೀ ಜಾತಾ ತೀರ್ಥಸ್ಯಾಸ್ಯ ಪ್ರಭಾವತಃ ॥ ೪೮ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ತೌ ಸಮಾರೋಹ್ಯ ಗರುಡಂ ಪಕ್ಷಿಪುಂಗವಂ ।
ಜಗ್ಮತುಸ್ತೌ ಸುರಶ್ರೇಷ್ಠೌ ತಸ್ಯಲೋಕಂ ನರೇಶ್ವರ ॥ ೪೯ ॥

---

೪೫. ನೀವಿಬ್ಬರೂ ಕೂಡ ಎಲ್ಲರ ಮನಸ್ಸನ್ನೂ ಬಲ್ಲಿರಿ. ನಮ್ಮ ಮನಸ್ಸಿನಲ್ಲಿರುವುದನ್ನು ಕೊಡಿರಿ. ನಾವಿಬ್ಬರೂ ಕೂಡ ಸ್ನಾನಕಾಲದಲ್ಲಿ ಪಾರಮಾರ್ಥಿಕವಾದ ಯಾವ ಬುದ್ಧಿಯನ್ನು ಹೊಂದಿದೆವೋ ಅದರಂತೆ ಮಾಡಿರಿ.

೪೬. ನಾರದನು ಹೇಳಿದನು-ಆ ದಂಪತಿಗಳಿಬ್ಬರೂ ಆ ವಿಷ್ಣು ಬ್ರಹ್ಮರನ್ನು ಸ್ತುತಿಸಲು ಅವರಿಬ್ಬರೂ ಪ್ರಸನ್ನರಾಗಿ ಅವರನ್ನು ಕುರಿತು ಇಂತೆಂದರು.

೪೭. ಹರಿಬ್ರಹ್ಮರು ಹೇಳಿದರು-ಎಲೈ ಹೇಮಾಂಗಿಯೇ! ನೀನೇ ಧನ್ಯಳು. ರಾಜ್ಯಸುಖದಲ್ಲಿ ಆಸಕ್ತನಾದ ಈ ನಿನ್ನ ಗಂಡನನ್ನು ಈ ಪ್ರಯಾಗಕ್ಕೆ ಕರೆದುಕೊಂಡು ಬಂದು ಕೃತಾರ್ಥನನ್ನಾಗಿ ಮಾಡಿದ್ದೀಯೆ.

೪೮. ವಿಷಯ ಸುಖದಲ್ಲಿಯೇ ಅಪೇಕ್ಷೆಯುಳ್ಳ ರಾಜರಿಗೆ ನಿನ್ನ ಗಂಡನಿಗೆ ಈ ಪ್ರಯಾಗದ ಪ್ರಭಾವದಿಂದ ಬಂದಂತಹ ಮುಕ್ತಿಯು ಬರುವುದು ಕಷ್ಟವು.

೪೯. ನಾರದನು ಹೇಳಿದನು-ಹೀಗೆಂದು ಹೇಳಿ ಅವರಿಬ್ಬರನ್ನೂ ಗರುಡನ ಮೇಲೆ ಕೂರಿಸಿಕೊಂಡು ತಾವೂ ಕುಳಿತುಕೊಂಡು ಆ ಹರಿಬ್ರಹ್ಮರು ಸತ್ಯಲೋಕಕ್ಕೆ ಹೋದರು.

ತತ್ರ ತೇ ಬ್ರಹ್ಮಣಾ ಸರ್ವೇ ಪೂಜಿತಾ ವಿಧಿವನ್ನೃಪ ।
ತಸ್ಯ ಚಿತ್ತಾನುರೋಧೇನ ತಸ್ಥುರೇಕಂ ಮುಹೂರ್ತಕಂ ॥ ೫೦ ॥

ಅಥ ತಾಭ್ಯಾಮುಭಾಭ್ಯಾಂ ಸ ದಂಪತಿಭ್ಯಾಂ ಸಮಂ ಹರಿಃ ।
ಅರುಹ್ಯ ಗರುಡಂ ಶ್ರೀಮದ್ವೈಕುಂಠಮಗಮನ್ನೃಪ ॥ ೫೧ ॥

ಇತ್ಯೇತತ್ಕಥಿತಂ ತುಭ್ಯಂ ತೀರ್ಥರಾಜಸ್ಯ ವೈಭವಂ ।
ಪುಣ್ಯಂ ಸಮಸ್ತಪಾಪಘ್ನಂ ಯಶಸ್ಯಂ ಸುತದಂ ನೃಪ ॥ ೫೨ ॥

ಯ ಏತಚ್ಛೃಣುಯಾನ್ನಿತ್ಯಂ ಪಠೇದಪಿ ಚ ಮಾನವಃ ।
ಸ ಗಚ್ಛೇದ್ವಾಂಛಿತಂ ಸ್ಥಾನಂ ಸತ್ಯಮೇತನ್ಮಯೋದಿತಂ ॥ ೫೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಇಂದ್ರಪ್ರಸ್ಥಾಂತರ್ಗತ ಪ್ರಯಾಗ ಕಥನಂ ನಾಮ ಸಪ್ತದಶಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೫೦. ಅಲ್ಲಿ ಅವರೆಲ್ಲರೂ ಬ್ರಹ್ಮನಿಂದ ವಿಧಿವತ್ತಾಗಿ ಪೂಜಿತರಾದರು. ಆ ಬ್ರಹ್ಮನ ಅಪೇಕ್ಷೆಯಂತೆ ಅಲ್ಲಿ ಒಂದು ಮುಹೂರ್ತದ ಕಾಲವಿದ್ದರು.

೫೧. ಅನಂತರ ಹರಿಯು ಅವರಿಬ್ಬರನ್ನೂ ಗರುಡನ ಮೇಲೆ ಕೂರಿಸಿ ತಾನೂ ಕುಳಿತುಕೊಂಡು ವೈಕುಂಠಕ್ಕೆ ಹೋದನು.

೫೨. ಪುಣ್ಯವೂ ಪಾಪ ನಾಶಕವೂ ಯಶಸ್ಸನ್ನುಂಟುಮಾಡುವುದೂ ಮಕ್ಕಳನ್ನು ಕೊಡುವುದೂ ಆದ ಆ ತೀರ್ಥರಾಜನ ವೈಭವವನ್ನು ನಿಮಗೆ ಹೇಳಿದ್ದೇನೆ.

೫೩. ಇದನ್ನು ದಿನವೂ ಕೇಳುವವನೂ ಓದುವವನೂ ಅವನಿಗೆ ಬೇಕಾದ ಸ್ಥಾನವನ್ನು ಹೊಂದುತ್ತಾನೆ. ನಾನು ಹೇಳಿದ ಈ ಮಾತು ಸತ್ಯವು. ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಇಂದ್ರಪ್ರಸ್ಥದ ಒಳಗಿರುವ ಪ್ರಯಾಗ ಕಥನ ಎಂಬ ಇನ್ನೂರ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾದಶಾಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ನಾರದ ಉವಾಚ ॥

ಆಕರ್ಣಯ ಶಿಬೇ ರಾಜನ್ ವರ್ಣಯಾಮಿ ತವಾಗ್ರತಃ ।
ಪುಣ್ಯಂ ಯಶಸ್ಯಮಾಯುಷ್ಯಂ ಕಾಶ್ಯಾಮಾಹಾತ್ಮ್ಯಮುತ್ತಮಂ । ॥ ೧ ॥

ಇಂದ್ರಪ್ರಸ್ಥತಟಸ್ಥಾಯಾಂ ಕಾಶ್ಯಾಮೇಕಸ್ತು ಪಾದಪಃ ।
ಶಿಂಶುಪಾಖ್ಯೋ ಭವೇದ್ರಾಜನ್ ಪುರಾ ಪುಣ್ಯಯುಗೇ ಕೃತೇ ॥ ೨ ॥

ತತ್ರೈಕೋ ವಾಯಸೋ ಹ್ಯಾಸೀತ್ಕೃತನೀಡೋ ವನಸ್ಪತೌ ।
ತಸ್ಯಾಧಸ್ತಾನ್ಮಹಾಸರ್ಪಃ ಕೋಟರೇ ವಸತಿ ಸ್ಮ ಹ ॥ ೩ ॥

---

## ಇನ್ನೂರ ಹದಿನೆಂಟನೆಯ ಅಧ್ಯಾಯವು



೧. ಶ್ರೀ ನಾರದನು ಹೇಳಿದನು-ಎಲೈ ರಾಜನಾದ ಶಿಬಿಯೇ ! ಪುಣ್ಯವೂ ಯಶಸ್ಕರವೂ ಆಯುಷ್ಪ್ರದವೂ ಆದ ಇಂದ್ರಪ್ರಸ್ಥದ ಕಾಶಿಯ ಮಹಿಮೆಯನ್ನು ನಿನಗೆ ಹೇಳುತ್ತೇನೆ. ಅದನ್ನು ನೀನು ಕೇಳು.

೨. ಎಲೈ ರಾಜನೆ ! ಈ ಇಂದ್ರಪ್ರಸ್ಥಕ್ಕೆ ಸೇರಿದಂತೆ ಒಂದು ಕಾಶಿ ಕ್ಷೇತ್ರವುಂಟು. ಅದರ ದಡದಲ್ಲಿ ಪೂರ್ವದಲ್ಲಿ ಕೃತಯುಗದಲ್ಲಿ ಒಂದು ಮುತ್ತುಗದ ಮರವಿದ್ದಿತು.

೩. ಆ ಮರದ ಮೇಲುಗಡೆಯಲ್ಲಿ ಒಂದು ಕಾಗೆಯು ಗೂಡನ್ನು ಕಟ್ಟಿಕೊಂಡಿದ್ದಿತು. ಆ ಮರದ ಬುಡದಲ್ಲಿ ಪೊಟ್ಟರೆಯನ್ನು ಮಾಡಿಕೊಂಡು ಒಂದು ಸರ್ಪವು ವಾಸವಾಗಿದ್ದಿತು

ಏಕದಾ ತಸ್ಯ ಕಾಕಸ್ಯ ಭಾರ್ಯಾಂಡದ್ವಯಮಾಲಯೇ |
ಪ್ರತಿಮುಚ್ಯ ಗತಾ ಕ್ವಾಪಿ ನ ನೀಡೇ ಸ್ವೇ ಸಮಾಗತಾ ॥ ೪ ॥

ಸ್ವಯಮೇವ ಚ ಕಾಕಸ್ತು ಪಾಲಯನ್ನಂಡಕದ್ವಯಂ |
ತಾಮೇವ ಶಿಂಶುಪಾಮುಚ್ಚೈ ರಧ್ಯತಿಷ್ಠನ್ಮಹೀಪತೇ ॥ ೫ ॥

ಅಥೈಕದಾ ನಿಶೀಥೇ ತು ಮಹಾವಾತ್ಯಾ ಸಮಾಗತಾ |
ಅಭನಕ್ ಶಿಂಶುಪಾಂ ರಾಜನ್ಮೂಲಾದತಿದೃಢಾದಪಿ ॥ ೬ ॥

ವಾತ್ಯಯಾ ಪಾತ್ಯಮಾನಾಯಾಃ ಶಿಂಶುಪಾಯಾಸ್ತದಾ ತಲೇ |
ಚೂರ್ಣಿತೌ ಕಾಕಸರ್ಪೌ ತೌ ಗತಪ್ರಾಣೌ ಬಭೂವತುಃ ॥ ೭ ॥

ದಿವ್ಯಾಂಗಾಸ್ತೇ ತ್ರಯೋ ಭೂತ್ವಾ ಶಿಂಶುಪಾವಾಯುಸಾಹಯಃ |
ವಿಮಾನತ್ರಯಮಾರೂಢಾ ಜಗ್ಮುಃ ಶ್ರೀಪತಿಕೇತನಂ ॥ ೮ ॥

---

೪. ಒಂದು ಸಾರಿ ಆ ಕಾಗೆಯ ಹೆಂಡತಿಯು ಆ ಗೂಡಿನಲ್ಲಿ ಎರಡು ಮೊಟ್ಟೆಗಳನ್ನಿಟ್ಟು ಎಲ್ಲಿಯೋ ಹೊರಟುಹೋಯಿತು. ಮತ್ತು ತನ್ನ ಗೂಡಿಗೆ ಬರಲೇ ಇಲ್ಲ.

೫. ಆ ಗಂಡು ಕಾಗೆಯು ಆ ಎರಡು ಮೊಟ್ಟೆಗಳನ್ನೂ ತಾನೇ ಕಾಪಾಡುತ್ತಾ ಆ ದೊಡ್ಡ ಮುತ್ತುಗದ ಮರದ ಮೇಲೆ ಕುಳಿತಿದ್ದಿತು.

೬. ಒಂದು ದಿನ ರಾತ್ರಿಯಲ್ಲಿ ಒಂದು ಬಿರುಗಾಳಿಯು ಬಂದಿತು. ಆ ಮುತ್ತುಗದ ಮರವು ಬಹು ಗಟ್ಟಿಯಾಗಿದ್ದರೂ ಆ ಗಾಳಿಯಿಂದ ಅದು ಬುಡಕ್ಕೆ ಮುರಿದುಹೋಯಿತು.

೭. ಗಾಳಿಯಿಂದ ಮುರಿದು ಬೀಳುತ್ತಿರುವ ಆ ಮುತ್ತುಗದ ಮರದ ಬುಡದಲ್ಲಿ ಆ ಸರ್ಪವೂ ಮೇಲುಗಡೆಯಲ್ಲಿದ್ದ ಆ ಕಾಗೆಯೂ ಏಟು ಬಿದ್ದು ದರಿಂದ ಸತ್ತುಹೋದವು.

೮. ಆಗ ಆ ಮುತ್ತುಗದ ಮರ ಕಾಗೆ ಹಾವುಗಳು ದಿವ್ಯವಾದ ದೇಹವನ್ನು ಒಡನೆಯೇ ಹೊಂದಿ ಒಳ್ಳೆಯದಾಗಿರುವ ಬೇರೆ ಬೇರೆಯಾದ ವಿಮಾನದಲ್ಲಿ ಕುಳಿತು ವೈಕುಂಠಕ್ಕೆ ಹೋದುವು.

॥ ಶಿಬಿರುವಾಚ ॥

**ದೇವರ್ಷೇ ಕೇನ ಪುಣ್ಯೇನ ಪ್ರಾಪ್ತಾ ತೈರ್ಮುಕ್ತಿದಾ ಪುರೀ ।**
**ಆಸಂಸ್ತೇ ಕೇ ತ್ರಯಃ ಪೂರ್ವಂ ತನ್ಮೇ ಕಥಯ ನಾರದ ॥ ೯ ॥**

॥ ನಾರದ ಉವಾಚ ॥

**ಕುರುಜಾಂಗಲದೇಶೀಯೋ ಬ್ರಾಹ್ಮಣಶ್ಶ್ರವಣಾಭಿದಃ ।**
**ತಸ್ಯ ಭಾರ್ಯಾ ಕುಡಾ ನಾಮ ಭ್ರಾತಾಭೂಚ್ಚ ಕುರಂಟಕಃ ॥ ೧೦ ॥**

**ಅಸ್ನಾತಭೋಕ್ತಾ ನಿತ್ಯಂ ಸ ಕೇವಲೋ ಮಿಷ್ಟಭುಗ್ರಹಃ ।**
**ಶ್ರವಣಸ್ತೇನ ದೋಷೇಣ ಬಭೂವ ಗ್ರಾಮವಾಯಸಃ ॥ ೧೧ ॥**

**ಕುರಂಟಕಸ್ತು ತದ್ಭ್ರಾತಾ ನಾಸ್ತಿಕೋಽಭವದುಲ್ಬಣಃ ।**
**ಶ್ರುತಿಸ್ಮೃತಿಪಥೋಚ್ಛೇತ್ತಾ ದೇವಾನಾಂ ಚೈವ ನಿಂದಕಃ ॥ ೧೨ ॥**

---

೯. ಶಿಬಿಯು ಹೇಳಿದನು-ಎಲೈ ದೇವರ್ಷಿಯೇ ! ಯಾವ ಪುಣ್ಯದ ಪರಿಪಾಕದಿಂದ ಅವರು ಆ ಮುಕ್ತಿಸ್ಥಾನವನ್ನು ಹೊಂದಿದ್ದರು ? ಅವರು ಮೊದಲು ಯಾರಾಗಿದ್ದರು ? ಎಂಬುದೆಲ್ಲವನ್ನೂ ಹೇಳು.

೧೦. ನಾರದನು ಹೇಳಿದನು-ಕುರುಜಾಂಗಲವೆಂಬ ದೇಶದಲ್ಲಿ ಶ್ರವಣನೆಂಬ ಬ್ರಾಹ್ಮಣನಿದ್ದನು. ಅವನಿಗೆ ಕುಡಳೆಂಬ ಹೆಸರುಳ್ಳ ಹೆಂಡತಿಯಿದ್ದಳು. ಕುರಂಟಕನೆಂಬ ಸೋದರನೂ ಇದ್ದನು.

೧೧. ಸ್ನಾನ ಮಾಡದೇನೇ ನಿತ್ಯವೂ ಊಟ ಮಾಡುತ್ತಿದ್ದನು. ಒಬ್ಬರಿಗೂ ತಿಳಿಯದಂತೆ ಗುಟ್ಟಾಗಿ ಸಿಹಿ ತಿಂಡಿಯನ್ನು ತಿನ್ನುತ್ತಿದ್ದನು. ಈ ದೋಷದಿಂದ ಆ ಶ್ರವಣನು ಗ್ರಾಮದಲ್ಲಿ ಕಾಗೆಯಾಗಿ ಹುಟ್ಟಿದನು.

೧೨. ಅವನ ಸೋದರನಾದ ಕುರಂಟಕನು ಬಹು ಶೂರನಾದ ನಾಸ್ತಿಕನಾಗಿದ್ದನು. ವೇದ ಧರ್ಮಶಾಸ್ತ್ರಗಳ ದಾರಿ (ರೀತಿ) ಯನ್ನು ಬಿಟ್ಟು ದೇವರನ್ನು ನಿಂದಿಸುತ್ತಿದ್ದನು.

ತೇನ ದೋಷೇಣ ಸ ಮೃತೋ ಹ್ಯಭವತ್ಕಾಲಕುಂಡಲೀ ।
ಸಾ ಕುಂಡಾ ಶ್ರವಣಸ್ಯ ಸ್ತ್ರೀ ಬಭೂವೋಭಯದೋಷಭಾಕ್ ॥ ೧೩ ॥

ಅತಸ್ಸಾ ಸ್ಥಾವರತ್ವಂ ಹಿ ಲಬ್ಧ್ವಾಸೀದುಭಯಾಶ್ರಯಾ ।
ಏತತ್ತೇ ಕಥಿತಂ ಭೂಪ ಯದ್ವೃತ್ತಂ ಪೂರ್ವಜನ್ಮನಿ ॥ ೧೪ ॥

ಅತಃ ಪರಂ ಪ್ರವಕ್ಷ್ಯಾಮಿ ತೇಷಾಂ ಪುಣ್ಯಾಂ ಯತಸ್ತ್ರಯಃ ।
ಪ್ರಾಪುಸ್ತೇನ ಪುರೀಂ ರಮ್ಯಾಂ ಕಾಶೀಂ ವೈಶ್ವೇಶ್ವರೀಂ ನೃಪ ॥ ೧೫ ॥

ಗ್ರಾಮಾಂತರಾದೇಕದಾ ತೌ ಪ್ರತ್ಯಾಯತೌ ನಿಜಾಲಯಂ ।
ಕಸ್ಯ ಚಿತ್ಪಥಿಕಸ್ಯಾಥ ಕೂಪೇ ಮಗ್ನಾಂ ಪಯಸ್ವಿನೀಂ ॥ ೧೬ ॥

ಅವಲೋಕ್ಯ ತದುದ್ಧಾರಂ ಚಕ್ರತುಸ್ತೇನ ನೋದಿತೌ ।
ತಾಭ್ಯಾಂ ಗದಿತಮಾಕರ್ಣ್ಯ ಕುಂಡಾ ಸಾಧ್ವಿತ್ಯಭಾಷಿತ ॥ ೧೭ ॥

---

೧೩. ಅವನು ಸತ್ತಮೇಲೆ ಆ ನಾಸ್ತಿಕ ದೋಷದಿಂದ ಕಾಲಸರ್ಪನಾದನು. ಆ ಶ್ರವಣನ ಹೆಂಡತಿಯಾದ ಕುಂತೆಯು ಇವರಿಬ್ಬರಲ್ಲಿದ್ದ ದೋಷಗಳನ್ನೂ ಹೊಂದಿದ್ದಳು.

೧೪. ಆದ್ದರಿಂದ ಆಕೆಯು ಮರವಾಗಿ ಹುಟ್ಟಿದಳು. ಮತ್ತು ಅವರಿಬ್ಬರಿಗೂ ಆಶ್ರಯವಾಗಿದ್ದಳು. ಈ ರೀತಿಯಾಗಿ ಅವರ ಪೂರ್ವ ಜನ್ಮದ ವಿಷಯವನ್ನು ಹೇಳಿದ್ದೇನೆ.

೧೫. ಇನ್ನುಮೇಲೆ ವಿಶ್ವೇಶ್ವರನಿರುವ ಆ ರಮ್ಯವಾದ ಕಾಶಿಯನ್ನು ಆ ಮೂವರೂ ಹೊಂದಲು ಕಾರಣವೇನೆಂಬುದನ್ನು ಹೇಳುತ್ತೇನೆ.

೧೬-೧೭. ಒಂದು ಸಾರಿ ಈ ಅಣ್ಣ ತಮ್ಮಂದಿರು ಪರಸ್ಥಳಕ್ಕೆ ಹೋಗಿದ್ದು ಮನೆಗೆ ಹಿಂತಿರುಗುತ್ತಿದ್ದರು. ಅಲ್ಲಿ ಒಬ್ಬ ದಾರಿಯಲ್ಲಿ ಹೋಗುತ್ತಿದ್ದವನ ಹಸುವು ಬಾವಿಯಲ್ಲಿ ಬಿದ್ದು ಮುಳುಗುತ್ತಿದ್ದಿತು. ಇವರನ್ನು ನೋಡಿ ಆ ಪಥಿಕನು ಆ ಹಸುವನ್ನು ಮೇಲಕ್ಕೆತ್ತಬೇಕೆಂದು ಹೇಳಲು ಹಾಗೆಯೇ ಮಾಡಿದರು. ಆ ಹಸುವಿನವನು ಇವರಿಗೆ ಹೇಳಲು ಕುಂಡಳು ಹಾಗೇ ಆಗಲೆಂದು ಹೇಳಿದಳು.

**ತೇ ತ್ರಯಸ್ತೇನ ಪುಣ್ಯೇನ ಮರಣಂ ಪ್ರಾಪ್ಯ ದುರ್ಲಭಂ |**
**ಇಂದ್ರಪ್ರಸ್ಥತಟಸ್ಥಾಯಾಂ ಕಾಶ್ಯಾಂ ವೈಕುಂಠಮಾರುಹತ್ || ೧೮ ||**

**ಇಯಂ ಕಾಶೀ ಮಹೇಶಸ್ಯ ಪುರೀ ಯದ್ಯಪಿ ಭೂಪತೇ ।**
**ತಥಾಪ್ಯಸ್ಯಾಂ ಮೃತೋ ಜನ್ತುರ್ವೈಕುಂಠೇ ಸ್ಯಾತ್ಸಖಾ ಹರೇಃ || ೧೯ ||**

**ಏತತ್ತೇ ಕಥಿತಂ ರಾಜನ್ ಕಾಶ್ಯಾ ಮಾಹಾತ್ಮ್ಯಮುತ್ತಮಂ |**
**ಕಿಮನ್ಯಚ್ಛ್ರೋತುಮಿಚ್ಛಾ ತೇ ವಿದ್ಯತೇ ತದ್ವದಸ್ವ ಮೇ || ೨೦ ||**

॥ ಶಿಬಿರುವಾಚ ॥

**ಮುನೇ ತ್ವಯಾ ಮಹೇಶಸ್ಯ ಕ್ಷೇತ್ರತ್ರಯಮುದೀರಿತಂ |**
**ಕಾಶೀ ಚ ಶಿವಕಾಂಚೀ ಚ ಗೋಕರ್ಣಂ ಚ ತಥಾ ಪರಂ || ೨೧ ||**

**ಏಕಸ್ಯ ಮಹಿಮಾ ಪ್ರೋಕ್ತಃ ತ್ವಯಾ ಕಾಶ್ಯಾ ಮಹಾಮುನೇ |**
**ಗೋಕರ್ಣಶಿವಕಾಂಚ್ಯೋಶ್ಚ ಕಥ್ಯತಾಂ ಯದಿ ವಿದ್ಯತೇ || ೨೨ ||**

---

೧೮. ಆ ಪುಣ್ಯದಿಂದ ಅವರು ಮೂವರೂ ಇಂದ್ರಪ್ರಸ್ಥದ ಕಾಶಿಯಲ್ಲಿ ಮರಣವನ್ನು ಹೊಂದಿ ವೈಕುಂಠವನ್ನು ಹೊಂದಿದರು.

೧೯. ಈ ಕಾಶಿಯೇನೋ ಈಶ್ವರನ ಪಟ್ಟಣವು. ಆದರೂ ಇಲ್ಲಿ ಸತ್ತರೆ ಅವನು ವೈಕುಂಠಕ್ಕೆ ಹೋಗಿ ಹರಿಯ ಸ್ನೇಹಿತನು ಆಗುವನು.

೨೦. ಎಲೈ ರಾಜನೇ ! ಕಾಶಿಯ ಈ ಉತ್ತಮವಾದ ಮಹಿಮೆಯನ್ನು ಹೇಳಿದ್ದೇನೆ. ಮತ್ತೇನನ್ನು ಕೇಳಲು ಇಚ್ಛೆಯಿದೆ ? ಹೇಳು. ಅದನ್ನು ಹೇಳುತ್ತೇನೆ.

೨೧. ಶಿಬಿಯು ಹೇಳಿದನು-ಎಲೈ ಮುನಿಯೇ ! ಕಾಶಿ, ಶಿವಕಂಚಿ, ಗೋಕರ್ಣ ಎಂಬುದಾಗಿ ಮಹೇಶನ ಮೂರು ಕ್ಷೇತ್ರಗಳಿವೆಯೆಂದು ಹೇಳಿದೆ.

೨೨. ಎಲೈ ಮುನಿಯೇ ! ಕಾಶಿಯೊಂದರ ಮಹಿಮೆಯನ್ನು ನೀನು ಈಗ ಹೇಳಿದೆ. ಗೋಕರ್ಣ, ಶಿವಕಾಂಚಿಗಳಲ್ಲಿ ಯಾವುದಾದರೂ ಮಹಿಮೆಯಿದ್ದರೆ ಹೇಳು

॥ ಶ್ರೀ ನಾರದ ಉವಾಚ ॥

ಗೋಕರ್ಣಂ ಕೇವಲಂ ಶೈವಂ ಕ್ಷೇತ್ರಂ ಪರಮಪಾವನಂ ।
ತಸ್ಮಿನ್ ಮೃತೋ ನರೋ ರಾಜನ್ ಶಿವಸ್ಸ್ಯಾನ್ನಾತ್ರ ಸಂಶಯಃ ॥ ೨೩ ॥

ಸ್ಥಲೇ ಜಲೇಂತರಿಕ್ಷೇ ಚ ಜಂತುಸ್ತತ್ರ ಮ್ರಿಯೇತ ಚೇತ್ ।
ತದಾ ಕೈಲಾಸಶಿಖರೇ ಶಿವಃ ಸಂಭೂಯ ದೀವ್ಯತಿ ॥ ೨೪ ॥

ಅತ್ರ ಗೋಕರ್ಣತೀರ್ಥೇ ಸ್ಯಾನ್ಮೃತಸ್ಯ ನ ಪುನರ್ಭವಃ ।
ಶಿವೇನ ಸ ಸಮಂ ರಾಜನ್ ಮುಕ್ತಿಂ ಯಾಸ್ಯತಿ ಕರ್ಹಿಚಿತ್ ॥ ೨೫ ॥

ಅಸ್ಯಾಪಿ ತವ ಮಾಹಾತ್ಮ್ಯಂ ಗೋಕರ್ಣಸ್ಯ ಮಹೀಪತೇ ।
ವರ್ಣಯಾಮಿ ಯದಾಕರ್ಣಿ ಮಯಾ ಬ್ರಹ್ಮಮುಖಾತ್ಪ್ರಭೋ ॥ ೨೬ ॥

ಪ್ರಯಾಗಾದೇಕಗವ್ಯೂತೌ ಗುರುತೀರ್ಥಸಮೀಪಗಃ ।
ಮರ್ಯಾದಾಪರ್ವತೋ ಯೋಽಯಂ ದೃಶ್ಯತೇ ಗುಣದರ್ಶನಃ ॥ ೨೭ ॥

---

೨೩. ಶ್ರೀ ನಾರದನು ಹೇಳಿದನು-ಗೋಕರ್ಣವು ಕೇವಲ ಶಿವಕ್ಷೇತ್ರವು. ಬಹು ಪಾವನವಾದುದು. ಅದರಲ್ಲಿ ಸತ್ತರೆ ಸಾಕ್ಷಾತ್ ಶಿವನೇ ಆಗುತ್ತಾನೆ. ಸಂಶಯವೇನೂ ಇಲ್ಲ.

೨೪. ಆ ಗೋಕರ್ಣದಲ್ಲಿ ನೀರಿನಲ್ಲಿ ಆಗಲಿ, ನೆಲದಲ್ಲಿ ಆಗಲಿ, ಅಂತರಿಕ್ಷದಲ್ಲಿ ಆಗಲಿ, ಎಲ್ಲಿ ಆದರೂ, ಅವನು ಶಿವನೇ ಆಗಿ ಕೈಲಾಸಪರ್ವತದ ಶಿಖರದಲ್ಲಿ ಸುಖಿಸುತ್ತಾನೆ.

೨೫. ಈ ಗೋಕರ್ಣಕ್ಷೇತ್ರದಲ್ಲಿ ಸತ್ತವರು ಮತ್ತೆ ಹುಟ್ಟುವುದೇ ಇಲ್ಲ. ಅವರು ಮುಕ್ತಿಯನ್ನು ಹೊಂದಿ ಯಾವಾಗಲೂ ಶಿವನೊಡನೆಯೇ ಇರುತ್ತಾರೆ.

೨೬. ಈ ಗೋಕರ್ಣದ ಮಹಿಮೆಯನ್ನು ನಾನು ಬ್ರಹ್ಮನ ಮುಖದಿಂದ ಕೇಳಿದ್ದಂತೆ ವರ್ಣಿಸುತ್ತೇನೆ. ಕೇಳು

೨೭. ಪ್ರಯಾಗಕ್ಕಿಂತಲೂ ಎರಡು ಹರಿದಾರಿ ದೂರದಲ್ಲಿ ಗುರುತೀರ್ಥದ ಹತ್ತಿರದಲ್ಲಿ ಮರ್ಯಾದಾ ಪರ್ವತವು ಕಾಣುತ್ತಿದೆ.

ತತ್ರೈವ ಕರ್ಕಟೋ ನಾಮ ಭಿಲ್ಲ ಆಸೀತ್ಸುದಾರುಣಃ ।
ತಸ್ಯ ಭಾರ್ಯಾ ಜರಾ ನಾಮ ಸಾ ಜಘ್ನೇ ಪತಿಪಂಚಕಂ ॥ ೨೮ ॥

ಸಾ ಜರಾ ವಿಷಸಂಯುಕ್ತಂ ಷಷ್ಠಂ ಕರ್ಕಟಕಂ ತದಾ ।
ಅಕರೋನ್ಮೋದಕಂ ಹಂತುಂ ತದಾ ತೇನ ಸ್ವಸುಃ ಶ್ರುತಂ ॥ ೨೯ ॥

ನಿಜಾಯಾ ಮುಖತೋ ರಾಜನ್ ಭಿಲ್ಲೇನ ಚ ಮಹಾತ್ಮನಾ ।
ಬಲಾತ್ತಾಂ ಹಂತುಮಾರೇಭೇ ಕರ್ಕಟೋ ಭೃಶದಾರುಣಃ ॥ ೩೦ ॥

ಖಡ್ಗಪಾಣಿರ್ಯದಾಯಾತಿ ತದ್ವಧಾಯ ಸ ಭಿಲ್ಲಪಃ ।
ಯಾವತ್ತಾವತ್ತು ಸಾ ಪಾಪಾ ಜ್ಞಾತ್ವಾ ನಿಜವಧೋದ್ಯಮಂ ॥ ೩೧ ॥

ವನಮಭ್ಯದ್ರವದ್ಭೀತಾ ನಿಜಪ್ರಾಣಪರೀಪ್ಸಯಾ ।
ತಾಮನುದ್ರವತಾ ತೇನ ಕರ್ಕಟೇನ ಮಹೀಪತೇ ॥ ೩೨ ॥

ಅತ್ರ ಗೋಕರ್ಣತೀರ್ಥೇ ತು ಗೃಹೀತಾ ಖಡ್ಗಪಾಣಿನಾ ।
ಶಿರಶ್ಛಿತ್ವಾ ತು ಖಡ್ಗೇನ ಪಾತಿತಂ ಚ ಜಲೇ ವಪುಃ ॥ ೩೩ ॥

---

೨೮. ಆ ಪರ್ವತದಲ್ಲಿ ಕರ್ಕಟನೆಂಬ ಒಬ್ಬ ಬೇಡನಿದ್ದನು. ಅವನಿಗೆ ಜರೆ ಎಂಬ ಹೆಂಡತಿಯಿದ್ದಳು. ಅವಳು ಐದು ಜನ ಗಂಡಂದಿರನ್ನು ಕೊಂದಿದ್ದಳು.

೨೯. ಆಗ ಜರೆಯು ಆರನೆಯವನಾದ ಈ ಕರ್ಕಟಕನನ್ನು ಕೊಲ್ಲಲು ವಿಷಮಿಶ್ರಿತವಾದ ಕಡುಬನ್ನು ಮಾಡಿದಳು. ಇದನ್ನು ಆ ಕರ್ಕಟಕನ ತಂಗಿಯು ತಿಳಿದುಕೊಂಡು ಆ ಕರ್ಕಟಕನಿಗೆ ಹೇಳಿದಳು.

೩೦. ಎಲೈ ದೊರೆಯೇ ! ಆ ಭಿಲ್ಲನು ತನ್ನ ತಂಗಿಯಿಂದ ತಾನು ಇದನ್ನು ತಿಳಿದು ಬಲಾತ್ಕಾರದಿಂದ ಆಕೆಯನ್ನು ಕೊಲ್ಲಲು ಪ್ರಯತ್ನಿಸಿದನು.

೩೧–೩೩. ಈಕೆಯನ್ನು ಕೊಲ್ಲಲು ಕತ್ತಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಆ ಭಿಲ್ಲನು ಬರುವಷ್ಟರೊಳಗೆ ಆಕೆಯು ಈ ಭಿಲ್ಲನು ತನ್ನನ್ನು ಕಡಿದುಹಾಕುವನೆಂದು ತಿಳಿದು ಹೆದರಿಕೊಂಡು ಕಾಡಿಗೆ ಓಡಿಹೋದಳು. ಆದರೂ ಕೂಡ ಈ ಕರ್ಕಟನು ಅವಳನ್ನು ಹಿಂಬಾಲಿಸಿಯೇ ಹೋದನು. ಈ ಗೋಕರ್ಣತೀರ್ಥದ ಬಳಿಯಲ್ಲಿ ಆಕೆಯು ಸಿಕ್ಕಿದಳು. ಅಲ್ಲಿ ಅವಳ ಕತ್ತನ್ನು ಕತ್ತಿಯಿಂದ ಕತ್ತರಿಸಿ ಆ ಗೋಕರ್ಣದ ನೀರಿನಲ್ಲಿ ಆಕೆಯ ದೇಹವನ್ನು ಬಿಸಾಡಿದನು.

ತಸ್ಯ ಗೋಕರ್ಣತೀರ್ಥಸ್ಯ ನಿಜಸ್ಥಾನಮಗಾಚ್ಚ ಸಃ |
ಸ ಜರಾ ತತ್ರ ಗೋಕರ್ಣೇ ಪಾಪಾಪಿ ನಿಧನಂ ಗತಾ || ೩೪ ||

ಕೈಲಾಸಶಿಖರೇ ರಾಜನ್ ಪಾರ್ವತ್ಯಾ ಅಭವತ್ಸಖೀ |
ಅಹಂ ಕಥಿತವಾನೇತತ್ತವ ಗೋಕರ್ಣವೈಭವಂ || ೩೫ ||

ಶಿವಕಾಂಚ್ಯಾಶ್ಚ ಮಾಹಾತ್ಮ್ಯಂ ಪವಿತ್ರಂ ವರ್ಣಯಾಮಿ ತೇ |
ಇಂದ್ರಪ್ರಸ್ಥತಟಸ್ಥಾಯಾಂ ಶಿವಕಾಂಚ್ಯಾಮಪಿ ಪ್ರಭೋ || ೩೬ ||

ಗತಿಸ್ಸಾ ಮರಣಾತ್ಪುಂಸಾಂ ಗೋಕರ್ಣೇ ಯಾ ಮಯೋದಿತಾ |
ಅತ್ರ ಶ್ರೀಮನ್ಮಹಾದೇವೋ ವಿಷ್ಣುಂ ಸರ್ವಸುರೇಶ್ವರಂ || ೩೭ ||

ಆರಾಧ್ಯ ಭಕ್ತರಾಜತ್ವಂ ಲೇಭೇ ಜ್ಞಾನಂ ಚ ತಾತ್ವಿಕಂ |
ಅತಸ್ಸರ್ವೇ ವಯಂ ಪುತ್ರಾ ಬ್ರಹ್ಮಣಸ್ತಂ ಮಹೇಶ್ವರಂ || ೩೮ ||

ಆರಾಧಯಾಮಸ್ಸತತಂ ಸದ್ಭಕ್ತಿಜ್ಞಾನಲಿಪ್ಸಯಾ |
ಅತ್ರ ಬಾಣಾಸುರೋ ರಾಜನ್ನಾರರಾಧ ಮಹೇಶ್ವರಂ || ೩೯ ||

---

೩೪-೩೫. ಆ ಭಿಲ್ಲನಾದ ಕರ್ಕಟನು ಹೀಗೆ ಅವಳನ್ನು ಕತ್ತರಿಸಿ ಗೋಕರ್ಣದ ನೀರಿನಲ್ಲಿ ಬಿಸುಟು ತನ್ನ ನಿವಾಸಸ್ಥಾನಕ್ಕೆ ಬಂದನು. ಈ ರೀತಿಯಾಗಿ ಆ ಜರೆಯು ಪಾಪಿನಿಯಾದರೂ ಗೋಕರ್ಣದಲ್ಲಿ ಸತ್ತಳು. ಅದರ ಪ್ರಭಾವದಿಂದ ಕೈಲಾಸಕ್ಕೆ ಹೋಗಿ ಪಾರ್ವತಿಗೆ ಸಖಿಯಾಗಿ ನಿಂತಳು ಈ ರೀತಿಯಾಗಿ ಈ ಗೋಕರ್ಣ ಮಹಿಮೆಯನ್ನು ನಿನಗೆ ತಿಳಿಸಿರುತ್ತೇನೆ.

೩೬-೪೦. ಶಿವಕಾಂಚಿಯ ಪವಿತ್ರವಾದ ಮಹಿಮೆಯನ್ನು ನಿನಗೆ ವರ್ಣಿಸುತ್ತೇನೆ. ಈ ಇಂದ್ರಪ್ರಸ್ಥಕ್ಕೆ ಸೇರಿದ ಶಿವಕಾಂಚಿಯಲ್ಲಿಯೂ ಗೋಕರ್ಣದಲ್ಲಿ ಮರಣ ಹೊಂದಿದರೆ ಯಾವ ಗತಿ ಬರುತ್ತದೆ ಎಂದು ಹೇಳಿದೆನೋ ಅದೇ ಗತಿಯು ಬರುತ್ತದೆ. ಶಿವಕಾಂಚಿಯಲ್ಲಿ ಮಹಾದೇವನು ಸರ್ವದೇವ ದೇವನಾದ ವಿಷ್ಣುವನ್ನು ಆರಾಧಿಸಿ ಭಕ್ತರಾಜನಾದನು. ಮತ್ತು ತಾತ್ವಿಕವಾದ ಬುದ್ಧಿಯನ್ನು ಹೊಂದಿದನು. ಆದ್ದರಿಂದ ಬ್ರಹ್ಮನ ಮಕ್ಕಳಾದ ನಾವೆಲ್ಲರೂ ಒಳ್ಳೆಯ ಭಕ್ತಿ ಮತ್ತು ಜ್ಞಾನಗಳನ್ನು ಹೊಂದಲು ಈ ಜಾಗದಲ್ಲಿ ಮಹೇಶ್ವರನನ್ನು ಆರಾಧಿಸುತ್ತೇವೆ. ಈ ಜಾಗದಲ್ಲಿಯೇ ಬಾಣಾಸುರನು ತಾನು ಅವನ

**ನಿರಾಹಾರೋ ವರ್ಷಶತಂ ತದ್ಗಣತ್ವಬುಭೂಷಯಾ ।**
**ತಸ್ಮೈ ಪ್ರಸನ್ನೋ ಭಗವಾನ್ ಗಣತ್ವಂ ದತ್ತವಾನ್ನಿಜಂ ॥ ೪೦ ॥**

**ಸ್ವಯಂ ಚ ಸರ್ವದಾ ತಸ್ಯ ಪುರಪಾಲೋ ಬಭೂವ ಹ ।**
**ಇಯಂ ಪುರೀ ಪುರಾ ರಾಜನ್ನಾಸೀದ್ವಿಷ್ಣೋರ್ಮಹಾತ್ಮನಃ ॥ ೪೧ ॥**

**ದತ್ತಾ ಶಿವಾಯ ತುಷ್ಟೇನ ತಪಸಾ ತಸ್ಯ ವಿಷ್ಣುನಾ ।**
**ಅಸ್ಯಾಮೇಕಂ ಪುರಾ ವೃತ್ತಂ ಮಹದಾಶ್ಚರ್ಯಕಾರಕಂ । ॥ ೪೨ ॥**

**ವಿಪ್ರಸ್ಯ ಶಿವಭಕ್ತಸ್ಯ ವೈಕುಂಠಾಪ್ತಿರ್ಯಥಾಽಭವತ್ ।**
**ಏಕಸ್ತು ಬ್ರಾಹ್ಮಣೋ ರಾಜನ್ ಹೇರಂಬೋ ನಾಮ ಧಾರ್ಮಿಕಃ ॥ ೪೩ ॥**

**ಕಾಯೇನ ಮನಸಾ ವಾಚಾ ಶಿವಪೂಜಾರತಸ್ಸದಾ ।**
**ಏಕದಾ ಸ ಮಹಾಭಾಗಶ್ಶಿವತೀರ್ಥಾನಿ ಪರ್ಯಟನ್ ॥ ೪೪ ॥**

**ಏವಭಕ್ತಶ್ಶಿವೇ ರಾಜನ್ ಶಿವಕಾಂಚ್ಯಾಮಿಹಾಗತಃ ।**
**ಏತಾಂ ಮನೋಹರಾಂ ಚೈವ ನ ತತ್ಯಾಜ ಸ ಬುದ್ಧಿಮಾನ್ ॥ ೪೫ ॥**

---

ಗಣವಾಗಬೇಕೆಂದು ಆಹಾರವನ್ನು ಬಿಟ್ಟು ನೂರು ವರ್ಷಗಳವರೆಗೆ ತಪಸ್ಸು ಮಾಡಿದನು. ಕೊನೆಗೆ ಮಹಾದೇವನು ತನ್ನ ಗಣವಾಗುವಿಕೆಯನ್ನು ಅನುಗ್ರಹಿಸಿದನು.

೪೧ ಅಲ್ಲದೆ ಶಿವನು ಆ ಬಾಣಾಸುರನ ಪಟ್ಟಣಕ್ಕೆ ಕಾವಲುಗಾರನೂ ಆದನು. ಈ ಊರು ಪೂರ್ವದಲ್ಲಿ ಸರ್ವೇಶ್ವರನಾದ ವಿಷ್ಣುವಿನದೇ ಆಗಿದ್ದಿತು.

೪೨. ತಪಸ್ಸಿನಿಂದ ಸಂತೋಷಗೊಂಡ ವಿಷ್ಣುವು ಶಿವನಿಗೆ ಅದನ್ನು ಕೊಟ್ಟನು. ಇಲ್ಲಿ ಪೂರ್ವದಲ್ಲಿ ಒಂದು ಆಶ್ಚರ್ಯವು ನಡೆಯಿತು. ಶಿವನಲ್ಲಿ ಭಕ್ತನಾದ ಒಬ್ಬ ಬ್ರಾಹ್ಮಣನು ಕೈಲಾಸಕ್ಕೆ ಹೋಗುವುದನ್ನು ಬಿಟ್ಟು ವೈಕುಂಠಕ್ಕೆ ಹೋದನು.

೪೩-೪೫. ಹಿಂದೆ ಒಬ್ಬ ಹೇರಂಬನೆಂಬ ಹೆಸರುಳ್ಳ ಬ್ರಾಹ್ಮಣನಿದ್ದನು. ಅವನು ಬಹು ಧರ್ಮಿಷ್ಠನು. ಮನೋವಾಕ್ಕಾಯಗಳಿಂದಲೂ ಭಕ್ತಿಪೂರ್ವಕವಾಗಿ ಶಿವಪೂಜೆಯನ್ನು ಮಾಡುತ್ತಿದ್ದನು. ಒಂದುಸಾರಿ ಆತನು ಶಿವತೀರ್ಥಗಳ ಯಾತ್ರೆಯನ್ನು ಮಾಡಬೇಕೆಂದು ಯೋಚಿಸಿ ಹಾಗೆ ಮಾಡುತ್ತಾ ಈ ಶಿವಕಾಂಚಿಗೂ ಬಂದನು. ಈ ಶಿವಕಾಂಚಿಯು ಮನೋಹರವಾಗಿಯೂ ಪ್ರಶಸ್ತವಾಗಿಯೂ ಕಂಡುಬರಲು ಮುಂದೆ ಹೋಗದೆ ಇಲ್ಲಿಯೇ ಇದ್ದುಬಿಟ್ಟನು.

**ಪಶ್ಚಾತ್ತತ್ರೈವ ತತ್ಯಾಜ ಪ್ರಾಣಾನಸ್ಯಾ ಜಲಾಂತರೇ ।**
**ತತ್ರೈವ ಶ್ರೀಮಹಾದೇವಗಣಾಸ್ತಂ ಬ್ರಾಹ್ಮಣೋತ್ತಮಂ ॥ ೪೬ ॥**

**ನೀತ್ವಾ ಕೈಲಾಸಮಚಲಂ ಚೇಲುಸ್ತದನುಶಾಸನಾತ್ ।**
**ಅಥ ಮಧ್ಯೇ ಸಮಾಯಾತಾ ಗಣಾ ವೈಕುಂಠತೋ ಹರೇಃ ॥ ೪೭ ॥**

**ತೇಭ್ಯೋ ಬಲಾತ್ಸಮಾದಾತುಂ ತಂ ದ್ವಿಜಶ್ರೇಷ್ಠಮುದ್ಯತಾಃ ।**
**ಆಸೀತ್ತೇಷಾಂ ಮಹದ್ಯುದ್ಧಂ ಗಣಾನಾಂ ಹರಿಶರ್ವಯೋಃ ॥ ೪೮ ॥**

**ತತ್ರ ಯುದ್ಧೇ ನ ವೈ ಕೇಷಾಂ ವಿಜಯೋ ನ ಪರಾಜಯಃ ।**
**ತತ್ರ ವೈಕುಂಠತೋ ವಿಷ್ಣುರಾಗತೋ ಗರುಡಾಸನಃ ॥ ೪೯ ॥**

**ಕೈಲಾಸಾದ್ವೃಷಭಾರೂಢೋ ಮಹೇಶಶ್ಚ ತ್ರಿಲೋಕಧೃತ್ ।**
**ತಾವನ್ಯೋನ್ಯಂ ಮುಖಂ ದೃಷ್ಟ್ವಾ ವಿಹಸ್ಯ ಜಗದೀಶ್ವರೌ ॥ ೫೦ ॥**

**ಪಶ್ಯತಃ ಸ್ಮ ಮಹದ್ಯುದ್ಧಂ ನಭಸ್ಯೇವ ಗಣೈಃ ಕೃತಂ**
**ಅಥ ಸ್ವೀಯಾನ್ ಗಣಾನ್ ವಿಷ್ಣುಃ ಶೈವಾಂಶ್ಚ ದಿವಿ ಯುಧ್ಯತಃ ॥ ೫೧ ॥**

---

೪೬-೪೮. ಕಡೆಗೆ ಇಲ್ಲಿರುವ ನೀರಿನಲ್ಲಿಯೇ ಪ್ರಾಣವನ್ನು ಬಿಟ್ಟನು. ಆಗ ಶ್ರೀಮಹಾದೇವನ ಗಣಗಳು ಆ ಬ್ರಾಹ್ಮಣನನ್ನು ಕರೆದುಕೊಂಡು ಕೈಲಾಸಕ್ಕೆ ಹೊರಟರು. ಈ ಶಿವಗಣಗಳ ಕೈಯ್ಯಿಂದ ಅವನನ್ನು ಕಿತ್ತುಕೊಂಡು ಹೋಗಲು ವಿಷ್ಣುವಿನ ಗಣಗಳು ಬಂದರು. ಆಗ ಅವರಿಬ್ಬರಿಗೂ ಒಂದು ದೊಡ್ಡ ಯುದ್ಧವು ನಡೆಯಿತು.

೪೯. ಆ ಯುದ್ಧದಲ್ಲಿ ಯಾರಿಗೂ ಸೋಲಾಗಲಿ ಗೆಲುವಾಗಲಿ ಉಂಟಾಗಲಿಲ್ಲ. ಆಗ ವೈಕುಂಠದಿಂದ ವಿಷ್ಣುವೇ ಗರುಡನ ಮೇಲೆ ಕುಳಿತು ಕೊಂಡು ಬಂದನು.

೫೦-೫೩. ಇತ್ತ ಕೈಲಾಸದಿಂದ ವೃಷಭಾರೂಢನಾಗಿ ಶಿವನೂ ಬಂದನು. ಅವರಿಬ್ಬರೂ ಒಬ್ಬರಿಗೊಬ್ಬರು ಮುಖವನ್ನು ನೋಡಿ ನಕ್ಕರು. ಇವರಿಬ್ಬರೂ ಅಂತರಿಕ್ಷದಲ್ಲಿ ನಿಂತು ಯುದ್ಧವನ್ನು ನೋಡುತ್ತಲೇ ಇದ್ದರು. ಇವರ ಗಣಗಳಿಗೆ ಯುದ್ಧವು ನಡೆಯುತ್ತಲೇ ಇದ್ದಿತು. ಆಗ ವಿಷ್ಣುವು ತನ್ನ ಗಣಗಳನ್ನು

ಶಿವಾರ್ಥಂ ತಂ ದ್ವಿಜಂ ತಾರ್ಕ್ಷ್ಯಮಾರೋಪ್ಯಾಗಾಚ್ಛಿವಾಲಯಂ ।
ಶಿವೇಶ ತದ್ಗಣೈಶ್ಚಾಪಿ ಸ್ವಕೀಯೈರಪಿ ಮಾಧವಃ ॥ ೫೨ ॥

ವೃತೋ ಗರ್ಭಪಥಿ ಶ್ರೀಮಾನ್ ಸ್ತುತಸ್ತ್ರಿದಶವಂದಿತಃ ।
ಗತ್ವಾ ವಿವೇಶ ತಂ ನಾಗಂ ಮಹಾದೇವಪುರಸ್ಸರಃ ॥ ೫೩ ॥

ತಸ್ಮೈ ದ್ವಿಜಾಯ ವೈ ತಸ್ಯ ದರ್ಶಯನ್ ರಮಣೀಯತಾಂ ।
ಅಥ ತಸ್ಮಾತ್ತು ಕೈಲಾಸಾನ್ಮಹಾದೇವೇನ ವಂದಿತಃ ॥ ೫೪ ॥

ಮಾಧವಃ ಪರಯಾ ಭಕ್ತ್ಯಾ ವೈಕುಂಠಮಗಮತ್ತದಾ ।
ದ್ವಿಜಸ್ಸೋಽಪಿ ಮಹಾಭಾಗಸ್ತೀರ್ಥಸ್ಯಾಸ್ಯ ಪ್ರಸಾದತಃ ॥ ೫೫ ॥

ಗೋವಿಂದದರ್ಶನಂ ಪ್ರಾಪ್ಯ ಮುಮುದೇ ಹರಸನ್ನಿಧೌ ।
ಏತತ್ತೇ ಕಥಿತಂ ರಾಜನ್ ಶಿವಕಾಂಚ್ಯಾಸ್ತು ವೈಭವಂ ॥ ೫೬ ॥

ತೀರ್ಥಸಪ್ತಕನಾಮ್ನಸ್ತು ಶೃಣುಷ್ವ ತ್ವಂ ಸಮಾಹಿತಃ ।
ತೀರ್ಥಮೇತನ್ಮಹಾರಾಜ ಚತುರ್ವರ್ಗಫಲಪ್ರದಂ ॥ ೫೭ ॥

---

ಸುಮ್ಮನಾಗುವಂತೆ ಮಾಡಿ ಆ ಬ್ರಾಹ್ಮಣನನ್ನು ಗರುಡನಮೇಲೆ ಕೂರಿಸಿಕೊಂಡು ಶಿವಾಲಯವಾದ ಕೈಲಾಸಕ್ಕೆ ಹೋದನು. ಆಗ ಆ ಮಾಧವನು ಶಿವನ ಮತ್ತು ಅವನ ಗಣಗಳ ಜೊತೆಯಲ್ಲಿ ಕೂಡಿಕೊಂಡು ದೇವವಂದಿಗಳಿಂದ ಹೊಗಳಿಸಿ ಕೊಳ್ಳುತ್ತ ಅವರೊಡನೆ ಕೈಲಾಸಪರ್ವತಕ್ಕೆ ಹೋದನು.

೫೪-೬೨. ಆ ಬ್ರಾಹ್ಮಣನಿಗೆ ಆ ಕೈಲಾಸದ ಸೌಂದರ್ಯವನ್ನು ತೋರಿಸುತ್ತ ಆ ಕೈಲಾಸದಲ್ಲಿ ಮಹಾದೇವನಿಂದ ಆ ವಿಷ್ಣುವು ಗೌರವವನ್ನು ಹೊಂದಿ ವೈಕುಂಠಕ್ಕೆ ಹೋದನು. ಆ ದ್ವಿಜನು ಈ ತೀರ್ಥದ ಮಹಿಮೆಯಿಂದ ಗೋವಿಂದನ ದರ್ಶನವನ್ನು ಹೊಂದಿ ಕೈಲಾಸದಲ್ಲಿ ಹರನ ಸನ್ನಿಧಿಯಲ್ಲಿಯೇ ಸುಖವಾಗಿ ನಿಂತನು. ಎಲೈ ರಾಜನೇ ! ಈ ರೀತಿಯಾಗಿ ಶಿವಕಾಂಚಿಯ ಮಹಿಮೆಯನ್ನು ಹೇಳಿದ್ದೇನೆ. ತೀರ್ಥಸಪ್ತಕದ ಮಹಿಮೆಯನ್ನು ಒಂದೇ ಮನಸ್ಸಿನಿಂದ ಕೇಳು. ಹೇಳುತ್ತೇನೆ. ಎಲೈ ದೊರೆಯೇ ! ಈ ತೀರ್ಥವು ಧರ್ಮಾರ್ಥಕಾಮ ಮೋಕ್ಷಗಳನ್ನು ಕೊಡುತ್ತದೆ. ಇದನ್ನು ದರ್ಶನಮಾಡಲಿ ಸ್ಪರ್ಶಿಸಲಿ ಧ್ಯಾನಿಸಲಿ ಕೊನೆಗೆ

ದರ್ಶನಾತ್ಸ್ಪರ್ಶನಾದ್ಧ್ಯಾನಾತ್ ಸ್ಮರಣಾದಪಿ ಭೂಪತೇ ।
ವಸಿಷ್ಠಾದಿಭಿರೇತಸ್ಮಿನ್ ಮಹರ್ಷಿಭಿರನುಷ್ಠಿತಂ ॥ ೫೮ ॥

ಮಹತ್ತಪಸ್ತು ಸೃಷ್ಟ್ಯರ್ಥಂ ತತ್ರಾಸಂಸ್ತು ಕ್ಷಮಾ ನೃಪ ।
ಮರೀಚಿರಪಿ ಧರ್ಮಾತ್ಮಾ ಪುತ್ರಾರ್ಥಂ ಸ್ನಾನಮಾಚರನ್ ॥ ೫೯ ॥

ಅತ್ರ ಲೇಭೇ ಮಹಾಭಾಗಃ ಕಶ್ಯಪಂ ಸುತಮುತ್ತಮಂ ।
ಅತ್ರಿರತ್ರಾಪಿ ತಪಸಾಽತೋಷಯದ್ದೇವಪುಂಗವಾನ್ ॥ ೬೦ ॥

ಸೋಮಂ ದೂರ್ವಾಸಸಂ ದತ್ತಂ ತೇಭ್ಯೋ ಲೇಭೇ ಸುತತ್ರಯಂ ।
ಅಂಗಿರಾ ಅಪಿ ಧರ್ಮಾತ್ಮಾ ತೀರ್ಥಸ್ಯಾಸ್ಯ ಪ್ರಸಾದತಃ ॥ ೬೧ ॥

ಲೇಭೇ ಸುತಾಂಸ್ತು ತದ್ವಂಶ್ಯಾ ಜಾತಾ ಆಂಗೀರಸಾ ದ್ವಿಜಾಃ ।
ಪುಲಹೋಽಪಿ ಸುತಂ ಲೇಭೇ ದಂಭೋಳಿಂ ಗುಣವತ್ತರಂ ॥ ೬೨ ॥

ಯೋಽಗಸ್ತ್ಯೋಽಭೂತ್ಪುರಾ ರಾಜನ್ ತೀರ್ಥೇಽತ್ರೈವ ನಿಮಜ್ಜನಾತ್ ।
ಪುಲಸ್ತ್ಯಸ್ಯಾತ್ರ ತೀರ್ಥೇ ವೈ ಪುತ್ರೋ ಲಬ್ಧಸ್ತಪಸ್ಯತಃ ॥ ೬೩ ॥

---

ಸ್ಮರಿಸಲಿ ಹೇಗಾದರೂ ಧರ್ಮಕಾಮಾರ್ಥಮೋಕ್ಷಗಳನ್ನು ಕೊಡುತ್ತದೆ. ವಸಿಷ್ಠನೇ ಮುಂತಾದ ಋಷಿಗಳೂ ಈ ಜಾಗದಲ್ಲಿ ಮಹಾತಪಸ್ಸನ್ನು ಮಾಡಿದರು. ಸೃಷ್ಟಿಯನ್ನು ಮಾಡುವುದಕ್ಕೋಸ್ಕರ ಇಲ್ಲಿ ತಪಸ್ಸನ್ನು ಬ್ರಹ್ಮನ ಮಾನಸಪುತ್ರರೆಲ್ಲರೂ ಮಾಡಿ ಆ ಸೃಷ್ಟಿಮಾಡುವುದರಲ್ಲಿ ಶಕ್ತರಾದರು. ಧರ್ಮಿಷ್ಠನಾದ ಮರೀಚಿಯು ಈ ತೀರ್ಥದಲ್ಲಿ ಸ್ನಾನಮಾಡುತ್ತಾ ಮಕ್ಕಳನ್ನು ಹೊಂದಲು ತಪಸ್ಸನ್ನು ಇಲ್ಲಿಯೇ ಮಾಡಿ ಉತ್ತಮೋತ್ತಮನಾದ ಕಶ್ಯಪನೆಂಬ ಮಗನನ್ನು ಪಡೆದನು. ಅತ್ರಿ ಮಹರ್ಷಿಯು ಇಲ್ಲಿ ತಪಸ್ಸನ್ನು ಮಾಡಿ ಬ್ರಹ್ಮ ವಿಷ್ಣು ಮಹೇಶ್ವರರನ್ನು ತೃಪ್ತಿಗೊಳಿಸಿ ಚಂದ್ರ ದೂರ್ವಾಸ ದತ್ತಾತ್ರೇಯರೆಂಬ ಮಕ್ಕಳನ್ನು ಅವರಿಂದ ಪಡೆದನು. ಆಂಗಿರಸ ಋಷಿಯು ಈ ತೀರ್ಥದ ಮಹಿಮೆಯ ದೆಸೆಯಿಂದ ಮಕ್ಕಳನ್ನು ಹೊಂದಿದನು. ಅವನ ವಂಶದವರು ಆಂಗಿರಸರೆಂದು ಎಲ್ಲೆಲ್ಲಿಯೂ ಪ್ರಸಿದ್ಧರಾಗಿದ್ದಾರೆ. ಪುಲಹನು ದಂಭೋಳಿಯೆಂಬ ಬಹು ಗುಣವಂತನಾದ ಮಗನನ್ನು ಹೊಂದಿದನು.

೬೩-೬೪. ಆ ದಂಭೋಳಿಯೆಂಬುವನೂ ಈ ತೀರ್ಥದಲ್ಲಿ ಸ್ನಾನ ಮಾಡಿದುದರಿಂದ ಅಗಸ್ತ್ಯನೆಂಬುದಾಗಿ ಹೆಸರನ್ನು ಹೊಂದಿದನು. ಪುಲಸ್ತ್ಯನು ಇಲ್ಲಿ ತಪಸ್ಸು ಮಾಡಿ ಮಹೇಶ್ವರನಿಗೆ ಬಹು ಪ್ರೀತಿಪಾತ್ರ ಸ್ನೇಹಿತನಾದ

ಕುಬೇರೋಭೂನ್ಮಹಾಭಾಗೋ ಯಸ್ಸಖಾ ಸೀದುಮಾಪತೇಃ ।
ಕ್ರತೋರಪಿ ಸುತಾ ಜಾತಾ ವಾಲಖಿಲ್ಯಾಸ್ಸಹಸ್ರಶಃ ॥ ೬೪ ॥

ತೀರ್ಥಸ್ಯಾಸ್ಯ ಪ್ರಸಾದೇನ ತೇ ಸರ್ವೇ ಹ್ಯೂರ್ಧ್ವರೇತಸಃ ।
ರಜ ಆದೀನ್ ಸುತಾನ್ ಲೇಭೇ ವಸಿಷ್ಠೋಽಪಿ ಮಹಾತಪಾಃ ॥ ೬೫ ॥

ಸಪ್ತೈವ ರಾಜಶಾರ್ದೂಲ ಮಹಿಮಾ ತಸ್ಯ ವರ್ಣಿತಃ ।
ಅನ್ಯಾನ್ಯಪಿ ಚ ತೀರ್ಥಾನಿ ಸಂತ್ಯನೇಕಾನಿ ಭೂಪತೇ ॥ ೬೬ ॥

ಕಪಿಲಾಶ್ರಮಕೇದಾರಪ್ರಭಾಸಾದೀನಿ ವೈ ಪ್ರಭೋ ।
ನಿಯುತೈರಪಿವರ್ಷಾಣಾಂ ತೇಷಾಂ ಚ ಮಹಿಮಾ ನೃಪ ।
ಅನಂತೇನಾಪಿ ನೋ ವಕ್ತುಂ ಶಕ್ಯತೇ ಕಿಮು ಮಾದೃಶೈಃ ॥ ೬೭ ॥

॥ ಸೌಭರಿರುವಾಚ ॥

ಏವಮುಕ್ತ್ವಾ ಮುನಿಶ್ರೇಷ್ಠೋ ನಾರದೋ ಮುನಿಪುಂಗವಃ ।
ಶಿಬಿಂ ಜಗಾಮ ಮನಸಾ ನಾರಾಯಣಗುಣಾನ್ ಗೃಣನ್ ॥ ೬೮ ॥

---

ಕುಬೇರನೆಂಬ ಮಗನನ್ನು ಪಡೆದನು. ಕ್ರತುವೂ ಇಲ್ಲಿಯೇ ತಪಸ್ಸನ್ನು ಮಾಡಿ ವಾಲಖಿಲ್ಯರೆಂದು ಪ್ರಸಿದ್ಧರಾದ ಮಕ್ಕಳನ್ನು ಹೊಂದಿದನು.

೬೫-೬೭. ಆ ವಾಲಖಿಲ್ಯರೆಲ್ಲರೂ ಈ ತೀರ್ಥದ ಮಹಿಮೆಯಿಂದ ಊರ್ಧ್ವರೇತಸ್ಕರಾಗಿ ಜಿತೇಂದ್ರಿಯರಾಗಿರುವರು. ವಸಿಷ್ಠನು ಇಲ್ಲಿ ತಪಸ್ಸು ಮಾಡಿಯೇ ರಜನೆ ಮುಂತಾದ ಏಳು ಜನ ಮಕ್ಕಳನ್ನು ಹೊಂದಿದನು. ಆ ತೀರ್ಥಸಪ್ತಕದ ಮಹಿಮೆಯನ್ನು ವರ್ಣಿಸಿದ್ದೇನೆ. ಈ ತೀರ್ಥಗಳಲ್ಲದೆ ಇಂದ್ರಪ್ರಸ್ಥದ ಎಲ್ಲೆಯೊಳಗೆ ಕಪಿಲಾಶ್ರಮ ಕೇದಾರ ಪ್ರಭಾಸವೇ ಮುಂತಾದ ತೀರ್ಥಗಳು ಅನೇಕವಾಗಿವೆ. ಹತ್ತು ಸಾವಿರ ವರ್ಷಗಳವರೆಗೆ ಅನಂತನು ಹೇಳಿದರೂ ಕೂಡ ಅವುಗಳ ಮಹಿಮೆಯು ಮುಗಿಯುವುದೇ ಇಲ್ಲವು. ನಮ್ಮಂತಹವರು ಹೇಳಲು ಹೇಗೆ ಸಾಧ್ಯವಾದೀತು ?

೬೮. ಸೌಭರಿಯು ಹೇಳಿದನು-ಮುನಿಶ್ರೇಷ್ಠನಾದ ನಾರದನು ಶಿಬಿಗೆ ಈ ರೀತಿಯಾಗಿ ಹೇಳಿ ನಾರಾಯಣನ ಗುಣಗಳನ್ನು ಸ್ಮರಿಸುತ್ತ ಹೊರಟು ಹೋದನು.

ಶಿಬಿರೌಶೀನರೋ ರಾಜಾ ಶಕ್ರಪ್ರಸ್ಥಸ್ಯ ವೈಭವಂ ।
ಶ್ರುತ್ವಾ ಮುನಿಮುಖಾದ್ರಾಜನ್ ಕೃತಾರ್ಥಂ ಸ್ವಮಮನ್ಯತ ॥ ೧೯ ॥

ತತ್ರ ಸ್ನಾತ್ವಾ ಹಿ ವಿಧಿವತ್ ಇಂದ್ರಪ್ರಸ್ಥೇ ಸ ಭೂಪತಿಃ ।
ವಿಧಾಯ ಸ್ವಕ್ರಿಯಾಃ ಸರ್ವಾ ಜಗಾಮ ನಿಜಪತ್ತನಂ ॥ ೨೦ ॥

ಇಂದ್ರಪ್ರಸ್ಥಸ್ಯ ಮಾಹಾತ್ಮ್ಯಮೇತತ್ತವ ಮಯಾ ವಿಭೋ ।
ಯಮುನಾತೀರತೀರ್ಥಸ್ಯ ವರ್ಣಿತಂ ಜನಪಾವನಂ ॥ ೨೧ ॥

ನಾಸ್ಯಾದರಂ ಕರಿಷ್ಯಂತಿ ಕಲೌ ಶ್ರದ್ಧಾವಿವರ್ಜಿತಾಃ ।
ಇಂದ್ರಪ್ರಸ್ಥಸ್ಯ ರಾಜೇಂದ್ರ ಸರ್ವತೀರ್ಥಶಿರೋಮಣೇಃ ॥ ೨೨ ॥

ಅಷ್ಟಾದಶಪುರಾಣಾನಾಂ ಶ್ರವಣಾದ್ಭಾರತಸ್ಯ ಚ ।
ಯತ್ಫಲಂ ತನ್ಮಹಿಮ್ನೋಽಸ್ಯ ಶಕ್ರಪ್ರಸ್ಥಸ್ಯ ಜಾಯತೇ ॥ ೨೩ ॥

---

೧೯-೨೦. ಆಗ ಆ ಔಶೀನರ ಶಿಬಿಯು ಈ ಇಂದ್ರಪ್ರಸ್ಥದ ವೈಭವವನ್ನು ಕೇಳಿ ತಾನು ಕೃತಾರ್ಥನಾದೆನೆಂದು ತಿಳಿದುಕೊಂಡನು. ಮತ್ತು ಅಲ್ಲಿ ಸ್ನಾನಗಳನ್ನು ಮಾಡಿ ತನ್ನ ನಿತ್ಯಕರ್ಮಗಳನ್ನೂ ಮಾಡಿಕೊಂಡು ತನ್ನ ರಾಜಧಾನಿಗೆ ಹೊರಟುಹೋದನು.

೨೧. ಯಮುನಾ ನದಿಯ ದಡದಲ್ಲಿರುವ ಇಂದ್ರಪ್ರಸ್ಥದ ತೀರ್ಥಗಳ ಮಹಿಮೆಯನ್ನು ಈ ರೀತಿಯಾಗಿ ವರ್ಣಿಸಿದ್ದೇನೆ. ಇದು ಬಹು ಪಾವನವಾದುದು.

೨೨. ಕಲಿಯುಗದಲ್ಲಿ ಶ್ರದ್ಧೆಯಿಲ್ಲದ ಜನರು ಈ ಇಂದ್ರಪ್ರಸ್ಥದ ಮಹಿಮೆಯಲ್ಲಾಗಲಿ ತೀರ್ಥದಲ್ಲಿಯಾಗಲೀ ಆದರವನ್ನು ಹೊಂದುವುದಿಲ್ಲ.

೨೩. ಹದಿನೆಂಟು ಪುರಾಣಗಳು ಭಾರತ ಇವನ್ನು ಕೇಳಿದರೆ ಯಾವ ಪುಣ್ಯವು ಬರುತ್ತದೆಯೋ ಆ ಪುಣ್ಯವು ಇಂದ್ರಪ್ರಸ್ಥದ ಮಹಿಮೆಯನ್ನು ಕೇಳುವುದರಿಂದ ಬರುತ್ತದೆ.

ಅರುಣೋದಯವೇಳಾಯಾಂ ಮಾಘಲಕ್ಷೈಕಮಜ್ಜನಾತ್ |
ಯತ್ಫಲಂ ತನ್ಮಹಿಮ್ನೋಽಸ್ಯ ಶಕ್ರಪ್ರಸ್ಥಸ್ಯ ಜಾಯತೇ || ೭೪ ||

ಶ್ರದ್ಧಯಾಽಸ್ಯ ತು ಮಾಹಾತ್ಮ್ಯಂ ಯಶ್ಶೃಣೋತಿ ಮಹೀಪತೇ |
ತರ್ಪಿತಾಸ್ತೇನ ಪಿತರೋ ದೇವಾಶ್ಚ ಮುನಯಸ್ತಥಾ || ೭೫ ||

ಕೃಚ್ಛ್ರಾತಿಕೃಚ್ಛ್ರಪಾರಾಕಚಾಂದ್ರಾಯಣವ್ರತಾದಿಭಿಃ |
ಯತ್ಫಲಂ ತನ್ಮಹಿಮ್ನೋಽಸ್ಯ ಶ್ರದ್ಧಯಾ ಶ್ರವಣಾದ್ಭವೇತ್ || ೭೬ ||

ಅಶ್ವಮೇಧಾದಿಯಜ್ಞಾನಾಂ ಸಮಸ್ತಾನಾಂ ಮಹೀಪತೇ |
ಯತ್ಫಲಂ ತನ್ಮಹಿಮ್ನೋಽಸ್ಯ ಶ್ರದ್ಧಯಾ ಶ್ರವಣಾದ್ಭವೇತ್ || ೭೭ ||

|| ಸೂತ ಉವಾಚ ||

ಏವಂ ಯುಧಿಷ್ಠಿರೋ ರಾಜಾ ಶ್ರುತ್ವಾ ಶೌನಕ ಸೌಭರೇಃ |
ಇಂದ್ರಪ್ರಸ್ಥಸ್ಯ ಮಾಹಾತ್ಮ್ಯಂ ಸ ಯಯೌ ಹಾಸ್ತಿನಂ ಪುರಂ || ೭೮ ||

---

೭೪. ಅರುಣೋದಯ ಕಾಲದಲ್ಲಿ ಬಂದು ಲಕ್ಷ ಮಾಘಮಾಸಗಳಲ್ಲಿ ಸ್ನಾನಮಾಡಿದರೆ ಯಾವ ಪುಣ್ಯವು ಬರುವುದೋ ಆ ಪುಣ್ಯವನ್ನು ಇಂದ್ರಪ್ರಸ್ಥದ ಮಹಿಮೆಯನ್ನು ಕೇಳಿದರೆ ಹೊಂದುತ್ತಾನೆ.

೭೫. ಯಾವನು ಇಂದ್ರಪ್ರಸ್ಥದ ಮಹಿಮೆಯನ್ನು ಶ್ರದ್ಧೆಯಿಂದ ಕೇಳುತ್ತಾನೆಯೋ ಅವನು ತನ್ನ ಪಿತೃಗಳನ್ನೂ ದೇವತೆಗಳನ್ನೂ ಮುನಿಗಳನ್ನೂ ತೃಪ್ತಿಪಡಿಸಿದಂತೆ ಆಗುತ್ತದೆ. ಅವರು ತೃಪ್ತರಾಗುತ್ತಾರೆ.

೭೬. ಕೃಛ್ರ ಅತಿಕೃಛ್ರ ಪಾರಾಕ ಚಾಂದ್ರಾಯಣ ಮುಂತಾದ ವ್ರತಗಳನ್ನು ಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಈ ಇಂದ್ರಪ್ರಸ್ಥದ ಮಹಿಮೆಯನ್ನು ಕೇಳುವುದರಿಂದ ಬರುತ್ತದೆ.

೭೭. ಅಶ್ವಮೇಧವೇ ಮುಂತಾದ ಯಜ್ಞಗಳೆಷ್ಟುಂಟೋ ಅವನ್ನು ಮಾಡಿದರೆ ಯಾವ ಫಲವು ಬರುವುದೋ ಆ ಫಲವು ಈ ಇಂದ್ರಪ್ರಸ್ಥ ತೀರ್ಥದ ಮಹಿಮೆಯನ್ನು ಕೇಳುವುದರಿಂದ ಬರುತ್ತದೆ.

೭೮. ಸೂತನು ಹೇಳಿದನು-ಎಲೈ ಶೌನಕನೇ ! ಸೌಭರಿಯು ಹೇಳಿದ ಇಂದ್ರಪ್ರಸ್ಥದ ಮಹಿಮೆಯನ್ನು ಧರ್ಮರಾಜನು ಕೇಳಿ ಹಸ್ತಿನಾಪಟ್ಟಣಕ್ಕೆ ಹೋದನು.

ತತೋ ವಿನೀಯ ಸದ್ಭ್ರಾತೄನ್ ದುರ್ಯೋಧನಪುರಸ್ಸರಾನ್ ।
ಇಂದ್ರಪ್ರಸ್ಥಮುಗಾತ್ಸ್ವೇಚ್ಛಯಂ ರಾಜಸೂಯಚಿಕೀರ್ಷಯಾ ॥ ೭೯ ॥

ದ್ವಾರಕಾಯಾಂ ಸಮಾಗಮ್ಯ ಗೋವಿಂದಂ ಕುಲದೈವತಂ ।
ರಾಜಸೂಯೇನ ಯಜ್ಞೇನ ಸ ಇಯಾಜ ಮಹೀಪತಿಃ ॥ ೮೦ ॥

ಮುಕ್ತಿದಂ ತೀರ್ಥಮೇತತ್ತು ಶಪತೋಽಸ್ಯಾಪ್ಯಜಾಯತೆ ।
ಇತಿ ಮತ್ವಾ ಹರಿಸ್ತತ್ರ ಶಿಶುಪಾಲಂ ಜಘಾನ ಹ ॥ ೮೧ ॥

ಶಿಶುಪಾಲೋಽಪಿ ತಸ್ಯೈವ ತೀರ್ಥಸ್ಯ ಮರಣಾದ್ಭುವಿ ।
ಸಾಯುಜ್ಯಮಗಮತ್ಕೃಷ್ಣೇ ನಿಖಿಲಾರ್ಥಪ್ರದಾಯಕೇ ॥ ೮೨ ॥

ಶಿಶುಪಾಲೋ ಹತೋ ಯತ್ರ ವಿಹಿತೋ ಯತ್ರ ಚ ಕ್ರತುಃ ।
ಗದಯಾ ತತ್ರ ಭೀಮೇನ ಕೃತಂ ಕುಂಡಂ ಸವಿಸ್ತರಂ ॥ ೮೩ ॥

---

೭೯ ಅನಂತರ ಆ ಧರ್ಮರಾಜನು ತನ್ನ ತಮ್ಮಂದಿರನ್ನೂ ದುರ್ಯೋಧನಾದಿಗಳಾದ ಚಿಕ್ಕಪ್ಪನ ಮಕ್ಕಳನ್ನೂ ಒಳ್ಳೆಯ ಮಾತಿನಿಂದ ಅನುಸರಿಸಿಕೊಂಡು ರಾಜಸೂಯವನ್ನು ಮಾಡಬೇಕೆಂಬ ಇಚ್ಛೆಯಿಂದ ಇಂದ್ರಪ್ರಸ್ಥಕ್ಕೆ ಹೋದನು.

೮೦. ದ್ವಾರಕೆಗೆ ಹೋಗಿ ಕುಲದೈವತವಾದ ಕೃಷ್ಣನನ್ನು ಕೇಳಿ ಅಪ್ಪಣೆಯನ್ನು ಪಡೆದು ಆ ಧರ್ಮಜನು ರಾಜಸೂಯ ಯಜ್ಞವನ್ನು ಮಾಡಿದನು.

೮೧. ನನ್ನನ್ನು ಬಯ್ಯುತ್ತಿರುವ ಶಿಶುಪಾಲನಿಗೂ ಈ ತೀರ್ಥವು ಮೋಕ್ಷವನ್ನು ಕೊಡಲೆಂದು ತಿಳಿದೇ ಕೃಷ್ಣನು ಈ ತೀರ್ಥದಲ್ಲಿ ಆ ಶಿಶುಪಾಲನನ್ನು ಕೊಂದನು

೮೨. ಶಿಶುಪಾಲನೂ ಕೂಡ ಆ ಜಾಗದಲ್ಲಿ ಮರಣವನ್ನು ಹೊಂದಿ ಆ ತೀರ್ಥದ ಮಹಿಮೆಯಿಂದಲೇ ಇಷ್ಟಾರ್ಥಗಳೆಲ್ಲವನ್ನೂ ಕೊಡುವ ಆ ಕೃಷ್ಣನಲ್ಲಿ ಐಕ್ಯವಾದನು.

೮೩. ಶಿಶುಪಾಲನನ್ನು ಕೊಂದ ಮತ್ತು ಯಾಗವನ್ನು ಮಾಡಿದ ಆ ಜಾಗದಲ್ಲಿ ಭೀಮನು ದೊಡ್ಡದಾಗಿರುವ ಒಂದು ಹಳ್ಳವನ್ನು ಗದೆಯಿಂದ ಮಾಡಿದನು.

ಭೀಮಕುಂಡಂ ತು ವಿಜ್ಞಾತಂ ಜಾತಂ ತದ್ಭುವಿ ಪಾವನಂ |
ಕಾಳಿಂದ್ಯಾ ದಕ್ಷಿಣೇ ಭಾಗೇ ಗವ್ಯೂತ್ಯರ್ಧಮಹೀತಳೇ || ೮೪ ||

ಇಂದ್ರಪ್ರಸ್ಥಗತಾಯಾಂ ಯತ್ ಕಾಳಿಂದ್ಯಾಃ ಸ್ನಾನತಃ ಫಲಂ |
ಯತ್ಫಲಂ ತತ್ರ ಕುಂಡೇ ತು ಜಾಯತೇ ನಾತ್ರ ಸಂಶಯಃ || ೮೫ ||

|| ಸೂತ ಉವಾಚ ||

ಯಸ್ಮಿನ್ ಕ್ಷೇತ್ರೇ ಸ್ಥಿತೋ ಜಂತುಃ ತತ್ ಕ್ಷೇತ್ರಮನುವಾಸರಂ |
ಪ್ರದಕ್ಷಿಣಾದಿಭಿರ್ನಿತ್ಯೈಃ ಸ್ವಾಪರಾಧಾನ್ ಕ್ಷಮಾಪಯೇತ್ || ೮೬ ||

ಪ್ರತಿಸಂವತ್ಸರಂ ಚೈವ ಪರಿಕ್ರಾಮತಿ ಯೋ ನರಃ |
ಕ್ಷೇತ್ರಾಪರಾಧದೋಷೈಶ್ಚ ನ ಸ ಲಿಪ್ಯೇತ ಪಾತಕೈಃ || ೮೭ ||

ಪ್ರದಕ್ಷಿಣಾಮಕುರ್ವಾಣೋ ಕ್ಷೇತ್ರಸಿದ್ಧಿಂ ನ ವಿಂದತಿ |
ತಸ್ಮಾತ್ ಪ್ರದಕ್ಷಿಣಾ ತೀರ್ಥೇ ದಾತವ್ಯಾ ಚ ಫಲಾರ್ಥಿಭಿಃ || ೮೮ ||

---

೮೪-೮೫. ಆ ಹಳ್ಳಕ್ಕೆ ಭೀಮಕುಂಡವೆಂದು ಹೆಸರು. ಪ್ರಪಂಚದಲ್ಲಿ ಪ್ರಸಿದ್ಧವಾಗಿದೆ. ಆ ಕುಂಡವು ಯಮುನಾ ನದಿಯ ಬಲಭಾಗದಲ್ಲಿ ಒಂದು ಹರಿದಾರಿಯಷ್ಟು ದೂರದಲ್ಲಿದೆ. ಇಂದ್ರಪ್ರಸ್ಥಕ್ಕೆ ಹೋಗಿ ಕಾಳಿಂದಿಯಲ್ಲಿ ಸ್ನಾನ ಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವನ್ನು ಈ ಭೀಮಕುಂಡದಲ್ಲಿ ಸ್ನಾನ ಮಾಡುವುದರಿಂದ ಹೊಂದುತ್ತಾನೆ. ಸಂಶಯವಿಲ್ಲ.

೮೬. ಸೂತನು ಹೇಳಿದನು-ಯಾತ್ರಿಕನು ಯಾವ ಕ್ಷೇತ್ರದಲ್ಲಿರುವನೋ ಆ ಕ್ಷೇತ್ರವನ್ನು ನಿತ್ಯವೂ ಪ್ರದಕ್ಷಿಣೆ ಮಾಡುತ್ತಾ ತನ್ನ ಅಪರಾಧವನ್ನು ಕ್ಷಮಿಸು ವಂತೆ ಕೇಳಿಕೊಳ್ಳುತ್ತಿರಬೇಕು.

೮೭. ಯಾವನು ಆ ಕ್ಷೇತ್ರವನ್ನು ಪ್ರತಿವರ್ಷವೂ ಪ್ರದಕ್ಷಿಣೆ ಮಾಡು ತ್ತಾನೆಯೋ ಅವನು ಆ ಕ್ಷೇತ್ರದಲ್ಲಿ ಮಾಡಿದ ಅಪರಾಧಗಳಿಗೆ ಗುರಿಯಾಗು ವುದಿಲ್ಲ. ಆ ಪಾಪಗಳು ಅವನಿಗೆ ಬರುವುದಿಲ್ಲ.

೮೮. ಆ ಕ್ಷೇತ್ರವನ್ನು ಪ್ರದಕ್ಷಿಣೆ ಮಾಡದಿದ್ದರೆ ಆ ಕ್ಷೇತ್ರದ ಸಿದ್ಧಿಯನ್ನು ಆತನು ಹೊಂದುವುದಿಲ್ಲ. ಆದ್ದರಿಂದ ತೀರ್ಥಫಲಾಪೇಕ್ಷಿಗಳು ಆಯಾ ತೀರ್ಥ ಗಳನ್ನು ಪ್ರದಕ್ಷಿಣೆ ಮಾಡಬೇಕು.

ಹರೇರ್ನಾಮಾನಿ ಸಂಜಲ್ಪನ್ ಪ್ರಕರೋತಿ ಪ್ರದಕ್ಷಿಣಾಂ ।
ಪದೇ ಪದೇ ಸ ಲಭತೇ ಕಪಿಲಾದಾನಜಂ ಫಲಂ ॥ ೮೯ ॥

ಚೈತ್ರಕೃಷ್ಣಚತುರ್ದಶ್ಯಾಂ ಶಕ್ರಪ್ರಸ್ಥಪ್ರದಕ್ಷಿಣಂ ।
ಯಃ ಕರೋತಿ ನರೋ ಧನ್ಯಃ ಸರ್ವಪಾಪೈಃ ಪ್ರಮುಚ್ಯತೇ ॥ ೯೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಕಾಳಿಂದೀ ಮಾಹಾತ್ಮ್ಯೇ ಇಂದ್ರಪ್ರಸ್ಥಗತ ಕಾಶೀ ಗೋಕರ್ಣ ಶಿವ ಕಾಂಚೀ ತೀರ್ಥಸಪ್ತಕ ಭೀಮಕುಂಡ ಮಾಹಾತ್ಮ್ಯ ವರ್ಣನಂ ನಾಮ ಅಷ್ಟಾದಶಾಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

॥ ಸಮಾಪ್ತಮಿದಂ ಕಾಳಿಂದೀ ಮಾಹಾತ್ಮ್ಯಂ ॥



---

೮೯. ಯಾವನು ಹರಿಯ ನಾಮಗಳನ್ನು ಹೇಳುತ್ತ ಕ್ಷೇತ್ರವನ್ನು ಪ್ರದಕ್ಷಿಣೆ ಮಾಡುತ್ತಾನೆಯೋ ಅವನಿಗೆ ಹೆಜ್ಜೆ ಹೆಜ್ಜೆಗೂ ಕಪಿಲಾ ಗೋದಾನದ ಫಲವು ಬರುತ್ತದೆ.

೯೦. ಚೈತ್ರ ಕೃಷ್ಣ ಚತುರ್ದಶಿಯ ದಿವಸ ಈ ಇಂದ್ರಪ್ರಸ್ಥವನ್ನು ಪ್ರದಕ್ಷಿಣೆ ಮಾಡಿದವನು ಧನ್ಯನಾಗುತ್ತಾನೆ. ಅವನ ಪಾಪಗಳೆಲ್ಲವೂ ಹೋಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಕಾಳಿಂದೀ ಮಹಿಮೆಯಲ್ಲಿ ಇಂದ್ರಪ್ರಸ್ಥದಲ್ಲಿರುವ ಕಾಶಿ, ಗೋಕರ್ಣ, ಶಿವಕಾಂಚಿ, ತೀರ್ಥಸಪ್ತಕ, ಭೀಮಕುಂಡಕಗಳ ಮಹಿಮೆಯ ವರ್ಣನ ಎಂಬ ಇನ್ನೂರ ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಕಾಳಿಂದೀ ಮಹಿಮೆಯು ಮುಗಿದುದು ॥

